# ಮುಳುಗಿದ ದೋಣಿ

[Mulugida Doni]

ಬರೆದವರು

ಶ್ರೀ ರವೀಂದ್ರನಾಥ ಠಾಕೂರ್

ಕನ್ನಡಿಸಿದವರು

ಶ್ರೀಮತಿ ಎಸ್. ಅಂಬುಜಾಕ್ಷಿ

S. Ambujakshi

N.S. Vasan & Co.

ಪ್ರಕಾಶಕರು Bangalore.

ಎನ್. ಎಸ್. ವಾಸನ್ ಅಂಡ್ ಕಂಪೆನಿ,

ಅವೆನ್ಯೂ ರೋಡ್, ಬೆಂಗಳೂರು ೨.

# ಪರಿಚಯ

ಕವಿವರ ರವೀಂದ್ರನಾಥ ಠಾಕೂರರ “ ನೌಕಾಡುಬಿ ” ಎಂಬ ನೀಳ್ಗತೆಯ ಕನ್ನಡ ಅನುವಾದ ಈ “ **ಮುಳುಗಿದ ದೋಣಿ** ”.

ವಂಗಭಾಷೆಯ “ ನೌಕಾಡುಬಿ ” ಈಗ್ಗೆ ೫೨ ವರುಷಗಳ ಹಿಂದೆ ಎಂದರೆ ಸನ್ ೧೯೦೬ರಲ್ಲಿ ಮೊದಲು ಪ್ರಕಟವಾಯಿತು. ಆಗ ಅದಕ್ಕೆ ಗ್ರಂಥಕರ್ತರು ಮುನ್ನುಡಿಯನ್ನು ಬರೆದಿರಲಿಲ್ಲ. ಆ ಬಳಿಕ ಸನ್ ೧೯೪೦ರವರೆಗೆ ಆ ಗ್ರಂಥದ ಹಲವಾರು ಮುದ್ರಣಾವರ್ತನೆಗಳು ನಡೆದುವು. ಆ ಮೂವತ್ತೈದು ವರುಷ ಕಾಲದಲ್ಲಿ ಆ ಗ್ರಂಥದ ವಿಷಯವಾಗಿ ಹಲವು ಬಗೆಯ ವಿಮರ್ಶೆಗಳೂ ಪ್ರಕಟವಾದುವು. ಸನ್ ೧೯೪೦ರಲ್ಲಿ ಈ ಗ್ರಂಥಕ್ಕೆ “ ಮುನ್ನುಡಿ ” ಬರೆದು ಕೊಡಬೇಕೆಂದು ಪುಸ್ತಕ ಪ್ರಕಾಶಕರು ರವೀಂದ್ರರನ್ನು ಒತ್ತಾಯಪಡಿಸಿದರು ಆಗ (೧೯೪೧ರಲ್ಲಿ) ಅವರು “ ಮುನ್ನುಡಿ ”ಯ ಬದಲಾಗಿ **ಸೂಚನೆ** ಬರೆದು ಕೊಟ್ಟರು.

ಆ “ **ಸೂಚನೆ** ”ಯಿಂದ ಈ ಕತೆಯಲ್ಲಿ ಘಟನೆಯ ಪ್ರವಾಹವು ಅಸಹಜವೂ ಗೌಣವೂ ಆಗಿರುವಂತೆ ಕಂಡುಬಂದರೂ, ಮೂವರು ವ್ಯಕ್ತಿಗಳ ಮನೋವಿಶ್ಲೇಷಣದ ಮೂಲಕ ಉತ್ಸುಕತೆಯನ್ನು ಉಂಟುಮಾಡುವ ರಹಸ್ಯವು ಅಡಗಿದೆಯೆಂದು ಸ್ಪಷ್ಟವಾಗುವುದು. ಕತೆಯಲ್ಲಿ ರಮೇಶ–ಕಮಲೆಯರ ವಿಚಿತ್ರ ಪರಿಸ್ಥಿತಿಯಲ್ಲಿ ಮೊದಲು ಸಂಧಿಸುವ ರೀತಿಯು ಅಸಹಜವಾಗಿ ಕಂಡುಬಂದರೂ ಉಳಿದ ಘಟನೆಗಳಲ್ಲಿ ಅಸಹಜವಾದುದೇನೂ ಇಲ್ಲ. ವಿಶಾಲ ಪ್ರಪಂಚದ ವೈವಿಧ್ಯಾನುಭವವುಳ್ಳವರಿಗೆ ಅದು ಸಹಜವಾಗಿರುವಂತೆ ಕಾಣುವುದು. “ ಮುಳುಗಿದ ದೋಣಿ ” ಯಿಂದ ಪಾರಾಗಿ ಕಮಲೆಯೇನೋ ದಡ ಸೇರಿದಳು. ಅವಳನ್ನು ದಡಕ್ಕೇರಿಸಲು ಪ್ರಯತ್ನಿಸಿದ ರಮೇಶನು ಪ್ರಣಯ–ಸಂಯಮಗಳ ಸಮರದಲ್ಲಿ-ಒಂದುಸಲ ಧೀರತೆ-ಒಂದುಸಲ ಚಂಚಲತೆಯಿಂದ ಹೋರಾಡಿ ಬಳಲುವನು. ಆಗ ಅವನ ಮನಸ್ಸು ಸಂದಿಗ್ಧ ಸ್ಥಿತಿಗೆ ಒಳಗಾಗುವುದು. ಆ ಸಮಯದಲ್ಲಿ ಅವನ ನಲ್ಮೆಯ ನಲ್ಲೆ ಹೇಮನಳಿನಿಗೆ ಬೇರೆಯವ

ರೊಂದಿಗೆ ವಿವಾಹ ನಡೆಯಲಿರುವ ಸಮಾಚಾರವನ್ನರಿತು, ಅವಳಿಗೆ ದೀರ್ಘ ವಿವರಗಳುಳ್ಳ ಪತ್ರವನ್ನು ಬರೆದು ಕೊನೆಗೆ—". . ಒಂದು ದಿನದ ಮಟ್ಟಿಗಾದರೂ ನಾನು ಕಮಲೆಯ ಹತ್ತಿರ ಹೆಂಡತಿಯ ಸಂಗಡ ವರ್ತಿಸುವಂತೆ ನಡೆದುಕೊಳ್ಳಲಿಲ್ಲ. ಆದರೂ ಕ್ರಮೇಣ ಅವಳು ನನ್ನ ಹೃದಯವನ್ನು ಆಕರ್ಷಿಸಿಕೊಂಡಳು. ಈ ಸಂಗತಿ ನಿನ್ನ ಬಳಿ ಒಪ್ಪಿಕೊಳ್ಳುವುದು ನನ್ನ ಕರ್ತವ್ಯ . . . ಇಂದಿಗೂ ಕಮಲೆಯನ್ನು ಸಂಪೂರ್ಣವಾಗಿ ಮರೆಯಲಾರೆ ಏಂದರೆ . . . ಜಗತ್ತಿನಲ್ಲಿ ಯಾವ ಈರ್ವರು ರಮಣಿಯರಿಗೆ ನನ್ನ ಹೃದಯದಲ್ಲಿ ಎಡೆಗೊಟ್ಟಿದ್ದೆನೊ, ಅವರನ್ನು ಮರೆಯಲು ನನ್ನಿಂದ ಸಾಧ್ಯವಿಲ್ಲ. ಹಾಗೂ ಅವರನ್ನು ಎಂದೆಂದಿಗೂ ನೆನಪಿನಲ್ಲಿಟ್ಟಿರುವುದೆ ನನಗೆ ಅತಿ ಲಾಭಕರ . . . ನಾನು ಈಗ ಪ್ರಫುಲ್ಲ ಮನಸ್ಸಿನಿಂದ, ಆನಂದದಿಂದ ನಿನ್ನ ಹತ್ತಿರ ಅಪ್ಪಣೆ ಪಡೆದುಕೊಂಡು ಹೋಗುತ್ತಿರುವೆನು. ನಾನು ತುಂಬು ಹೃದಯದಿಂದ ನಿನ್ನ ಬಳಿಯಿಂದ ಹೊರಟು ಹೋಗುವೆನು . . ." ಎಂದು ಉಪಸಂಹಾರ ಮಾಡಿರುವ ರಮೇಶನು ಈ ಕಥೆಯ ನಾಯಕನು, ಅವನ ಸ್ಥಿತಿ ಕೊನೆಗೆ ಏನಾಯಿತು ಎಂದು ಊಹಿಸಿ ತಿಳಿಯುವ ಹೊಣೆಯನ್ನು ಲೇಖಕರು ವಾಚಕರಿಗೆ ವಹಿಸಿರುವರು.

ಈ ಗ್ರಂಥವನ್ನು ಶ್ರೀಮತಿ ಪಂಡಿತಾ ಎಸ್. ಅಂಬುಜಾಕ್ಷಿ ಅವರು ಬಂಗಾಳಿಯಿಂದ ಕನ್ನಡ ಭಾಷೆಗೆ ಅನುವಾದಿಸಿರುವರು. ಇವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ "ಪಂಡಿತಾ" ಪದವಿ ಪಡೆದಿರುವರು. ೫-೬ ವರುಷಗಳಿಂದ ಪತ್ರಿಕೆಗಳಿಗೆ ಲೇಖನ ಬರೆಯುತ್ತಿರುವವರು. ಪ್ರಜಾಮತ, ಜೀವನ, ಲಕ್ಷ್ಮಿ, ಸರಸ್ವತಿ, ವನಿತಾ ಮೊದಲಾದ ಪತ್ರಿಕೆಗಳಲ್ಲಿ ಇವರ ಹರಟೆಗಳು, ಕಿರುಗತೆಗಳು, ಪ್ರಬಂಧಗಳು ಪ್ರಕಟವಾಗಿರುವುವು. ಹೀಗೆ ವಿವಿಧ ವಿಷಯಗಳ ಮೇಲೆ ಲೇಖನ ಬರೆಯಬಲ್ಲ ಲೇಖಕಿಯರು ಸಾಹಿತ್ಯಸೇವೆಗಾಗಿ ಮುಂದರಿದು ಬಂದಿರುವುದು ನಮ್ಮ ನಾಡನುಡಿಗೆ ಭವ್ಯಭವಿಷ್ಯವನ್ನು ಸೂಚಿಸುವುದು. ಈ ಲೇಖಕಿಯರು ತಮ್ಮ ಚಿಕ್ಕಪ್ಪನವರಾದ ಪೂರ್ವಾಶ್ರಮದ ಶ್ರೀ ಅ. ನಾರಾಯಣಸ್ವಾಮಿ ಅಯ್ಯರ್ (ಈಗ ಸ್ವಾಮಿ ಶ್ರೀ ಶಂಕರಾನಂದ ಸರಸ್ವತಿ) ಅವರಿಂದ ಬಂಗಾಳಿ ಕಲಿತು, ಕನ್ನಡಿಗರಿಗೆ ರವೀಂದ್ರರ ಈ ನೀಳ್ಗತೆಯ ಪರಿಚಯವಾಗುವಂತೆ ಮಾಡಿರುವುದಕ್ಕಾಗಿ ಕನ್ನಡಿಗರು ಅವರಿಗೆ

ಕೃತಜ್ಞನಾಗಿರಬೇಕಾಗಿದೆ. ಅವರ ಈ ಕೃತಿಯು ಕನ್ನಡಿಗರ ಆದರಕ್ಕೆ ಪಾತ್ರವಾಗುವುದೆಂಬ ಭರವಸೆಯುಳ್ಳವನಾಗಿದ್ದೇನೆ.

ಶ್ರೀ ಪಂಡಿತೆ ಅಂಬುಜಾಕ್ಷಿ ಅವರು ರವೀಂದ್ರರ ಇತರ ಕಾದಂಬರಿಗಳನ್ನೂ, ಸಣ್ಣಕತೆಗಳನ್ನೂ, ನಾಡಿನ ಎಲ್ಲ ಭಾಗಗಳ ಜನರಿಗೆ ತಿಳಿವ ಶೈಲಿಯಲ್ಲಿ ಅನುವಾದಿಸಿ ಪ್ರಕಟಿಸುವಂತಾಗಲಿ ಎಂದು ಹಾರೈಸುವೆನು

ಬಸವನಗುಡಿ, ಬೆಂಗಳೂರು
೫ ೧೧ ೧೯[illegible]

—ಡಿ. ಕೆ. ಭಾರದ್ವಾಜ

# ಸೂಚನೆ

ಓದುಗರು ತಾವಾಗಿ ಯಾವ ಹೊಣೆ ಹೊತ್ತರೆ ನ್ಯಾಯುವೆನಿಸೀತೋ ಅದನ್ನು ಬರಹಗಾರರು ಹೊರಿಸುವುದು ಸರಿಯಾಗದು. ಸ್ವಂತ ರಚನೆಯನ್ನು ಕುರಿತು ಆತ್ಮವಿಶ್ಲೇಷಣೆ ಶೋಭಿಸದು. ಸಂಪೂರ್ಣವಾಗಿ ವ್ಯಕ್ತಿಸಂಬಂಧವಿಲ್ಲದ ರೀತಿಯಲ್ಲಿ ಈ ಕೆಲಸ ಮಾಡುವುದು ಅಸಂಭವವಾದ ಕಾರಣ ಹಾಗೆ ಮಾಡುವುದನ್ನು ಅನ್ಯಾಯವೆಂದೂ ಎಣಿಸಬೇಕಾದೀತು. ಇದರಿಂದ ನಿಃಸ್ವಾರ್ಥ ಆಲೋಚನೆಯ ಹಾದಿ ಸರಿದೂಗದು.

“ನೌಕಾಡುಬಿ” (ಮುಳುಗಿದ ದೋಣಿ) ಯನ್ನು ಬರೆದುದೇತಕ್ಕೆಂದು ಪ್ರಕಾಶಕರು ತಿಳಿಯ ಬಯಸಿರುವರು. ಈ ಸಂಗತಿಯನ್ನು ದೇವಾ ನ ಜಾನಂತಿ ಕುತೋ ಮನುಷ್ಯಾಃ ! ಬಾಹ್ಯವಾದ ವಿವರಣೆಯನ್ನು ಕೊಡಲು ಸಾಧ್ಯ. ಅದು ಪ್ರಕಾಶಕರ ಬಲವಂತದಿಂದ. ಬುಗ್ಗೆಯ ಮೂಲ ಭೂಮಿಯ ಅಂತರಾಳದಲ್ಲಿ. ಗೋಮುಖೀ ಅದರ ಉಗಮಸ್ಥಾನವಲ್ಲ ಪ್ರಕಾಶಕರ ಕೋರಿಕೆಯಿಂದ ಉಂಟಾದುದನ್ನು ಪ್ರೇರಣೆ ಎಂದರೆ ಅತ್ಯುಕ್ತಿಯಾದೀತು. ಆದರೆ ಅದನ್ನು ಬಿಟ್ಟು ಹೇಳುವುದಾದರೂ ಏನನ್ನು ! ಕತೆ ಹೆಗಲೇರುವುದೂ ಪ್ರಕಾಶಕರು ಹೆಗಲೇರುವುದೂ ಸಂಪೂರ್ಣವಾಗಿ ಪ್ರತ್ಯೇಕ ವಿಷಯಗಳು. ಆಂತರ್ಯದಲ್ಲಿ ಕತೆಯ ತಿವಿತವಿರಲಿಲ್ಲವೆಂಬುದನ್ನು ಹೇಳುವುದು ಅನಾವಶ್ಯಕ. ಸಂಪಾದಕರ ಪ್ಯಾದೆ ಬಾಗಿಲನ್ನು ಬಿಟ್ಟು ಸರಿಯದಿರುವಾಗ ವಿಧಿಯಿಲ್ಲದೆ ಏನು ಬರೆಯೋಣವೆಂದು ಯೋಚಿಸಬೇಕಾಯಿತು. ಕಾಲದ ಕೋರಿಕೆ ಬದಲಾಗಿದೆ. ಈ ಕಾಲದಲ್ಲಿ ಕತೆಯ ಸ್ವಾರಸ್ಯ ಮನೋವಿಶ್ಲೇಷಣದ ಮೂಲಕ ಉಂಟಾಗಿದೆ. ಘಟನೆಯ ಪ್ರವಾಹ ಗೌಣವಾಗಿರುವುದು. ಆದ್ದರಿಂದಲೇ ಸಹಜವಲ್ಲದ ಪರಿಸ್ಥಿತಿಯಲ್ಲಿ ಮನಸ್ಸಿನ ರಹಸ್ಯವನ್ನು ಹುಡುಕಿ ಹೊರಗೆಡವಿ ನಾಯಕ ನಾಯಕಿಯರ ಬಾಳಿನಲ್ಲಿ ಹಿರಿಯದೊಂದು ತಪ್ಪಿನ ಗಾಳಿ ತುಂಬುವುದಾಯತು—ಅತ್ಯಂತ ನಿಷ್ಠುರದ ವಿಷಯ—ಆದರೆ ಉತ್ಸು ಕತೆ ಮೂಡಿಸುವಂಥಾದ್ದು. ಇದರ ಸೈಕಾಲಜಿಯ ಶೂನ್ಯ ಪ್ರಶ್ನೆಯಿದು, ಗಂಡನ ಸಂಬಂಧದ ಶಾಶ್ವತತೆಯನ್ನು ಕುರಿತು ನಮ್ಮ ನಾಡಿನ ಸಾಮಾನ್ಯ ಹುಡುಗಿಯರ ಮನದಲ್ಲಿ ಇರುವ ಸಂಸ್ಕಾರವಿದೆಯಲ್ಲ ಅದು ಮುಗ್ಧ ಪ್ರೇಮದ

ಬಂಧನವನ್ನು ಧಿಕ್ಕರಿಸಿ ಹರಿದೊಗೆಯುವಷ್ಟು ಆಳವಾದುದೇ ಅಲ್ಲವೇ ! ಆದರೆ ಈ ಎಲ್ಲ ಪ್ರಶ್ನೆಗಳಿಗೆ ಎಲ್ಲ ಜನರಿಗೆ ಸಮಾಧಾನವಾಗುವಂಥ ಉತ್ತರ ಕೊಡುವುದು ಸಾಧ್ಯವಿಲ್ಲ. ಯಾವಳೋ ಒಬ್ಬಳು ವಿಶೇಷ ರೀತಿಯ ಹುಡುಗಿಯ ಮನದಲ್ಲಿ ಸಮಾಜದ ಅನಾದಿಯಾದ ಸಂಸ್ಕಾರ ಅಪರಿಚಿತನಾಗ ಗಂಡನ ಸುದ್ದಿ ಕೇಳಿದೊಡನೆಯೇ ಎಲ್ಲ ಬಂಧನವನ್ನೂ ಹರಿದೊಗೆದು ಆತನ ಕಡೆಗೆ ಓಡಿಹೋಗುವಷ್ಟರ ಮಟ್ಟಿಗೆ ಪ್ರಬಲವಾಗಿರಲು ಅಸಂಭವವಾಗಿರದು ಬಂಧನ ಮತ್ತು ಸಂಸ್ಕಾರ ಇವೆರಡೂ ಸಮಾನ ಬಲದಿಂದ ಹೆಣ್ಣಿನ ಮನದಲ್ಲಿ ಕೊನೆಯ ವರೆಗೆ ಯುದ್ಧಮಾಡುತ್ತಿದ್ದುದಾದರೆ ಕತೆಯ ನಾಟಕೀಯತೆ ತೀವ್ರವಾದೀತು. ಆದರೆ ವಿಷಾದದ ಶೋಚನೀಯವಾದ ಗುರುತು ಮನಸ್ಸಿನಮೇಲೆ ಶಾಶ್ವತವಾಗಿ ನೆಲೆಗೊಂಡೀತು. ವಿಷಾದದ ಅತಿ ಮುಖ್ಯ ವಾಹನನಾದವನು ನಿರ್ಭಾಗ್ಯ ರಮೇಶ. ಅವನ ದುಃಸ್ಥಿತಿ ಎದುರಿಸುವ ಮನೋಭಾವದ ವಿರುದ್ಧ ತ ಘಟನಾ ಜಾಲದ ಅನಿವಾರ್ಯ ಜಟಿಲತೆಯಷ್ಟು ಬಲಶಾಲಿಯಾದುದಲ್ಲ. ಈ ಕಾರಣ ದಿಂದ ವಿಮರ್ಶಕರು ಬರಹಗಾರರನ್ನು ಅಪರಾಧಿಯೆಂದು ನಿರ್ಧರಿಸಿದುದಾದರೆ ನಾನು ಉತ್ತರ ಕೊಡೆನು. ನಾನು ಹೇಳುವುದಿಷ್ಟೆ, ಕತೆಯ ನಡುವೆ ಎಷ್ಟರ ಮಟ್ಟಿಗೆ ವರ್ಣನೆ ಮತ್ತು ವೇದನೆಯಲ್ಲಿ ಕವಿತ್ವದ ಸ್ಪರ್ಶವುಂಟಾಗಿದೆಯೋ ಅದರಲ್ಲಿ ರಸದ ನಾಶವು ಇಲ್ಲದಿದ್ದುದಾದರೆ ಇಡೀ "ನೌಕಾಡುಬಿ" ಯಿಂದ ಆ ಅಂಶವೊಂದೇ ಕವಿಯ ಕೀರ್ತಿ ಉಳಿಸಿಡಲು ಸಾಕು ಆದರೆ ಈ ಮಾತನ್ನೂ ಸಂಕೋಚವಿಲ್ಲದೆ ಹೇಳಲಾರೆ. ಏಕೆಂದರೆ ವೇಗವಾಗಿ ರುಚಿಯ ಪರಿವರ್ತನೆಯಾಗುತಿರುವುದು.

ಮಾರ್ಗಶಿರ ೧೩೪೭ ವಂಗಾಬ್ದ.
(ಕ್ರಿ. ಶ. ೧೯೪೦)

—ರವೀಂದ್ರನಾಥ ಠಾಕೂರ್.

# ಮುಳುಗಿದ ದೋಣಿ

---

ರಮೇಶ ಈ ಬಾರಿ ಲಾ ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದರಲ್ಲಿ ಯಾರಿಗೂ ಯಾವ ವಿಧವಾದ ಸಂದೇಹವೂ ಇರಲಿಲ್ಲ. ವಿಶ್ವವಿದ್ಯಾಲಯದ ಸರಸ್ವತಿ ಒಂದೇ ಸಮನಾಗಿ ತನ್ನ ಸ್ವರ್ಣಪದ್ಮದ ದಳ ಚಾಚಿ ರಮೇಶನಿಗೆ ಪದಕ ಕೊಡುತ್ತ ಬಂದಿರುವಳು. ವಿದ್ಯಾರ್ಥಿವೇತನವೂ ತಪ್ಪುತ್ತಿರಲಿಲ್ಲ.

ಪರೀಕ್ಷೆ ಮುಗಿಸಿಕೊಂಡು ಈಗ ಅವನು ಮನೆಗೆ ಹಿಂದಿರುಗಬೇಕಾಗಿತ್ತು. ಆದರೆ ಈವರೆಗೆ ಅವನ ಪೆಟ್ಟಿಗೆ ಸಿದ್ಧಪಡಿಸುವುದರಲ್ಲಿ ಯಾವ ಬಗೆಯ ಉತ್ಸಾಹವೂ ಕಂಡುಬರಲಿಲ್ಲ; ತಂದೆಯವರು ಬೇಗ ಮನೆಗೆ ಹಿಂದಿರುಗುವಂತೆ ಪತ್ರ ಬರೆದಿದ್ದರು. ಪರೀಕ್ಷೆಯ ಫಲಿತಾಂಶ ಹೊರಬಿದ್ದೊಡನೆಯೇ ತಾನು ಮನೆಗೆ ಬರುವುದಾಗಿ ರಮೇಶ ಉತ್ತರ ಬರೆದಿದ್ದ.

ಅನ್ನದಾಬಾಬುಗಳ ಮಗ ಯೋಗೇಂದ್ರ ರಮೇಶನ ಸಹಪಾಠಿ. ನೆರೆಮನೆಯಲ್ಲೇ ಅವನ ವಾಸ. ಅನ್ನದಾಬಾಬು ಬ್ರಾಹ್ಮಸಮಾಜದವರು. ಅವರ ಮಗಳು ಹೇಮನಳಿನಿ ಈ ಸಲ ಎಫ್.ಎ.ಗೆ ಕಟ್ಟಿದ್ದಳು. ರಮೇಶ ಅನ್ನದಾಬಾಬುಗಳ ಮನೆಗೆ ಚಹಾ ಕುಡಿಯಲು ಅಥವಾ ಕುಡಿಯದಿದ್ದರೂ ಆ ನೆಪದಲ್ಲಿ ಆಗಾಗ್ಗೆ ಹೋಗುವನು.

ಹೇಮನಳಿನಿ ಸ್ನಾನವಾದಬಳಿಕ ಕೂದಲು ಒಣಗಿಸಿಕೊಳ್ಳುತ್ತ ಮಾಳಿಗೆಯಲ್ಲಿ ಓಡಾಡುತ್ತ ಪಾಠ ಗಟ್ಟಿಮಾಡುತ್ತಿದ್ದಳು. ಅದೇ ಸಮಯದಲ್ಲಿ ರಮೇಶನೂ ಮನೆಯ ಜನಹೀನ ಮಾಳಿಗೆಯ ಮೆಟ್ಟಿಲ ಒಂದು ಭಾಗದಲ್ಲಿ ಪುಸ್ತಕ ಹಿಡಿದು ಕುಳಿತುಕೊಳ್ಳುವನು. ಓದಲು ಇಂಥ ಸ್ಥಳ ಅನುಕೂಲವೆನ್ನುವುದು ನಿಜ. ಆದರೆ ಸ್ವಲ್ಪ ಯೋಚಿಸಿ ನೋಡಿದರೂ ಸಾಕಾದಷ್ಟು ಆತಂಕಗಳಿವೆ ಎಂಬುದನ್ನು ತಿಳಿಯಲು ಕಾಲವಿಳಂಬವಾಗದು.

ಈವರೆಗೆ ಮದುವೆ ಸಂಬಂಧವಾಗಿ ಯಾರ ಕಡೆಯವರಿಂದಲೂ ಯಾವ ಮಾತೂ ನಡೆದಿರಲಿಲ್ಲ. ಅನ್ನದಾಬಾಬುಗಳ ಕಡೆಯಿಂದ ನಡೆಯದಿರಲು

ಒಂದು ಕಾರಣವಿತ್ತು. ಒಬ್ಬ ಹುಡುಗ ಬ್ಯಾರಿಸ್ಟರಾಗಲು ವಿಲಾಯಿತಿಗೆ ಹೋಗಿದ್ದನು, ಅವನ ಮೇಲೆ ಅನ್ನದಾಬಾಬುಗಳು ಗುರಿಯಿಟ್ಟಿದ್ದರು.

ಆ ದಿನ ಚಹದ ಮೇಜಿನ ಬಳಿ ಒಂದು ದೊಡ್ಡ ತರ್ಕವೆದ್ದಿತ್ತು. ಯುವಕ ಅಕ್ಷಯನಿಗೆ ದೊಡ್ಡ ಪಾಸ್ ಮಾಡಲಾಗಲಿಲ್ಲ, ಆದರೆ ಹೀಗೆಂದು ಹೇಳಿ ಆ ನಿರ್ಭಾಗ್ಯ ತಿಂಡಿತೀರ್ಥಗಳಲ್ಲಿ ಮತ್ತು ಬಗೆಬಗೆಯ ಆಸೆಗಳನ್ನು ಪಾಸ್‌ಮಾಡುವುದರಲ್ಲಿ ಇತರ ಹುಡುಗರಿಗಿಂತ ಹಿಂದುಳಿದವನು ಎನ್ನುವಂತಿಲ್ಲ. ತಪ್ಪದೆ ಹೇಮನಳಿನಿಯ ಚಹದ ಮೇಜಿನ ಬಳಿ ಆಗಾಗ್ಗೆ ಅವನನ್ನೂ ನೋಡಬಹುದಾಗಿತ್ತು. ಚರ್ಚೆಯ ವಿಷಯ—ಪುರುಷರ ಬುದ್ಧಿ ಖಡ್ಗದಂತೆ, ಚೆನ್ನಾಗಿ ಸಾಣೆ ಹಿಡಿದಿದ್ದರೂ ಬರಿಯ ಭಾರದಿಂದಲೇ ಬಹಳ ಕೆಲಸ ಮಾಡಬಹುದು. ಹೆಂಗಸರ ಬುದ್ಧಿ ಸೀಸದ ಕಡ್ಡಿ ಹೆರೆಯುವ ಚೂರಿಯಂತೆ; ಎಷ್ಟು ಸಾಣೆ ಹಿಡಿದರೇನು ! ಅದರಿಂದ ಯಾವ ದೊಡ್ಡ ಕೆಲಸವೂ ಆಗುವುದಿಲ್ಲ—ಇತ್ಯಾದಿ. ಹೇಮನಳಿನಿ ಅಕ್ಷಯನ ಈ ಹರಟೆಯನ್ನು ಮಾತಿಲ್ಲದೆ ತಿರಸ್ಕರಿಸಲಾರಂಭಿಸಿದಳು. ಆದರೆ ಸ್ತ್ರೀಬುದ್ಧಿಯನ್ನು ಹೀಯಾಳಿಸುವ ಪಕ್ಷವನ್ನೇ ಯೋಗೇಂದ್ರನೂ ವಹಿಸಿದ್ದನು. ಆಗ ರಮೇಶನಿಂದ ಸುಮ್ಮನಿರಲಾಗಲಿಲ್ಲ. ಅವನು ಉದ್ವೇಗದಿಂದ ಸ್ತ್ರೀ ಜಾತಿಯನ್ನು ಹೊಗಳಲಾರಂಭಿಸಿದನು.

ಈ ರೀತಿ ರಮೇಶ ನಾರೀಭಕ್ತಿಯ ಜೀವಂತ ಉತ್ಸಾಹದಲ್ಲಿ ಇತರ ದಿನಗಳಿಗಿಂತ ಹೆಚ್ಚಾಗಿ ಎರಡು ಲೋಟ ಚಹಾ ಕುಡಿದಿದ್ದನು. ಇಂಥ ಸಮಯದಲ್ಲಿ ಬಾಗಿಲು ಕಾಯುವವನು ಒಂದು ತುಂಡು ಕಾಗದವನ್ನು ಅವನ ಕೈಗಿತ್ತನು. ಮೇಲುಗಡೆ ಅವನ ತಂದೆಯ ಬರವಣಿಗೆಯಲ್ಲಿ ಅವನ ಹೆಸರು ಬರೆದಿದ್ದಿತು. ಕಾಗದ ಓದಿ ತರ್ಕವನ್ನು ಅರ್ಧಕ್ಕೇ ನಿಲ್ಲಿಸಿ ಬೆಚ್ಚಿಬಿದ್ದನು. "ಏನು ಸಮಾಚಾರ" ಎಂದು ಎಲ್ಲರೂ ಪ್ರಶ್ನಿಸಿದರು. "ತಂದೆಯವರು ಊರಿಂದ ಬಂದಿರುವರು' ಎಂದನು ರಮೇಶ. "ಅಣ್ಣಾ, ರಮೇಶ ಬಾಬುಗಳ ತಂದೆಯವರನ್ನು ಇಲ್ಲಿಗೇ ಕರೆಯಬಾರದೇಕೆ ? ಇಲ್ಲಿ ಚಹದ ಸಿದ್ಧತೆಯಾಗಿದೆಯಲ್ಲ" ಎಂದು ಹೇಮನಳಿನಿ ಯೋಗೇಂದ್ರನಿಗೆ ಹೇಳಿದಳು.

ರಮೇಶ ಗಾಬರಿಯಿಂದ, "ಇಲ್ಲ, ಈ ದಿನ ಬೇಡ, ನಾನಲ್ಲಿಗೇ ಹೋಗುವೆ" ಎಂದನು.

ಅಕ್ಷಯ ಮನಸಿನಲ್ಲೇ ಸಂತೋಷಪಡುತ್ತ, "ಇಲ್ಲಿ ಉಪಹಾರ ತೆಗೆದುಕೊಳ್ಳಲು ಅವರಿಗೆ ತೊಂದರೆಯಾಗಬಹುದು" ಎಂದು ಹೇಳಿದ.

ರಮೇಶನ ತಂದೆ ವ್ರಜಮೋಹನ ಬಾಬುಗಳು ರಮೇಶನಿಗೆ " ನಾಳೆ ಬೆಳಗಿನ ಗಾಡಿಯಲ್ಲೇ ನೀನು ಊರಿಗೆ ಹೊರಡಬೇಕು " ಎಂದರು.

ರಮೇಶ ತಲೆ ಕೆರೆಯುತ್ತ, " ವಿಶೇಷ ಕಾರ್ಯವೇನಾದರೂ ಇದೆಯೇ " ಎಂದು ವಿಚಾರಿಸಿದನು.

" ಅಂಥ ಮಹತ್ವದ ಕೆಲಸವೇನೂ ಇಲ್ಲ " ಎಂದರು ವ್ರಜಮೋಹನ ಬಾಬುಗಳು.

" ಹಾಗಾದರೆ ಇಷ್ಟು ಅವಸರವೇಕೆ ? " ಎಂದು ಕೇಳಲು ರಮೇಶ ತಂದೆಯ ಮುಖ ನೋಡುತ್ತ ನಿಂತನು. ಅವರು ಅವನ ಕುತೂಹಲ ನಿವಾರಿಸುವುದು ಆವಶ್ಯಕವೆಂದು ಎಣಿಸಲಿಲ್ಲ.

ಸಂಜೆ ವ್ರಜಮೋಹನ ಬಾಬುಗಳು ಕಲ್ಕತ್ತೆಯ ತಮ್ಮ ಬಂಧು ಮಿತ್ರರನ್ನು ನೋಡಿಬರಲು ಹೋಗಿದ್ದಾಗ, ರಮೇಶ ಅವರಿಗೊಂದು ಪತ್ರ ಬರೆಯುತ್ತ ಕುಳಿತನು. " ಶ್ರೀ ಚರಣ ಕಮಲೇಷು " ವರೆಗೆ ಬರೆದು ಮುಂದುವರಿಸಲು ಇಷ್ಟಪಡಲಿಲ್ಲ. ಆದರೆ ರಮೇಶ ಮನಸ್ಸಿನಲ್ಲೇ, " ನಾನು ಹೇಮನಳಿನಿಯ ವಿಷಯದಲ್ಲಿ ಸರಿಯಾಗಿ ಹೇಳಲಾರದ ರೀತಿಯಲ್ಲಿ ಸಿಕ್ಕಿಬಿದ್ದಿರುವೆ, ತಂದೆಯ ಬಳಿ ಯಾವ ರೀತಿಯಲ್ಲೂ ಅದನ್ನು ಮರೆಮಾಚುವುದು ಒಳ್ಳೆಯದಲ್ಲ " ಎಂದುಕೊಂಡನು. ಅವನು ಎಷ್ಟೆಷ್ಟು ಬಗೆಯಲ್ಲಿ ಎಷ್ಟೆಷ್ಟು ಪತ್ರ ಬರೆದನೋ ಅವೆಲ್ಲವನ್ನೂ ಹರಿದುಹಾಕಿದನು.

ವ್ರಜಮೋಹನ ಬಾಬುಗಳು ಊಟ ಮುಗಿಸಿ ಸುಖವಾಗಿ ನಿದ್ದೆ ಮಾಡಿದರು. ರಮೇಶ ಮನೆಯ ಮಾಳಿಗೆಯ ಮೇಲೆ ಏರಿ ಬಂದು ಪಕ್ಕದ ಮನೆಯತ್ತ ನೋಡುತ್ತ ನಿಶಾಚರನಂತೆ ವೇಗವಾಗಿ ನಡೆದಾಡಲಾರಂಭಿಸಿದನು.

ರಾತ್ರಿ ಒಂಭತ್ತರ ವೇಳೆಯಲ್ಲಿ ಅಕ್ಷಯ ಅನ್ನದಾಬಾಬುಗಳ ಮನೆಯಿಂದ ಹೊರಹೊರಟ—ರಾತ್ರಿ ಒಂಬತ್ತೂವರೆಯ ಸಮಯದಲ್ಲಿ ಬೀದಿಯ ಬಾಗಿಲು ಹಾಕಲಾಯಿತು. —ರಾತ್ರಿ ಹತ್ತಕ್ಕೆ ಅನ್ನದಾಬಾಬುಗಳು ಕುಳಿತುಕೊಳ್ಳುವ ಕೋಣೆಯ ದೀಪ ಆರಿತು, ರಾತ್ರಿ ಹತ್ತೂವರೆಯ ಬಳಿಕ ಆ ಮನೆಯ ಕೋಣೆ ಕೋಣೆಯಲ್ಲೂ ಸುಗಭೀರ ಸುಷುಪ್ತಿ ವಿರಾಜಿಸತೊಡಗಿತು.

ಮರುದಿನ ಬೆಳಗಿನ ಗಾಡಿಯಲ್ಲಿ ರಮೇಶ ಹೊರಡಬೇಕಾಯಿತು. ವ್ರಜಮೋಹನ ಬಾಬುಗಳ ಜಾಗರೂಕತೆಯಿಂದ ಗಾಡಿಗೆ ತಪ್ಪಿಸಿಕೊಳ್ಳುವಂಥ ಯಾವ ಸುಯೋಗವೂ ದೊರೆಯಲಿಲ್ಲ.

೨

ಮನೆಗೆ ಬಂದು ರಮೇಶ ತನ್ನ ಮದುವೆಯ ಹೆಣ್ಣೂ ದಿನವೂ ನಿಷ್ಕರ್ಷೆಯಾಗಿದೆಯೆಂಬ ಸುದ್ದಿ ಕೇಳಿದ. ಅವರ ತಂದೆ ವ್ರಜಮೋಹನರ ಬಾಲ್ಯ ಸ್ನೇಹಿತ ಈಶಾನರು ವಕೀಲರಾಗಿದ್ದಾಗ ವ್ರಜಮೋಹನರ ಸ್ಥಿತಿ ಉತ್ತಮವಾಗಿರಲಿಲ್ಲ—ಈಶಾನರ ಸಹಾಯದಿಂದಲೇ ಅವರು ಅನುಕೂಲಸ್ಥಿತಿಗೆ ಬಂದದ್ದು. ಆ ಈಶಾನರು ಅಕಾಲ ಮೃತ್ಯುವಿಗೊಳಗಾದಾಗ ಅವರ ಉಳಿತಾಯವೇನೂ ಇರಲಿಲ್ಲ. ಸಾಲವಿತ್ತು. ವಿಧವೆ ಹೆಂಡತಿ ಒಂದು ಹೆಣ್ಣು ಮಗುವಿನೊಡನೆ ಬಡತನದಲ್ಲಿ ಮುಳುಗಿದ್ದಳು. ಆ ಹುಡುಗಿಯೇ ಈಗ ಮದುವೆಗೆ ತಕ್ಕವಳಾಗಿರುವಳು. ವ್ರಜಮೋಹನರು ಅವಳೊಡನೆಯೇ ರಮೇಶನ ಮದುವೆಯನ್ನು ನಿಶ್ಚಯಿಸಿದ್ದರು. ರಮೇಶನ ಹಿತೈಷಿಗಳು ಯಾರು ಯಾರೋ ಹುಡುಗಿ ನೋಡಲು ಚೆಲುವೆಯಲ್ಲವೆಂದು ಹೇಳಿ ಅಡ್ಡಿಪಡಿಸಿದರು. ವ್ರಜಮೋಹನರು, "ಆ ವಿಷಯವೆಲ್ಲ ನನಗೆ ತಿಳಿಯದು—ಎಲ್ಲಕ್ಕೂ ಮೊದಲು ಕಣ್ಣಿಗೆ ಅಂದವಾಗಿರಬೇಕೆನ್ನುವುದಕ್ಕೆ ಮನುಷ್ಯ ಹೂವೂ ಅಥವ ಪತಂಗವೂ ಅಲ್ಲ. ಹುಡುಗಿಯ ತಾಯಿ ಸತೀ–ಸಾಧ್ವಿಯಾಗಿರುವಂತೆಯೇ ಒಂದು ವೇಳೆ ಹುಡುಗಿಯೂ ಇರಬಹುದು. ಆದರಿಂದ ರಮೇಶ ಅದನ್ನೇ ತನ್ನ ಭಾಗ್ಯವೆಂದು ತಿಳಿದುಕೊಳ್ಳಬೇಕು" ಎಂದರು.

ಶುಭವಿವಾಹದ ಮಾತುಕತೆಯಲ್ಲಿ ರಮೇಶನ ಮುಖ ಬಾಡಿತು. ಅವನು ಉದಾಸೀನನಂತೆ ಅಲ್ಲಿ–ಇಲ್ಲಿ ಅಲೆದಾಡತೊಡಗಿದ. ಅಡ್ಡಿಪಡಿಸುವಂಥ ಅನೇಕ ಉಪಾಯಗಳನ್ನು ಆಲೋಚಿಸಲು ಯಾವುದೂ ಅವನಿಗೆ ಬಗೆಹರಿಯಲಿಲ್ಲ. ಕಡೆಗೆ ಬಹಳ ಕಷ್ಟದಿಂದ ಸಂಕೋಚ ಬಿಟ್ಟು ತಂದೆಯ ಬಳಿ, "ಅಪ್ಪಾ, ಈ ಮದುವೆ ನನ್ನಿಂದ ಸಾಧ್ಯವಿಲ್ಲ. ನಾನು ಬೇರೆ ಕಡೆ ಮಾತು ಕೊಟ್ಟು ಸಿಕ್ಕಿಬಿದ್ದಿರುವೆ" ಎಂದನು.

ವ್ರಜಮೋಹನರು, "ಏನೆಂದೆ, ಜೊತೆಗೆ ನಿಶ್ಚಿತಾರ್ಥವೂ ಆಯಿತೋ ?"

ರಮೇಶ—ಇಲ್ಲ, ಸರಿಯಾದ ನಿಶ್ಚಿತಾರ್ಥವಿಲ್ಲ, ಆದರೆ . . .

ವ್ರಜಮೋಹನ—ಹುಡುಗಿಯ ಕಡೆಯವರೊಡನೆ ಮಾತುಕತೆಯೆಲ್ಲ ನಿಶ್ಚಯವಾಗಿದೆಯೇ ?

ರಮೇಶ—ಇಲ್ಲ, ಮಾತುಕತೆಯೇನೂ ನಡೆದಿಲ್ಲ.

ವ್ರಜಮೋಹನ—ನಡೆದಿಲ್ಲವಲ್ಲ! ಅಂದಮೇಲೆ ಇಷ್ಟುದಿನ ಸುಮ್ಮ ನಿದ್ದಂತೆ ಇನ್ನೂ ಕೆಲವು ದಿನ ಸುಮ್ಮನಿದ್ದರಾಯಿತು.

ರಮೇಶ ಕ್ಷಣಕಾಲ ನೀರವವಾಗಿದ್ದು, "ಬೇರೊಬ್ಬ ಹುಡುಗಿಯನ್ನು ಪತ್ನೀರೂಪದಲ್ಲಿ ಪರಿಗ್ರಹಿಸಿದರೆ ಅನ್ಯಾಯವಾಗುವುದು" ಎಂದ.

ವ್ರಜಮೋಹನರು, "ಪರಿಗ್ರಹಿಸದಿದ್ದರೆ ನಿನಗೆ ಇನ್ನಷ್ಟು ಅನ್ಯಾಯ ವಾಗಬಹುದು" ಎಂದರು.

ರಮೇಶನಿಗೆ ಬೇರೇನೂ ಹೇಳಲಾಗಲಿಲ್ಲ. ಅವನು, "ಈ ನಡುವೆ ವಿಧಿವಿಡಂಬನೆಯಿಂದ ಎಲ್ಲ ಜಾರಿ ಹೋದರೂ ಹೋಗಬಹುದು" ಎಂದೆಣಿಸ ತೊಡಗಿದ.

ರಮೇಶನ ಮದುವೆಗೆ ಗೊತ್ತಾಗಿದ್ದ ದಿನದ ಬಳಿಕ ಒಂದು ವರ್ಷ ಲಗ್ನಕ್ಕೆ ಬರ. ಹೇಗಾದರೂ ಆ ದಿನವೂ ಕಳೆದು ಹೋದರೆ ಮತ್ತೊಂದು ವರ್ಷದ ಅವಧಿ ಹೆಚ್ಚುವುದೆಂದು ಅವನು ತಿಳಿದಿದ್ದ.

ಹೆಣ್ಣಿನ ಮನೆಗೆ ನದಿಯ ಮಾರ್ಗವಾಗಿ ಹೋಗಬೇಕು—ಬಹಳ ಹತ್ತಿರವೇನೂ ಅಲ್ಲ— ದೊಡ್ಡ-ಪುಟ್ಟ ಎರಡು-ಮೂರು ನದಿ ದಾಟಲು ಮೂರು-ನಾಲ್ಕು ದಿನ ಬೇಕಾದೀತು. ವ್ರಜಮೋಹನರು ದೈವಿಕ ಘಟನೆಗಳಿಗೆ ಯತೇಚ್ಛ ಅವಕಾಶ ಕೊಟ್ಟು ಒಂದು ವಾರಕ್ಕೆ ಮುಂಚೆ ಒಳ್ಳೆಯ ದಿನದಲ್ಲಿ ಪ್ರಯಾಣ ಹೊರಟರು.

ಉದ್ದಕ್ಕೂ ಗಾಳಿ ಅನುಕೂಲವಾಗಿತ್ತು. ಶಿಮುಲಘಟ್ಟ ಸೇರಲು ಪೂರ್ತಿ ಮೂರು ದಿನಗಳೂ ಆಗಲಿಲ್ಲ. ಮದುವೆಗೆ ಇನ್ನೂ ನಾಲ್ಕು ದಿನದ ಅವಕಾಶವಿದೆ.

ವ್ರಜಮೋಹನ ಬಾಬುಗಳಿಗೆ ಎರಡು ಮೂರು ದಿನ ಮುಂಚೆಯೆ-ಬರಬೇಕೆಂಬ ಇಷ್ಟವಿತ್ತು. ಶಿಮುಲಘಟ್ಟದಲ್ಲಿ ಅವರ ಬೀಗಿತಿ ಹೀನಸ್ಥಿತಿ ಯಲ್ಲಿದ್ದಳು. ವ್ರಜಮೋಹನ ಬಾಬುಗಳಿಗೆ, ಇವರ ವಾಸಸ್ಥಾನವನ್ನು ತಮ್ಮ ಸ್ವಗ್ರಾಮಕ್ಕೆ ಬದಲಾಯಿಸಿ ಇವರನ್ನು ಸುಖವಾಗಿಯೂ ಸ್ವತಂತ್ರರನ್ನಾಗಿಯೂ ಇರಿಸಲು ಮತ್ತು ಸ್ನೇಹಿತನ ಋಣವನ್ನು ತೀರಿಸಲು ಇಷ್ಟವಿತ್ತು. ಯಾವ ನೆಂಟಸ್ತಿಕೆಯ ಸಂಬಂಧವೂ ಇಲ್ಲದೆ ಒಮ್ಮೆಗೇ ಈ ಮಾತು ಹೇಳುವುದು ಸರಿ ಯಲ್ಲವೆಂದು ತಿಳಿದಿದ್ದರು. ಈಗ ಮದುವೆಯ ನೆಪದಲ್ಲಿ ತಮ್ಮ ಬೀಗಿತಿ ಯನ್ನು, ಅವರು ಊರು ಬದಲಾಯಿಸಲು ಒಪ್ಪಿಸಿದರು. ಜಗತ್ತಿನಲ್ಲಿ ಬೀಗಿತಿಗೆ

ಇದ್ದವಳು ಒಬ್ಬಳೇ ಮಗಳು,—ಅವಳ ಜೊತೆಯಲ್ಲೇ ಇದ್ದು, ತಾಯಿಯಿಲ್ಲದ ಅಳಿಯನ ತಾಯಿಯ ಸ್ಥಾನ ವಹಿಸಿಕೊಂಡಿರಲಿ, ಇದಕ್ಕೆ ತಮ್ಮ ಅಕ್ಷೇಪಣೆ ಯೇನೂ ಇಲ್ಲ. ಅಕೆ, "ಯಾರು ಏನೇ ಹೇಳಲಿ, ನನ್ನ ಮಗಳು-ಅಳಿಯ ಇರುವ ಕಡೆ ನಾನೂ ಇರುವೆ" ಎಂದು ಹೇಳಿದರು.

ಮದುವೆಗೆ ಕೆಲವು ದಿನಗಳ ಮುಂಚೆ ಬಂದು ವ್ರಜಮೋಹನ ಬಾಬು ಗಳು ತಮ್ಮ ಬೀಗಿತಿ ಮನೆ ಬದಲಾಯಿಸುವ ಸಿದ್ಧತೆಯನ್ನು ಮಾಡತೊಡ ಗಿದರು. ಮದುವೆಯಾದ ಬಳಿಕ ಎಲ್ಲರೂ ಒಟ್ಟಾಗಿ ಪ್ರಯಾಣ ಮಾಡ ಬೇಕೆಂದು ಅವರ ಇಷ್ಟ. ಇದಕ್ಕಾಗಿ ಅವರು ಊರಿಂದ ಕೆಲವು ಮಂದಿ ಹೆಂಗಸ ರನ್ನು ಸಂಗಡ ಕರೆತಂದಿದ್ದರು.

ಮದುವೆಯ ಕಾಲದಲ್ಲಿ ರಮೇಶ ಸರಿಯಾಗಿ ಮಂತ್ರ ಉಚ್ಚರಿಸಲಿಲ್ಲ, ಶುಭದೃಷ್ಟಿ*ಯ ಸಮಯದಲ್ಲಿ ಕಣ್ಣು ಮುಚ್ಚಿಕೊಂಡಿದ್ದ. ಒಸಗೆಯ ಮನೆಯ ಹಾಸ್ಯಾಲಾಪಗಳನ್ನು ನೀರವವಾಗಿ ತಲೆತಗ್ಗಿಸಿಕೊಂಡು ಸಹಿಸಿದ. ರಾತ್ರಿ ಹಾಸಿಗೆಯ ಬಳಿ ಮುಖ ತಿರುವಿಕೊಂಡು ಕುಳಿತಿದ್ದ, ಬೆಳಗ್ಗೆ ಹಾಸಿಗೆ ಯಿಂದೆದ್ದು ಹೊರಟುಹೋದ.

ಮದುವೆ ಮುಗಿದ ಬಳಿಕ ಹೆಂಗಸರು ಒಂದು ದೋಣಿಯಲ್ಲಿ, ಮುದುಕರು ಒಂದರಲ್ಲಿ, ವರ ಹಾಗೂ ದೊಡ್ಡವರ ಗುಂಪು ಮತ್ತೊಂದು ದೋಣಿಯಲ್ಲಿ ಪ್ರಯಾಣ ಹೊರಟರು. ಬೇರೊಂದು ದೋಣಿಯಲ್ಲಿ ವಾದ್ಯಗಾರರ ಗುಂಪು ಆಗ-ಈಗ ಅದು-ಇದು ರಾಗಗಳನ್ನು ಹೇಗೆ ಹೇಗೋ ಆಲಾಪನೆ ಮಾಡ ಲಾರಂಭಿಸಿದರು

ಹಗಲೆಲ್ಲಾ ಸಹಿಸಲಾರದ ಸೆಕೆ. ಆಕಾಶದಲ್ಲಿ ಮೋಡವಿಲ್ಲ. ಆದರೂ ಒಂದು ವಿವರ್ಣ ಹೊದಿಕೆ ನಾಲ್ಕೂ ಕಡೆ ಕವಿದಿತ್ತು. ತೀರದ ಗಿಡ ಮರಗಳು ಬೂದು ಬಣ್ಣವಾಗಿತ್ತು. ಮರದ ಎಲೆಗಳು ಅಲುಗಾಡುತ್ತಿರಲಿಲ್ಲ. ಅಂಬಿ ಗರೂ ಬೆಸ್ತರೂ ಬೆವತು ಬೆಂಡಾಗಿದ್ದರು. ಸಂಜೆಗತ್ತಲೆ ಕವಿಯುವ ಮುನ್ನವೇ ಅಂಬಿಗರು, "ದಣಿಗಳೇ ಈಗ ದೋಣಿಯನ್ನು ಘಟ್ಟದಲ್ಲಿ ಕಟ್ಟಬೇಕು—

---

*ಶುಭದೃಷ್ಟಿ—ಮದುವೆಯಲ್ಲಿ ಗಂಡು-ಹೆಣ್ಣಿನ ನಡುವೆ ರೇಷ್ಮೆಯ ಬಟ್ಟೆ ಅಡ್ಡ ಹಿಡಿದು ಮಂತ್ರಗಳ ಉಚ್ಚಾರಣೆಯ ಬಳಿಕ ಸರಿಸಿದಾಗ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡುವುದು.

ಮುಂದೆ ಬಹಳ ದೂರದ ವರೆಗೆ ದೋಣಿ ನಿಲ್ಲಿಸಲು ಸ್ಥಳವಿಲ್ಲ" ಎಂದರು. ದಾರಿಯಲ್ಲಿ ವಿಳಂಬವಾಗುವುದನ್ನು ವ್ರಜಮೋಹನ ಬಾಬುಗಳು ಇಷ್ಟಪಡಲಿಲ್ಲ. ಅವರು "ಈಗ ನಿಲ್ಲಿಸಲು ಸಾಧ್ಯವಿಲ್ಲ. ಈ ದಿನ ಮೊದಲನೆಯ ಜಾವದ ರಾತ್ರಿಯಲ್ಲಿ ಬೆಳದಿಂಗಳಿದೆ, ಇಂದು ಬಾಲೂಘಾಟನ್ನು ಸೇರಿ ದೋಣಿ ನಿಲ್ಲಿಸೋಣ. ನಿಮಗೆ ಬಕ್ಷೀಸು ಕೊಡುವೆ" ಎಂದರು.

ದೋಣಿ ಗ್ರಾಮವನ್ನು ಬಿಟ್ಟುಹೊರಟಿತು. ಒಂದೆಡೆ ನದಿಯವೇಗ ಗುಳು ಗುಳು ಎನ್ನುತಿತ್ತು. ಮತ್ತೊಂದೆಡೆ ಎತ್ತರವಾದ ಒಡೆದ ತೀರ. ಮಂಜಿನ ನಡುವೆ ಚಂದ್ರ ಉದಯಿಸಿದ, ಆದರೆ ಅವನು ಕುಡುಕನ ಕಣ್ಣಿನಂತೆ ಬಹಳ ಮಂಕಾಗಿ ಕಾಣತೊಡಗಿದ.

ಈ ವೇಳೆಯಲ್ಲಿ ಆಕಾಶದಲ್ಲಿ ಮೋಡವೂ ಇರಲಿಲ್ಲ, ಏನೂ ಇರಲಿಲ್ಲ. ಆದರೂ ಎಲ್ಲಿಂದಲೋ ಒಂದು ಘರ್ಜನೆಯ ಧ್ವನಿ ಕೇಳಿ ಬಂತು. ಹಿಂಭಾಗದ ದಿಗಂತದಕಡೆ ತಿರುಗಿ ನೋಡಲಾಯಿತು, ಒಂದು ದೊಡ್ಡದಾದ ಕಣ್ಣಿಗೆ ಕಾಣದ ಕಸಬರಿಗೆಯಂತೆ ಮುರಿದ ಕೊಂಬೆ, ಹುಲ್ಲು ಹುಪ್ಪಟೆ, ಧೂಳು ರಾಶಿ ಎದ್ದು ಆಕಾಶದಲ್ಲಿ ಪ್ರಚಂಡ ವೇಗದಿಂದ ಹಾರಿಬರುತಿತ್ತು, "ನಿಲ್ಲಿ, ನಿಲ್ಲಿ, ಎಚ್ಚರಿಕೆ, ಎಚ್ಚರಿಕೆ, ಅಯ್ಯೋ ಅಯ್ಯೋ" ಎನ್ನುತ್ತ ಕ್ಷಣಕಾಲದ ಬಳಿಕ ಏನಾಯಿತೋ ಯಾರೂ ಹೇಳಲಾರದಾದರು. ಒಂದು ಸುಂಟರಗಾಳಿ ಒಂದೇ ದಾರಿ ಹಿಡಿದುಕೊಂಡು ಪ್ರಬಲ ವೇಗದಿಂದ ಎಲ್ಲವನ್ನೂ ಕಿತ್ತು ತಲೆಕೆಳಗು ಮಾಡುತ್ತ ಹಲವು ದೋಣಿಗಳನ್ನು ಎಲ್ಲಿ ಏನು ಮಾಡಿತೋ ಅದರ ನೆಲೆಯೇ ತಿಳಿಯ ಬರಲಿಲ್ಲ.

೩

ಮಂಜು ಹರಿಯಿತು. ಬಹಳ ದೂರದವರೆಗೆ ಹರಡಿದ್ದ ಮರುಭೂಮಿ ಯಂಥ ಮರಳು ಭೂಮಿಯ ಶುಭ್ರವಾದ ಬೆಳದಿಂಗಳು ವಿಧವೆಯ ಬಿಳಿಯ ಬಟ್ಟೆಯಂತೆ ಮುಚ್ಚಿತ್ತು. ನದಿಯಲ್ಲಿ ದೋಣಿಯಿರಲಿಲ್ಲ, ಅಲೆಯಿರಲಿಲ್ಲ. ರೋಗ ಬಾಧೆಯ ಬಳಿಕ ಉಂಟಾಗುವ ಮೃತ್ಯುವಿನ ನಿರ್ವಿಕಾರ ಶಾಂತಿಯಂಥ ಶಾಂತಿ ನೆಲದ ಮೇಲೂ ನೀರಿನಮೇಲೂ ಸ್ತಬ್ಧಭಾವದಿಂದ ಕಾಣ ಬರುತಿತ್ತು.

ಪ್ರಜ್ಞೆಬಂದ ಬಳಿಕ ರಮೇಶ, ತಾನು ತೀರದ ಮರಳಿನ ಮೇಲೆ ಬಿದ್ದಿರು ವುದಾಗಿ ತಿಳಿದುಕೊಂಡ. ಏನಾಯಿತೆಂದು ತಿಳಿಯಲು ಅವನಿಗೆ ಸ್ವಲ್ಪ

ಕಾಲಾವಕಾಶ ಬೇಕಾಯಿತು—ಬಳಿಕ ದುಃಸ್ವಪ್ನದಂತೆ ಎಲ್ಲಾ ಘಟನೆಯೂ ಅವನಿಗೆ ನೆನಪಾಯಿತು. ತನ್ನ ತಂದೆ ಮತ್ತು ಇತರ ನೆಂಟರಿಷ್ಟರ ಸ್ಥಿತಿ ಏನಾಯಿತೆಂದು ತಿಳಿಯಲು ಅವನು ಎದ್ದನು. ನಾಲ್ಕೂಕಡೆ ತಿರುಗಿ ನೋಡಿದ, ಎಲ್ಲಿಯೂ ಯಾರ ಚಿಹ್ನೆಯೂ ಇರಲಿಲ್ಲ. ಮರಳು ದಡ ದಾಟಿ ಅವನು ಹುಡುಕುತ್ತ ಹುಡುಕುತ್ತ ಹೊರಟ.

ಪದ್ಮೆಯ ಎರಡು ತೋಳುಗಳಂಥ ಶಾಖೆಗಳೆರಡರ ನಡುವೆ ಈ ಶುಭ್ರ ದ್ವೀಪ ಬೆತ್ತಲೆ ಮಗುವಿನಂತೆ ಮುಖ ಮೇಲಾಗಿ ಮಲಗಿರುವುದು-ರಮೇಶ ಒಂದು ಶಾಖೆಯ ತೀರವೆಲ್ಲಾ ಸುತ್ತಾಡಿ ಬೇರೊಂದು ಶಾಖೆಯ ತೀರಕ್ಕೆ ಹೋದಾಗ ಸ್ವಲ್ಪ ದೂರದಲ್ಲಿ ಒಂದು ಕೆಂಪು ಬಟ್ಟೆಯಂತೆ ಇದ್ದುದನ್ನು ನೋಡಿದ. ವೇಗವಾಗಿ ನಡೆಯುತ್ತ ರಮೇಶ ಹತ್ತಿರ ಬಂದು ನೋಡಿದ. ಕೆಂಪು ಸೀರೆಯುಟ್ಟ ನವವಧು ಪ್ರಾಣ ಹೋದವಳಂತೆ ಬಿದ್ದಿರುವಳು.

ನೀರಿನಲ್ಲಿ ಮುಳುಗಿ ಪ್ರಾಣಹೋಗುತ್ತಿರುವವರ ಉಸಿರಾಟವನ್ನು ಕೃತ್ರಿಮ ರೀತಿಯಲ್ಲಿ ಹಿಂದಿರುಗಿಸುವ ವಿಧಾನ ರಮೇಶನಿಗೆ ತಿಳಿದಿತ್ತು. ಸ್ವಲ್ಪಹೊತ್ತಿನ ಬಳಿಕ ರಮೇಶ ಹುಡುಗಿಯ ಎರಡು ಕೈಗಳನ್ನೂ ಒಮ್ಮೆ ಅವಳ ತಲೆಯ ಕಡೆಗೆ ಚಾಚಿಸಿ ಪುನಃ ಅವಳ ಹೊಟ್ಟೆಯಮೇಲಿಟ್ಟು ಒತ್ತಲಾರಂಭಿಸಿದ. ಕ್ರಮ ಕ್ರಮವಾಗಿ ಮದವಣಗಿತ್ತಿಯ ಶ್ವಾಸ ಆಡತೊಡಗಿತು, ಮತ್ತು ಅವಳು ಕಣ್ಣು ತೆರೆದು ಮುಚ್ಚಿದಳು.

ಆವೇಳೆಗೆ ಆಯಾಸಗೊಂಡಿದ್ದ ರಮೇಶ ಕ್ಷಣಕಾಲ ಸುಮ್ಮನೆ ಕುಳಿತುಕೊಂಡ. ಬಾಲಕಿಯನ್ನು ಏನಾದರೂ ಪ್ರಶ್ನಿಸಬೇಕೆಂಬ ಶಕ್ತಿಯೂ ಆಗ ಅವನ ಸ್ವಾಧೀನದಲ್ಲಿರಲಿಲ್ಲ.

ಆಗ ಹುಡುಗಿಗೆ ಇನ್ನೂ ಸಂಪೂರ್ಣ ಪ್ರಜ್ಞೆಯುಂಟಾಗಿರಲಿಲ್ಲ. ಒಮ್ಮೆ ಕಣ್ಣರಳಿಸಲು ಎವೆಗಳು ಮುಚ್ಚಿಕೊಂಡವು. ರಮೇಶ ಪರೀಕ್ಷಿಸಿ ನೋಡಿದ, ಅವಳ ಉಸಿರಾಟದಲ್ಲಿ ತಡೆಯಿರಲಿಲ್ಲ. ಆಗ ಆ ಜನಹೀನ ನದೀತೀರದಲ್ಲಿ ಜೀವನ ಮೃತ್ಯುಗಳ ನಡುವೆ ಆ ಬೆಳದಿಂಗಳಲ್ಲಿ ರಮೇಶ ಹುಡುಗಿಯ ಮುಖದ ಕಡೆ ಕ್ಷಣಹೊತ್ತು ನೋಡುತಿದ್ದ.

ಸುಶೀಲೆ ನೋಟಕ್ಕೆ ಅಂದವಾಗಿಲ್ಲವೆಂದು ಯಾರು ಹೇಳಿದರು ? ಈ ಕಣ್ಣುಗಳು ಮುಚ್ಚಿರುವ ಸುಕುಮಾರ ಮುಖ ಸಣ್ಣದು-ಆದರೂ ಇಷ್ಟು ದೊಡ್ಡ ಆಕಾಶದ ನಡುವೆ, ವಿಸ್ತಾರವಾದ ಬೆಳದಿಂಗಳಲ್ಲಿ ಕೇವಲ ಈ ಸುಂದರ

ಕೋಮಲ ಮುಖವೊಂದೇ ನೋಟಕ್ಕೆ ಅರ್ಹವಾದ ವಸ್ತುವಿನಂತೆ ಗಂಭೀರ ವಾಗಿ ಅರಳಿರುವುದು.

ರಮೇಶ ಎಲ್ಲ ಸಂಗತಿಗಳನ್ನೂ ನೆನೆದುಕೊಂಡ, "ಇವಳನ್ನು ವಿವಾಹ ಸಭೆಯ ಕೋಲಾಹಲ ಹಾಗೂ ಜನರ ನಡುವೆ ನೋಡದಿದ್ದುದು ಒಳ್ಳೆಯದೇ ಆಯಿತು. ಇವಳನ್ನು ಈ ರೀತಿ ಬೇರೆಲ್ಲಿಯೂ ನೋಡಲಾಗುತ್ತಿರಲಿಲ್ಲ. ಇವಳಲ್ಲಿ ನಿಶ್ವಾಸವನ್ನುಂಟುಮಾಡಿ ವಿವಾಹ ಮಂತ್ರೋಚ್ಚಾರಣೆಗಿಂತಲೂ ಹೆಚ್ಚಾಗಿ ನನ್ನವಳನ್ನಾಗಿ ಮಾಡಿಕೊಂಡಿರುವೆ. ಮಂತ್ರ ಉಚ್ಚರಿಸಿ ಇವಳನ್ನು ನನಗೆ ಸಿಕ್ಕಬೇಕಾದ ವಸ್ತುವಿನಂತೆ ಪಡೆಯುತ್ತಿದ್ದೆ, ಈಗ ಇವಳನ್ನು ಅನು ಕೂಲನಾದ ವಿಧಾತನ ಪ್ರಸಾದದ ರೀತಿಯಲ್ಲಿ ಹೊಂದಿರುವೆ".

ಪ್ರಜ್ಞೆಯುಂಟಾದ ಬಳಿಕ ಮದುಮಗಳು ಎದ್ದು ಜಾರಿದ್ದ ಬಟ್ಟೆಯನ್ನು ಸರಿಪಡಿಸಿಕೊಂಡು ತಲೆಯ ಮೇಲೆ ಮುಸುಗು ಎಳೆದುಕೊಂಡಳು. ರಮೇಶ, "ನಿಮ್ಮ ದೋಣಿಯ ಜನರೆಲ್ಲ ಎಲ್ಲಿಹೋದರು ಗೊತ್ತಿದೆಯೇ?" ಎಂದು ಪ್ರಶ್ನಿಸಿದ.

ಅವಳು ಮಾತಿಲ್ಲದೆ ತಲೆಯಲ್ಲಾಡಿಸಿದಳು. ರಮೇಶ ಅವಳಿಗೆ, "ನೀನು ಇಲ್ಲೇ ಸ್ವಲ್ಪಹೊತ್ತು ಕುಳಿತಿರುವೆಯಾ? ನಾನೊಮ್ಮೆ ಸುತ್ತಲೂ ಓಡಾಡಿ ಎಲ್ಲರ ಸಂಗತಿ ತಿಳಿದು ಬರಲೇನು?" ಎಂದು ಕೇಳಿದ.

ಆದಕ್ಕೆ ಹುಡುಗಿ ಯಾವ ಉತ್ತರವನ್ನೂ ಹೇಳಲಿಲ್ಲ. ಆದರೆ ಅವಳ ದೇಹವಾದ್ಯಂತ ಕುಗ್ಗಿಹೋಗಿ, "ಇಲ್ಲಿ ನನ್ನೊಬ್ಬಳನ್ನೇ ಬಿಟ್ಟು ಹೋಗಬೇಡಿ" ಎಂದು ಹೇಳಿದದಂತಾಯಿತು.

ರಮೇಶನಿಗೆ ಅದು ಅರ್ಥವಾಯಿತು. ಅವನು ಒಮ್ಮೆ ಎದ್ದು ನಿಂತು ನಾಲ್ಕೂಕಡೆ ನಿಟ್ಟಿಸಿದ. ಬಿಳಿಯ ಮರಳಿನ ನಡುವೆ ಎಲ್ಲಿಯೂ ಯಾವ ಸುಳಿವೂ ಇಲ್ಲ. ಆತ್ಮೀಯರನ್ನು ಆಹ್ವಾನಿಸುತ್ತ ಬಲವನ್ನೆಲ್ಲ ಬಿಟ್ಟು ಗಟ್ಟಿ ಯಾಗಿ ಕರೆಯಲಾರಂಭಿಸಿದ. ಯಾರೊಬ್ಬರ ಉತ್ತರವೂ ಇಲ್ಲ.

ಪ್ರಯತ್ನ ವ್ಯರ್ಥವಾಗಲು ರಮೇಶ ಬೇಸತ್ತು ಕುಳಿತುಕೊಂಡ— ಮದುವೆಯ ಹುಡುಗಿ ಎರಡುಕೈಗಳಿಂದಲೂ ಮುಖ ಮುಚ್ಚಿಕೊಂಡು ಅಳು ನಿಲ್ಲಿಸಲು ಯತ್ನಿಸುತ್ತಿದ್ದಳು. ಅವಳ ಎದೆಯುಕ್ಕಿಯುಕ್ಕಿ ಬರುತಿತ್ತು. ರಮೇಶ ಸಮಾಧಾನದ ಮಾತನಾಡದೆ ಹುಡುಗಿಗೆ ಅತಿ ಹತ್ತಿರ ಕುಳಿತು ಕೈಯಿಂದ ಅವಳ ತಲೆಯನ್ನೂ ಬೆನ್ನನ್ನೂ ಸವರ ತೊಡಗಿದ. ಆದರೂ ಅವಳ

ಅಳು ನಿಲ್ಲಲಿಲ್ಲ ಅವ್ಯಕ್ತ ಕಂಠದಲ್ಲಿ ಬಿಕ್ಕಿಬಿಕ್ಕಿ ಅಳುತಿದ್ದಳು. ರಮೇಶನ ಎರಡು ಕಣ್ಣುಗಳಿಂದಲೂ ನೀರಿನ ಕೋಡಿಹರಿಯಿತು.

ನೊಂದ ಹೃದಯದ ಅಳು ನಿಂತಾಗ ಚಂದ್ರ ಮುಳುಗಿದ್ದ. ಅಂಧಕಾರದ ನಡುವೆ ಈ ನಿರ್ಜನ ಭೂಭಾಗ ಅದ್ಭುತ ಸ್ವಪ್ನದಂತೆ ತೋರಿತು. ಮರಳು ರಾಶಿಯ ಅಸ್ಪಷ್ಟ ಶ.ಭ್ರ್ರತೆ ಪ್ರೇತಲೋಕದ ಬಿಳಿಯ ಬಣ್ಣದಂತೆ ನಕ್ಷತ್ರಗಳು ಮುಸುಕು ಬೆಳಕಿನಲ್ಲಿ ನದಿಯ ಹೆಬ್ಬಾವಿನ ಹೊಳೆಯುವ ಕರಿಯ ಚರ್ಮದಂತೆ ಅಲ್ಲಲ್ಲಿ ಥಳಥಳಿಸುತ್ತಿದ್ದುವು.

ಆಗ ರಮೇಶ ಹುಡಗಿಯ ಭಯಶೀತಲ ಕೋಮಲ ಕೈಗಳೆರಡನ್ನೂ ಎರಡು ಕೈಗಳಲ್ಲಿ ಹಿಡಿದುಕೊಂಡು ವಧುವನ್ನು ತನ್ನ ಕಡೆಗೆ ಮೆಲ್ಲನೆ ಎಳೆದು ಕೊಂಡ. ಹೆದರಿದ್ದ ಹುಡುಗಿ ಯಾವ ಅಡ್ಡಿಯನ್ನೂ ಮಾಡಲಿಲ್ಲ, ಆಗ ಅವಳು ಜನರ ಹತ್ತಿರ ಇರಲು ಆಶಿಸುತಿದ್ದಳು. ದಟ್ಟವಾದ ಕತ್ತಲಲ್ಲಿ ನಿಶ್ವಾಸದಿಂದ ಅಲುಗಾಡುತಿದ್ದ ರಮೇಶನ ಎದೆಯಲ್ಲಿ ಆಶ್ರಯ ಪಡೆದು ಅವಳು ವಿಶ್ರಾಂತಿ ಅನುಭವಿಸಿದಳು. ಅದು ಅವಳು ನಾಚಿಕೊಳ್ಳುವ ಕಾಲವಲ್ಲ. ರಮೇಶನ ಎರಡು ತೋಳುಗಳ ನಡುವೆ ಅವಳು ಅತಿ ಅವಶ್ಯಕತೆಯಿಂದ ತನ್ನ ಸ್ಥಾನ ಪಡೆದಳು.

ಬೆಳಗಿನ ಜಾವದ ಶುಕ್ರ ನಕ್ಷತ್ರ ಮುಳುಗಿ, ಪೂರ್ವ ದಿಕ್ಕಿನಲ್ಲಿ ನೀಲಿ ನದಿಯ ಮೇಲೆ ಆಕಾಶ ಮೊದಲು ಬೆಳ್ಳಗೂ ಬಳಿಕ ಕೆಂಪಗೂ ಆದಾಗ, ನಿದ್ದೆ ಮಾಡುತಿದ್ದ ರಮೇಶ ಮರಳಿನ ಮೇಲೆ ಮಲಗಿದ್ದ ಮತ್ತು ಅವನ ಎದೆಯ ಬಳಿ ತೋಳ ಮೇಲೆ ತಲೆಯಿಟ್ಟುಕೊಂಡು ಮದುವಣಗಿತ್ತಿ ನಿದ್ದೆಯಲ್ಲಿ ಮಗ್ನ ಳಾಗಿದ್ದಳು.

ಕಡೆಗೆ ಬೆಳಗಿನ ಎಳೆಬಿಸಿಲು ಇಬ್ಬರ ಕಣ್ಣೆವೆಗಳನ್ನೂ ಸ್ಪರ್ಶಿಸಿದಾಗ ಇಬ್ಬರೂ ಗಾಬರಿಯಿಂದ ಎದ್ದು ಕುಳಿತರು. ಅಚ್ಚರಿಯಿಂದ ಕ್ಷಣಕಾಲ ನಾಲ್ಕೂಕಡೆ ನೋಡಿದರು ; ಆ ಕೂಡಲೆ ತಾವು ಮನೆಯಲ್ಲಿಲ್ಲ, ತೇಲಿಕೊಂಡು ಬಂದಿರುವೆವು ಎಂಬುದರ ಅರಿವಾಯಿತು.

೪

ಬೆಳಗ್ಗೆ ಬೆಸ್ತರ ದೋಣಿಗಳ ಬಿಳಿಯ ಪಟಗಳಿಂದ ನದಿ ವ್ಯಾಪ್ತ ವಾಯಿತು. ರಮೇಶ ಅವರಲ್ಲಿ ಒಬ್ಬನನ್ನು ಕರೆದು ಬೆಸ್ತರ ಸಹಾಯದಿಂದ

ಒಂದು ದೊಡ್ಡ ಪಾನ್ಸಿ (ಒಬ್ಬನೇ ಹುಟ್ಟುಹಾಕಿಕೊಂಡು ಹೋಗಲು ಅನು ಕೂಲವಾದ ದೋಣಿ) ಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು, ಕಾಣದೆ ಹೋದ ಆತ್ಮೀಯರನ್ನು ಹುಡುಕಲು ಪೋಲೀಸರನ್ನು ನೇಮಿಸಿ ಮದುವಣಿ ಗಿತ್ತಿಯೊಡನೆ ಮನೆಗೆ ಹೊರಟ.

ದೋಣಿ ಊರಿನ ಘಟ್ಟ ಸೇರುತ್ತಿದ್ದಂತೆಯೇ ತನ್ನ ತಂದೆ, ಅತ್ತೆ ಹಾಗೂ ಮತ್ತಿತರ ಆತ್ಮೀಯ ಬಂಧುಗಳ ಮೃತ ದೇಹಗಳನ್ನು ಪೋಲೀಸರು ಎತ್ತಿ ತಂದಿರುವರೆಂಬ ಸುದ್ದಿ ರಮೇಶನಿಗೆ ತಿಳಿಯಿತು. ಕೆಲವು ಮಂದಿ ಅಂಬಿಗ ರನ್ನು ಬಿಟ್ಟು ಉಳಿದವರು ಯಾರಾದರೂ ಬದುಕಿರುವರೆಂಬ ಆಸೆ ಯಾರಿಗೂ ಉಳಿಯಲಿಲ್ಲ.

ಮನೆಯಲ್ಲಿ ರಮೇಶನ ಅಜ್ಜಿ ಇದ್ದಳು, ಅವಳು ಮದುವಣಿಗಿತ್ತಿಯೊಡನೆ ಬಂದ ರಮೇಶನನ್ನು ನೋಡಿ ಗಟ್ಟಿಯಾಗಿ ಅಳಲಾರಂಭಿಸಿದಳು. ವರನೊಡನೆ ಹೋಗಿದ್ದವರ ಕೇರಿಯ ಜನ, ಅವರ ಮನೆಗಳಲ್ಲೂ ಅಳುವಿಗೆ ಆರಂಭ ವಾಯಿತು. ಶಂಖಧ್ವನಿಯಾಗಲಿಲ್ಲ, ಮಂಗಳಧ್ವನಿಯಾಗಲಿಲ್ಲ, ಮಂಗಳ ಗೀತವಾಗಲಿಲ್ಲ, ವಧುವನ್ನು ಯಾರೂ ಹೂಹಾರ ಹಾಕಿ ಸ್ವಾಗತಿಸಲಿಲ್ಲ. ಅವಳ ಕಡೆ ಯಾರೂ ನೋಡಲೂ ಇಲ್ಲ.

ಶ್ರಾದ್ಧಕರ್ಮ ಮುಗಿಯುವ ಮೊದಲೇ ರಮೇಶ ಮದುವಣಿಗಿತ್ತಿಯನ್ನು ಕರೆದುಕೊಂಡು ಬೇರೆ ಕಡೆಗೆ ಹೋಗಲು ನಿಶ್ಚಯಿಸಿದ್ದ. ಆದರೆ ಪಿತ್ರಾರ್ಜಿತ ಆಸ್ತಿಪಾಸ್ತಿಯ ವ್ಯವಸ್ಥೆ ಮಾಡದೆ ಅವನಿಗೆ ಹೊರಡಲು ಅವಕಾಶವಿರಲಿಲ್ಲ. ಕುಟುಂಬದ ಶೋಕಾಕುಲ ಸ್ತ್ರೀಸಮೂಹ ತೀರ್ಥಕ್ಷೇತ್ರದಲ್ಲಿ ವಾಸಿಸಲು ಅವನನ್ನು ಒತ್ತಾಯಪಡಿಸುತ್ತಿತ್ತು, ಅದರ ಏರ್ಪಾಟನ್ನೂ ಮಾಡಬೇಕಾ ಗಿತ್ತು.

ಈ ಎಲ್ಲ ಕೆಲಸಕಾರ್ಯಗಳ ನಡುವೆ ರಮೇಶ ಪ್ರಣಯಲೀಲೆಯ ಕಡೆ ಗಮನವಿಡಲಿಲ್ಲ. ಅಲ್ಲದೆ ಹಿಂದೆ ಕೇಳಿದ್ದಂತೆ ವಧು ಅಷ್ಟು ಚಿಕ್ಕವಳಲ್ಲ, ಅಷ್ಟೇಕೆ, ಊರ ಹೆಂಗಳೆಯರು ಇವಳು ದೊಡ್ಡವಳು ಎಂದು ತಿರಸ್ಕರಿಸು ತ್ತಿದ್ದರು, ಅಂದ ಬಳಿಕ ಇವಳೊಡನೆ ಪ್ರಣಯಲೀಲೆ ಹೇಗೆ ನಡೆಸಬೇಕೆಂಬ ಉಪದೇಶ ಆ ಬಿ.ಎ. ಪಾಸ್ ಮಾಡಿದ ಹುಡುಗನಿಗೆ ಅವನ ಯಾವ ಪುಸ್ತಕ ದಿಂದಲೂ ದೊರೆತಿರಲಿಲ್ಲ. ಅವನು ಬಹಳ ದಿನಗಳಿಂದ ಇದು ಅಸಂಭವ ಹಾಗೂ ಅಸಂಗತವೆಂದು ತಿಳಿದಿದ್ದ. ಆಶ್ಚರ್ಯದ ಸಂಗತಿಯೆಂದರೆ, ಯಾವ

ಓದು ಕಲಿತ ಜ್ಞಾನಿಯೊಡನೆ ಸ್ವಲ್ಪವೂ ಸೇರದಿದ್ದರೂ, ಅವನ ಉಚ್ಚಶಿಕ್ಷಿತ ಮನ ಒಳಗೊಳಗೇ ಒಂದು ಅಪೂರ್ವ ರಸದಿಂದ ಕೂಡಿ ಆ ಚಿಕ್ಕ ಹುಡುಗಿಯ ಕಡೆಗೆ ಸೆಳೆಯಲಾರಂಭಿಸಿತ್ತು. ಅವನು ಈ ಬಾಲಕಿಯಲ್ಲಿ ಕಲ್ಪನೆಯ ಮೂಲಕ ತನ್ನ ಭವಿಷ್ಯತ್ತಿನ ಗೃಹಲಕ್ಷ್ಮಿಯನ್ನು ಸೃಷ್ಟಿಸಿಕೊಂಡಿದ್ದ. ಅದೇ ರೀತಿ ಅವನ ಹೆಂಡತಿ ಒಂದೇ ಕಾಲದಲ್ಲಿ ಚಿಕ್ಕ ಮದುವಣಗಿತ್ತಿ, ತರುಣಿ ಪ್ರೇಯಸಿ ಹಾಗೂ ಮಕ್ಕಳ ಆ ಪ್ರಾಪ್ತವಯಸ್ಕ ತಾಯಿಯಂತೆ ಅವನ ಕಾಲ್ಪನಿಕ ಕಣ್ಣೆದುರಿಗೆ ವಿಚಿತ್ರ ರೀತಿಯಲ್ಲಿ ಕಂಗೊಳಿಸಿದಳು. ಚಿತ್ರಗಾರ ತನ್ನ ಚಿತ್ರವನ್ನು, ಕವಿ ತನ್ನ ಭಾವೀಕಾವ್ಯವನ್ನು ಸಂಪೂರ್ಣ ಸುಂದರವಾಗಿ ಕಲ್ಪಿಸಿಕೊಂಡು ಹೃದಯದಲ್ಲಿ ಅತಿ ಪ್ರೀತಿಯಿಂದ ಪೋಷಿಸುವಂತೆಯೇ ರಮೇಶ ಈ ಪುಟ್ಟ ಹುಡುಗಿಯನ್ನುದ್ದೇಶಿಸಿಕೊಂಡು ಭಾವೀ ಪ್ರೇಯಸಿಯನ್ನು–ಕಲ್ಯಾಣಿಯನ್ನು– ಪೂರ್ಣಮಹಿಮಾ ಮೂರ್ತಿಯಂತೆ ಹೃದಯದಲ್ಲಿ ಪ್ರತಿಷ್ಠಿಸಿಕೊಂಡ.

೫

ಈ ರೀತಿಯಲ್ಲಿ ಸುಮಾರು ಮೂರು ತಿಂಗಳು ಕಳೆಯಿತು. ಆಸ್ತಿಪಾಸ್ತಿಯ ಏರ್ಪಾಡೂ ಮುಗಿಯುತ್ತ ಬಂದಿತ್ತು. ಹಿರಿಯರೂ ತೀರ್ಥಕ್ಷೇತ್ರಕ್ಕೆ ಸಿದ್ಧರಾದರು. ಅಕ್ಕಪಕ್ಕದ ಮನೆಗಳಿಂದ ಒಬ್ಬಿಬ್ಬರು ಗೆಳತಿಯರು ಹೊಸ ಸೊಸೆಯೊಡನೆ ಸ್ನೇಹ ಬೆಳಸಲು ಮುಂದೆ ಬರತೊಡಗಿದರು. ರಮೇಶನೊಡನೆ ಹುಡುಗಿಯ ಪ್ರಣಯದ ಪ್ರಥಮ ಬಂಧನ ಸ್ವಲ್ಪಸ್ವಲ್ಪವಾಗಿ ಅಂಕುರಿಸತೊಡಗಿತು.

ಈಗ ಸಂಜೆಯಲ್ಲಿ ಯಾರೂ ಇಲ್ಲದ ಮಾಳಿಗೆಯಲ್ಲಿ ತೆರೆದ ಆಕಾಶದ ಕೆಳಗೆ ಇಬ್ಬರೂ ಚಾಪೆಹಾಸಿಕೊಂಡು ಕುಳಿತುಕೊಳ್ಳಲಾರಂಭಿಸಿದವರು, ಇದ್ದಕ್ಕಿದ್ದಂತೆ ರಮೇಶ ಹಿಂದುಗಡೆಯಿಂದ ಹುಡುಗಿಯ ಕಣ್ಣು ಮುಚ್ಚುವನು, ಅವಳ ತಲೆಯನ್ನು ಎದೆಯ ಬಳಿಗೆ ಎಳೆದುಕೊಳ್ಳುವನು. ವಧುವು (ಮದುವಣಗಿತ್ತಿ) ರಾತ್ರಿ ಬಹಳ ಹೊತ್ತಾದರೂ ಊಟಮಾಡದೆಯೇ ನಿದ್ದೆ ಹೋಗುವಳು. ಆಗ ರಮೇಶ ನಾನಾ ಬಗೆಯ ಉಪದ್ರವಗಳಿಂದ ಅವಳನ್ನೆಬ್ಬಿಸಿ ಅವಳಿಂದ ಬೇಸರ–ತಿರಸ್ಕಾರಗಳನ್ನು ಪಡೆಯುತ್ತಿದ್ದ.

ಒಂದು ದಿನ ಸಂಜೆ ರಮೇಶ ಬಾಲಕಿಯ ತುರುಬು ಹಿಡಿದು ಅಲ್ಲಾಡಿಸುತ್ತಾ, "ಸುಶೀಲಾ, ಇಂದು ನೀನು ತಲೆಬಾಚಿಕೊಂಡಿರುವುದು ಚೆನ್ನಾಗಿಲ್ಲ" ಎಂದ.

ಹುಡುಗಿ, "ಅದಿರಲಿ, ನೀವೆಲ್ಲರೂ ನನ್ನನ್ನು ಸುಶೀಲಾ ಎಂದು ಕರೆಯುವುದೇಕೆ ?" ಎಂದು ಕೇಳಿದಳು.

ಈ ಪ್ರಶ್ನೆ ಸ್ವಲ್ಪವೂ ಅರ್ಥವಾಗದೆ ರಮೇಶ ಆಶ್ಚರ್ಯದಿಂದ ಅವಳ ಮುಖ ನೋಡತೊಡಗಿದ.

"ನನ್ನ ಹೆಸರು ಬದಲಾದರೆ ನನ್ನ ಅದೃಷ್ಟವೂ ಬದಲಾಯಿಸುವುದೇನು? ಬಾಲ್ಯದಿಂದಲೂ ನಾನು ಅಮಂಗಳಕರೆ—ಸತ್ತರೂ ನನ್ನ ದುರ್ಭಾಗ್ಯ ನಾಶವಾಗದು" ಎಂದಳು ವಧು.

ಕೂಡಲೆ ರಮೇಶನ ಹೃದಯ ಚಲನೆ ನಿಂತಿತು, ಅವನ ಮುಖ ಬೆಳ್ಳಗಾಯಿತು—ಎಲ್ಲಾದರೂ ಏನಾದರೂ ತಪ್ಪು ನಡೆದಿದೆಯೋ ಎಂಬ ಸಂಶಯ ಹಠಾತ್ತನೆ ಅವನಿಗುಂಟಾಯಿತು. "ಬಾಲ್ಯದಿಂದಲೂ ನೀನು ಅಮಂಗಳಕರೆಯಾದದ್ದು ಹೇಗೆ" ಎಂದು ರಮೇಶ ವಿಚಾರಿಸಿದ.

ವಧು, "ನಾನು ಹುಟ್ಟುವುದಕ್ಕೆ ಮೊದಲೇ ನಮ್ಮ ತಂದೆ ಸತ್ತು ಹೋದರು; ನಾನು ಹುಟ್ಟಿದ ಆರು ತಿಂಗಳಿಗೇ ನನ್ನ ತಾಯಿ ಸತ್ತು ಹೋದಳು. ಸೋದರ ಮಾವನ ಮನೆಯಲ್ಲಿ ಅನೇಕ ಕಷ್ಟ ಅನುಭವಿಸಿದೆ. ಇದ್ದಕ್ಕಿದ್ದಂತೆ ಎಲ್ಲಿಂದಲೋ ಬಂದು ನೀನು ನನ್ನನ್ನೊಪ್ಪಿದೆ– ಎರಡೇ ದಿನದಲ್ಲಿ ಮದುವೆಯಾಯಿತು. ಬಳಿಕ ಎಷ್ಟು ವಿಪತ್ತುಂಟಾಯಿತು ನೋಡು" ಎಂದಳು.

ರಮೇಶ ನಿಶ್ಚೇಷ್ಟಿತನಾಗಿ ಒರಗುದಿಂಬಿನ ಮೇಲೆ ಬಿದ್ದುಕೊಂಡ. ಆಕಾಶದಲ್ಲಿ ಚಂದ್ರ ಮೂಡಿದ್ದ, ಆ ಬೆಳದಿಂಗಳು ಮಸುಕಾಯಿತು. ಮತ್ತೊಂದು ಪ್ರಶ್ನೆ ಕೇಳಲು ರಮೇಶನಿಗೆ ಹೆದರಿಕೆಯಾಗತೊಡಗಿತು. ತಿಳಿದುಕೊಂಡಿರುವುದೆಲ್ಲ ಅಸಂಬದ್ಧವೆಂದು ಹೇಳಿ, ಸ್ವಪ್ನವೆಂದು ಭಾವಿಸಲಾಶಿಸಿದ. ಪ್ರಜ್ಞೆಯನ್ನು ಪಡೆದ ಮೂರ್ಛೆ ಹೋದವನ ನಿಟ್ಟುಸಿರಂತೆ ಬೇಸಿಗೆಯ ತೆಂಕಣ ಗಾಳಿ ಬೀಸತೊಡಗಿತು. ಬೆಳದಿಂಗಳಲ್ಲಿ ನಿದ್ದೆಯಿಲ್ಲದ ಕೋಗಿಲೆ ಕೂಗುತಿರುವುದು—ಸಮೀಪದ ನದಿಯ ಘಟ್ಟದಲ್ಲಿ ಲಂಗರ್ ಬಿಟ್ಟಿದ್ದ ನೌಕೆಯ ಮೇಲ್ಛಾವಣಿಯಿಂದ ಅಂಬಿಗರ ಹಾಡು ಆಕಾಶವನ್ನು ವ್ಯಾಪಿಸುತ್ತ

ಇತ್ತು. ಬಹಳ ಹೊತ್ತು ಯಾವ ಸದ್ದೂ ಇಲ್ಲದಿರಲು ವಧು ಬಹಳ ಮೆಲ್ಲನೆ ರಮೇಶನನ್ನು ಸ್ಪರ್ಶಿಸುತ್ತ, "ನಿದ್ದೆ ಮಾಡುವೆಯಾ" ಎಂದು ಕೇಳಿದಳು.

ರಮೇಶ, "ಇಲ್ಲ" ಎಂದ.

ಆ ಬಳಿಕವೂ ಬಹಳ ಹೊತ್ತು ರಮೇಶನ ಸದ್ದೇ ಇರಲಿಲ್ಲ. ವಧು ಯಾವಾಗಲೋ ಮೆಲ್ಲಗೆ ನಿದ್ದೆ ಹೋಗಿದ್ದಳು. ರಮೇಶ ಎದ್ದು ಕುಳಿತು ಮಲಗಿದ್ದ ಅವಳ ಮುಖ ನೋಡತೊಡಗಿದ. ವಿಧಾತ ಇವಳ ಹಣೆಯಲ್ಲಿ ಯಾವ ಗುಪ್ತ ಬರಹ ಬರೆದಿರುವನೋ, ಅದನ್ನು ಇಂದು ಈ ಮುಖದಲ್ಲಿ ಸ್ವಲ್ಪವೂ ಸ್ಪಷ್ಟಪಡಿಸಿಲ್ಲ. ಇಂಥ ಸೌಂದರ್ಯದಲ್ಲಿ ಆ ಭೀಷಣ ಪರಿಣಾಮ ಹೇಗೋ ಅಡಗಿಕೊಂಡಿದೆ.

ಅಂತೂ ಹುಡುಗಿ ರಮೇಶನ ವಿವಾಹಿತ ಪತ್ನಿಯಲ್ಲ ಎಂಬ ಸಂಗತಿ ರಮೇಶನಿಗೆ ತಿಳಿಯಿತು, ಆದರೆ ಅವಳು ಯಾರ ಹೆಂಡತಿ ಎನ್ನುವುದನ್ನು ಗೊತ್ತುಮಾಡುವುದು ಸುಲಭವಲ್ಲ. ರಮೇಶ ಬಹಳ ಉಪಾಯದಿಂದ ಪ್ರಶ್ನಿಸಿದ.

"ಮದುವೆಯಲ್ಲಿ ನೀನು ನನ್ನನ್ನು ನೋಡಿದೆಯಲ್ಲ, ಆಗ ನಿನ್ನ ಮನಸ್ಸಿಗೆ ಹೇಗೆ ತೋರಿತು".

ಹುಡುಗಿ ಹೇಳಿದಳು, "ನಾನು ನಿನ್ನನ್ನು ನೋಡಲೇ ಇಲ್ಲ, ನಾನು ನೆಲ ನೋಡುತ್ತಿದ್ದೆ".

ರಮೇಶ—ನೀನು ನನ್ನ ಹೆಸರನ್ನೂ ಕೇಳಲಿಲ್ಲವೆ ?

ಹುಡುಗಿ—ಮದುವೆಯಾಗುವುದೆಂದು ಕೇಳಿದ ಮರುದಿನವೇ ಮದುವೆ ಯಾಗಿ ಹೋಯಿತು—ನಿನ್ನ ಹೆಸರನ್ನೇ ನಾನು ಕೇಳಲಿಲ್ಲ. ಮಾಮಿ (ಸೋದರ ಮಾವನ ಹೆಂಡತಿ) ನನ್ನನ್ನು ಆದಷ್ಟು ಬೇಗ ಬೀಳ್ಕೊಟ್ಟು ನೆಮ್ಮದಿ ಹೊಂದಿದಳು.

ರಮೇಶ—ಸರಿ, ಹೇಗೂ ನೀನು ಓದು-ಬರಹ ಕಲಿತವಳು. ನಿನ್ನ ನಿಜವಾದ ಹೆಸರನ್ನು ಪೂರ್ತಿಯಾಗಿ ಬರೆ ನೋಡೋಣ.

ರಮೇಶ ಅವಳಿಗೆ ಚೂರು ಕಾಗದವನ್ನೂ, ಒಂದು ತುಂಡು ಸೀಸದ ಕಡ್ಡಿಯನ್ನೂ ಕೊಟ್ಟ. ಅವಳು, "ಅದು ನನ್ನಿಂದ ಆಗದೆಂದು ಎಣಿಸಿರು ವೆಯಾ. ನನ್ನ ಹೆಸರಿನ ಅಕ್ಷರಗಳನ್ನು ಕೂಡಿಸಿ ಬರೆಯುವುದು ಬಹಳ

ಸುಲಭ" ಎಂದಳು—ಹೀಗೆ ಹೇಳಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ತನ್ನ ಸಂಪೂರ್ಣ ಹೆಸರನ್ನು ಬರೆದಳು—ಶ್ರೀಮತಿ ಕಮಲಾದೇವಿ.

ರಮೇಶ—ಸರಿ, ಮಾವನ ಹೆಸರು ಬರೆ.

ಕಮಲೆ—ಶ್ರೀಯುತ ತಾರಿಣೀ ಚಟ್ಟೋಪಾಧ್ಯಾಯ— ಎಂದು ಬರೆದಳು. "ಎಲ್ಲಾದರೂ ತಪ್ಪಾಗಿದೆಯೆ" ಎಂದು ಕೇಳಿದಳು. ರಮೇಶ, ಇಲ್ಲ, ಈಗ ನಿನ್ನ ಊರ ಹೆಸರು ಬರೆ ನೋಡುವ" ಎಂದು ಹೇಳಿದ. ಅವಳು ಧೋಬಾಪುಕೂರ್ ಎಂದು ಬರೆದಳು.

ಈ ರೀತಿ ನಾನಾ ಉಪಾಯಗಳಿಂದಲೂ ಅತಿ ಎಚ್ಚರಿಕೆಯಿಂದಲೂ ರಮೇಶ ಹುಡುಗಿಯ ಜೀವನ ವೃತ್ತಾಂತವನ್ನು ತಿಳಿದುಕೊಂಡದ್ದರಿಂದ ಅಷ್ಟೇನೂ ಒಳ್ಳೆಯದಾಗಲಿಲ್ಲ.

ಬಳಿಕ ರಮೇಶನು ಕರ್ತವ್ಯದ ವಿಷಯವಾಗಿ ಆಲೋಚಿಸಲಾರಂಭಿಸಿದ ಖಂಡಿತವಾಗಿಯೂ ಇವಳ ಗಂಡ ಮುಳುಗಿ ಸತ್ತಿರ ಬೇಕು. ಒಂದು ವೇಳೆ ಮಾವನ ಮನೆಯನ್ನು ಕಂಡುಹಿಡಿದು ಅಲ್ಲಿಗೆ ಕಳುಹಿಸಿದರೆ ಅವರು ಇವಳನ್ನು ಸೇರಿಸುವರೋ ಇಲ್ಲವೋ, ಸಂದೇಹ. ಸೋದರ ಮಾವನ ಮನೆಗೆ ಕಳುಹಿಸಿ ದರೆ ಇವಳನ್ನು ಸರಿಯಾಗಿ ನೋಡಿಕೊಳ್ಳುವರೋ ಇಲ್ಲವೋ ? ಇಷ್ಟುಕಾಲ ಸೊಸೆಯಂತೆ ಬೇರೆಯವರ ಮನೆಯಲ್ಲಿದ್ದು ಬಳಿಕ ಈಗ ನಿಜಸ್ಥಿತಿಯನ್ನು ಬಹಿರಂಗಪಡಿಸಿದರೆ, ಸಮಾಜದಲ್ಲಿ ಇವಳ ಗತಿಯೇನಾಗುವುದು, ಇವಳಿಗೆ ಸ್ಥಳವೆಲ್ಲಿರುವುದು. ಗಂಡನೇನಾದರೂ ಬದುಕಿದ್ದರೆ, ಅವನು ಇವಳನ್ನು ಪರಿಗ್ರಹಿಸುವ ಆಸೆಯನ್ನಾಗಲಿ, ಸಾಹಸವನ್ನಾಗಲಿ ತೋರ್ಪಡಿಸುವನೆ ? ಈಗ ಈ ಹುಡುಗಿಯನ್ನು ಎಲ್ಲಿಬಿಟ್ಟರೂ ಅಲ್ಲಿ ಅವಳು ಅತಳ ಸಮುದ್ರದಲ್ಲಿ ಬೀಳುವಳು.

ರಮೇಶ ಇವಳನ್ನು ಹೆಂಡತಿಯ ರೂಪದಲ್ಲಲ್ಲದೆ ಬೇರೆ ರೀತಿಯಲ್ಲಿ ತನ್ನ ಬಳಿ ಇಟ್ಟುಕೊಳ್ಳುವಂತಿರಲಿಲ್ಲ. ಎಲ್ಲಿಗಾದರೂ ಕಳುಹಿಸೋಣವೆಂದರೆ ಅವಕಾಶವಿಲ್ಲ. ಹೀಗೆಂದು ಹೇಳಿ ಇವಳನ್ನು ತನ್ನ ಪತ್ನಿಯೆಂದು ಸ್ವೀಕರಿಸು ವಂತಿಲ್ಲ. ರಮೇಶ ಈ ಬಾಲಕಿಯ ಭವಿಷ್ಯತ್ತಿನ ತೆರೆಯ ಮೇಲೆ ನಾನಾ ವರ್ಣದ ಸ್ನೇಹದ ಮೂಲಕ ಕುಂಚವನ್ನು ನೆನಸಿ ಚಿತ್ರಿಸಿದ್ದ ಗೃಹಲಕ್ಷ್ಮಿಯ ರೂಪ, ಈಗ ಅವಸರದೊಡನೆ ಅಳಿಸಬೇಕಾಯಿತು.

ಈಗ ರಮೇಶ ಗ್ರಾಮದಲ್ಲಿರಲಾರದಾದ. ಕಲ್ಕತ್ತೆಯ ಜನಜಂಗುಳಿಯ ನಡುವೆ ಸೇರಿಕೊಂಡಿದ್ದು ಯಾವುದಾದರೊಂದು ಉಪಾಯ ಹುಡುಕಬೇಕು. ಹೀಗೆ ಯೋಚಿಸಿ ರಮೇಶ ಕಮಲೆಯೊಡನೆ ಕಲ್ಕತ್ತೆಗೆ ಬಂದ ಮತ್ತು ಮೊದ ಲಿದ್ದ ಸ್ಥಳಕ್ಕೆ ಅತಿ ದೂರದಲ್ಲಿ ಬಾಡಿಗೆ ಮನೆ ಗೊತ್ತುಮಾಡಿದ.

ಕಲ್ಕತ್ತೆಯನ್ನು ನೋಡಲು ಕಮಲೆಗೆ ಎಲ್ಲೆಯಿಲ್ಲದ ಆಸೆ. ಮನೆಗೆ ಬಂದ ಮೊದಲನೆಯ ದಿನ ಅವಳು ಕಿಟಕಿಯ ಬಳಿ ಹೋಗಿ ಕುಳಿತಳು— ಅಲ್ಲಿಯ ಅಪರಿಮಿತ ಜನಪ್ರವಾಹ ಅವಳ ಮನಸಿನಲ್ಲಿ ಹೊಸಹೊಸ ಕುತೂಹಲ ವನ್ನುಂಟುಮಾಡಿತು. ಮನೆಯಲ್ಲಿ ಒಬ್ಬಳು ಕೆಲಸದವಳಿದ್ದಳು. ಕಲ್ಕತ್ತೆ ಅವಳಿಗೆ ಬಹಳ ಹಳೆಯದು. "ಹೌದವ್ವಾ, ಹೀಗೆ ಕಣ್ಣು ಬಾಯಿ ಬಿಟ್ಟು ಕೊಂಡು ಏನು ನೋಡುವೆ ಬಹಳ ಹೊತ್ತಾಗಿದೆ, ಸ್ನಾನಮಾಡುವುದಿಲ್ಲವೆ?" ಎಂದು ಅವಳು ಹುಡುಗಿಯ ವಿಸ್ಮಯವನ್ನು ಅರ್ಥವಿಲ್ಲದ ಮೌಢ್ಯವೆಂದು ತಿಳಿದು ಹೇಳಲಾರಂಭಿಸಿದಳು.

ಕೆಲಸದವಳು ಹಗಲೆಲ್ಲಾ ಕೆಲಸಮಾಡಿ ರಾತ್ರಿ ಮನೆಗೆ ಹೊರಟು ಹೋಗುವಳು. ರಾತ್ರಿಯೂ ತಂಗುವಂಥ ಕೆಲಸದವಳು ಸಿಕ್ಕಲಿಲ್ಲ. "ಕಮಲೆ ಈಗ ಒಂದೇ ಹಾಸಿಗೆಯಲ್ಲಿ ಇರುವ ಹಾಗಿಲ್ಲ—ಹೊಸ ಸ್ಥಳದಲ್ಲಿ ಅವಳು ಒಂಟಿಯಾಗಿ ರಾತ್ರಿಕಳೆಯುವುದು ಹೇಗೆ?'' ಎಂದು ರಮೇಶ ಚಿಂತಿಸ ಲಾರಂಭಿಸಿದ.

ರಾತ್ರಿ ಊಟ ಮುಗಿದ ಬಳಿಕ ಕೆಲಸದವಳು ಹೊರಟುಹೋದಳು. ರಮೇಶ ಕಮಲಳಿಗೆ ತನ್ನ ಹಾಸಿಗೆ ತೋರಿಸುತ್ತ "ನೀನು ಮಲಗಿಕೋ, ನಾನು ಈ ಪುಸ್ತಕ ಓದಿ ಮುಗಿಸಿದ ಮೇಲೆ ಮಲಗಿಕೊಳ್ಳುವೆ" ಎಂದು ಹೇಳಿದ.

ಹೀಗೆ ಹೇಳಿ ರಮೇಶ ಒಂದು ಪುಸ್ತಕ ತೆರೆದು ಓದುವ ಸೋಗು ಹಾಕಿದ, ಬಳಲಿದ್ದ ಕಮಲೆಗೆ ಕಾಲವಿಳಂಬವಿಲ್ಲದೆ ನಿದ್ದೆ ಹತ್ತಿತು.

ಹೀಗೆ ಆ ರಾತ್ರಿ ಕಳೆಯಿತು. ಮರುದಿನ ರಾತ್ರಿಯೂ ಯಾವುದೋ ನೆಪ ಹೇಳಿ ರಮೇಶ ಕಮಲಳನ್ನು ಒಂಟಿಯಾಗಿ ಹಾಸಿಗೆಯಲ್ಲಿ ಮಲಗಿಸಿದ. ಅಂದು ಬಹಳ ಸೆಕೆ. ಮಲಗುವ ಮನೆಯ ಮುಂದೆ ಒಂದು ತೆರೆದ ಮಾಳಿಗೆ ಇತ್ತು, ಅಲ್ಲಿಯೇ ಒಂದು ಜಮಖಾನೆ ಹಾಸಿಕೊಂಡು ರಮೇಶ ಮಲಗಿದ ಮತ್ತು ಅನೇಕ ಸಂಗತಿಗಳನ್ನು ಚಿಂತಿಸುತ್ತಲೂ ಬೀಸಣಿಗೆಯಿಂದ ಬೀಸಿ ಕೊಳ್ಳುತ್ತ ಅರ್ಧರಾತ್ರಿಯಲ್ಲಿ ನಿದ್ದೆಮಾಡತೊಡಗಿದ.

ರಾತ್ರಿ ಎರಡು-ಮೂರು ಗಂಟೆಯ ಹೊತ್ತು. ಅರ್ಧನಿದ್ದೆಯಲ್ಲಿ ರಮೇಶನಿಗೆ ತಾನು ಒಂಟಿಯಾಗಿಲ್ಲವೆಂದೂ ತನ್ನ ಪಕ್ಕದಲ್ಲಿ ಮೆಲ್ಲಮೆಲ್ಲನೆ ಒಂದು ಬೀಸಣಿಗೆ ಚಲಿಸುತ್ತಿರುವುದೆಂದೂ ತಿಳಿಯಿತು. ನಿದ್ದೆಯ ಮಬ್ಬಿನಲ್ಲಿ ರಮೇಶ ಪಕ್ಕದಲ್ಲಿದ್ದವಳನ್ನು ಬಳಿಗೆ ಸೆಳೆದುಕೊಳ್ಳುತ್ತ ಕಂಪಿತ ಸ್ವರದಲ್ಲಿ, "ಸುಶೀಲಾ, ನೀನು ನಿದ್ದೆಮಾಡು, ನನಗೆ ಗಾಳಿ ಬೀಸಬೇಡ" ಎಂದ. ಅಂಧಕಾರಭೀರು ಕಮಲೆ ರಮೇಶನ ತೋಳ ಬಳಿ ಅವನ ವಕ್ಷಸ್ಥಳದಲ್ಲಿ ಆಶ್ರಯ ಪಡೆದು ಸುಖವಾಗಿ ನಿದ್ದೆಮಾಡಿದಳು.

ಬೆಳಗ್ಗೆ ಎಚ್ಚರಗೊಂಡ ರಮೇಶ ಬೆಚ್ಚಿಬಿದ್ದ—ನೋಡಿದರೆ ನಿದ್ದೆ ಮಾಡುವ ಕಮಲೆಯ ಬಲಗೈ ತನ್ನ ಕಂಠವನ್ನು ಸುತ್ತಿಕೊಂಡಿದೆ. ಅವಳು ಪೂರ್ಣ ಅಸಂಕೋಚದಿಂದ ರಮೇಶನ ಬಳಿ ತನ್ನ ಎಲ್ಲ ಅಧಿಕಾರವನ್ನೂ ಉಪಯೋಗಿಸಿ ಅವನ ವಕ್ಷದಲ್ಲಿ ಸೇರಿಕೊಂಡಿರುವಳು. ನಿದ್ರಿತ ಬಾಲಕಿಯ ಮುಖ ನೋಡಿದ ರಮೇಶನ ಎರಡು ಕಣ್ಣುಗಳಿಂದಲೂ ನೀರು ಸುರಿಯ ತೊಡಗಿತು. ಈ ಸಂಶಯ ಹೀನ ಕೋಮಲ ಬಾಹುಪಾಶವನ್ನು ಅವನು ಕಿತ್ತೊಗೆಯುವುದು ಹೇಗೆ? ರಾತ್ರಿ ಹುಡುಗಿ ಯಾವಾಗಲೋ ತನ್ನ ಬಳಿ ಬಂದು ಕುಳಿತು ತನಗೆ ತಂಗಾಳಿ ಬೀಸುತಿದ್ದ ಸಂಗತಿಯೂ ಅವನಿಗೆ ನೆನಪಾಯಿತು. ನಿಟ್ಟುಸಿರು ಬಿಟ್ಟು ನಿಧಾನವಾಗಿ ಹುಡುಗಿಯ ಬಾಹು ಬಂಧನ ಸಡಿಲಪಡಿಸಿ ರಮೇಶ ಹಾಸಿಗೆ ಬಿಟ್ಟು ಎದ್ದ.

ಬಹಳವಾಗಿ ಆಲೋಚಿಸಿ ರಮೇಶ ಕಮಲಳನ್ನು ಬಾಲಿಕಾ ವಿದ್ಯಾಲಯದ ವಿದ್ಯಾರ್ಥಿನಿಲಯದಲ್ಲಿ ಇರಿಸಲು ತೀರ್ಮಾನಿಸಿದ. ಹೀಗಾದರೆ ಸ್ವಲ್ಪ ಕಾಲ ಅವನು ಚಿಂತೆಯಿಂದ ಪಾರಾಗಿರಬಹುದು.

ರಮೇಶ ಕಮಲೆಯನ್ನು ಕುರಿತು, "ಕಮಲ, ನೀನು ಓದು-ಬರಹ ಕಲಿಯುವೆಯಾ?" ಎಂದು ಕೇಳಿದ—"ನೀನು ಹೇಳುವುದೇನು" ಎಂಬ ಭಾವದಿಂದ ಕಮಲೆ ರಮೇಶನ ಮುಖ ನೋಡುತ್ತಿದ್ದಳು.

ರಮೇಶ ಓದು-ಬರಹದ ಉಪಯೋಗ ಮತ್ತು ಆನಂದದ ವಿಷಯವಾಗಿ ಅನೇಕ ಸಂಗತಿ ತಿಳಿಸಿದ. ಅದರ ಆವಶ್ಯಕತೆಯೇನೂ ಇರಲಿಲ್ಲ. "ನನಗೆ ಓದು-ಬರಹ ಕಲಿಸು" ಎಂದಳು ಕಮಲ.

ರಮೇಶ, "ಅದಕ್ಕಾಗಿಯೇ ನೀನು ಶಾಲೆಗೆ ಹೋಗಬೇಕು" ಎಂದ-

ಕಮಲ ಆಶ್ಚರ್ಯದಿಂದ "ಶಾಲೆಗೆ? ಇಷ್ಟು ದೊಡ್ಡ ಹುಡುಗಿಯಾಗಿ ನಾನು ಶಾಲೆಗೆ ಹೋಗುವುದು" ಎಂದು ಕೇಳಿದಳು.

ಕಮಲೆಯ ಈ ವಯೋಧರ್ಮದ ಅಭಿಮಾನಕ್ಕಾಗಿ ನಕ್ಕು ರಮೇಶ ಹೇಳಿದ, "ನಿನಗಿಂತ ಬಹಳ ದೊಡ್ಡ ಹುಡುಗಿಯರು ಶಾಲೆಗೆ ಹೋಗುವರು".

ಆಮೇಲೆ ಕಮಲೆ ಏನೂ ಹೇಳಲಿಲ್ಲ. ಗಾಡಿ ಮಾಡಿಕೊಂಡು ಒಂದು ದಿನ ರಮೇಶನೊಡನೆ ಶಾಲೆಗೆ ಹೋದಳು. ದೊಡ್ಡ ಮನೆ—ಅವಳಿಗಿಂತಲೂ ಅದೆಷ್ಟು ದೊಡ್ಡ ಹುಡುಗಿಯರು, ಅದೆಷ್ಟು ಸಣ್ಣ ಹುಡುಗಿಯರು. ಲೆಕ್ಕವೇ ಇಲ್ಲ. ವಿದ್ಯಾಲಯದ ವ್ಯವಸ್ಥಾಪಕಿಗೆ ಕಮಲೆಯನ್ನೊಪ್ಪಿಸಿ ರಮೇಶ ಹೊರಡಲನುವಾದಾಗ, ಕಮಲೆಯೂ ಅವನ ಜೊತೆಯಲ್ಲೇ ಬರತೊಡಗಿದಳು. ರಮೇಶ, ಎಲ್ಲಿಗೆ ಬರುವೆ? ನೀನು ಇಲ್ಲಿಯೇ ಇರಬೇಕು" ಎಂದ.

ಕಮಲೆ ಭೀತಕಂಠದಲ್ಲಿ ಕೇಳಿದಳು, "ನೀನು ಇಲ್ಲಿರುವುದಿಲ್ಲವೆ?"

ರಮೇಶ "ನಾನು ಇಲ್ಲಿರಕೂಡದು".

ಕಮಲೆ ರಮೇಶನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಹೇಳಿದಳು, "ಹಾಗಾದರೆ ನಾನೂ ಇಲ್ಲಿ ಇರಲಾರೆ, ನನ್ನನ್ನೂ ಕರೆದುಕೊಂಡು ಹೋಗು."

ಕೈ ಬಿಡಿಸಿಕೊಳ್ಳುತ್ತ ರಮೇಶ, "ಛೀ, ಕಮಲ" ಎಂದ.

ಈ ಧಿಕ್ಕಾರದಿಂದ ಕಮಲ ಸ್ತಬ್ಧಳಾಗಿ ನಿಂತಳು, ಒಮ್ಮೆಗೇ ಅವಳ ಮುಖ ಕಿರಿದಾಯಿತು. ರಮೇಶ ನೊಂದ ಮನದೊಡನೆ ವೇಗವಾಗಿ ಹಿಂದಿರುಗಿದ ಆದರೂ ಹುಡುಗಿಯ ಆ ಸ್ತಂಭಿತ ಅಸಹಾಯ ಭೀತ ಮುಖ ಅವನ ಮನದಲ್ಲಿ ಅಚ್ಚು ಹಾಕಿದಂತಾಯಿತು.

೬

ಈ ಸಲ ಆಲೀಪುರದಲ್ಲಿ ವಕೀಲಿ ಕೆಲಸ ಪ್ರಾರಂಭಿಸಬೇಕು ಎಂದು ರಮೇಶ ಸಂಕಲ್ಪಿಸಿದ್ದ. ಆದರೆ ಅವನ ಮನ ಒಡೆದು ಹೋಗಿತ್ತು. ಮನಸ್ಸು ಬಿಗಿಹಿಡಿದು ಕೆಲಸ ಪ್ರಾರಂಭಿಸಲು ಮತ್ತು ಕೆಲಸದ ಆರಂಭದಲ್ಲುಂಟಾಗುವ ನಾನಾ ಅಡ್ಡಿ ಆತಂಕಗಳನ್ನು ಎದುರಿಸುವಂಥ ಸ್ಫೂರ್ತಿ ಅವನಲ್ಲಿರಲಿಲ್ಲ. ಈ ಕಾರಣದಿಂದ ಅವನು ಅನಾವಶ್ಯಕವಾಗಿ ಗಂಗೆಯ ದಡದ ಮೇಲೆ ಮತ್ತು ಗೋಲ್‌ಧಿಘಿ* ಯಲ್ಲೂ ಸುತ್ತಾಡತೊಡಗಿದ.

*ಗೋಲ್‌ಧಿಘಿ—ಕಲ್ಕತ್ತೆಯ ವೆಲ್ಲಿಂಗ್‌ಟನ್ ಸ್ಕ್ವೇಯರ್ ಎಂಬ ಭಾಗ.

ಒಮ್ಮೆ ಪಶ್ಚಿಮ ಪ್ರಾಂತ್ಯದಲ್ಲಿ* ಸುತ್ತಿ ಬರಬೇಕು ಎಂದು ಯೋಚಿಸ್ತು ತಿದ್ದಾಗ ಅನ್ನದಾಬಾಬುಗಳಿಂದ ಒಂದು ಪತ್ರ ಬಂತು.

ಅನ್ನದಾಬಾಬುಗಳು ಬರೆದಿದ್ದರು—

"ಗೆಜೆಟಿನಲ್ಲಿ ನೋಡಿದೆ, ನೀನು ಉತ್ತೀರ್ಣನಾಗಿರುವೆ–ಆದರೆ ನಿನ್ನಿಂದ ಈ ವಿಷಯ ತಿಳಿಯಬರದಿರುವುದಕ್ಕಾಗಿ ದುಃಖಿಸುವೆ. ಅನೇಕ ದಿನಗಳಿಂದ ನಿನ್ನ ಸುದ್ದಿಯೇ ತಿಳಿಯದು. ನೀನು ಹೇಗಿರುವೆ, ಕಲ್ಕತ್ತೆಗೆ ಯಾವಾಗ ಬರುವೆ, ಎಂಬುದನ್ನು ತಿಳಿಸಿ ನನ್ನನ್ನು ಯೋಚನಾರಹಿತನನ್ನಾಗಿಯೂ ಸುಖಿಯನ್ನಾಗಿಯೂ ಮಾಡು".

ವಿಲಾಯಿತಿಗೆ ಹೋಗಿದ್ದ ಹುಡುಗನ ಮೇಲೆ ಅನ್ನದಾಬಾಬುಗಳು ವಿಶೇಷ ಗಮನವಿಟ್ಟಿದ್ದರಲ್ಲ, ಅವನು ಬ್ಯಾರಿಸ್ಟರಾಗಿ ಬಂದಿರುವನು ಮತ್ತು ಧನಿಕ ಕುಟುಂಬದೊಡನೆ ಅವನ ಮದುವೆಯ ಏರ್ಪಾಡು ನಡೆಯುತ್ತಿದೆ ಎಂದು ಇಲ್ಲಿ ಹೇಳಿದರೆ ಅನುಚಿತವಾಗಲಾರದು.

ಈ ಮಧ್ಯೆ ಇಷ್ಟೊಂದು ಘಟನೆಗಳು ನಡೆದ ಬಳಿಕ, ಹೇಮನಳಿನಿಯನ್ನು ಹಿಂದಿನಂತೆ ಭೇಟಿಮಾಡುವುದು ತನ್ನ ಕರ್ತವ್ಯವೇ, ಅಲ್ಲವೇ, ಎಂಬುದನ್ನು ರಮೇಶ ಯಾವರೀತಿಯಲ್ಲೂ ನಿಷ್ಕರ್ಷಿಸಲಾಗಲಿಲ್ಲ. ಈಗ ಕಮಲೆಯೊಡನೆ ತಾನು ಇಟ್ಟುಕೊಂಡಿರುವ ಸಂಬಂಧದ ಸಂಗತಿಯನ್ನು ಬೆರೆಯವರಿಗೆ ಹೇಳಬೇಕಾದುದು ಅಗತ್ಯವೆಂದು ಇವನು ಭಾವಿಸಲಿಲ್ಲ.

ನಿರ್ದೋಷಿ ಕಮಲೆಯನ್ನು ಜಗತ್ತಿನೆದುರಿಗೆ ಅವಮಾನಗೊಳಿಸುವುದು ಸಾಧ್ಯವಿಲ್ಲ. ಆದರೆ ಎಲ್ಲಾ ಸಂಗತಿಯನ್ನೂ ಸ್ಪಷ್ಟವಾಗಿ ಹೇಳದೆ ಹೇಮನಳಿನಿಯ ಬಳಿ ಅವನು ತನ್ನ ಹಿಂದಿನ ಅಧಿಕಾರ ಪಡೆಯುವುದು ಹೇಗೆ?

ಆದರೆ ಅನ್ನದಾಬಾಬುಗಳ ಪತ್ರಕ್ಕೆ ಉತ್ತರ ಬರೆಯಲು ಕಾಲವಿಳಂಬ ಮಾಡುವುದು ಸರಿಯಲ್ಲ. ಅವನು, "ಅತಿ ಮುಖ್ಯ ಕೆಲಸವಿರುವುದರಿಂದ ತಮ್ಮನ್ನು ಭೇಟಿಮಾಡಲು ಅಸಮರ್ಥನಾಗಿರುವೆ, ನನ್ನನ್ನು ಕ್ಷಮಿಸಬೇಕು" ಎಂದು ಬರೆದ. ತನ್ನ ಹೊಸ ವಿಳಾಸ ಮಾತ್ರ ಕೊಡಲಿಲ್ಲ.

ಈ ಪತ್ರವನ್ನು ಅಂಚೆಯಲ್ಲಿ ಹಾಕಿದ ಮರುದಿನವೇ ರಮೇಶ ತಲೆಗೆ

---

* **ಪಶ್ಚಿಮ ಪ್ರಾಂತ್ಯ–ಕಾಶಿ ಮಧುರಾ, ದೆಹಲಿ. ಇವುಗಳನ್ನು ಪಶ್ಚಿಮ ಪ್ರಾಂತ್ಯವೆಂದು ಬಂಗಾಳಿಗಳು ಕರೆಯುವರು.**

ರುಮಾಲು ಸುತ್ತಿಕೊಂಡು ಆಲೀಪುರದ ನ್ಯಾಯಸ್ಥಾನದಲ್ಲಿ ಹಾಜರಾಗಲು ಹೊರಟ.

ಒಂದು ದಿನ ಅವನು ನ್ಯಾಯಸ್ಥಾನದಿಂದ ಹಿಂದಿರುಗುತ್ತ ಸ್ವಲ್ಪ ದಾರಿ ನಡೆದು ಬಂದು ಬಾಡಿಗೆ ಗಾಡಿಯವನ ಸಂಗಡ ಬಾಡಿಗೆ ಗೊತ್ತುಮಾಡುತಿದ್ದ. ಇಂಥವೇಳೆಯಲ್ಲಿ, " ಅಪ್ಪಾ, ಇದೋ ರಮೇಶಬಾಬು " ಎಂಬ ಪರಿಚಿತ ಉದ್ವೇಗ ಧ್ವನಿ ಕೇಳಿಬಂತು.

" ಗಾಡಿಯುವನೇ ನಿಲ್ಲಿಸು, ನಿಲ್ಲಿಸು ".

ಗಾಡಿ ರಮೇಶನ ಬಳಿಗೆ ಬಂದು ನಿಂತಿತು. ಅಂದು ಆಲೀಪುರದ ಮೃಗಾಲಯದಲ್ಲಿ ವನಭೋಜನ ಮುಗಿಸಿಕೊಂಡು ಅನ್ನದಾಬಾಬುಗಳೂ ಅವರ ಮಗಳೂ ಮನೆಗೆ ಹಿಂದಿರುಗುತಿದ್ದರು—ಇಂಥ ಸಂದರ್ಭದಲ್ಲೇ ಅವರ ಆಕಸ್ಮಿಕ ಭೇಟಿ.

ಗಾಡಿಯಲ್ಲಿ ಹೇಮನಳಿನಿಯ ಆ ಸ್ನಿಗ್ಧಗಂಭೀರ ಮುಖ, ಅವಳು ವಿಶೇಷ ರೀತಿಯಲ್ಲಿ ಉಡುತಿದ್ದ ಆ ಸೀರೆ ಅವಳು ತಲೆಬಾಚುವ ಪರಿಚಿತ ಭಂಗಿ, ಅವಳ ಕೈಗಳ ಆ ಸಾದಾ ಬಳೆ ಹಾಗೂ ಬೆಳ್ಳಿಯ ಬಳ್ಳಿ ಬಿಡಿಸಿದ್ದ ಚಿನ್ನದ ಬಳೆ ನೋಡಿದ ಕೂಡಲೆ ರಮೇಶನ ಹೃದಯದೊಳಗಿನ ಒಂದು ಅಲೆ ಉಕ್ಕಿ ಒಮ್ಮೆಗೇ ಕೊರಳನ್ನು ಬಿಗಿಹಿಡಿಯಿತು.

ಅನ್ನದಾಬಾಬುಗಳು ಹೇಳಿದರು, " ಇದೋ ರಮೇಶ್, ಭಾಗ್ಯವಶಾತ್ ಮಾರ್ಗದಲ್ಲಿ ಸಂದರ್ಶಿಸಿದೆವು. ಇತ್ತೀಚೆಗೆ ಕಾಗದ ಬರೆಯುವುದನ್ನೇ ನಿಲ್ಲಿಸಿರುವೆ, ಬರೆದರೂ ವಿಳಾಸ ಕೊಡುವುದಿಲ್ಲ. ಈಗ ಎಲ್ಲಿಗೆ ಹೋಗುತಿದ್ದೆ ? ಏನಾದರೂ ಕೆಲಸವಿತ್ತೆ ?

" ಇಲ್ಲ ನ್ಯಾಯಾಲಯದಿಂದ ಬರುತ್ತಿದ್ದೆ " ಎಂದ ರಮೇಶ. ಅನ್ನದಾಬಾಬು—ಹಾಗಾದರೆ ಹೊರಡು, ಚಹಾ ಕುಡಿಯಲು ನಮ್ಮಲ್ಲಿಗೆ ಬಾ.

ರಮೇಶನ ಹೃದಯ ಉಕ್ಕಿಬಂತು—ನೆಪ ಹೇಳುವುದಕ್ಕೆ ಅವಕಾಶವಿರಲಿಲ್ಲ. ಅವನು ಗಾಡಿ ಹತ್ತಿ ಕುಳಿತ. ಸರ್ವ ಪ್ರಯತ್ನ ದಿಂದ ಸಂಕೋಚ ದೂರ ಮಾಡಿ ಹೇಮನಳಿನಿಯನ್ನು ಪ್ರಶ್ನಿಸಿದ, " ನೀವು ಚೆನ್ನಾಗಿರುವಿರಾ ? "

ಹೇಮನಳಿನಿ ಕುಶಲಪ್ರಶ್ನೆಗೆ ಉತ್ತರ ಹೇಳದೆಯೇ, " ನೀವು ಪಾಸಾದ ವಿಷಯವನ್ನಾದರೂ ತಿಳಿಸ ಬೇಡವೆ ? " ಎಂದಳು

ಈ ಪ್ರಶ್ನೆಗೆ ಉತ್ತರ ಹುಡುಕಿಯೂ ತಿಳಿಯದೆ ರಮೇಶ, "ನೀವೂ ಉತ್ತೀರ್ಣರಾಗಿರುವುದನ್ನು ನೋಡಿದೆ" ಎಂದ.

ಹೇಮನಳಿನಿ ನಕ್ಕು, "ಹಾಗಾದರೆ ಸರಿ, ನಮ್ಮ ನೆನಪಿದೆಯಲ್ಲ" ಎಂದಳು.

ಅನ್ನದಾಬಾಬುಗಳು "ಈಗ ನೀನು ಮನೆ ಎಲ್ಲಿಮಾಡಿರುವೆ" ಎಂದು ಕೇಳಿದರು.

ರಮೇಶ, "ದರ್ಜಿಪಾಡಾ (ದರ್ಜಿಯವರ ಕೇರಿ) ದಲ್ಲಿ ಎಂದ. ಅನ್ನದಾಬಾಬುಗಳು ಕೇಳಿದರು, "ಏಕೆ, ಕಲೂಟೋಲಾದ (ಗಾಣಿಗರ ಕೇರಿ) ನಿಮ್ಮ ಹಿರಿಯರ ಮನೆ ಚೆನ್ನಾಗಿತ್ತಲ್ಲ !

ಉತ್ತರ ನಿರೀಕ್ಷಣೆಗಾಗಿ ಹೇಮನಳಿನಿ ವಿಶೇಷ ಕುತೂಹಲದಿಂದ ರಮೇಶನ ಕಡೆ ನೋಡಿದಳು. ಆ ದೃಷ್ಟಿ ರಮೇಶನಿಗೆ ನೋವನ್ನುಂಟುಮಾಡಿತು. ಕೂಡಲೆ ಅವನು, "ಹೌದು, ಅದೇ ಮನೆಗೆ ಹೋಗಬೇಕೆಂದು ತೀರ್ಮಾನಿಸಿರುವೆ" ಎಂದು ಹೇಳಿದ.

ತನ್ನ ಈ ಮನೆ ಬದಲಾಯಿಸುವ ಅಪರಾಧ ಹೇಮನಳಿನಿಗೆ ಅರಿವಾದುದನ್ನು ರಮೇಶ ಚೆನ್ನಾಗಿ ತಿಳಿದುಕೊಂಡ—ಹೋಗಲಾಡಿಸುವ ಯಾವ ಉಪಾಯವನ್ನೂ ಕಾಣದೆ ಅವನು ಮನದಲ್ಲೇ ದುಃಖಿತನಾದ. ಎದುರುಪಕ್ಷದಿಂದ ಬೇರೆ ಪ್ರಶ್ನೆ ಏಳಲಿಲ್ಲ. ಹೇಮನಳಿನಿ ಗಾಡಿಯಹೊರಗೆ ರಸ್ತೆಯ ಕಡೆ ನೋಡುತಿದ್ದಳು. ರಮೇಶನಿಗೆ ತಡೆಯಲಾಗದೆ ಅಕಾರಣವಾಗಿ ತನಗೆ ತಾನೆ ಹೇಳಿಕೊಂಡ, "ನಮ್ಮ ನೆಂಟರೊಬ್ಬರು ಹೇದೂಯಾದ ಬಳಿ ಇರುವರು, ಅವರ ಯೋಗಕ್ಷೇಮ ನೋಡಿಕೊಳ್ಳಲು ದರ್ಜಿಪಾಡಾದಲ್ಲಿ ಮನೆ ಮಾಡಿರುವೆ" ಎಂದು.

ರಮೇಶ ಹೇಳಿದ್ದೆಲ್ಲ ಸುಳ್ಳಲ್ಲದಿದ್ದರೂ, ಹೇಳಿದ ರೀತಿ ಸರಿಯಾಗಿರಲಿಲ್ಲ. ಆಗಾಗ್ಗೆ ನೆಂಟರನ್ನು ವಿಚಾರಿಸಿಕೊಳ್ಳಬೇಕಾದರೆ ಕಲೂಟೋಲಾ ಹೇದುಯಾದಿಂದ ದೂರವೇನೂ ಅಲ್ಲ. ಹೇಮನಳಿನಿಯ ದೃಷ್ಟಿಗಳೆರಡೂ ಗಾಡಿಯ ಹೊರಗೆ ದಾರಿಯಕಡೆಗೇ ಆಕರ್ಷಿತವಾಗಿತ್ತು. ನಿರ್ಭಾಗ್ಯ ರಮೇಶನಿಗೆ ಈಗ ಏನು ಹೇಳುವುದೆಂದು ತೋರಲಿಲ್ಲ. ಕೂಡಲೆ "ಯೋಗೇಂದ್ರನ ಸಮಾಚಾರವೇನು ?" ಎಂದು ವಿಚಾರಿಸಿದ. ಅನ್ನದಾಬಾಬುಗಳು, "ಅವನು ಕಾನೂನು ಪರೀಕ್ಷೆಯಲ್ಲಿ ಉತ್ತೀರ್ಣನಾಗದೆ ಹವಾ ಬದಲಾವಣೆಗಾಗಿ ಪಶ್ಚಿಮ ಪ್ರಾಂತ್ಯಕ್ಕೆ ಹೋಗಿರುವನು" ಎಂದರು.

ಗಾಡಿ ನಿರ್ದಿಷ್ಟ ಸ್ಥಳಸೇರಿತು. ಪರಿಚಿತವಾದ ಮನೆಹಾಗೂ ಮನೆಯ ಸಿದ್ಧತೆಗಳು ರಮೇಶನಮೇಲೆ ಮಂತ್ರಜಾಲವನ್ನೆಳೆಯಿತು. ರಮೇಶನ ಹೃದಯ ದೊಳಗಿಂದ ನಿಟ್ಟುಸಿರು ಹೊರಟಿತು.

ರಮೇಶ ಯಾವ ಮಾತೂ ಆಡದೆ ಚಹಕುಡಿಯತೊಡಗಿದ. ಅನ್ನದಾ ಬಾಬುಗಳು ಇದ್ದಕ್ಕಿದ್ದಂತೆ ಪ್ರಶ್ನಿಸಿದರು, " ಈ ಸಲ ನೀನು ಬಹಳ ದಿನ ಮನೆ ಯಲ್ಲೇ ತಂಗಿದೆ ; ಕೆಲಸ ಇದ್ದಿರಬಹುದು ".

" ತಂದೆ ಸತ್ತುಹೋದರು " ಎಂದ ರಮೇಶ.

ಅನ್ನದಾಬಾಬು—ಆ, ಏನೆಂದೆ ; ಅದೆಂಥಮಾತು. ಏನಾಗಿತ್ತು.

ರಮೇಶ—ಅವರು ಪದ್ಮೆಯನ್ನು ದಾಟಲು ದೋಣಿಯಲ್ಲಿ ಊರಿಗೆ ಬರುತಿದ್ದರು. ಇದ್ದಕ್ಕಿದ್ದಂತೆ ಬಿರುಗಾಳಿಗೆ ದೋಣಿ ಮುಳಗಿ ಅವರು ಸತ್ತರು.

ಆಕಸ್ಮಿಕವಾಗಿ ಒಂದು ಬಿರುಗಾಳಿ ಎದ್ದರೆ ದಟ್ಟವಾದ ಮೋಡ ಚದುರಿ ಆಕಾಶ ಶುಭ್ರವಾಗುವಂತೆ, ಆ ಶೋಕವಾರ್ತೆಯಿಂದ ರಮೇಶ ಮತ್ತು ಹೇಮ ನಳಿನಿಯ ನಡುವೆ ಇದ್ದ ಸಂಕೋಚ ಕ್ಷಣಮಾತ್ರದಲ್ಲಿ ದೂರವಾಯಿತು. ಹೇಮ ಸಹಾನುಭೂತಿಯ ಸಹಾಯದಿಂದ ತನಗೆತಾನೇ ಹೇಳಿಕೊಂಡಳು, " ರಮೇಶಬಾಬುಗಳು ತಪ್ಪಿತಸ್ಥರೆಂದಿದ್ದೆವು—ಅವರು ತಂದೆಯನ್ನು ಕಳೆದು ಕೊಂಡ ಶೋಕ ಮತ್ತು ಗೊಂದಲದಲ್ಲಿ ಸಿಕ್ಕಿಬಿದ್ದಿರುವರು. ಅವರ ಸಂಸಾರದಲ್ಲಿ ಎಂಥ ಸಂಕಟ ಉಂಟಾಯಿತು, ಅವರ ಮನ ಹೇಗಿರಬಹುದು, ಅದೊಂದೂ ತಿಳಿಯದೆ ಅವರನ್ನು ದೋಷಿಯನ್ನಾಗಿ ಮಾಡಿದ್ದೆವು. "

ಹೇಮನಳಿನಿ ಆ ಪಿತೃಹೀನನನ್ನು ಅತಿಯಾಗಿ ಸಂತೈಸತೊಡಗಿದಳು. ರಮೇಶನಿಗೆ ಆಹಾರದಲ್ಲಿ ಅಭಿರುಚಿ ಇರಲಿಲ್ಲ. ಹೇಮನಳಿನಿ ಅವನನ್ನು ಬಲಾತ್ಕರಿಸಿ ತಿನ್ನಿಸಿದಳು, " ನೀವು ಬಹಳ ಬೇನೆ ಅನುಭವಿಸಿರುವಿರಿ, ಎಚ್ಚರಿಕೆ ಯಿಂದ ಮೈ ನೋಡಿಕೊಳ್ಳಬೇಕು " ಎಂದಳು. " ಅಪ್ಪಾ, ರಮೇಶಬಾಬುಗಳು ಈ ರಾತ್ರಿ ಇಲ್ಲಿಯೇ ಊಟಮಾಡಿ ಹೋಗಬಹುದಲ್ಲ " ಎಂದು ಅನ್ನದಾಬಾಬು ಗಳಿಗೆ ಹೇಳಿದಳು.

ಅನ್ನದಾಬಾಬುಗಳು " ಓಹೋ ! ಆಗಬಹುದು " ಎಂದರು. ಈ ವೇಳೆಗೆ ಅಕ್ಷಯ ಬಂದು ಸೇರಿದ. ಸ್ವಲ್ಪಕಾಲದಿಂದ ಅನ್ನದಾಬಾಬುಗಳ ಚಹಾ ಮೇಜಿನ ಬಳಿ ಅಕ್ಷಯ ಏಕಾಧಿಪತ್ಯ ನಡೆಸುತ್ತ ಬಂದಿದ್ದ. ಇಂದು ಇದ್ದಕ್ಕಿ ದ್ದಂತೆ ರಮೇಶನನ್ನು ನೋಡಿ ಅವನು ಗಾಬರಿಗೊಂಡ. ತನ್ನನ್ನು ತಾನೇ ಎಚ್ಚ

ರಿಸಿಕೊಂಡು ನಗುತ್ತ ಕೇಳಿದ, "ಇದೇನು; ನಮ್ಮ ರಮೇಶಬಾಬು ನಮ್ಮನ್ನೆಲ್ಲ ಮರೆತುಬಿಟ್ಟರಬೇಕೆಂದು ನಾನು ಭಾವಿಸಿದ್ದೆ".

ರಮೇಶ ಯಾವ ಉತ್ತರವನ್ನೂ ಹೇಳದೆ ಸುಮ್ಮನೆ ನಕ್ಕ. ಅಕ್ಷಯ, "ನಿಮ್ಮ ತಂದೆ ನಿಮ್ಮನ್ನು ಆ ರೀತಿ ಅವಸರಪಡಿಸಿ ಬಂಧಿಸಿಕೊಂಡುಹೋದರು, ಅವರು ಈಸಲ ನಿಮ್ಮ ಮದುವೆ ಮಾಡದೆ ಇದ್ದಿರಲಾರರೆಂದು ನಮ್ಮ ಭಾವನೆ–ಜೋಯಿಸರು ತೀರ್ಮಾನಿಸಿದ್ದ ವಿಪತ್ತನ್ನು ದಾಟಿ ಬಂದಿರುವಿರಲ್ಲವೆ?" ಎಂದು ಕೇಳಿದ.

ಹೇಮನಳಿನಿ ಅಕ್ಷಯನನ್ನು ಬೇಸರದ ದೃಷ್ಟಿಯಿಂದ ಗಾಯಗೊಳಿಸಿದಳು.

ಅನ್ನದಾಬಾಬುಗಳು, "ಅಕ್ಷಯ, ರಮೇಶನಿಗೆ ಪಿತೃವಿಯೋಗವಾಗಿದೆ" ಎಂದರು.

ರಮೇಶ ವಿವರ್ಣಮುಖದೊಡನೆ ತಲೆತಗ್ಗಿಸಿಕೊಂಡು ಕುಳಿತ. ಅವನ ಮನೋವೇದನೆಯನ್ನ ಹೆಚ್ಚುಮಾಡಿದ್ದಕ್ಕಾಗಿ ಹೇಮನಳಿನಿ ಅಕ್ಷಯನ ಮೇಲೆ ಮನದಲ್ಲೇ ಕೋಪಗೊಂಡಳು. ಅವಸರ ಅವಸರವಾಗಿ ರಮೇಶನಿಗೆ ಹೇಳಿದಳು, "ರಮೇಶಬಾಬು, ನಿಮಗೆ ನಮ್ಮ ಹೊಸ ಆಲ್ಬಂ ತೋರಿಸಲೇ ಇಲ್ಲ"—ಹೀಗೆಂದು ಆಲ್ಬಂ ತಂದು ರಮೇಶನನ್ನು ಮೇಜೆಯ ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ ಛಾಯಾ ಚಿತ್ರಗಳ ವಿಷಯ ಚರ್ಚಿಸತೊಡಗಿದಳು. ಹಾಗೆಯೇ ಒಮ್ಮೆ ನಿಧಾನವಾಗಿ, "ರಮೇಶಬಾಬು, ನೀವು ಮನೆಯಲ್ಲಿ ಒಬ್ಬರೇ ಇರುವಿರೆಂದು ಕಾಣುವುದು" ಎಂದು ಕೇಳಿದಳು.

"ಹೌದು" ಎಂದ ರಮೇಶ.

ಹೇಮನಳಿನಿ "ನಮ್ಮ ನೆರೆಮನೆಗೆ ಬರಲು ನಿಧಾನಿಸಬೇಡಿ" ಎಂದಳು.

ರಮೇಶ "ಇಲ್ಲ, ಖಂಡಿತ ಈ ಸೋಮವಾರ ಬರುವೆ" ಎಂದ.

ಹೇಮನಳಿನಿ, "ನಮ್ಮ ಬಿ.ಎ. ತರಗತಿಯ ಫಿಲಾಸಫಿ ನಡುನಡುವೆ ನಿಮ್ಮ ಹತ್ತಿರ ತಿಳಿದುಕೊಳ್ಳೋಣವೆಂದು ನನ್ನ ಭಾವನೆ" ಎಂದಳು.

ಇದಕ್ಕಾಗಿ ರಮೇಶ ವಿಶೇಷ ಉತ್ಸಾಹ ತೋರ್ಪಡಿಸಲಿಲ್ಲ.

೭

ರಮೇಶ ಮೊದಲಿನ ಮನೆಗೆ ಬರಲು ತಡವಾಗಲಿಲ್ಲ. ಹೇಮನಳಿನಿಯ ವಿಷಯದಲ್ಲಿ ಈ ಹಿಂದೆ ರಮೇಶನಿಗಿದ್ದ ಸಂಕೋಚ ಈ ಸಲ ಇರಲಿಲ್ಲ. ಈಗ

ರಮೇಶನು ಮನೆಯುವನು. ಹಾಸ್ಯ-ಕೌತುಕ-ನಿಮಂತ್ರಣ-ಆಮಂತ್ರಣವೆಲ್ಲ ಬೇಕಾದಷ್ಟು ನಡೆಯಲಾರಂಭಿಸಿತು.

ಅನೇಕ ಕಾಲ ಬಹಳ ಪುಸ್ತಕ ಓದಿ ಈ ಹಿಂದೆ ಹೇಮನಳಿನಿಯ ಮುಖದ ಕಾಂತಿ ಕುಂದಿತ್ತು. ಒಮ್ಮೆ ಪ್ರಬಲ ಮಾರುತ ಬೀಸಿದರೂ ಅವಳ ಶರೀರ ಸೊಂಟದಿಂದ ಬಾಗಿ ಮುರಿದುಹೋಗಬಹುದೆಂದು ತೋರುತಿತ್ತು. ಆಗ ಅವಳ ಮಾತುಕತೆ ಅತಿ ಅಲ್ಪವಾಗಿತ್ತು, ಹಾಗೂ ಅವಳೊಡನೆ ಮಾತನಾಡಲು ಹೆದರಿಕೆಯಾಗುವುದು— ಸಾಧಾರಣ ವಿಷಯವನ್ನೂ ತಪ್ಪೆಂದು ಭಾವಿಸುವಳು.

ಸ್ವಲ್ಪ ಕಾಲಾವಕಾಶದಲ್ಲಿಯೇ ಅವಳಲ್ಲಿ ಆಶ್ಚರ್ಯಕರ ಪರಿವರ್ತನೆ ಯಾಯಿತು. ಅವಳ ಬಿಳಿಯ ಬಣ್ಣದ ಕಪೋಲದಲ್ಲಿ ಲಾವಣ್ಯದ ಹೊಳಪು ಕಾಣತೊಡಗಿತು. ಅವಳ ಕಣ್ಣುಗಳು ಈಗ ಮಾತುಮಾತಿನಲ್ಲಿ ತುಂಟನಗೆ ಯನ್ನು ಹೊರಗೆಡಹುವುದು. ಮೊದಲು ವೇಷಭೂಷಣಗಳ ಕಡೆ ಮನ ಕೊಡುವುದು ಚಾಪಲ್ಯವೆಂಗೂ, ಅಷ್ಟೇಕೆ ಅನ್ಯಾಯವೆಂದೂ ತಿಳಿಯುವಳು. ಈಗ ಇತರರೊಡನೆ ಯಾವ ತರ್ಕವನ್ನೂ ಮಾಡದೆ ಅವಳು ಅಭಿಪ್ರಾಯವನ್ನು ಬದಲಾಯಿಸಿಕೊಂಡಿರುವಳು ಕಾರಣ ಅಂತರ್ಯಾಮಿಗಲ್ಲದೆ ಬೇರೆಯವರಿಗೆ ತಿಳಿಯದು.

ಕರ್ತವ್ಯಬೋಧೆಯಿಂದ ಬಳಲಿದ್ದ ರಮೇಶ ಅಷ್ಟೇನೂ ಗಂಭೀರ ವಾಗಿರಲಿಲ್ಲ. ವಿಚಾರ ಶಕ್ತಿಯ ಪ್ರಾಬಲ್ಯದಿಂದ ಅವನ ಶರೀರವೂ ಮನಸ್ಸೂ ಬೇಸರಗೊಂಡಿತ್ತು. ಆಕಾಶದ ಪ್ರಕಾಶಮಾನ ಗ್ರಹನಕ್ಷತ್ರಗಳು ಚಲಿಸಿ ಸುತ್ತಾಡುತ್ತಿರುವುದು. ಆದರೂ ಮನೋಮಂದಿರ ತನ್ನ ತಂತೀವಾದ್ಯವನ್ನು ಹಿಡಿದು ಅತ್ಯಂತ ಸಾವಧಾನದಿಂದ ಸ್ತಬ್ಧವಾಗಿ ಕುಳಿತಿರುವುದು— ಈ ರೀತಿ ರಮೇಶ ಚಲಿಸುತ್ತಿರುವ ಜಗತ್ ಸಂಸಾರದ ನಡುವೆ ತನ್ನ ಪುಸ್ತಕದ ವಾದ ವಿವಾದಗಳ ಸಂಗ್ರಹಣೆಯ ಭಾರದಿಂದ ಸ್ತಂಭಿತನಾಗಿ ಹೋಗಿದ್ದ. ಈಗ ಅವನ ಈ ಭಾರ ಇಳಿಸಿದವರು ಯಾರು? ಇತ್ತೀಚೆಗೆ ಅವನೂ ಎಲ್ಲ ಸಮಯಗಳಲ್ಲೂ ಪರಿಹಾಸ್ಯಕ್ಕೆ ತಕ್ಕ ಉತ್ತರ ಕೊಡಲಾಗ ದಿದ್ದರೂ ಹ್ಹೋ-ಹ್ಹೋ ಎಂದು ನಗುವನು. ಈಗೀಗ ಬಾಚಣಿಗೆಯಿಂದ ತಲೆ ಬಾಚಿಕೊಳ್ಳದಿದ್ದರೂ, ಅವನ ಮೇಲುವಸ್ತ್ರ ಮೊದಲಿನಂತೆ ಮಲಿನ ವಾಗಿರದು. ಅವನ ದೇಹದಲ್ಲೂ ಮನಸಿನಲ್ಲೂ ಒಂದು ಚಲನಶಕ್ತಿಯು ಉಗಮವಾಗಿರುವುದು.

೮

ಪ್ರಣಯಿಗಳಿಗಾಗಿ ಕಾವ್ಯದಲ್ಲಿರುವಷ್ಟು ಸೌಕರ್ಯ ಸಿದ್ಧತೆಗಳು, ಕಲ್ಕತ್ತಾ ಪಟ್ಟಣದಲ್ಲಿ ದೊರೆಯದು. ಪ್ರಫುಲ್ಲ ಬಕುಳ-ಅಶೋಕಗಳ ದಾರಿಯಲ್ಲಿ, ವಿಕಸಿತ ಮಾಧವೀ ಪ್ರಚ್ಛನ್ನ ಲತಾವಿತಾನವೆಲ್ಲಿ, ಚೂತಕಷಾಯಕಂಠ ಕೋಕಿಲೆಯ ಕುಹಕಾಧ್ವನಿಯೆಲ್ಲಿ? ಆದರೂ ಆ ಶುಷ್ಕ ಕಠಿಣ ಸೌಂದರ್ಯಹೀನ ಆಧುನಿಕ ನಗರದಲ್ಲಿ ಪ್ರೇಮದ ಗಾರುಡೀ ವಿದ್ಯೆಸೋತು ಹಿಂದಿರುಗದು. ಆ ಅಸಂಖ್ಯಾತ ಕುದುರೆ ಗಾಡಿಗಳ ಗುಂಪಿನಲ್ಲಿ, ಟಾರ್ ಬಳಿದ ಟ್ರಾಮ್ ರಸ್ತೆಯಲ್ಲಿ ಒಂದು ಚಿರಕಿಶೋರ ಪ್ರಾಚೀನ ದೇವತೆ ತನ್ನ ಬಿಲ್ಲನ್ನು ಮರೆಮಾಡಿಕೊಂಡು ಕೆಂಪು ರುಮಾಲು ಸುತ್ತಿಕೊಂಡಿರುವ ಪ್ರಹರಿಯರ ಕಣ್ಣೆದುರಿಗೆ ಅದೆಷ್ಟು ರಾತ್ರಿ, ಅದೆಷ್ಟು ದಿನ, ಅದೆಷ್ಟು ಬಾರಿ, ಅದೆಷ್ಟು ಸ್ಥಳಗಳಿಗೆ ಹೋಗಿ ಬಂದಿರುವುದು, ಅದನ್ನು ಹೇಳಬಲ್ಲವರಾರು!

ರಮೇಶ ಮತ್ತು ಹೇಮನಳಿನಿ ಕಲೂಟೊಲಾದಲ್ಲಿ ಚರ್ಮದಂಗಡಿಯ ಎದುರು ಚಿಲ್ಲರೆ ಅಂಗಡಿಯ ಪಕ್ಕದ ಬಾಡಿಗೆ ಮನೆಯಲ್ಲಿ ವಾಸಮಾಡುತ್ತಿದ್ದರೆಂದು ಪ್ರಣಯ ವಿಕಾಸ ವಿಷಯದಲ್ಲಿ ಅವರು ಕುಂಜ ಕುಟೀರ ವಿಹಾರಿಗಳಿಗಿಂತ ಸ್ವಲ್ಪವಾದರೂ ಹಿಂದುಳಿದಿದ್ದರು, ಎಂದು ಯಾರು ಹೇಳಬಲ್ಲರು! ಅನ್ನದಾಬಾಬುಗಳ ಚಹ-ಚೆಲ್ಲಿ-ಗುರುತಾದ ಮಲಿನ ಕ್ಷುದ್ರ ಮೇಜೆ ಪದ್ಮಸರೋವರ ಅಲ್ಲವೆಂದು ರಮೇಶ ಎಳ್ಳಷ್ಟೂ ಅಭಾವವನ್ನು ಅನುಭವಿಸಲಿಲ್ಲ. ಹೇಮನಳಿನಿ ಸಾಕಿದ ಬೆಕ್ಕಿನ ಮರಿ ಜಿಂಕೆಮರಿಯಲ್ಲದಿದ್ದರೂ ರಮೇಶ ಹೆಚ್ಚು ಸ್ನೇಹದಿಂದ ಅದರ ಕತ್ತು ಅಲುಗಾಡಿಸುವನು—ಮತ್ತು ಅದು ಧನುಸಿನಂತೆ ಬೆನ್ನುಬ್ಬಿಸಿ ಬೇಸರ ಹೋಗಲಾಡಿಸಿಕೊಳ್ಳಲು ಮೈ ನೆಕ್ಕುತ್ತ ಆನಂದದಲ್ಲಿ ತಲ್ಲೀನವಾಗುವುದು, ಆಗ ರಮೇಶನ ಮುಗ್ಧ ದೃಷ್ಟಿಯಲ್ಲಿ ಈ ಪ್ರಾಣಿ ಗೌರವದಲ್ಲಿ ಇತರ ಯಾವ ನಾಲ್ಕು ಕಾಲಿನ ಪ್ರಾಣಿಗೂ ಕಡಿಮೆಯೆಂದೆನಿಸುತಿರಲಿಲ್ಲ.

ಹೇಮನಳಿನಿ ಪರೀಕ್ಷೆ ಪಾಸುಮಾಡುವ ಪ್ರಯತ್ನದಲ್ಲಿ ಹೊಲಿಗೆ ಕೆಲಸವನ್ನು ಸಮರ್ಪಕವಾಗಿ ಕಲಿಯಲಾಗಲಿಲ್ಲ. ಕೆಲವು ದಿನಗಳಿಂದ ಕಸೂತಿ ಕೆಲಸಗಲ್ಲಿ ಜಾಣೆಯಾದ ಅವಳ ಗೆಳತಿಯ ಹತ್ತಿರ ಒಂದೇ ಮನದಿಂದ ಅವಳು ಕಸೂತಿ ಕಲಿಯುವುದರಲ್ಲಿ ತಲ್ಲೀನಳಾಗಿದ್ದಳು. ಹೊಲಿಯುವಿಕೆಯನ್ನು ರಮೇಶ್ ಅತಿ ಅನಾವಶ್ಯಕವೂ ತುಚ್ಛವೂ ಆದುದೆಂದು ಅರಿತಿದ್ದ. ಸಾಹಿತ್ಯದರ್ಶನಗಳ

ವಿಷಯವಾಗಿ ಹೇಮನಳಿನಿಯೊಡನೆ ಅವನ ವಾದವಿವಾದ ನಡೆಯುವುದು, ಆದರೆ ಹೊಲಿಗೆ ವಿಷಯದಿಂದ ರಮೇಶ ದೂರವಿರಬೇಕಾಯಿತು. ಈ ಕಾರಣ ಅವನು ಆಗಾಗ್ಗೆ ಅತಿ ಧೈರ್ಯದಿಂದ "ಇತ್ತೀಚೆಗೆ ನಿಮಗೆ ಕಸೂತಿ ಹಾಕುವುದರಲ್ಲಿ ಇಷ್ಟು ಆಸಕ್ತಿಗೆ ಕಾರಣವೇನು? ಹೊತ್ತು ಕಳೆಯಲು ಬೇರೆ ಮಾರ್ಗ ಇಲ್ಲದಿರುವವರಿಗೆ ಇದು ಸರಿಯಾದುದು" ಎನ್ನುವನು. ಹೇಮನಳಿನಿ ಯಾವ ಉತ್ತರವನ್ನೂ ಹೇಳದೆ ಕಿರುನಗೆಯೊಡನೆ ಸೂಜಿಯಲ್ಲಿ ದಾರ ಪೋಣಿಸುವಳು. "ಯಾವ ಕೆಲಸ ಜಗತ್ತಿನಲ್ಲಿ ಹೆಚ್ಚು ಉಪಯೋಗವುಳ್ಳದ್ದೋ ಅದು ರಮೇಶ ಬಾಬುಗಳ ಅಭಿಪ್ರಾಯದಲ್ಲಿ ಸ್ವಲ್ಪವೂ ಕೆಲಸಕ್ಕೆ ಬಾರದ್ದು. ಮಹಾಶಯ, ಎಷ್ಟೇ ದೊಡ್ಡ ತತ್ವಜ್ಞಾನಿಯಾಗಲಿ, ಕವಿಯೇ ಆಗಲಿ ಯಾವುದನ್ನು ಕಡೆ ಗಣಿಸಿದರೂ ಕೆಲಸ ನಡೆಯದು" ಎಂದು ಅಕ್ಷಯ ಗಟ್ಟಿಯಾಗಿ ಹೇಳಿದ. ಉದ್ರೇಕದಿಂದ ರಮೇಶ ಇದಕ್ಕೆ ವಿರುದ್ಧವಾಗಿ ತರ್ಕಮಾಡಲು ಸೊಂಟ ನೆಟ್ಟಗೆ ಮಾಡಿ ಕುಳಿತ. ಹೇಮನಳಿನಿ ಅಡ್ಡಿಪಡಿಸುತ್ತ ಹೇಳಿದಳು, "ರಮೇಶಬಾಬು, ನೀವು ಎಲ್ಲಮಾತಿಗೂ ಉತ್ತರ ಹೇಳಲು ಇಷ್ಟು ತವಕಿಸುವುದೇಕೆ? ಇದರಿಂದ ಜಗತ್ತಿನಲ್ಲಿ ಅನಾವಶ್ಯಕವಾಗಿ ಎಷ್ಟು ಮಾತು ಮುಂದುವರಿಯುವುದೆಂದರೆ, ಅದಕ್ಕೆ ಎಲ್ಲೆಯೇ ಇಲ್ಲ"—ಹೀಗೆ ಹೇಳಿ ಅವಳು ತಲೆ ಬಗ್ಗಿಸಿಕೊಂಡು ಮನೆ ಎಣಿಸುತ್ತ ಎಚ್ಚರಿಕೆಯಿಂದ ರೇಷ್ಮೆದಾರ ತುಂಬುವುದರಲ್ಲಿ ಮಗ್ನಳಾದಳು.

ಒಂದು ದಿನ ಬೆಳಗ್ಗೆ ರಮೇಶ ಅವಳು ಓದುವ ಕೋಣೆಗೆ ಬಂದು ನೋಡಲು ಮೇಜಿನ ಮೇಲೆ ರೇಷ್ಮೆ ಹೂ ಹಾಕಿದ್ದ ಮಕಮಲ್ ಬಟ್ಟೆ ಸುತ್ತಿದ ಒಂದು ಒತ್ತು ಕಾಗದದ ಪುಸ್ತಕ ಅಲಂಕಾರವಾಗಿ ಇಡಲಾಗಿತ್ತು. ಅದರ ಒಂದು ಮೂಲೆಯಲ್ಲಿ "ರ" ಎಂಬ ಅಕ್ಷರ ಬರೆದಿತ್ತು, ಮತ್ತೊಂದು ಮೂಲೆಯಲ್ಲಿ ಹೊಂಬಣ್ಣದ ಜರಿಯಿಂದ ಒಂದು ಪದ್ಮ ಹಾಕಲಾಗಿತ್ತು. ಪುಸ್ತಕದ ಇತಿಹಾಸವನ್ನೂ ತಾತ್ಪರ್ಯವನ್ನೂ ತಿಳಿಯಲು ರಮೇಶನಿಗೆ ಕ್ಷಣ ಹೊತ್ತೂ ಬೇಕಾಗಲಿಲ್ಲ. ಅವನ ಎದೆ ದಡಗುಟ್ಟಿತು. ಕಸೂತಿ ಕೆಲಸ ಕೆಲಸಕ್ಕೆ ಬಾರದ್ದಲ್ಲ ಎಂದು ಅವನ ಅಂತರಾತ್ಮ ಯಾವ ವಾದವಿವಾದವೂ ಇಲ್ಲದೆ ಒಪ್ಪಿಕೊಂಡಿತು. ಒತ್ತುಕಾಗದದ ಪುಸ್ತಕವನ್ನು ಎದೆಗೆ ಒತ್ತಿಕೊಂಡು ಅವನು ಅಕ್ಷಯನ ಬಳಿಯಲ್ಲೂ ಸೋಲೊಪ್ಪಿಕೊಳ್ಳಲು ಸಮ್ಮತಿಸಿದ. ಅದೇ ಒತ್ತು ಕಾಗದದ ಪುಸ್ತಕ ತೆರೆದು ಅದರ ಮೇಲೆ ಒಂದು ಚೂರು ಕಾಗದ ಇಟ್ಟು ಅವನು ಬರೆದ—

" ನಾನು ಕವಿಯಾಗಿದ್ದಿದ್ದರೆ ಕವಿತೆ ಬರೆದು ಹಿಂದಿರುಗಿಸುತ್ತಿದ್ದೆ. ಆದರೆ ಪ್ರತಿಭೆಯಿಂದ ನಾನು ವಂಚಿತ. ದೇವರು ನನಗೆ ಕೊಡುವ ಸಾಮರ್ಥ್ಯ ವೀಯಲಿಲ್ಲ; ಆದರೂ ತೆಗೆದುಕೊಳ್ಳುವ ಶಕ್ತಿಯೂ ಒಂದು ಸಾಮರ್ಥ್ಯವಷ್ಟೆ! ಆಶಾತೀತ ಬಹುಮಾನವನ್ನು ನಾನು ಹೇಗೆ ಪಡೆದೆ ಎಂಬುವನ್ನು ಅಂತ ರ್ಯಾಮಿಯಲ್ಲದೆ ಬೇರೆಯವರು ತಿಳಿಯಲಾರರು. ದಾನ ಕಣ್ಣಿಗೆ ಕಾಣಿಸು ವುದು ಪ್ರತಿದಾನ ಹೃದಯದ ಒಳಗೆ ಮರೆಯಾಗಿರುವುದು. ಇತಿ ಚಿರಮಣಿ".

ಈ ತುಂಡುಬರಹ ಹೇಮನಳಿನಿಯ ಕೈಸೇರಿತು. ಬಳಿಕ ಈ ವಿಷಯ ವಾಗಿ ಇಬ್ಬರಲ್ಲೂ ಯಾವ ಮಾತುಕತೆಯೂ ನಡೆಯಲಿಲ್ಲ.

ವರ್ಷಾಕಾಲ ತುಂಬಿ ಬಂತು. ವರ್ಷಋತು ಒಟ್ಟಿನ ಮೇಲೆ ಪಟ್ಟಣದ ಜನಸಮೂಹಕ್ಕೆ ಅಷ್ಟು ಹಿತಕರವಲ್ಲ—ಅದು ಅರಣ್ಯ ಜೀವಿಗಳಿಗೆ ಹೆಚ್ಚು ಉಪಯೋಗ; ಪಟ್ಟಣದ ಮನೆಗಳು ತಮ್ಮ ಮುಚ್ಚಿದ ಕಿಟಕಿ ಮತ್ತು ಮೇಲ್ಛಾವಣಿಯಿಂದ, ದಾರಿಗರು ತಮ್ಮ ಕೊಡೆಯಿಂದ, ಟ್ರಾಂಗಾಡಿ ತಮ್ಮ ತೆರೆಯಿಂದ ಮಳೆ ತಡೆಯುವ ಪ್ರಯತ್ನದ ಬಳಲಿಕೆಯಿಂದ ತೋಯ್ದು ಕೆಸರು ಮಯವಾಗಿರುವುದು. ನದಿ-ಪರ್ವತ-ಅರಣ್ಯ ಪ್ರದೇಶಗಳು ಮಳೆಯನ್ನು ಆದರದಿಂದ ಧ್ವನಿಗೈಯುತ್ತ ಸ್ನೇಹಿತನಂತೆ ಸ್ವಾಗತಿಸುವುದು. ಆ ಎಡೆಗಳಲ್ಲೇ ಮಳೆಯ ನಿಜವಾದ ಸುಸ್ವಾಗತ — ಅಲ್ಲಿ ಶ್ರಾವಣದಲ್ಲಿ ಆಕಾಶ-ಭೂಮಿಯ ಆನಂದ ಸಮ್ಮಿಲನದನಡುವೆ ಯಾವ ವ್ಯತ್ಯಾಸವೂ ಇಲ್ಲ.

ಆದರೆ ನೂತನ ಪ್ರೇಮದಲ್ಲಿ ಮನುಷ್ಯನನ್ನು ಅರಣ್ಯ ಪರ್ವತಗಳೊಡನೆ ಒಂದೇ ಸಾಲಿನಲ್ಲಿ ಸೇರಿಸಬಹುದು. ಎಡೆಬಿಡದ ಮಳೆಯಲ್ಲಿ ಅನ್ನದಾಬಾಬು ಗಳ ಜೀರ್ಣಶಕ್ತಿ ಮತ್ತಷ್ಟು ಕೆಟ್ಟುಹೋಯಿತು, ಆದರೆ ರಮೇಶ-ಹೇಮ ನಳಿನಿಯರ ಮನಸ್ಫೂರ್ತಿಯಲ್ಲಿ ಯಾವ ಬದಲಾವಣೆಯೂ ಕಂಡುಬರಲಿಲ್ಲ. ಮೋಡದ ನೆರಳು, ಸಿಡಿಲಿನ ಆರ್ಭಟ, ಮಳೆಯ ಕಲನಾದ ಅವರಿಬ್ಬರ ಹೃದಯವನ್ನು ಮತ್ತಷ್ಟು ಸಮೀಪಗೊಳಿಸಿತು. ಮಳೆಯ ನೆಪದಲ್ಲಿ ರಮೇಶ ನ್ಯಾಯಾಲಯಕ್ಕೆ ಹೋಗಿಬರುವುದರಲ್ಲಿ ವಿಘ್ನವುಂಟಾಗುವುದು. ಒಂದೊಂದು ದಿನ ಬೆಳಗ್ಗೆ ಧಾರಾಕಾರವಾಗಿ ಮಳೆ ಸುರಿಯುವುದು, ಹೇಮನಳಿನಿ ಉದ್ವೇಗ ದಿಂದ, "ರಮೇಶಬಾಬು, ಈ ಮಳೆಯಲ್ಲಿ ನೀವು ಮನೆಗೆ ಹೋಗುವುದು ಹೇಗೆ?" ಎನ್ನುವಳು. ರಮೇಶ ಅತಿಯಾದ ನಾಚಿಕೆಯಿಂದ ಹೇಳುವನು, "ಅಷ್ಟೇನೂ ನೆನೆಯದು, ಹೇಗಾದರೂ ಹೋಗಲೇಬೇಕು". ಹೇಮನಳಿನಿ,

"ಏಕೆ ನೆನೆದು ನೆಗಡಿ ಬರಿಸಿಕೊಳ್ಳಬೇಕು. ಇಲ್ಲಿಯೇ ಊಟಮಾಡಿ ಹೋಗಬಹುದಲ್ಲ" ಎಂದು ಹೇಳುವಳು. ನೆಗಡಿಯ ಹೆದರಿಕೆ ರಮೇಶನಿಗೆ ಸ್ವಲ್ಪವೂ ಇರಲಿಲ್ಲ; ಅವನಿಗೆ ಅಷ್ಟಾಗಿ ಶೀತವಾಗುತ್ತಿರಲಿಲ್ಲ; ಅಂಥ ಲಕ್ಷಣವನ್ನು ಅವನ ನಚ್ಚಿನ ಗೆಳೆಯರೂ ನೋಡಿರಲಿಲ್ಲ. ಆದುದರಿಂದ ಮಳೆಯ ದಿನದಲ್ಲಿ ಹೇಮನಳಿನಿಯ ಸೇವೆಯಲ್ಲಿಯೇ ಅವನು ಇರಬೇಕಾಗುವುದು— ಎರಡು ಹೆಜ್ಜೆ ಹಾಕಿ ಮನೆಗೆ ಹೋಗುವುದು ಕೆಟ್ಟಸಹವಾಸವೆಂದು ಎಣಿಸಲಾಗುವುದು. ಒಂದೊಂದು ದಿನ ಮಳೆಯ ಸೂಚನೆ ಕಂಡುಬಂದರೂ ಬೆಳಗ್ಗೆ ಹೇಮನಳಿನಿಯ ಮನೆಯಲ್ಲೇ ರಮೇಶನ ಉಪಹಾರಕ್ಕೂ ಮಧ್ಯಾಹ್ನ ಚೊಕ್ಕ ಭೋಜನಕ್ಕೂ ಆಹ್ವಾನ ದೊರೆಯುವುದು. ಒಮ್ಮೆಗೇ ನೆಗಡಿಯಾಗಬಹುದೆಂದು ಅವರಿಗಿದ್ದ ಹೆದರಿಕೆ ಜೀರ್ಣಶಕ್ತಿಯ ವಿಷಯದಲ್ಲಿ ಅಷ್ಟಾಗಿ ಇರಲಿಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತಿತ್ತು.

ಈ ರೀತಿ ದಿನಗಳು ಉರುಳುತಿತ್ತು. ಈ ತನ್ನನ್ನರಿಯದ ಹೃದಯಾವೇಗದ ಪರಿಣಾಮವೇನು ಎನ್ನುವುದನ್ನು ರಮೇಶ ಸರಿಯಾಗಿ ಯೋಚಿಸಲಿಲ್ಲ. ಆದರೆ ಅನ್ನದಾಬಾಬುಗಳು ಚಿಂತಿಸುತಿದ್ದರು. ಮತ್ತು ಅವರ ಮನೆಯ ಮತ್ತಿತರ ಜನರೂ ಆಲೋಚಿಸುತಿದ್ದರು. ಮೊದಲೇ ರಮೇಶನ ಜ್ಞಾನ ಪರಿಪಕ್ವವಾದುದಲ್ಲ, ಕಾರಣ ಅವನ ಆಗಿನ ಮುಗ್ಧಸ್ಥಿತಿಯಲ್ಲಿ ಅವನ ಸಂಸಾರಿಕ ಬುದ್ಧಿ ಮತ್ತೂ ಅಸ್ಪಷ್ಟವಾಗಿತ್ತು. ಅನ್ನದಾಬಾಬು ಪ್ರತಿದಿನವೂ ಅತಿ ಆಸೆಯಿಂದ ಅವನ ಮುಖದ ಕಡೆ ನೋಡುವರು, ಆದರೆ ಯಾವ ಉತ್ತರವೂ ದೊರೆಯುತ್ತಿರಲಿಲ್ಲ.

## ೬

ಅಕ್ಷಯನ ಕಂಠ ಅಷ್ಟೇನೂ ಇಂಪಾಗಿರಲಿಲ್ಲ, ಆದರೆ ಅವನು ತನ್ನ ಪಿಟೀಲು ಬಾರಿಸುತ್ತ ಹಾಡುವಾಗ, ಬಹಳ ತಿಳಿದವರನ್ನಲ್ಲದೆ ಸಾಧಾರಣ ಶ್ರೋತೃಗಳು ವಿಘ್ನವುಂಟುಮಾಡುತಿರಲಿಲ್ಲ. ಇಷ್ಟೇಕೆ ಇನ್ನೂ ಹಾಡಬೇಕು ಎಂದು ಬಲಾತ್ಕರಿಸುವರು. ಅನ್ನದಾಬಾಬುಗಳಿಗೆ ಸಂಗೀತದಲ್ಲಿ ಅಷ್ಟು ಅಭಿರುಚಿ ಇರಲಿಲ್ಲ. ಆದರೂ ಅವರು ಈ ಸಂಗತಿ ಒಪ್ಪಿಕೊಳ್ಳುತ್ತಿರಲಿಲ್ಲ—ಅದರಿಂದ ಆತ್ಮಗೌರವವನ್ನುಳಿಸಿಕೊಳ್ಳಲು ಪ್ರಯತ್ನಿಸುವರು. ಯಾರಾದರೂ ಅಕ್ಷಯನನ್ನು ಹಾಡಲು ಬಲಾತ್ಕರಿಸಿದರೆ ಅವರು, "ಅದೇ ನಿಮ್ಮ ತಪ್ಪು. ಯಾರೋ

ಹಾಡುತ್ತಾರೆಂದು ಅವರ ಮೇಲೆ ಹೀಗೆ ಬಲಾತ್ಕಾರನಡೆಸುವುದೇ" ಎಂದು ಹೇಳುವರು.

ಅಕ್ಷಯ ವಿನಯದಿಂದ, "ಇಲ್ಲ ಇಲ್ಲ ಅನ್ನದಾಬಾಬು, ಅದಕ್ಕಾಗಿ ಯೋಚಿಸಬೇಡಿ—ಬಲಾತ್ಕಾರ ಯಾರ ಮೇಲೆ ನಡೆಯುತ್ತಿದೆಯೆಂದು ನೋಡೋಣ" ಎನ್ನುವನು. ಬಲಾತ್ಕಾರದವರ ಗುಂಪಿನಿಂದ ಉತ್ತರ ಹೊರಡುವುದು, "ಹಾಗಾದರೆ ಪರೀಕ್ಷೆ ನಡೆಯಲಿ."

ಅಂದು ಮಧ್ಯಾಹ್ನ ದಟ್ಟವಾಗಿ ಮೋಡ ಕವಿದಿತ್ತು. ಸಂಜೆಯಾಗುತ್ತ ಬಂದರೂ ಮಳೆ ನಿಲ್ಲಲೇ ಇಲ್ಲ. "ಅಕ್ಷಯ ಸಿಕ್ಕಿಬಿದ್ದ. ಅಕ್ಷಯಬಾಬು ಒಂದು ಹಾಡು ಹೇಳಿ" ಎಂದಳು ಹೇಮನಳಿನಿ.

ಹೀಗೆಂದು ಹೇಮನಳಿನಿ ಹಾರ್ಮೋನಿಯಂ ಶ್ರುತಿಮಾಡಿದಳು. ಅಕ್ಷಯ ಪಿಟೀಲು ಬಾರಿಸುತ್ತ ಹಿಂದುಸ್ಥಾನಿ ಹಾಡು ಹಾಡತೊಡಗಿದ—

"ವಾಯು ಬಹೀ ಪುರವೈಯಾ, ನೀದನಹೀ ಬಿನಸೈಯಾ"

(ಮೂಡಣ ಗಾಳಿ ಬೀಸುತಿದೆ, ಪ್ರಿಯನಿಲ್ಲದೆ ಬಾರದು ನಿದ್ದೆ.)

ಹಾಡಿನ ಎಲ್ಲಾ ಮಾತೂ ಸರಿಯಾಗಿ ಅರ್ಥವಾಗಲಿಲ್ಲ—ಆದರೆ ಪ್ರತಿಯೊಂದು ಮಾತನ್ನೂ ತಿಳಿದುಕೊಳ್ಳುವುದರಿಂದ ಪ್ರಯೋಜನವೂ ಇಲ್ಲ. ಮನದಲ್ಲಿ ವಿರಹ ಮಿಲನದ ವೇದನೆ ಸಂಚಿತವಾಗಿರುವಾಗ, ಅವರ ಒಂದು-ತುಣುಕೇ ಸಾಕು. ಮೋಡ ಕವಿಯುತಿವೆ. ನವಿಲು ಕೇಕೆ ಹಾಕುತಿವೆ. ಮತ್ತು ಒಬ್ಬರು ಇನ್ನೊಬ್ಬರಿಗಾಗಿ ಕಾತರಗೊಂಡಿರುವುದಕ್ಕೆ ಕೊನೆಯೇ ಇಲ್ಲ ಎನ್ನುವುದು ಸ್ಪಷ್ಟವಾಗಿ ತಿಳಿಯಿತು.

ಅಕ್ಷಯ ಹಾಡಿನ ಭಾಷೆಯಲ್ಲಿ ತನ್ನ ರಹಸ್ಯವನ್ನು ತಿಳಿಸುವ ಪ್ರಯತ್ನ ಮಾಡುತಿದ್ದ—ಆದರೆ ಆ ಭಾಷೆ ಬೇರೆ— ಇಬ್ಬರಿಗೆ ಉಪಯೋಗವಾಗುತಿತ್ತು. ಇಬ್ಬರ ಹೃದಯವೂ ಆ ಸ್ವರಲಹರಿಯನ್ನು ಆಶ್ರಯಿಸಿ ಪರಸ್ಪರ ಆಘಾತ— ಅಭಿಘಾತ ಮಾಡುತಿತ್ತು. ಜಗತ್ತಿನಲ್ಲಿ ಯಾವುದೂ ಕೀಳಾದುದಲ್ಲ. ಎಲ್ಲವೂ ಮನೋರಂಜಕವೇ. ಪೃಥ್ವಿಯಲ್ಲಿ ಈವರೆಗೆ ಅದೆಷ್ಟು ಮನುಷ್ಯರು ಅದೆಷ್ಟು ಪ್ರೀತಿಸಿ [illegible]ದ, ಅದೆಲ್ಲ ಈ ಎರಡೇ ಹೃದಯಗಳಲ್ಲಿ ಹಂಚಿಹೋಗಿ ಅನಿರ್ವಚನೀ[illegible]ಲ್ಲಿ- ದುಃಖದಲ್ಲಿ- ಆಕಾಂಕ್ಷೆಯಲ್ಲಿ- ಆಕುಲತೆಯಲ್ಲಿ ಕಂಪಿಸಲಾ[illegible]

ಆದಿನ ಮೇಘದಲ್ಲಿ ಛಿದ್ರವಿಲ್ಲದಂತೆಯೇ ಗಾನದಲ್ಲಿಯೂ ಬಿಡುವು ಇರ ಲಿಲ್ಲ. ಹೇಮನಳಿನಿ ಕೇವಲ ಅನುನಯದಿಂದ ಹೇಳತೊಡಗಿದಳು. "ಅಕ್ಷಯ ಬಾಬು, ನಿಲ್ಲಿಸಬೇಡಿ, ಇನ್ನೊಂದು ಹಾಡು, ಇನ್ನೊಂದು ಹಾಡು."

ಉತ್ಸಾಹ ಮತ್ತು ಉದ್ವೇಗದಿಂದ ಅಕ್ಷಯನ ಹಾಡು ತಡೆಯಿಲ್ಲದೆ ಮುಂದುವರಿಯುತಿತ್ತು. ಹಾಡಿನ ಸ್ವರ ಮೇಲು ಮೇಲೂ ಒಂದೆಡೆ ಸೇರಿ ದಂತಾಗಿ ಅತಿ ಸೂಕ್ಷ್ಮವಾಯಿತು, ಅದರಿಂದ ಉರುಳಿಕೊಂಡು ಉರುಳಿ ಕೊಂಡು ವಿದ್ಯುತ್ ಕುಣಿಯತೊಡಗಿತು.—ವೇದನಾತುರ ಹೃದಯ ಅವರಲ್ಲಿ ಮುಸುಕು ಹಾಕಿಕೊಂಡು ಮುಳುಗಿದ್ದಿತು.

ಆದಿನ ರಾತ್ರಿ ಬಹಳ ಹೊತ್ತಿನ ಮೇಲೆ ಅಕ್ಷಯ ಹೊರಟು ಹೋದ. ರಮೇಶ ಹೊರಡಲು ಅನುಮತಿ ತೆಗೆದುಕೊಳ್ಳುವಾಗ ಸಂಗೀತದ ಸ್ವರದ ಮಧ್ಯ ದಿಂದ ನೀರವವಾಗಿ ಒಮ್ಮೆ ಹೇಮನಳಿನಿಯ ಮುಖ ದೃಷ್ಟಿಸಿದ. ಬೆದರಿದವ ಳಂತೆ ಹೇಮನಳಿನಿಯೂ ಒಮ್ಮೆ ನೋಡಿದಳು. ಅವಳ ನೋಟದಲ್ಲಿ ಹಾಡಿನ ಪ್ರಭಾವವಿತ್ತು.

ರಮೇಶ ಮನೆಗೆ ಹಿಂದಿರುಗಿದ. ಕ್ಷಣಕಾಲ ನಿಂತಿದ್ದ ಮಳೆ ಪುನಃ ಜರ್ ಜರ್ ಶಬ್ದದಿಂದ ಸುರಿಯತೊಡಗಿತು. ಆರಾತ್ರಿ ರಮೇಶನಿಗೆ ನಿದ್ದೆ ಮಾಡಲಾಗಲಿಲ್ಲ. ಹೇಮನಳಿನಿಯೂ ಬಹಳ ಹೊತ್ತು ತೆಪ್ಪನೆ ಕುಳಿತು ಗಂಭೀರ ಅಂಧಕಾರದಲ್ಲಿ ಮಳೆಸುರಿಯುವ ಎಡಬಿಡದ ಶಬ್ದ ಕೇಳುತ್ತಿದ್ದಳು.

"ವಾಯು ಬಹೀ ರವ್ವೈಯಾ, ನೀದನಹೀ ಬಿನಸ್ಸೈಯಾ" ಎಂದು ಕಿವಿಯಲ್ಲಿ ಗುಯ್ ಗುಟ್ಟುತಿತ್ತು.

ಮರುದಿನ ಬೆಳಿಗ್ಗೆ ರಮೇಶ ನಿಟ್ಟುಸಿರುಬಿಟ್ಟು ಯೋಚಿಸಲಾರಂಭಿಸಿದ. "ಒಂದುವೇಳೆ ನನಗೆ ಹಾಡಲು ಸಾಧ್ಯವಾಗುವುದಾದರೆ, ಅದಕ್ಕೆ ಪ್ರತಿಯಾಗಿ ನನ್ನ ಇತರ ಎಲ್ಲಾ ವಿದ್ಯೆಯನ್ನೂ ದಾನ ಮಾಡಲು ಹಿಂಜರಿಯೆ."

ಆದರೆ ಯಾವ ಬಗೆಯಲ್ಲಾದರೂ ಎಂದಾದರೂ ತಾನು ಹಾಡಲು ಯೋಗ್ಯನಾಗ ಬಹುದೆಂದು ನಂಬಿಕೆ ರಮೇಶನಿಗೆ ಇರಲಿಲ್ಲ. ಅವನು "ನಾನು ವಾದ್ಯ ನುಡಿಸಲು ಕಲಿಯಬೇಕು" ಎಂದು ನಿಶ್ಚಯಿಸಿದ. ಇದಕ್ಕೆ ಮೊದಲು ಒಂದು ದಿನ ಯಾರೂ ಇಲ್ಲದ ವೇಳೆಯಲ್ಲಿ ಅವನು ಅನ್ನದಾಬಾಬುಗಳ ಮನೆ ಯಲ್ಲಿ ಪಿಟೀಲು ತೆಗೆದುಕೊಂಡು ಕಮಾನು ಹಾಕಿದ, ಕಮಾನಿನ ಒಂದು ಎಳ ತಕ್ಕೆ ಸರಸ್ವತಿ ಎಷ್ಟು ಆರ್ತನಾದ ಮಾಡಿದಳೆಂದರೆ, ಪಿಟೀಲಿನ ವಿಷಯವಾದ

ಚರ್ಚೆಯೂ ತನಗೆ ಬಹಳ ನಿಷ್ಠೂರ ಉಂಟುಮಾಡಬಹುದು ಎಂದು ಅವನು ಆ ಆಸೆಯನ್ನೇ ಬಿಡಬೇಕಾಯಿತು. ಇಂದು ಅವನು ಒಂದು ಚಿಕ್ಕ ಹಾರ್ಮೋನಿಯಂ ಕೊಂಡು ತಂದ. ಮನೆಯ ಬಾಗಿಲು ಮುಚ್ಚಿಕೊಂಡು ಅತಿ ಎಚ್ಚರಿಕೆಯಿಂದ ಬಾರಿಸುತ್ತ, ಏನೇ ಆಗಲಿ ಸಿತಾರಿಗಿಂತ ಈ ವಾದ್ಯಕ್ಕೆ ಸಹನೆ ಹೆಚ್ಚು ಎಂದು ಅರಿತುಕೊಂಡ.

ಮಾರನೆಯ ದಿನ ರಮೇಶ ಅನ್ನದಾಬಾಬುಗಳ ಮನೆಗೆ ಬರುತ್ತಿದ್ದಂತೆಯೇ ಹೇಮನಳಿನಿ, "ನಿನ್ನೆ ನಿಮ್ಮ ಮನೆಯಿಂದ ಹಾರ್ಮೋನಿಯಂ ಸದ್ದು ಬರುತಿತ್ತಲ್ಲ" ಎಂದು ಕೇಳಿದಳು.

ಬಾಗಿಲು ಹಾಕಿಕೊಂಡರೆ ಇತರರಿಗೆ ತಿಳಿಯುವುದಿಲ್ಲ ಎಂದು ರಮೇಶ ಭಾವಿಸಿದ್ದ. ಆದರೆ ಬಾಗಿಲು ಮುಚ್ಚಿದ ರಮೇಶನ ಮನೆಯೊಳಗಿನ ಶಬ್ದವನ್ನೂ ಕೇಳುವಂಥ ಕಿವಿಯಿದೆ. ತಾನು ಹಾರ್ಮೋನಿಯಂ ಕೊಂಡು ತಂದಿರುವುದಾಗಿಯೂ, ನುಡಿಸಲು ಕಲಿಯುವುದಾಗಿಯೂ, ರಮೇಶ ನಾಚಿಕೆಯಿಂದ ಒಪ್ಪಿಕೊಳ್ಳಬೇಕಾಯಿತು.

ಹೇಮನಳಿನಿ, "ಮನೆಯ ಕದ ಹಾಕಿಕೊಂಡು ವ್ಯರ್ಥಪ್ರಯತ್ನ ಮಾಡುವುದೇಕೆ! ಅದಕ್ಕಿಂತಲೂ ನೀವು ನಮ್ಮ ಮನೆಗೆ ಬಂದು ಅಭ್ಯಾಸ ಮಾಡಿ, ನಾನು ತಿಳಿದಿರುವಷ್ಟು ಹೇಳಿಕೊಡುವೆ" ಎಂದಳು.

"ನಾನು ಹೆಚ್ಚು ತಿಳುವಳಿಕೆಯುಳ್ಳವನಲ್ಲ—ನನಗೆ ಕಲಿಸುವುದಕ್ಕೆ ಹೋಗಿ ನೀವು ಬಹಳ ತೊಂದರೆ ಅನುಭವಿಸಬೇಕಾದೀತು" ಎಂದು ಹೇಳಿದ ರಮೇಶ.

ಹೇಮನಳಿನಿ ಹೇಳಿದಳು, "ಗೊತ್ತಿಲ್ಲದವರಿಗೆ ಹೇಳಿಕೊಡುವಷ್ಟೇ ನನ್ನ ವಿದ್ಯೆ ಇರುವುದು" ಎಂದು.

ತಾನು ಹೆಚ್ಚು ಬಲ್ಲವನಲ್ಲ ಎಂದು ರಮೇಶ ಹೇಳಿಕೊಂಡದ್ದು ಬರಿಯ ವಿನಯವಲ್ಲ ಎಂದು ಕ್ರಮವಾಗಿ ಸ್ಪಷ್ಟವಾಯಿತು. ಇಂಥ ಶಿಕ್ಷಕಿಯ ಇಷ್ಟು ಸತತ ಸಹಾಯದಿಂದಲೂ ಸ್ವರಜ್ಞಾನವನ್ನು ರಮೇಶನ ತಲೆಯಲ್ಲಿ ಸೇರಿಸುವಂಥ ಯಾವ ಉಪಾಯವೂ ಹುಡುಕಿಯೂ ದೊರೆಯಲಿಲ್ಲ. ಈಜು ತಿಳಿಯದವ ನೀರಿನಲ್ಲಿ ಬಿದ್ದು ಉನ್ಮತ್ತನಂತೆ ಕೈಕಾಲು ಒದರುವ ಹಾಗೆ ರಮೇಶ ಸಂಗೀತದ ಮೊಣಕಾಲು ಮುಳುಗದ ಜಲದಲ್ಲಿ ಅದೇರೀತಿಯಲ್ಲಿ ವಿಹರಿಸತೊಡಗಿದ. ಅವನ ಯಾವ ಬೆರಳು ಯಾವಾಗ ಎಲ್ಲಿಹೋಗುವುದು

ಎನ್ನುವುದಕ್ಕೆ ನೆಲೆಯೇ ಇಲ್ಲ. ಅಡಿಗಡಿಗೂ ಅಪಸ್ವರ ಬರುವುದು. ಆದರೆ ರಮೇಶನ ಕಿವಿಗೆ ಅದು ಬೀಳದು. ಸ್ವರ-ಅಪಸ್ವರಗಳ ನಡುವೆ ಅವನು ಯಾವವಿಧವಾದ ಪಕ್ಷಪಾತವನ್ನೂ ತೋರಿಸದೆ ನಿಶ್ಚಲ ಮನದೊಡನೆ ರಾಗ ರಾಗಿಣಿಯರನ್ನು ಎಲ್ಲೆಡೆಯೂ ಮೀರಿ ಹೋಗುವನು. ಹೇಮನಳಿನಿ, " ಓ, ಇದೇನು ನುಡಿಸುತ್ತಿರುವಿರಿ, ತಪ್ಪಾಗಿದೆಯಲ್ಲ" ಎಂದಾಗ ಅತ್ಯಂತ ಗಾಬರಿ ಯಿಂದ ಎರಡನೆಯ ತಪ್ಪಿನ ಮೂಲಕ ಮೊದಲನೆಯ ತಪ್ಪನ್ನು ದೂರಮಾಡು ವನು. ಗಂಭೀರ ಸ್ವಭಾವದ ವಿದ್ಯಾರ್ಥಿ ರಮೇಶ, ಪ್ರಯತ್ನವನ್ನು ಬಿಟ್ಟು ಬಿಡುವವನಲ್ಲ. ಬೀದಿ ಸರಿಪಡಿಸುವ ಸ್ಟೀಮ್‌ರೋಲರ್ ತನ್ನ ಮಂದ ಗಮನ ದಲ್ಲಿ ಹೋಗುವುದು. ಅದರಡಿಯಲ್ಲಿ ಎಷ್ಟೆಷ್ಟೋ ಸಿಕ್ಕಿ ಹುಡಿಯಾಗುವುವು. ಅದರ ಕಡೆಗೆ ಕಡೆಗಣ್ಣ ನೋಟವನ್ನೂ ಬೀರುವುದಿಲ್ಲ. ಇದರಂತೆಯೇ ರಮೇಶ. ದುರ್ಭಾಗ್ಯ ಸ್ವರಲಿಪಿ ಹಾಗೂ ಹಾರ್ಮೋನಿಯಂ ಮನೆಗಳೊಡನೆ ಅನಿವಾರ್ಯ ಅಂಧತೆಯೊಡನೆ ಬಾರಿಬಾರಿಗೂ ಸಂಚರಿಸತೊಡಗಿದ.

ರಮೇಶನ ಮೌಢ್ಯಕ್ಕಾಗಿ ಹೇಮನಳಿನಿ ನಗುವಳು. ರಮೇಶನೂ ನಗುವನು. ರಮೇಶನ ತಪ್ಪುಮಾಡುವ ಅಸಾಧಾರಣ ಶಕ್ತಿಗಾಗಿ ಹೇಮ ನಳಿನಿ ಹೆಚ್ಚು ಸಂತೋಷಪಡುವಳು. ತಪ್ಪಿಗಾಗಿ ಅಪಸ್ವರಕ್ಕಾಗಿ, ಅಸಾ ಮರ್ಥ್ಯಕ್ಕಾಗಿ ಆನಂದಿಸುವ ಶಕ್ತಿ ಪ್ರೀತಿಯಲ್ಲೇ ಇರುವುದು. ಮಗು ನಡೆಯಲಾರಂಭಿಸಿ ಅಡಿಗಡಿಗೂ ತಪ್ಪುಹೆಜ್ಜೆ ಹಾಕುವುದು, ಇವನ್ನು ಸಹಿಸುವ ಶಕ್ತಿ ಪ್ರೀತಿಗೇ ಇರುವುದು. ವಾದ್ಯ ನುಡಿಸುವುದರಲ್ಲಿ ರಮೇಶ ಅದ್ಭುತ ರೀತಿಯ ಮೌಢ್ಯವನ್ನು ತೋರಿಸಿದರೆ ಹೇಮನಳಿನಿಗೆ ಅದೇ ಒಂದು ದೊಡ್ಡ ಕೌತುಕ.

ಒಮ್ಮೊಮ್ಮೆ ರಮೇಶ, " ಇರಲಿ, ನೀವು ಇಷ್ಟು ನಗುವಿರಲ್ಲ, ನೀವು ಕಲಿಯಲು ಆರಂಭಿಸಿದಾಗ ತಪ್ಪುಮಾಡಲೇ ಇಲ್ಲವೋ" ಎನ್ನುವನು. ಹೇಮ ನಳಿನಿ " ಖಂಡಿತವಾಗಿಯೂ ತಪ್ಪಾಗುತಿತ್ತು. ಆದರೆ ನಿಜವಾಗಿ ಹೇಳುವೆ ರಮೇಶಬಾಬು, ನಿಮ್ಮೊಡನೆ ಹೋಲಿಸುವುದಕ್ಕಾಗುವುದಿಲ್ಲ" ಎಂದು ಹೇಳುವಳು.

ರಮೇಶ ಇದಕ್ಕೆ ಕೋಪಿಸಿಕೊಳ್ಳದೆ ನಕ್ಕು ಪುನಃ ಮೊದಲಿಂದ ಪ್ರಾರಂಭಿಸುವನು. ಅನ್ನದಾಬಾಬುಗಳಿಗೆ ಸಂಗೀತದ ಸರಿ–ತಪ್ಪು ಯಾವುದೂ ತಿಳಿಯದು, ಅವರು ಒಮ್ಮೊಮ್ಮೆ ಗಂಭೀರವಾಗಿ ಕಿವಿ ನೆಟ್ಟಗೆ ಮಾಡಿಕೊಂಡು

ನಿಂತು, " ಹಾಗೆ, ರಮೇಶನ ಕೈ ಬರುಬರುತ್ತ ಚೆನ್ನಾಗಿ ಪಳಗುತ್ತಿರುವುದು " ಎಂದು ಹೇಳುವರು.

" ಕೈ ಅಪಸ್ವರದಲ್ಲಿ ಪಳಗಿದೆ " ಎನ್ನುವಳು ಹೇಮನಳಿನಿ.

ಅನ್ನದಾಬಾಬುಗಳು, " ಇಲ್ಲ ಇಲ್ಲ. ಹಿಂದೆ ಕೇಳಿದ್ದಕ್ಕಿಂತ ಈಗ ಬಹಳ ಅಭ್ಯಾಸವಾಗಿದೆ. ಹೀಗೆ ರಮೇಶ ಅಭ್ಯಾಸಮಾಡಿದರೆ, ಅವನ ಕೈ ಅಷ್ಟೇನೂ ಹಿಂದುಳಿಯುವುದಿಲ್ಲ ಎಂದು ನನಗೆ ತೋರುವುದು. ಹಾಡುವಿಕೆ-ನುಡಿಸುವಿಕೆಯಲ್ಲಿ ಬೇರೇನೂ ಇಲ್ಲ, ಅಭ್ಯಾಸ ಇರಬೇಕು. ಒಮ್ಮೆ ಸರಿಗಮದ ಜ್ಞಾನ ಬಂದರೆ ಬಳಿಕ ಎಲ್ಲವೂ ಸುಲಭವಾಗಿ ಬರುವುದು " ಎಂದರು.

ಈ ಎಲ್ಲ ಮಾತಿಗೂ ಪ್ರತಿವಾದ ನಡೆಯಲಿಲ್ಲ. ಎಲ್ಲರೂ ಮೌನದಿಂದ ಕೇಳುತ್ತಿದ್ದರು.

## ೧೧

ಪ್ರಾಯಃ ಪ್ರತಿವರ್ಷದ ಶರತ್ಕಾಲದಲ್ಲಿ ದುರ್ಗಾಪೂಜೆಯ ಕಡಮೆ ಚಾರ್ಜಿನ ಟಿಕೀಟು ಕೊಡಲಾರಂಭಿಸಿದೊಡನೆ ಹೇಮನಳಿನಿಯನ್ನು ಕರೆದುಕೊಂಡು ಅನ್ನದಾಬಾಬುಗಳು ಜಬ್ಬಲ್ಪುರಕ್ಕೆ ತಮ್ಮ ಭಾವ ಕೆಲಸದಲ್ಲಿದ್ದಲ್ಲಿಗೆ ಹೋಗುವರು. ಜೀರ್ಣಶಕ್ತಿಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಅವರ ಈ ಸಾಂವತ್ಸರಿಕ ಪ್ರಯತ್ನ.

ಭಾದ್ರಪದ ಮಾಸದ ಅರ್ಧಭಾಗ ಮುಗಿದಿತ್ತು. ಇನ್ನು ಪೂಜೆಯ ರಜ ಬರಲು ಹೆಚ್ಚು ಕಾಲವಿಳಂಬವಿರಲಿಲ್ಲ. ಅನ್ನದಾಬಾಬುಗಳು ಈಗಿನಿಂದಲೇ ತಮ್ಮ ಪ್ರಯಾಣದ ಸಿದ್ಧತೆಯಲ್ಲಿ ತಲ್ಲೀನರಾಗಿದ್ದರು.

ಮುಂಬರುವ ಅಗಲಿಕೆಯ ಕಾರಣದಿಂದ ರಮೇಶ ಇತ್ತೀಚೆಗೆ ಹೆಚ್ಚು ಹೆಚ್ಚಾಗಿ ಹಾರ್ಮೋನಿಯಂ ಕಲಿಯತೊಡಗಿದ. ಒಂದು ದಿನ ಮಾತುಕತೆಯಲ್ಲಿ ಹೇಮನಳಿನಿ ಹೇಳಿದಳು, " ರಮೇಶಬಾಬು, ನೀವು ಸಹ ಕೆಲವು ಕಾಲ ಹವಾ ಬದಲಾವಣೆ ಮಾಡಿಕೊಳ್ಳುವುದು ಒಳ್ಳೆಯದೆಂದು ನನಗೆ ತೋರುತ್ತದೆ. ಅಲ್ಲವೇ ಅಪ್ಪಾ ? "

ಅನ್ನದಾಬಾಬುಗಳು "ಮಾತು ಸತ್ಯವೇ. ಏಕೆಂದರೆ ಈ ನಡುವೆ ರಮೇಶ ಶೋಕ ದುಃಖಗಳ ಕಷ್ಟವನ್ನು ಅನುಭವಿಸಿರುವನು" ಎಂದು ಭಾವಿಸಿದರು.

"ಕಡೆಗೆ ಕೆಲವು ದಿನ ಎಲ್ಲಾದರೂ ಸುತ್ತಾಡಿಕೊಂಡು ಬರುವುದು ಒಳ್ಳೆಯದು" ಎಂದರು. ಗೊತ್ತಿದೆಯೇ ರಮೇಶ, ಪಶ್ಚಿಮಪ್ರಾಂತ್ಯವೇ ಆಗಲಿ, ಬೇರೆ ಯಾವ ದೇಶವೇ ಆಗಲಿ, ನಾನು ನೋಡಿರುವೆ, ಕೇವಲ ಕೆಲವು ದಿನಗಳು ಮಾತ್ರ ಸ್ವಲ್ಪ ಫಲ ದೊರೆಯುವುದು. ಪ್ರಾರಂಭದ ಕೆಲವು ದಿನ ಚೆನ್ನಾಗಿ ಹಸಿವಾಗುವುದು, ಊಟ ಹೆಚ್ಚಾಗಿ ಸೇರುವುದು. ಬಳಿಕ ಮೊದಲಿನಂತೆಯೇ ಅದೇ ಹೊಟ್ಟೆ ಭಾರ ಬರುವುದು. ಹಸಿವೆ ಇದ್ದೇ ಇರುವುದು. ಏನು ತಿಂದರೂ ಅದು—"

ಹೇಮನಳಿನಿ—ರಮೇಶಬಾಬು, ನೀವು ನರ್ಮದಾನದಿ ನೋಡಿರುವಿರಾ ?

—ರಮೇಶ—ಇಲ್ಲ, ನೋಡಿಲ್ಲ.

ಹೇಮನಳಿನಿ—ಅದು ನೀವು ನೋಡಬೇಕಾದುದು, ಅಲ್ಲವೇ ಅಪ್ಪಾ ?

ಅನ್ನದಾ—ಆದುಸರಿ, ರಮೇಶ ನಮ್ಮೊಡನೆಯೇ ಏಕೆ ಬರಬಾರದು. ವಾಯುಪರಿವರ್ತನೆಯೂ ಆಗುವುದು. ಅಮೃತಶಿಲೆ ಬೆಟ್ಟವನ್ನೂ ನೋಡಿದಂತಾಗುವುದು.

ವಾಯುಪರಿವರ್ತನೆ ಹಾಗೂ ಅಮೃತಶಿಲೆಯ ಬೆಟ್ಟ ನೋಡುವುದು ಎರಡೂ ರಮೇಶನಿಗೆ ಎಲ್ಲಕ್ಕಿಂತಲೂ ಪ್ರಯೋಜನವುಳ್ಳದ್ದು, ಆದರಿಂದ ರಮೇಶ ಸಮ್ಮತಿಸಲೇಬೇಕಾಯಿತು.

ಆ ದಿನ ರಮೇಶನ ಶರೀರ ಮನಸ್ಸು ಗಾಳಿಯಲ್ಲಿ ಹಾರಾಡತೊಡಗಿತು. ಅಶಾಂತ ಹೃದಯದ ಉದ್ವೇಗವನ್ನು ಯಾವುದೋ ಒಂದು ದಾರಿಯಲ್ಲಿ ನಡೆಸಲು ತನ್ನ ವಾಸದ ಮನೆಯ ಒಳಗೆ ಬಾಗಿಲು ಮುಚ್ಚಿಕೊಂಡು ಹಾರ್ಮೋನಿಯಂ ಮುಂದೆ ಕುಳಿತ. ಅಂದು ಅವನಿಗೆ ಆರೋಹಣ-ಅವರೋಹಣದ ಗಮನವಿಲ್ಲ—ವಾದ್ಯದ ಮೇಲೆ ಅವನ ಉನ್ಮತ್ತ ಬೆರಳುಗಳು ತಾಳ-ಬೇತಾಳ ನೃತ್ಯ ಮಾಡಿತು.

ಹೇಮನಳಿನಿ ದೂರಹೋಗಬೇಕೆಂಬ ಕಾರಣದಿಂದ ಅವನ ಹೃದಯ ಕೆಲವುದಿನಗಳಿಂದ ದುಗುಡದಿಂದ ಕೂಡಿತ್ತು—ಇಂದು ಉಲ್ಲಾಸದ ಭರದಲ್ಲಿ ಸಂಗೀತ ವಿದ್ಯಾಸಂಬಂಧವಾದ ಎಲ್ಲ ನ್ಯಾಯ ಅನ್ಯಾಯಗಳ ಜ್ಞಾನವನ್ನು ಒಮ್ಮೆಗೇ ಪರಿತ್ಯಜಿಸಿದ.

ಇಂಥ ವೇಳೆಯಲ್ಲಿ ಬಾಗಿಲ ಬಳಿ ಸದ್ದಾಯಿತು. "ಆ ಸರ್ವನಾಶ, ನಿಲ್ಲಿಸಿ, ನಿಲ್ಲಿಸಿ, ರಮೇಶಬಾಬು ಏನುಮಾಡುತ್ತಿರುವಿರಿ".

ರಮೇಶ ನಗುತ್ತ "ಅಪರಾಧ ಒಪ್ಪಿಕೊಂಡಿರುವೆ".

"ರಮೇಶ ಬಾಬು, ನೀವು ಮನಸಿಗೆ ಏನೂತಿಳಿದುಕೊಳ್ಳದಿದ್ದರೆ ನಿಮ್ಮೊಡನೆ ನಾನು ಒಂದು ವಿಚಾರ ಮಾತನಾಡಬೇಕು" ಎಂದ ಅಕ್ಷಯ.

ರಮೇಶ ಅತ್ಯಂತ ನಾಚಿಕೆಯಿಂದ ಮುಖ ಕೆಂಪಗೆ ಮಾಡಿಕೊಂಡು ಬಾಗಿಲು ತೆರೆದ. ಅಕ್ಷಯ ಮನೆಯೊಳಕ್ಕೆ ಬಂದು, "ರಮೇಶಬಾಬು, ಒಂಟಿಯಾಗಿ ಕುಳಿತು ನೀವು ಮಾಡುತಿದ್ದ ಕೆಲಸಕ್ಕೆ, ನಿಮ್ಮ ಕ್ರಿಮಿನಲ್ ಕೋಡಿನ ಯಾವ ಶಿಕ್ಷೆಯೂ ಅನ್ವಯಿಸುವುದಿಲ್ಲವೆ?" ಎಂದು ಕೇಳಿದ.

ರಮೇಶ ಉದ್ರೇಕಗೊಂಡು ನೀರವವಾಗಿ ವಿಚಾರಕ್ಕೆ ಬರುವ ವಿಷಯ ವನ್ನು ನಿರೀಕ್ಷಿಸುತ್ತಿದ್ದ.

ಅಕ್ಷಯ—ಹೇಮನಳಿನಿಯ ಸುಖ-ದುಃಖಗಳ ಕಡೆ ನಾನು ಉದಾಸೀನ ನಾಗಿಲ್ಲ ಎಂಬ ಸಂಗತಿ ಇಷ್ಟುಹೊತ್ತಿಗೆ ನಿಮಗೆ ತಿಳಿದಿರಬಹುದು.

ರಮೇಶ ಹೌದು-ಇಲ್ಲ ಎಂದು ಹೇಳದೆ ಸುಮ್ಮನೆ ಕೇಳುತ್ತಿದ್ದ.

ಅಕ್ಷಯ—ಅವಳ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು, ಅದನ್ನು ಕೇಳುವ ಅಧಿಕಾರ ನನಗಿದೆ—ನಾನು ಅನ್ನದಾಬಾಬುಗಳ ಆಪ್ತ.

ಮಾತು ಹಾಗೂ ಮಾತಿನ ಸರಣಿ ರಮೇಶನಿಗೆ ಬಹಳ ಅಸಮಾಧಾನ ವನ್ನುಂಟುಮಾಡಿತು. ಆದರೆ ನಿಷ್ಠುರವಾಗಿ ಉತ್ತರ ಹೇಳುವ ಅಭ್ಯಾಸ ವಾಗಲಿ, ಸಾಮರ್ಥ್ಯವಾಗಲಿ ರಮೇಶನಿಗೆ ಇರಲಿಲ್ಲ. ಅವನು ಮೃದು ಸ್ವರ ದಲ್ಲಿ, "ಅವಳ ವಿಷಯದಲ್ಲಿ ನನಗೆ ಕೆಟ್ಟ ಅಭಿಪ್ರಾಯವಿದೆ ಎಂಬ ಸಂದೇಹ ನಿಮ್ಮ ಮನಸಿಗೆ ಬರುವಂಥ ಸಂಗತಿಯೇನಾದರೂ ನಡೆದಿದೆಯೇ" ಎಂದು ಕೇಳಿದ.

ಅಕ್ಷಯ—ನೋಡಿ, ನೀವು ಹಿಂದೂ ಪರಿವಾರದವರು, ನಿಮ್ಮ ತಂದೆ ಯವರೂ ಹಿಂದುಗಳು. ನೀವು ಬ್ರಾಹ್ಮಸಮಾಜದವರೊಡನೆ ಮದುವೆಯಾಗ ಬಹುದೆಂಬ ಸಂಶಯದಿಂದ ಬೇರೆಕಡೆ ಮದುವೆಮಾಡಲು ಅವರು ನಿಮ್ಮನ್ನು ಊರಿಗೆ ಕರೆದುಕೊಂಡು ಹೋದದ್ದು ನನಗೆ ಗೊತ್ತು

ಈ ವಿಚಾರವನ್ನು ಅಕ್ಷಯ ತಿಳಿದುಕೊಳ್ಳಬೇಕಾದಂಥ ಪ್ರಬಲ ಕಾರಣ ವೇನೂ ಇರಲಿಲ್ಲ. ಏಕೆಂದರೆ ಅಕ್ಷಯನೇ ರಮೇಶನ ತಂದೆಯ ಮನಸಿನಲ್ಲಿ ಈ ಸಂದೇಹ ಉಂಟುಮಾಡಿದ್ದನು. ರಮೇಶ ಕ್ಷಣಕಾಲ ಅಕ್ಷಯನ ಮುಖದ ಕಡೆ ನೋಡಲಾರದಾದ.

ಅಕ್ಷಯ ಹೇಳಿದ, "ಆಕಸ್ಮಿಕವಾಗಿ ನಿಮ್ಮ ತಂದೆಯವರು ಮೃತರಾದ ರೆಂದು ನೀವು ನಿಮ್ಮನ್ನು ಸ್ವತಂತ್ರರೆಂದು ತಿಳಿದಿರುವಿರಾ, ಅವರ ಆಸೆ ಏನೆಂದರೆ—"

ರಮೇಶನು ಮುಂದೆ ಸಹಿಸಲಾರದವನಾಗಿ ಹೇಳಿದ, "ನೋಡಿ ಅಕ್ಷಯ ಬಾಬು. ಇತರರ ವಿಷಯವಾಗಿ ನನಗೆ ಉಪದೇಶ ಮಾಡುವ ಅಧಿಕಾರ ನಿಮಗೆ ಇರುವುದಾದರೆ, ಅದನ್ನು ನಾನು ದಿನವೆಲ್ಲಾ ಕೇಳುವೆ— ಆದರೆ ನಮ್ಮ ತಂದೆಯೊಡನೆ ನನ್ನ ಸಂಬಂಧದ ವಿಷಯವಾಗಿ ನೀವು ಯಾವ ಮಾತೂ ಆಡ ಕೂಡದು".

"ಹಾಗಾದರೆ ಸರಿ, ಈಗ ಆ ಮಾತುಬೇಡ. ಆದರೆ ಹೇಮನಳಿನಿಯನ್ನು ಮದುವೆ ಮಾಡಿಕೊಳ್ಳುವ ಅಭಿಪ್ರಾಯ ಮತ್ತು ಅವಕಾಶ ನಿಮಗೆ ಇವೆಯೋ ಇಲ್ಲವೋ ಎಂಬ ಮಾತನ್ನು ನೀವು ಹೇಳಲೇಬೇಕು" ಎಂದು ಅಕ್ಷಯ ಕೇಳಿದ.

ರಮೇಶ ಏಟಿನ ಮೇಲೆ ಏಟು ತಿಂದು ಕ್ರಮಕ್ರಮವಾಗಿ ಉದ್ರೇಕ ಗೊಳ್ಳುತಿದ್ದ— "ನೋಡಿ ಅಕ್ಷಯಬಾಬು, ನೀವು ಅನ್ನದಾಬಾಬುಗಳ ಆಪ್ತ ರಿರಬಹುದು, ಆದರೆ ನನ್ನ ಸಂಗಡ ನಿಮಗೆ ಅಷ್ಟು ಸಂಬಂಧ ಉಂಟಾಗಿಲ್ಲ. ದಯವಿಟ್ಟು ನೀವು ನಿಮ್ಮ ಮಾತು ನಿಲ್ಲಿಸಿ" ಎಂದು ಹೇಳಿದ.

ಅಕ್ಷಯ—ನಾನು ನಿಲ್ಲಿಸಿದರೆ ಎಲ್ಲ ಮಾತೂ ನಿಂತುಹೋಗಬಹುದು ಮತ್ತು ನೀವು ಮೊದಲಿನಂತೆ ಫಲಾಫಲಗಳ ಕಡೆಗೆ ಗಮನಕೊಡದೆ ಸುಖವಾಗಿ ದಿನಕಳೆಯುತ್ತಿದ್ದಂತೆಯೇ ಈಗಲೂ ಕಳೆಯಬಹುದು, ಎನ್ನುವಂತಿದ್ದರೆ ಯಾವ ಮಾತೂ ಇರದು. ಆದರೆ ಸಮಾಜ ನಿಮ್ಮಂಥ ನಿಶ್ಚಿಂತ ಪ್ರಕೃತಿಯ ಜನರ ಸುಖದ ಸ್ಥಾನವಲ್ಲ. ನೀವು ಶ್ರೇಷ್ಠ ದರ್ಜೆಯ ವ್ಯಕ್ತಿಯಾಗಿರಬಹುದು. ಜಗತ್ತಿನ ಹಂಗು ಗಮನಿಸದಿರಬಹುದು, ಆದರೆ ಸ್ವಲ್ಪ ಪ್ರಯತ್ನಪೂರ್ವಕ ವಾಗಿ ಆಲೋಚಿಸಿದರೆ ತಿಳಿಯಬರುವುದೇನೆಂದರೆ, ಗೌರವಸ್ಥರ ಹುಡುಗಿಯ ಸಂಗಡ ನೀವು ಯಾವರೀತಿಯ ವ್ಯವಹಾರವನ್ನಿಟ್ಟುಕೊಂಡಿರುವಿರೋ ಅದೇ ರೀತಿ ನೀವು ಇತರ ಜನರಿಗೆ ಹೇಳಿ ನಿಮ್ಮನ್ನು ಕಾಪಾಡಿಕೊಳ್ಳಲಾರಿರಿ—ಮತ್ತು ನೀವು ಯಾರಲ್ಲಿ ನಂಬಿಕೆ ಇಟ್ಟಿರುವಿರೋ ಅವರನ್ನು ಜನಸಮಾಜದಲ್ಲಿ ಅಪ ನಂಬಿಕಸ್ಥರನ್ನಾಗಿ ಮಾಡುವುದಕ್ಕೆ ಇದೊಂದು ದಾರಿ.

ರಮೇಶ—ನಿಮ್ಮ ಉಪದೇಶವನ್ನು ನಾನು ಕೃತಜ್ಞತೆಯೊಡನೆ ಸ್ವೀಕರಿ ಸುವೆ. ಶೀಘ್ರದಲ್ಲೇ ನಾನು ನನ್ನ ಕರ್ತವ್ಯ ಏನೆಂಬುದನ್ನು ನಿಶ್ಚಯಿಸುವೆ,

ಮತ್ತು ನಡೆಸುವೆ, ಈ ವಿಷಯದಲ್ಲಿ ನೀವು ನಿಶ್ಚಿಂತರಾಗಿರಿ—ಈ ವಿಷಯ ವಾಗಿ ಇನ್ನು ಹೆಚ್ಚು ಚರ್ಚೆ ನಡೆಸುವುದು ಒಳ್ಳೆಯದಲ್ಲ.

ಅಕ್ಷಯ—ನನ್ನನ್ನು ಬದುಕಿಸಿದಿರಿ ರಮೇಶಬಾಬು. ಇಷ್ಟು ದೀರ್ಘ ಕಾಲದ ತರುವಾಯ ನೀವು ನಿಮ್ಮ ಕರ್ತವ್ಯವನ್ನು ನಿಶ್ಚಯಿಸುವುದಾಗಿಯೂ ನಡೆಸುವುದಾಗಿಯೂ ಹೇಳಿರುವಿರಿ. ಇದರಿಂದಲೇ ನಾನು ನಿಶ್ಚಿಂತನಾಗುವೆ— ನಿಮ್ಮೊಡನೆ ಚರ್ಚೆ ನಡೆಸಬೇಕೆಂಬ ಹಟ ನನಗಿಲ್ಲ. ನಿಮ್ಮ ಸಂಗೀತ ಅಭ್ಯಾಸದಲ್ಲಿ ವಿಘ್ನವುಂಟುಮಾಡಿದೆ—ಕ್ಷಮಿಸಬೇಕು—ನೀವು ಮತ್ತೆ ಪ್ರಾರಂ ಭಿಸಬಹುದು. ನಾನು ಹೊರಡುವೆ.

ಹೀಗೆ ಹೇಳಿ ಅಕ್ಷಯ ಅತಿವೇಗವಾಗಿ ಹೊರಟ.

ಆ ಬಳಿಕ ಅತ್ಯಂತ ಅಪಸ್ವರದ ಸಂಗೀತ ಸಾಧನೆ ಮತ್ತೆ ನಡೆಯಲಿಲ್ಲ. ರಮೇಶ ಗದ್ದದ ಕೆಳಗೆ ಎರಡು ಕೈಗಳನ್ನೂ ಇಟ್ಟುಕೊಂಡು ಹಾಸಿಗೆಯ ಮೇಲೆ ಬೆನ್ನು ನೀಲವಾಗಿ ಮಲಗಿಕೊಂಡ. ಹೀಗೆ ಬಹಳ ಕಾಲ ಕಳೆಯಿತು. ಇದ್ದಕ್ಕಿದ್ದಂತೆ ಗಡಿಯಾರದಲ್ಲಿ ಟಣ್‌ಟಣ್ ಎಂದು ಐದು ಹೊಡೆದದ್ದನ್ನು ಕೇಳಿ ಅವನು ಒಮ್ಮೆಗೇ ಎದ್ದು ಕುಳಿತ. ಏನು ಕರ್ತವ್ಯ ನಿಶ್ಚಯಿಸಿದ ಎನ್ನುವುದನ್ನು ಅಂತರ್ಯಾಮಿಯೇ ಬಲ್ಲ—ಆದರೆ ಆಗ ನೆರಮನೆಗೆ ಹೋಗಿ ಎರಡು ಬಟ್ಟಲು ಚಹ ಕುಡಿಯುವ ಕರ್ತವ್ಯದ ವಿಷಯವಾಗಿ ಅವನಿಗೆ ಯಾವ ಮಾನಸಿಕ ಹೋರಾಟವೂ ಇರಲಿಲ್ಲ.

ಹೇಮನಳಿನಿ ಗಾಬರಿಗೊಂಡು ಕೇಳಿದಳು, "ರಮೇಶಬಾಬು ನೀವು ಆರೋಗ್ಯವಾಗಿಲ್ಲವೆ ?"

"ಹಾಗೇನೂ ಇಲ್ಲ" ಎಂದ ರಮೇಶ.

ಅನ್ನದಾಬಾಬುಗಳು, "ಏನೂ ಇಲ್ಲ. ಜೀರ್ಣಶಕ್ತಿಯಲ್ಲಿ ಬದಲಾವಣೆ ಯಾಗಿರಬಹುದು—ಪಿತ್ತಾಧಿಕ್ಯ. ನಾನು ಉಪಯೋಗಿಸುತಿರುವೆನಲ್ಲ ಮಾತ್ರೆ, ಅದರಲ್ಲಿ ಒಂದು ತಿಂದು ನೋಡಿ, ನೋಡೋಣ —".

ಹೇಮನಳಿನಿ ನಕ್ಕು, "ಅಪ್ಪಾ, ನಿಮ್ಮ ಆ ಮಾತ್ರೆ ತಿನ್ನದ ನಿಮ್ಮ ಪರಿ ಚಿತರನ್ನೇ ನಾನು ಕಂಡಿಲ್ಲ—ಆದರೆ ಅದರ ಉಪಕಾರವೇ . ಇರಬಹುದು ಇದು !" ಎಂದು ಕೇಳಿದಳು.

ಅನ್ನದಾ— ತೊಂದರೆಯಾಗಿಲ್ಲ. ನಾನು ಸ್ವಂತವಾಗಿ ಪರೀಕ್ಷಿಸಿ ನೋಡಿ

ರುವೆ—ಇದುವರೆಗೆ ಎಷ್ಟು ಬಗೆಯ ಮಾತ್ರೆ ತಿಂದಿರುವೆ, ಇದೇ ಎಲ್ಲಕ್ಕಿಂತ ಉಪಕಾರ ಮಾಡುವುದು.

ಹೇಮನಳಿನಿ—ಅಪ್ಪಾ, ನೀವು ಯಾವಾಗ ಹೊಸ ಮಾತ್ರೆ ಉಪಯೋಗಿಸತೊಡಗಿದರೂ ಸ್ವಲ್ಪ ಕಾಲ ಅದರ ಗುಣ ಅಪಾರವಾಗಿ ಕಾಣುವುದು.

ಅನ್ನದಾ—ನಿನಗೆ ಯಾವುದರಲ್ಲಿಯೂ ನಂಬಿಕೆಯಿಲ್ಲ—ಇರಲಿ, ನನ್ನ ಚಿಕಿತ್ಸೆಯಿಂದ ಗುಣವಾಗಿದೆಯೋ ಇಲ್ಲವೇ ಎಂದು ಅಕ್ಷಯನನ್ನು ಕೇಳಿ ನೋಡು.

ಆ ಪ್ರಾಮಾಣಿಕ ಸಾಕ್ಷಿಯನ್ನು ಕರೆಯಬೇಕಾಗುವುದೆಂಬ ಭಯದಿಂದ ಹೇಮನಳಿನಿ ನಿರುತ್ತರಳಾದಳು. ಆದರೆ ಸಾಕ್ಷಿ ತಾನೇ ಬಂದು ಸೇರಿದ. ಬರುತ್ತಲೇ ಅನ್ನದಾಬಾಬುಗಳಿಗೆ, "ಅನ್ನದಾಬಾಬು, ನಿಮ್ಮ ಆ ಮಾತ್ರೆ ನನಗೆ ಇನ್ನೊಂದು ಕೊಡಿ. ಬಹಳ ಉಪಕಾರವಾಗಿರುವುದು. ಇಂದು ದೇಹ ಬಹಳ ಹಗುರವಾದಂತಿದೆ" ಎಂದು ಹೇಳಿದ.

ಅನ್ನದಾಬಾಬುಗಳು ಹೇಮನಳಿನಿಯ ಮುಖವನ್ನು ಹೆಮ್ಮೆಯೊಡನೆ ನೋಡಿದರು.

೧೨

ಮಾತ್ರೆ ತಿನ್ನಿಸಿದ ಬಳಿಕ ಅನ್ನದಾಬಾಬುಗಳು ಅಕ್ಷಯನನ್ನು ಬೇಗ ಬಿಡಲು ಬಯಸಲಿಲ್ಲ. ಅಕ್ಷಯನೂ ಹೋಗಲು ಅತಿ ಅವಸರ ತೋರಿಸದೆ ಆಗಾಗ್ಗೆ ರಮೇಶನ ಮುಖದ ಕಡೆ ದೃಷ್ಟಿ ಬೀರುತಿದ್ದ. ರಮೇಶನ ನೋಟಕ್ಕೆ ಸಹಜವಾಗಿ ಯಾವುದೂ ಗೋಚರಿಸುತಿರಲಿಲ್ಲ—ಆದರೆ ಇಂದು ಅಕ್ಷಯನ ಈ ದೃಷ್ಟಿಸುವಿಕೆ ಅವನ ಗಮನಕ್ಕೆ ಬಾರದಿರಲಿಲ್ಲ. ಇದರಿಂದ ಅವನು ಬಾರಿ ಬಾರಿಗೂ ಉದ್ರೇಕ ಹೊಂದುತಿದ್ದ.

ಪಶ್ಚಿಮ ಪ್ರಾಂತ್ಯಕ್ಕೆ ಪ್ರಯಾಣ ಹೊರಡುವ ಕಾಲ ಸಮೀಪಿಸಿತು. ಮನಸಿನಲ್ಲೇ ಅದರ ಆಲೋಚನೆಯಿಂದ ಹೇಮನಳಿನಿಯ ಹೃದಯ ಸಂತೋಷ ಪಡುತಿತ್ತು. ಇಂದು ರಮೇಶಬಾಬು ಬಂದರೆ ರಜಾ ಕಳೆಯುವ ವಿಷಯವಾಗಿ ಅವರೊಡನೆ ಅನೇಕ ವಿಷಯ ಚರ್ಚಿಸಬೇಕು ಎಂದು ಅವಳು ನಿಶ್ಚಯಿಸಿದಳು. ಅಲ್ಲಿ ಒಂಟಿಯಾಗಿ ಯಾವ ಯಾವ ಪುಸ್ತಕ ಓದಿ ಮುಗಿಸಬೇಕು, ಎಂದು

ಇಬ್ಬರೂ ಸೇರಿ ಆದರದೊಂದು ಪಟ್ಟಿ ಸಿದ್ಧಪಡಿಸಲು ತೀರ್ಮಾನಿಸಿದ್ದರು. ರಮೇಶ ಇಂದು ಬೆಳಿಗ್ಗೇ ಬರಬೇಕೆಂದು ಗೊತ್ತಾಗಿದ್ದಿತು. ಏಕೆಂದರೆ, ಚಹದ ವೇಳೆಯಲ್ಲಿ ಅಕ್ಷಯ ಅಥವ ಬೇರೆ ಯಾರಾದರೂ ಬರುವರು, ಆಗ ಆಲೋಚನೆ ನಡೆಸುವುದು ಸಾಧ್ಯವಿಲ್ಲ.

ಆದರೆ ಇಂದು ರಮೇಶ ಇತರ ದಿನಗಳಿಗಿಂತ ತಡವಾಗಿ ಬಂದ. ಅತ್ಯಂತ ಚಿಂತೆಯಿಂದ ಕೂಡಿದ ಮುಖಭಾವದಿ; ಇದರಿಂದ ಹೇಮನಳಿನಿಯ ಉತ್ಸಾಹಕ್ಕೆ ಹೆಚ್ಚು ಭಂಗವುಂಟಾಯಿತು. ಯಾವುದೋ ಒಂದು ಸಮಯ ದಲ್ಲಿ ಅವಳು ರಮೇಶನನ್ನು ಪ್ರಶ್ನಿಸಿದಳು, "ನೀವು ಈ ದಿನ ತಡವಾಗಿ ಬಂದಿರುವಿರಿ ?"

ರಮೇಶ ಅನ್ಯಮನಸ್ಕನಾಗಿ ಕ್ಷಣ ಹೊತ್ತು ಸುಮ್ಮನಿದ್ದು, "ಹೌದು ಇಂದು ಸ್ವಲ್ಪ ಹೊತ್ತಾಯಿತು" ಎಂದ.

ಅಂದು ಹೇಮನಳಿನಿ ಅವಸರ ಅವಸರವಾಗಿ ಅಷ್ಟು ಹೊತ್ತಿಗೆ ಮುಂಚೆಯೇ ತಲೆ ಬಾಚಿಕೊಂಡು ಬಟ್ಟೆ ಬದಲಾಯಿಸಿಕೊಂಡ ಬಳಿಕ ಅವಳು ಇಂದು ಅದೆಷ್ಟು ಬಾರಿ ಗಡಿಯಾರದ ಕಡೆ ನೋಡಿದಳು—ಬಹಳ ಕಾಲದ ವರೆಗೂ ತಮ್ಮ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲವೆಂದೂ, ಇನ್ನೂ ಅಷ್ಟು ಹೊತ್ತಾ ಗಿಲ್ಲವೆಂದೂ ನಿಶ್ಚಯಿಸಿದ್ದಳು. ಆದರೆ ಈ ನಂಬಿಕೆಯನ್ನು ಬಹಳ ಕಾಲ ಉಳಿಸಿಕೊಳ್ಳಲಾರದೆ, ಅವಳು ಕಿಟಕಿಯ ಬಳಿ ಕುಳಿತು ಕಸೂತಿ ಹೆಣೆಯುತ್ತ ಯಾವುದೋ ಬಗೆಯಲ್ಲಿ ಮನದ ಅಧೈರ್ಯವನ್ನು ಶಾಂತಗೊಳಿಸಲು ಪ್ರಯತ್ನಿ ಸುತ್ತಿದ್ದಳು. ಆ ಬಳಿಕ ಮುಖ ಗಂಭೀರ ಮಾಡಿಕೊಂಡು ರಮೇಶ ಬಂದ— "ತಡವಾದುದಕ್ಕೆ ಕಾರಣವೇನು ?" ಅದಕ್ಕೆ ಯಾವ ಉತ್ತರವನ್ನೂ ಹೇಳ ಲಿಲ್ಲ—ಅದೂ ಮುಂಜಾನೆ ಬರುವ ಮಾತೇ ಇರಲಿಲ್ಲ ಎನ್ನುವಂತೆ.

ಹೇಗೆ ಹೇಗೊ ಹೇಮನಳಿನಿ ಚಹ ಕುಡಿದು ಮುಗಿಸಿದಳು. ಕೋಣೆ ಯೊಳಗೆ ಒಂದು ಅಲಮಾರಿನ ಮೇಲೆ ಕೆಲವು ಪುಸ್ತಕಗಳಿದ್ದವು. ಹೆಚ್ಚು ಪ್ರಯತ್ನದಿಂದ ರಮೇಶನ ಗಮನ ಸೆಳೆಯಲು ಆ ಪುಸ್ತಕಗಳನ್ನು ತೆಗೆದು ಕೊಂಡು ಕೊಠಡಿಯಿಂದ ಹೊರ ಹೊರಡಲು ಯತ್ನಿಸಿದಳು. ಆಗ ರಮೇಶ ಎಚ್ಚರಗೊಂಡ; ಅವನು ಗಡಿಬಿಡಿಯಿಂದ ಹತ್ತಿರಕ್ಕೆ ಬಂದು, "ಅವನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವಿರಿ ? ಇಂದೊಮ್ಮೆ ಪುಸ್ತಕಗಳ ಆಯ್ಕೆ ನಡೆಯಬೇಕಲ್ಲವೆ ?" ಎಂದು ಹೇಳಿದ

ಹೇಮನಳಿನಿಯ ತುಟಿಗಳು ಕಂಪಿಸುತ್ತಿತ್ತು. ಅವಳು ಉಕ್ಕಿಬರುತಿದ್ದ ಕಣ್ಣೀರನ್ನು ಅತಿ ಕಷ್ಟದಿಂದ ತಡೆದುಕೊಳ್ಳುತ್ತ ಕಂಪಿತ ಧ್ವನಿಯಲ್ಲಿ “ ಏನೂ ಬೇಡ, ಪುಸ್ತಕ ಆಯ್ದು ಏನು ಮಾಡಬೇಕು ” ಎಂದಳು.

ಹೀಗೆ ಹೇಳಿ ಅವಳು ವೇಗವಾಗಿ ಹೊರಟುಹೋದಳು. ಮಹಡಿಯ ಮೇಲೆ ಮಲಗುವ ಕೋಣೆಗೆ ಹೋಗಿ ಪುಸ್ತಕಗಳನ್ನು ಮೇಜಿನ ಮೇಲೆ ಹಾಕಿದಳು.

ರಮೇಶನ ಮನಸ್ಸು ಮತ್ತಷ್ಟು ವ್ಯಾಕುಲಗೊಂಡಿತು. ಅಕ್ಷಯ ಒಳಗೊಳಗೆ ನಗುತ್ತ, “ ರಮೇಶಬಾಬು, ನಿಮಗೆ ಪಿತ್ತ ಜಾಸ್ತಿಯಾಗಿದೆಯೆಂದು ತೋರುತ್ತದೆ ” ಎಂದ.

ರಮೇಶ ಇದಕ್ಕೆ ಏನ ಅಸ್ಪಷ್ಟಸ್ವರದಲ್ಲಿ ಉತ್ತರವನ್ನು ಹೇಳಿದನೋ ಸರಿಯಾಗಿ ತಿಳಿಯದು. ಶರೀರದ ವಿಷಯದಿಂದ ಅನ್ನದಾಬಾಬುಗಳು ಉತ್ಸಾಹಗೊಂಡು ಹೇಳಿದರು, “ ನಾನು ರಮೇಶನನ್ನು ನೋಡಿದ ಕೂಡಲೆ ಆ ಮಾತು ಹೇಳಿದೆ. ”

ಅಕ್ಷಯ ಮುಖ ಮುಚ್ಚಿಕೊಂಡು ನಗುನಗುತ್ತ, “ ಶರೀರದ ಕಡೆ ಗಮನ ಕೊಡುವುದನ್ನು ರಮೇಶಬಾಬುಗಳಂಥವರು ಬಹಳ ತುಚ್ಛವೆಂದು ತಿಳಿದಿರಬಹುದು. ಇವರೆಲ್ಲ ಭಾವನಾಜೀವಿಗಳು - ಆಹಾರ ಜೀರ್ಣಿಸುವ ವಿಷಯವನ್ನು ಹೇಳುವುದುಕೂಡ ಅನಾಗರಿಕತೆಯೆಂದು ತಿಳಿಯುವರು ” ಎಂದು ಹೇಳಿದ.

ಅನ್ನದಾಬಾಬುಗಳು ವಿಷಯವನ್ನು ಗಂಭೀರ ಭಾವದಿಂದ ವಿವರಣೆಯೊಡನೆ, ಭಾವಜೀವಿಯಾದವರೂ ಜೀರ್ಣಶಕ್ತಿ ಇರಲೇ ಬೇಕು ಎಂದು ಸ್ಪಷ್ಟಪಡಿಸತೊಡಗಿದರು.

ರಮೇಶ ನೀರವವಾಗಿ ಕುಳಿತು ಮನದಲ್ಲೇ ಕುದಿಯುತಿದ್ದ.

ಅಕ್ಷಯ, “ ರಮೇಶಬಾಬು, ನನ್ನ ಮಾತು ಕೇಳಿ—ಅನ್ನದಾಬಾಬುಗಳ ಮಾತ್ರೆ ತಿಂದು ಸ್ವಲ್ಪ ಹೊತ್ತಿಗೆ ಮುಂಚೆಯೇ ನಿದ್ದೆಮಾಡಿ ” ಎಂದ.

“ ಅನ್ನದಾಬಾಬುಗಳೊಡನೆ ನಾನು ಈ ದಿನ ಸ್ವಲ್ಪ ಮಾತನಾಡುವುದಿದೆ. ಅದಕ್ಕಾಗಿ ನಾನು ನಿರೀಕ್ಷಿಸುತ್ತಿರುವೆ ” ಎಂದ ರಮೇಶ.

ಅಕ್ಷಯ ಕುರ್ಚಿಬಿಟ್ಟು ಏಳುತ್ತ, “ ಹಾಗೇನು, ಈ ವಿಷಯ ಮೊದಲೇ ಹೇಳಬಹುದಾಗಿತ್ತಲ್ಲ. ರಮೇಶ ಬಾಬುಗಳು ಎಲ್ಲ ವಿಷಯವನ್ನೂ ಹೊಟ್ಟೆ

ಯಲ್ಲೇ ಇಟ್ಟುಕೊಳ್ಳುವರು. ಕಡೆಗೆ ಕಾಲಮಿಂಚಿದ ಮೇಲೆ ವ್ಯಾಕುಲ ಪಡುವರು" ಎಂದು ಹೇಳಿದ.

ಅಕ್ಷಯ ಹೊರಟುಹೋದ. ರಮೇಶ ತನ್ನ ಎರಡು ಮೆಟ್ಟುಗಳ ಕಡೆ ದೃಷ್ಟಿಸೆಟ್ಟು ಹೇಳತೊಡಗಿದ, "ಅನ್ನದಾಬಾಬು, ನೀವು ನಿಮ್ಮ ಆಪ್ತನಂತೆ ನಮಗೆ ನಿಮ್ಮ ಮನೆಗೆ ಬಂದು ಹೋಗುವ ಅಧಿಕಾರ ಕೊಟ್ಟಿರುವಿರಿ, ನಾನು ಇದನ್ನು ಪರಮ ಸೌಭಾಗ್ಯವೆಂದು ತಿಳಿದಿರುವೆ, ನಿಮಗದನ್ನು ಮಾತಿನ ಮೂಲಕ ವ್ಯಕ್ತಪಡಿಸಲಾರೆ"

"ಬಹಳ ಚೆನ್ನಾಗಿದೆ, ನೀನು ನಮ್ಮ ಯೋಗೇಂದ್ರನ ಸ್ನೇಹಿತ, ನಿನ್ನನ್ನು ಮನೆಯ ಮಗನ ಹಾಗಲ್ಲದೆ ಹೇಗೆ ತಿಳಿಯ ಬೇಕು" ಎಂದರು ಅನ್ನದಾಬಾಬುಗಳು.

ಸ್ವಲ್ಪ ಹೊತ್ತು ಮೌನ ಆಯಿತು. ಬಳಿಕ ಏನು ಹೇಳಬೇಕು, ಯೋಚಿಸಿದರೂ ರಮೇಶನಿಗೆ ಹೊಳೆಯಲಿಲ್ಲ. ರಮೇಶನ ಭಾರವನ್ನು ಸುಗಮ ಗೊಳಿಸಲು ಅನ್ನದಾಬಾಬುಗಳು, "ರಮೇಶ, ನಿನ್ನಂಥವನನ್ನು ನನ್ನ ಮಗನೆಂದುಕೊಳ್ಳುವುದು ಹೆಮ್ಮೆಯ ವಿಷಯವಲ್ಲವೆ" ಎಂದರು.

ಇಷ್ಟಾದರೂ ರಮೇಶನಿಗೆ ಮಾತು ದೊರೆಯಲಿಲ್ಲ.

ಅನ್ನದಾಬಾಬುಗಳು, "ನೋಡು, ನಿನ್ನ ವಿಷಯವಾಗಿ ಹೊರಗಿನ ಜನರು ಅನೇಕ ಮಾತುಗಳನ್ನು ಹೇಳತೊಡಗಿರುವರು. ಅವರುಗಳು ಹೇಮ ನಳಿನಿಗೆ ಮದುವೆಯ ವಯಸ್ಸಾಗಿದೆ. ಅವಳ ಸ್ನೇಹ ಪರಿಚಯದ ವಿಷಯ ದಲ್ಲಿ ಹೆಚ್ಚು ಜಾಗರೂಕತೆಯಿಂದಿರಬೇಕು ಎನ್ನುವರು. ರಮೇಶನನ್ನು ನಾನು ಚೆನ್ನಾಗಿ ನಂಬುವೆ—ಅವನು ನಮ್ಮ ವಿಷಯದಲ್ಲಿ ಎಂದೂ ಅನ್ಯಾಯ ಮಾಡು ವುದಿಲ್ಲ ಎಂದು ನಾನು ಅವರಿಗೆ ಹೇಳುವೆ" ಎಂದರು.

ರಮೇಶ—ಅನ್ನದಾಬಾಬು, ನನ್ನ ವಿಷಯವೆಲ್ಲ ನಿಮಗೆ ತಿಳಿದಿದೆ. ನೀವು ನನ್ನನ್ನು ಯೋಗ್ಯನೆಂದು ಹೇಳುವುದಾದರೆ, ಆಗ—

ಅನ್ನದಾ—ಆ ವಿಷಯ ಹೇಳಬೇಕಾಗಿಲ್ಲ. ನಾನು ಒಂದು ಬಗೆಯಲ್ಲಿ ತೀರ್ಮಾನಮಾಡಿರುವೆ—ಕೇವಲ ನಿನ್ನ ಸಾಂಸಾರಿಕ ದುರ್ಘಟನೆಗಳಿಂದ ದಿನ ನಿಷ್ಕರ್ಷೆಮಾಡಲಿಲ್ಲ. ನೋಡಪ್ಪ, ಇನ್ನು ತಡಮಾಡುವುದು ಒಳ್ಳೆಯದಲ್ಲ ಸಮಾಜದಲ್ಲಿ ಈ ವಿಷಯವಾಗಿ ನಾನಾ ಮಾತು ಎದ್ದಿದೆ—ಅದನ್ನು ಆದಷ್ಟು ಬೇಗ ನಿಲ್ಲಿಸುವುದು ಮುಖ್ಯ ಏನು ?

ರಮೇಶ—ನೀವು ಹೇಗೆ ಹೇಳಿದರೆ ಹಾಗೆ. ಎಲ್ಲಕ್ಕೂ ಮೊದಲು ನಿಮ್ಮ ಮಗಳ ಅಭಿಪ್ರಾಯ ತಿಳಿಯುವುದು ಅವಶ್ಯಕ.

ಅನ್ನದಾ—ಅದು ಸರಿ, ಅವಳು ಒಂದು ರೀತಿಯಲ್ಲಿ ತಿಳಿಸಿಯೇ ಇರುವಳು. ಆದರೂ ನಾಳೆ ಬೆಳಿಗ್ಗೆ ಆ ಮಾತು ನಿಶ್ಚಯಿಸುವೆ.

ರಮೇಶ—ನೀವು ಮಲಗುವ ಹೊತ್ತು ಮೀರಿದೆ ನಾನು ಇನ್ನು ಹೊರಡಲೆ?

ಅನ್ನದಾ—ಸ್ವಲ್ಪ ನಿಲ್ಲು. ನಾನು ಹೇಳುವುದು, ನಾವು ಜಬ್ಬಲ್ ಪುರಕ್ಕೆ ಹೋಗುವ ಮೊದಲೇ ನಿಮ್ಮ ಮದುವೆ ನಡೆದರೆ, ಆ ಬಳಿಕವೂ ಪ್ರಯಾಣದ ಸಿದ್ಧತೆಗಳು ಎರಡು-ಮೂರು ದಿನ ಅವಕಾಶ ಸಿಗುವುದು. ಇಷ್ಟು ಅವಸರ ಪಡಿಸುತಿರಲಿಲ್ಲ—ಅದರೆ ನನ್ನ ಶರೀರದ ಯೋಚನೆಯಿಂದ—ತಿಳಿಯಿತೆ ರಮೇಶ.

ರಮೇಶ ಸಮ್ಮತಿಸಿದ ಮತ್ತು ಮತ್ತೊಂದು ಮಾತ್ರೆನುಂಗಿ ಮನೆಗೆ ತೆರಳಿದ.

೧೩

ವಿದ್ಯಾಲಯದ ರಜಾ ಸಮಾಪಿಸಿತು. ಬಿಡುವಿನಲ್ಲಿ ಕಮಲೆಯನ್ನು ವಿದ್ಯಾಲಯದಲ್ಲೇ ಇಟ್ಟುಕೊಳ್ಳುವಂತೆ ರಮೇಶ ವ್ಯವಸ್ಥಾಪಕರೊಡನೆ ಮೊದಲೇ ತೀರ್ಮಾನಿಸಿದ್ದ.

ರಮೇಶ ಬೆಳಗಿನ ಜಾವದಲ್ಲೇ ಎದ್ದು ಮೈದಾನದ ನಿರ್ಜನ ಹಾದಿಯಲ್ಲಿ ನಡೆನಡೆಯುತ್ತ, ವಿವಾಹವಾದ ಬಳಿಕ ಹೇಮನಳಿನಿಯೊಡನೆ ಕಮಲೆಯ ವಿಷಯವನ್ನು ಆದ್ಯಂತ ವಿವರಿಸಿ ಹೇಳಬೇಕು ಎಂದು ನಿಶ್ಚಯಿಸಿದ. ಆಮೇಲೆ ಕಮಲೆಗೂ ಎಲ್ಲಾ ಸಂಗತಿಯನ್ನೂ ಹೇಳಲು ಅವಕಾಶವಾಗುವುದು. ಈ ರೀತಿ ಎಲ್ಲಾ ಪಕ್ಷದಲ್ಲೂ ಭಾರ ಇಳಿದರೆ ಕಮಲೆ ಸಂತೋಷದಿಂದ ಗೆಳತಿಯಂತೆ ಹೇಮನಳಿನಿಯ ಜೊತೆ ಇರಬಲ್ಲಳು. ಊರಿನಲ್ಲಿ ಈ ವಿಷಯವಾಗಿ ನಾನಾ ಮಾತುಗಳು ಏಳಬಹುದು, ಎಂದು ಯೋಚಿಸಿ ಅವನು ಹಜಾರಿಬಾಗಿಗೆ ಹೋಗಿ ವಕೀಲಿಯನ್ನು ಆರಂಭಿಸಲು ತೀರ್ಮಾನಿಸಿದ.

ಮೈದಾನದಿಂದ ಹಿಂದಿರುಗಿ ಬಂದು ರಮೇಶ ಅನ್ನದಾಬಾಬುಗಳ

ಮನೆಗೆ ಹೋದ. ಮೆಟ್ಟಿಲ ಮೇಲೆ ಆಕಸ್ಮಿಕವಾಗಿ ಹೇಮನಳಿನಿ ಕಣ್ಣಿಗೆ ಬಿದ್ದಳು. ಇತರ ದಿನಗಳಾಗಿದ್ದಿದ್ದರೆ, ಇಂಥ ಭೇಟಿಯಲ್ಲಿ ಅಲ್ಪ—ಸ್ವಲ್ಪ ಮಾತು ಕತೆ ನಡೆಯುವುದು. ಅಂದು ಹೇಮನಳಿನಿಯ ಮುಖ ಕೆಂಪೇರಿತು —ಆರಕ್ತವರ್ಣದಿಂದ ಒಂದು ನಗುವಿನ ಹೊಳಪು ಉಷೆಯ ಪ್ರಭೆಯಂತೆ ಕಾಂತಿಯುಕ್ತವಾಯಿತು—ಹೇಮನಳಿನಿ ಮುಖ ತಿರುಗಿಸಿಕೊಂಡು ನೆಲ ನೋಡುತ್ತ ವೇಗವಾಗಿ ಹೊರಟು ಹೋದಳು.

ರಮೇಶ ಮನೆಗೆ ಬಂದು ಹಾರ್ಮೋನಿಯಂನಲ್ಲಿ ಹೇಮನಳಿನಿಯ ಬಳಿ ಕಲಿತಿದ್ದ ಸಂಗೀತದ ಗತಿಯನ್ನು ಗಟ್ಟಿಯಾಗಿ ನುಡಿಸಲಾರಂಭಿಸಿದ. ಆದರೆ ಒಂದೇ ಬಗೆಯ ಗತಿಯಿಂದ ಹೊತ್ತು ಹೋಗಲಾರದು. ಕವಿತೆಯ ಪುಸ್ತಕ ಓದಲು ಪ್ರಯತ್ನಿಸಿದ—ತನ್ನ ಪ್ರೀತಿಯ ಗತಿ ಮುಂದುವರಿದಿರುವಷ್ಟು ದೂರ ಕವಿತೆಯು ಬರಲಾರದೆಂದು ಯೋಚಿಸಿದ.

ಅತ್ತ ಹೇಮನಳಿನಿ ದಣಿಯದ ಸಂತೋಷದಿಂದ ತನ್ನ ಮನೆಗೆಲಸ ವನ್ನೆಲ್ಲ ಮುಗಿಸಿ ನಿರ್ಜನವಾದ ಮಧ್ಯಾಹ್ನದಲ್ಲಿ ಬಾಗಿಲು ಮುಚ್ಚಿಕೊಂಡು ತನ್ನ ಕಸೂತಿ ಹಿಡಿದು ಕುಳಿತಿದ್ದಳು. ಮುಖದ ಮೇಲೆ ಒಂದು ಪರಿಪೂರ್ಣ ಪ್ರಸನ್ನತೆಯ ಶಾಂತಿಯಿತ್ತು. ಒಂದು ಸರ್ವಾಂಗ ಸಾರ್ಥಕತೆ ಅವಳನ್ನು ಆವರಿಸಿತ್ತು.

ಚಹದ ವೇಳೆಗಿಂತ ಮೊದಲೇ ಕವಿತೆಯ ಪುಸ್ತಕ ಹಾರ್ಮೋನಿಯಂ ಬಿಸುಟು ಎದ್ದು ರಮೇಶ ಅನ್ನದಾಬಾಬುಗಳ ಮನೆಗೆ ಬಂದ. ಬೇರೆ ದಿನ ಗಳಲ್ಲಿ ಹೇಮನಳಿನಿಯನ್ನು ಕಷ್ಟವಿಲ್ಲದೆ ನೋಡಬಹುದಾಗಿತ್ತು. ಆದರೆ ಇಂದು ಚಹದ ಕೊಠಡಿಯಲ್ಲಿ ನೋಡಿದ, ಅಲ್ಲಿ ಯಾರೂ ಇಲ್ಲ. ಮಹಡಿಯ ಮೇಲೆ ಕುಳಿತುಕೊಳ್ಳುವ ಕೋಣೆಯಲ್ಲಿ ನೋಡಿದ ಅದೂ ಬರಿದು. ಹೇಮ ನಳಿನಿ ತನ್ನ ಶಯನಗೃಹ ಬಿಟ್ಟು ಬಂದಿರಲಿಲ್ಲ.

ಅನ್ನದಾಬಾಬುಗಳು ಹೊತ್ತಿಗೆ ಸರಿಯಾಗಿ ಬಂದು ಚಹದ ಮೇಜಿನ ಮುಂದೆ ಕುಳಿತರು. ಕ್ಷಣಕ್ಷಣಕ್ಕೂ ರಮೇಶ ಹೆದರಿಕೆಯಿಂದ ಬಾಗಿಲ ಕಡೆಗೆ ದೃಷ್ಟಿ ಹೊರಳಿಸುತಿದ್ದ.

ಹೆಜ್ಜೆಯ ಸದ್ದಾಯಿತು, ಆದರೆ ಒಳಕ್ಕೆ ಬಂದದ್ದು ಅಕ್ಷಯ. ಅತಿ ಪ್ರಸನ್ನತೆ ತೋರಿಸುತ್ತ, "ಏನು ರಮೇಶಬಾಬು, ನಾನು ನಿಮ್ಮ ಮನೆಗೆ ಹೋಗಿದ್ದೆ" ಎಂದ.

ಕೇಳಿ ರಮೇಶನ ಮುಖದಲ್ಲಿ ಉದ್ರೇಕದ ಚಿಹ್ನೆ ತಲೆ ಹಾಕಿತು. ಅಕ್ಷಯ್ಯ ನಕ್ಕು, “ಹೆದರಿಕೆ ಏಕೆ ರಮೇಶಬಾಬು, ನಿಮ್ಮನ್ನು ಸ್ವಾಗತಿಸಲು ಹೋಗಿರ ಲಿಲ್ಲ. ಒಳ್ಳೆಯ ಸುದ್ದಿ ಕೇಳಿ ಅಭಿನಂದನೆ ವ್ಯಕ್ತಪಡಿಸುವುದು ನೆಂಟರಿಷ್ಟರ ಕರ್ತವ್ಯ—ಅದನ್ನು ನೆರವೇರಿಸಲು ಹೋಗಿದ್ದೆ.”

ಈ ಮಾತಿನಿಂದ ಹೇಮನಳಿನಿ ಅಲ್ಲಿಗೆ ಬಂದಿಲ್ಲವೆಂದು ಅನ್ನದಾಬಾಬು ಗಳಿಗೆ ತಿಳಿಯಿತು. ಹೇಮನಳಿನಿಯನ್ನು ಕೂಗಿದರು—ಉತ್ತರ ಬಾರದಿರಲು ತಾನೇ ಮಹಡಿಗೆ ಹೋಗಿ, “ಹೇಮ್, ಇವೇನು, ಇನ್ನೂ ಹೊಲಿಗೆಯೆತ್ತಿ ಕೊಂಡು ಕುಳಿತಿರುವೆ? ಚಹ ಸಿದ್ಧವಾಗಿದೆ. ರಮೇಶನೂ ಅಕ್ಷಯನೂ ಬಂದಿರುವರು” ಎಂದು ಹೇಳಿದರು.

ಹೇಮನಳಿನಿ ಮುಖ ತುಸ ಕೆಂಪಗೆ ಮಾಡಿಕೊಂಡು, “ಅಪ್ಪಾ, ನನ್ನ ಚಹವನ್ನು ಇಲ್ಲಿಗೇ ಕಳುಹಿಸಿ ಕೊಡಿ - ಇಂದು ನಾನು ಹೊಲಿಗೆ ಮುಗಿಸ ಬೇಕೆಂದಿರುವೆ” ಎಂದಳು.

ಅನ್ನದಾ—ಅದೇ ನಿನ್ನ ದೋಷ ಹೇಮ್. ಯಾವಾಗ ಯಾವುದು ಹಿಡಿದರೆ ಬೇರೆಯವರ ಕಡೆಗೆ ಗಮನವೇ ಕೊಡುವುದಿಲ್ಲ. ಓದುವ ಕಾಲದಲ್ಲಿ ಪುಸ್ತಕ ತೊಡೆ ಬಿಟ್ಟು ಕೆಳಗೆ ಇಳಿಯುತ್ತಿರಲಿಲ್ಲ. ಈಗ ಹೊಲಿಗೆ ಹಿಡಿದಿರು ವುದರಿಂದ ಉಳಿದದ್ದೆಲ್ಲ ಬೇಡ. ಊಹೂಂ, ಹಾಗೆ ಆಗುವುದಿಲ್ಲ—ನಡೆ, ಕೆಳಕ್ಕೆ ಬಂದು ಚಹ ಕುಡಿಯುವೆಯಂತೆ.

ಹೀಗೆ ಹೇಳಿ ಅನ್ನದಾಬಾಬುಗಳು ಬಲಾತ್ಕಾರಪಡಿಸಿ ಹೇಮನಳಿನಿ ಯನ್ನು ಕೆಳಕ್ಕೆ ಕರೆದುಕೊಂಡು ಬಂದರು—ಅವಳು ಯಾರ ಕಡೆಗೂ ದೃಷ್ಟಿ ಬೀರದೆ ಅವಸರ ಅವಸರವಾಗಿ ಚಹ ಹಂಚುವುದರಲ್ಲಿ ಬಹಳ ಮಗ್ನಳಾದಳು.

ಅನ್ನದಾಬಾಬುಗಳು ಗಾಬರಿಯಿಂದ, “ಹೇಮ್, ಏನು ಮಾಡುತಿರುವೆ? ನನ್ನ ಬಟ್ಟಲಿಗೆ ಸಕ್ಕರೆ ಹಾಕುವೆಯಲ್ಲ. ನಾನು ಎಂದೂ ಸಕ್ಕರೆ ಬೆರಸಿ ಚಹ ಕುಡಿದಿಲ್ಲ” ಎಂದರು.

ಅಕ್ಷಯ ನಸುನಕ್ಕು “ಇಂದು ಅವರು ಧಾರಾಳತೆ ಅಡಗಿಸಲು ಸಾಧ್ಯ ವಾಗದಿರುವರು—ಇಂದು ಎಲ್ಲರಿಗೂ ಸಿಹಿ ಹಂಚುವರು” ಎಂದು ಹೇಳಿದ.

ಹೇಮನಳಿನಿಯ ವಿಷಯವಾಗಿ ಇಂಥ ಗೂಢ ಉಪಹಾಸ ರಮೇಶನಿಗೆ ಮನದಲ್ಲೇ ಅಸಹನೀಯವಾಯಿತು. ಆ ಕೂಡಲೇ ಅವನು, ‘ಏನೇ ಆಗಲಿ,

ಮದುವೆಯಾದ ಬಳಿಕ ಅಕ್ಷಯನೊಡನೆ ಯಾವ ಸಂಪರ್ಕವನ್ನೂ ಇಟ್ಟುಕೊಳ್ಳ ಬಾರದು ' ಎಂದು ನಿಶ್ಚಯಿಸಿದ.

ಇದಾದ ಮೂರು-ನಾಲ್ಕು ದಿನಗಳ ನಂತರ ಒಂದು ದಿನ ಸಂಜೆ ಚಹದ ಮೇಜೆಯ ಮುಂದೆ ಅಕ್ಷಯ ಹೇಳಿದ, " ರಮೇಶಬಾಬು, ನಿಮ್ಮ ಹೆಸರನ್ನಾ ದರೂ ಬದಲಾಯಿಸಿಕೊಳ್ಳಿ ".

ಈ ರಸಿಕತೆಯ ಪ್ರಯತ್ನದಿಂದ ರಮೇಶ ಮತ್ತಷ್ಟು ಬೇಸರಗೊಂಡು, " ಏಕೆಂದು ಹೇಳಿ ನೋಡೋಣ " ಎಂದ

ಅಕ್ಷಯ ಸಮಾಚಾರಪತ್ರಿಕೆ ತೆಗೆಯುತ್ತ " ಇಲ್ಲಿ ನೋಡಿ, ನಿಮ್ಮ ಹೆಸರಿನ ವಿದ್ಯಾರ್ಥಿಯೊಬ್ಬ ತನಗೆ ಬೇರೊಬ್ಬನ ಹೆಸರು ಹೇಳಿಕೊಂಡು ಪರೀಕ್ಷೆಗೆ ಹೋಗಿ ಉತ್ತೀರ್ಣನಾಗಿ, ಕೂಡಲೇ ಸಿಕ್ಕಿಬಿದ್ದಿರುವ " ಎಂದು ಹೇಳಿದ.

ರಮೇಶ ಕೂಡಲೇ ಉತ್ತರ ಕೊಡಬಾರದವ—ಅದರಿಂದಲೇ ಇಷ್ಟು ದಿನಗಳಿಂದ ಅಕ್ಷಯ ರಮೇಶನನ್ನು ನೋಯಿಸುತ್ತ ಬಂದಿರುವ. ಆ ಕಾರಣ ದಿಂದಲೇ ಅವನನ್ನು ಅವಮಾನಗೊಳಿಸುತ್ತ ಬಂದಿರುವ—ಎಂದು ಹೇಮ ನಳಿನಿ ಬಲ್ಲಳು. ಇಂದು ತಡೆಯಲಾರದಾದಳು ಗೂಢ ಕ್ರೋಧದ ಚಿಹ್ನೆ ಯನ್ನು ಅಡಗಿಸಿಕೊಂಡು ಆಕೆ ಹುಸಿ ನಕ್ಕು, " ಅಕ್ಷಯ ಎನ್ನುವ ಕಳ್ಳನೊಬ್ಬ ಜೈಲಿನಲ್ಲಿರುವನೆಂದು ಕೇಳಿದ್ದೇನೆ " ಎಂದಳು

ಅಕ್ಷಯ, " ಅದೇ ನೋಡಿ, ಸ್ವಲ್ಪ ವಿನೋದಕ್ಕೆ ಹೇಳಿದ್ದು ಎಂದರೆ ನೀವು ಕೋಪಿಸಿಕೊಳ್ಳುವಿರಿ ಇನ್ನು ಎಲ್ಲ ವಿವರವನ್ನೂ ತಿಳಿಸಲೇ ? ನನ್ನ ಚಿಕ್ಕ ತಂಗಿ ಶರತ್ಳು ಬಾಲಿಕಾ ವಿದ್ಯಾಲಯಕ್ಕೆ ಓದಲು ಹೋಗುವಳೆಂದು ನಿಮಗೆ ಗೊತ್ತು. ಅವಳು ನಿನ್ನೆ ಸಂಜೆ, " ಅಣ್ಣಾ, ನಿಮ್ಮ ರಮೇಶಬಾಬು ಗಳ ಹೆಂಡತಿ ನಮ್ಮ ಶಾಲೆಯಲ್ಲಿ ಓದುತ್ತಿರುವಳು " ಎಂದು ಹೇಳಿದಳು.

" ಅಯ್ಯೋ ಹುಚ್ಚಿ, ನಮ್ಮ ರಮೇಶಬಾಬುಗಳನ್ನು ಬಿಟ್ಟು ಜಗತ್ತಿನಲ್ಲಿ ಬೇರೆ ರಮೇಶಬಾಬುಗಳೇ ಇಲ್ಲವೇ ? " ಎಂದ ಅಕ್ಷಯ. ಶರತ್ಳು " ಅದೇನೇ ಇರಲಿ, ಅವರು ತಮ್ಮ ಹೆಂಡತಿಯ ವಿಷಯದಲ್ಲಿ ಬಹಳ ಅನ್ಯಾಯ ಮಾಡು ತಿರುವರು. ರಜೆಯಲ್ಲಿ ಪ್ರಾಯಃ ಎಲ್ಲ ಹುಡುಗಿಯರೂ ಮನೆಗೆ ಹೋಗು ವರು— ಅವರು ತಮ್ಮ ಹೆಂಡತಿಯನ್ನು ಬೋರ್ಡಿಂಗ್‌ನಲ್ಲೇ ಇರಿಸಲು ಏರ್ಪಾಡು ಮಾಡಿರುವರು. ಆ ನಿರ್ಭಾಗ್ಯೆ ಅತ್ತೂ ಕರೆದೂ ಗೋಳಾಡು

ತಿರುವಳು" ಎಂದು ಹೇಳಿದಳು. ಆಗ ನನ್ನ ಮನಸಿಗೆ "ಇದಂತೂ ಸರಿಯಾದ ಸಂಗತಿಯಲ್ಲ, ಶರತಳು ತಪ್ಪು ತಿಳಿದುಕೊಂಡಿರುವಂತೆ ಬೇರೆಯವರೂ ತಪ್ಪು ತಿಳಿದುಕೊಳ್ಳಬಹುದು" ಎಂದು ಅನಿಸಿತು.

ಅನ್ನದಾಬಾಬುಗಳು ನಕ್ಕು, "ಅಕ್ಷಯ, ಏನು ನೀನು ಹುಚ್ಚನಂತೆ ಮಾತಾಡುವೆ? ಯಾವುದೋ ರಮೇಶನ ಹೆಂಡತಿ ಶಾಲೆಯಲ್ಲಿ ಓದಿ ಅಳುತ್ತಿರುವಳೆಂದು ನಮ್ಮ ರಮೇಶ ಹೆಸರು ಬದಲಾಯಿಸಿಕೊಳ್ಳಬೇಕೇನು".

ಅಷ್ಟು ಹೊತ್ತಿಗೆ ಇದ್ದಕ್ಕಿದ್ದಂತೆ ವಿವರ್ಣ ಮುಖದೊಡನೆ ರಮೇಶ ಕೊಠಡಿಯಿಂದ ಎದ್ದು ಹೊರಟ. ಅಕ್ಷಯ, "ಇದೇನು ರಮೇಶಬಾಬು, ನೀವು ಕೋಪಿಸಿಕೊಂಡು ಹೋಗುತ್ತಿಲ್ಲವಷ್ಟೆ! ಇಲ್ಲಿ ನೋಡಿ, ನಾನು ನಿಮ್ಮ ವಿಷಯದಲ್ಲಿ ಸಂದೇಹಪಡುತ್ತಿರುವೆನೆಂದು ನೀವು ಮನಸಿನಲ್ಲಿ ಭಾವಿಸಿರುವಿರೇನು"— ಎನ್ನುತ್ತ ರಮೇಶನ ಹಿಂದೆ ಹಿಂದೆಯೇ ಹೊರಟ.

"ಇದೇನು ಸಮಾಚಾರ" ಎಂದರು ಅನ್ನದಾಬಾಬು.

ಹೇಮನಳಿನಿ ಅಳತೊಡಗಿದಳು. ಅನ್ನದಾಬಾಬುಗಳು ದುಗುಡದಿಂದ ಕೇಳಿದರು, "ಏನು ಹೇಮ, ಏಕೆ ಅಳು".

ಅವಳು ಗಟ್ಟಿಯಾಗಿ ಅಳುತ್ತ ಬಿಗಿದ ಧ್ವನಿಯಲ್ಲಿ, "ಅಪ್ಪಾ, ಅಕ್ಷಯ ಬಾಬುಗಳದು ದೊಡ್ಡ ತಪ್ಪು. ಅವರು ನಮ್ಮ ಮನೆಯಲ್ಲಿ ಗೌರವಸ್ಥರನ್ನು ಹೀಗೆ ಅವಮಾನಗೊಳಿಸಬಹುದೆ" ಎಂದಳು.

ಅನ್ನದಾಬಾಬುಗಳು, "ಅಕ್ಷಯ ಹಾಸ್ಯಕ್ಕಾಗಿ ಏನೋ ಒಂದು ಹೇಳಿದರೆ, ಅವಕ್ಕೆ ಇಷ್ಟು ಕೋಪಿಸಿಕೊಳ್ಳಬೇಕೆ" ಎಂದು ಕೇಳಿದರು.

"ಇಂಥ ಹಾಸ್ಯ ಅಸಹನೀಯ"—ಎನ್ನುತ್ತ ಹೇಮನಳಿನಿ ವೇಗವಾಗಿ ಮಹಡಿ ಏರಿ ಹೋದಳು.

ಈ ಬಾರಿ ಕಲ್ಕತ್ತೆಗೆ ಬಂದ ಬಳಿಕ ರಮೇಶ ಬಹಳ ಕಷ್ಟಪಟ್ಟು ಕಮಲೆಯ ಗಂಡನನ್ನು ಪತ್ತೆಮಾಡುತಿದ್ದ. ಅತಿ ಶ್ರಮಪಟ್ಟು ಧೋಬಾಪುಕುರವನ್ನು ತಿಳಿದುಕೊಂಡು ಕಮಲೆಯ ಸೋದರಮಾವ ತಾರಿಣೀಚರಣರಿಗೆ ಒಂದು ಪತ್ರ ಬರೆದ.

ಮೇಲೆ ಹೇಳಿದ ಘಟನೆಯ ಮರುದಿನ ಬೆಳಗ್ಗೆ ರಮೇಶನಿಗೆ ಆ ಪತ್ರಕ್ಕೆ ಉತ್ತರ ಬಂತು. ತಾರಿಣೀಚರಣರು ಬರೆದಿದ್ದರು—ಆಕಸ್ಮಿಕ ಘಟನೆಯ ನಂತರ ತಮ್ಮ ಅಳಿಯ ಶ್ರೀಯುತ ನಳಿನಾಕ್ಷನ ಸುದ್ದಿಯೇ ತಿಳಿಯಲಿಲ್ಲ.

ರಂಗಪುರದಲ್ಲಿ ಅವರು ಡಾಕ್ಟರಾಗಿದ್ದರು. ಅಲ್ಲಿಯೂ ಇಂದಿನವರೆಗೆ ಯಾರಿಗೂ ಅವರ ವಿಷಯವೇ ತಿಳಿಯದೆಂದು ತಾರಿಣೀಚರಣರು ಪತ್ರ ಬರೆದು ಅರಿತು ಕೊಂಡಿದ್ದರು. ಅವರ ಜನ್ಮಸ್ಥಳ ಯಾವುದೆಂದು ತಾರಿಣೀಚರಣರಿಗೆ ತಿಳಿಯದು.

ಕಮಲೆಯ ಪತಿ ನಳಿನಾಕ್ಷ ಬದುಕಿರುವನೆಂಬ ಆಸೆ ಅಂದು ರಮೇಶನ ಮನದಿಂದ ದೂರವಾಯಿತು.

ಬೆಳಗ್ಗೆ ಇನ್ನೂ ಅನೇಕ ಪತ್ರಗಳು ರಮೇಶನ ಕೈಸೇರಿದುವು. ಮದು ವೆಯ ಸುದ್ದಿ ಕೇಳಿ ಅವನ ಹಲವು ಗೆಳೆಯರು ಅವನಿಗೆ ಅಭಿನಂದನ ಪತ್ರ ಬರೆದಿದ್ದರು. ಕೆಲವರು ಊಟದ ಅಧಿಕಾರ ಸೂಚಿಸಿದ್ದರು. ಕೆಲವರು ಇಷ್ಟು ದಿನಗಳವರೆಗೆ ವಿಷಯವನ್ನು ಗುಟ್ಟಾಗಿಟ್ಟಿದ್ದುದಕ್ಕಾಗಿ ರಮೇಶನನ್ನು ಕೌತುಕದೊಡನೆ ತಿರಸ್ಕರಿಸಿದ್ದರು.

ಇಂಥ ಹೊತ್ತಿನಲ್ಲಿ ಅನ್ನದಾಬಾಬುಗಳ ಮನೆಯ ಸೇವಕ ಒಂದು ಕಾಗದ ತಂದು ರಮೇಶನ ಕೈಗೆ ಕೊಟ್ಟ. ಕೈಬರಹ ನೋಡಿ ರಮೇಶನ ಹೃದಯ ಒಳಗೇ ದಡಗುಟ್ಟಿತು.

ಹೇಮನಳಿನಿಯ ಕಾಗದ. ರಮೇಶ ತನಗೆ ತಾನೆ, "ಅಕ್ಷಯನ ಮಾತು ಕೇಳಿ ಹೇಮನಳಿನಿಯ ಮನಸಿಗೆ ಸಂದೇಹ ಬಂದಿರಬಹುದು. ಮತ್ತು ಅದನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿಯೇ ಅವಳು ತನಗೆ ಪತ್ರ ಬರೆದಿರು ವಳು" ಎಂದುಕೊಂಡ.

ಕಾಗದ ಬಿಚ್ಚಿನೋಡಿದ, ಅದರಲ್ಲಿ ಕೇವಲ ಕೆಲವೇ ಮಾತುಗಳು ಬರೆದಿದ್ದುವು—

ಅಕ್ಷಯಬಾಬು ನಿನ್ನೆ ನಿಮ್ಮ ವಿಷಯದಲ್ಲಿ ಬಹಳ ಅನ್ಯಾಯ ಮಾಡಿರು ವರು. ನೀವು ಇಂದು ಬೆಳಗ್ಗೆ ಬರುವರೆಂದು ತಿಳಿದಿದ್ದೆ. ಏಕೆ ಬರಲಿಲ್ಲ? ಅಕ್ಷಯಬಾಬುಗಳ ಮಾತನ್ನು ಈ ರೀತಿ ನೀವು ಮನಸ್ಸಿಗೆ ತೆಗೆದುಕೊಳ್ಳು ವುದೇಕೆ? ನಾನು ಅವರ ಮಾತು ನಂಬುವುದಿಲ್ಲವೆಂದು ನೀವು ಬಲ್ಲಿರಿ. ಇಂದು ನೀವು ಹೊತ್ತಿಗೆ ಮುಂಚೆಯೇ ಬರಬೇಕು—ಇಂದು ನಾನು ಕಸೂತಿ ಹಾಕುವು ದಿಲ್ಲ".

ಈ ಕೆಲವು ಮಾತುಗಳಲ್ಲಿ ಹೇಮನಳಿನಿಯ ಸಹಾನುಭೂತಿಯ ಅಮೃತ ಪರಿಪೂರ್ಣ ಕೋಮಲ ಹೃದಯದ ದುಃಖವನ್ನು ಅನುಭವಿಸಿ ರಮೇಶನ

ಕಣ್ಣುಗಳಲ್ಲಿ ನೀರೂರಿತು. ನಿನ್ನೆಯಿಂದಲೇ ಹೇಮನಳಿನಿ ರಮೇಶನ ವೇದನೆಯನ್ನು ಶಾಂತಗೊಳಿಸಲು ಉದ್ವಿಗ್ನಮನದೊಡನೆ ನಿರೀಕ್ಷಿಸುತ್ತಿರುವಳು. ಈ ರೀತಿ ರಾತ್ರಿ ಕಳೆದಿದೆ. ಹೀಗೆಯೇ ಬೆಳಗ್ಗೆ ಕಳೆದಿದೆ. ಕಡೆಗೆ ತಡೆಯಲಾರದೆ ಈ ಕಾಗದ ಬರೆದಿರುವಳು ಎಂದು ರಮೇಶ ತಿಳಿದುಕೊಂಡ.

ರಮೇಶ ನಿನ್ನೆಯಿಂದಲೇ ಆಲೋಚಿಸಿದ್ದ. ಇನ್ನು ನಿಧಾನಿಸದೆ ಹೇಮನಳಿನಿಗೆ ಎಲ್ಲ ವಿಷಯವನ್ನು ವಿವರವಾಗಿ ತಿಳಿಸಬೇಕಾದುದು ಅಗತ್ಯ. ಆದರೆ ನಿನ್ನೆಯ ಪ್ರಸಂಗದ ಬಳಿಕ ಹೇಳುವುದು ಕಷ್ಟವಾಗಿದೆ. ಏನು! ತಪ್ಪು ಬಹಿರಂಗವಾಯಿತೆಂದು ಮಾತುಕತೆಗೆ ಆರಂಭಿಸುತ್ತಿದ್ದೇನೋ ಎಂದು ಕೇಳಬಹುದು. ಅಷ್ಟೇ ಅಲ್ಲ. ಅಕ್ಷಯನ ಮಾತು ಗೆಲ್ಲುವುದು, ಇದಂತೂ ಸಹಿಸಲಸಾಧ್ಯ.

"ಕಮಲೆಯ ಗಂಡ ಇನ್ನೊಬ್ಬ ರಮೇಶ, ಖಂಡಿತವಾಗಿಯೂ ಅಕ್ಷಯ ಹೀಗೆ ತಿಳಿದುಕೊಂಡಿರುವ - ಇಲ್ಲದಿದ್ದರೆ ಅವನು ಇಷ್ಟು ಹೇಳಿ ಸುಮ್ಮನಿರುತ್ತಿರಲಿಲ್ಲ. ಕೇರಿಯಲ್ಲೆಲ್ಲ ಗೊಂದಲ ಎಬ್ಬಿಸಿ ತಿರುಗುತ್ತಿದ್ದ. ಆದುದರಿಂದ ಈಗಲೇ ಯಾವುದಾದರೊಂದು ಉಪಾಯ ಹುಡುಕಬೇಕು" ಎಂದು ರಮೇಶ ಆಲೋಚಿಸತೊಡಗಿದ.

ಈ ಹೊತ್ತಿಗೆ ಮತ್ತೊಂದು ಅಂಚೆಯ ಪತ್ರ ಬಂತು. ರಮೇಶ ಬಿಚ್ಚಿ ನೋಡಿದ. ಆ ಕಾಗದ ಸ್ತ್ರೀ ವಿದ್ಯಾಲಯದ ವ್ಯವಸ್ಥಾಪಕರಿಂದ ಬಂದದ್ದು. ಅವರು ಬರೆದಿದ್ದರು, "ಕಮಲ ಬಹಳ ತಲ್ಲಣಿಸುತ್ತಿರುವಳು. ಅವಳನ್ನು ಈ ಸ್ಥಿತಿಯಲ್ಲಿ ರಜದಲ್ಲಿ ವಿದ್ಯಾಲಯದ ಬೋರ್ಡಿಂಗ್‌ನಲ್ಲಿ ಇಟ್ಟುಕೊಳ್ಳುವುದು ಸರಿಯಲ್ಲವೆಂದು ನನ್ನ ಭಾವನೆ. ಬರುವ ಶನಿವಾರದಿಂದ ರಜ ಬರುವುದು. ಅಷ್ಟು ಹೊತ್ತಿಗೆ ಅವಳನ್ನು ವಿದ್ಯಾಲಯದಿಂದ ಮನೆಗೆ ಕರೆದುಕೊಂಡು ಹೋಗಲು ಸಿದ್ಧತೆಮಾಡುವುದು ಅತಿ ಅಗತ್ಯ."

ಮುಂದಿನ ಶನಿವಾರ ಕಮಲೆಯನ್ನು ವಿದ್ಯಾಲಯದಿಂದ ಕರೆತರಬೇಕು. ಬರುವ ಭಾನುವಾರ ರಮೇಶನ ಮದುವೆ.

"ರಮೇಶ ಬಾಬು, ನನ್ನನ್ನು ಕ್ಷಮಿಸಬೇಕು"–ಹೀಗೆ ಹೇಳುತ್ತ ಅಕ್ಷಯ ಮನೆಯೊಳಕ್ಕೆ ಬಂದ. "ಇಂಥ ಒಂದು ಸಣ್ಣ ಹಾಸ್ಯಕ್ಕೆ ನೀವು ಇಷ್ಟು ಕೋಪಿಸಿಕೊಳ್ಳುವಿರಿ ಎಂದು ಮೊದಲೇ ತಿಳಿದಿದ್ದರೆ ನಾನು ಆ ಮಾತೇ ಆಡುತ್ತಿರಲಿಲ್ಲ" ಎಂದ. ಹಾಸ್ಯದಲ್ಲಿ ಸ್ವಲ್ಪ ನಿಜಾಂಶವಿದ್ದರೂ ಜನ ಎದ್ದು

ಹೋಗುವರು. ಆದರೆ ಎಲ್ಲ ಸುಳ್ಳು, ಅದಕ್ಕಾಗಿ ನೀವು ಎಲ್ಲರೆದುರಿಗೆ ಹೀಗೆ ಕೋಪಿಸಿಕೊಂಡಿದ್ದು ಸರಿಯೇ? ಅನ್ನದಾಬಾಬುಗಳಾದರೋ ನಿನ್ನೆಯಿಂದ ನನ್ನನ್ನು ಬೈಯುತಿರುವರು—ಹೇಮನಳಿನಿ ನನ್ನೊಡನೆ ಮಾತು ನಿಲ್ಲಿಸಿರುವಳು. ಇಂದು ಬೆಳಿಗ್ಗೆ ಅವರಲ್ಲಿಗೆ ಹೋಗಿದ್ದೆ. ಅವಳು ಕೋಣೆಯಿಂದ ಹೊರಕ್ಕೆ ನಡೆದಳು. ನಾನು ಇಂಥ ಅಪರಾಧವನ್ನೇನು ಮಾಡಿದೆ ಹೇಳ ನೋಡೋಣ"

ರಮೇಶ, "ಈ ಎಲ್ಲ ಚರ್ಚೆಯೂ ಸಮಯೋಚಿತವಾಗಿ ತಿಳಿಯುವುದು ಈಗ ನನ್ನನ್ನು ಕ್ಷಮಿಸಬೇಕು. ನನಗೆ ಒಂದು ಮುಖ್ಯ ಕೆಲಸವಿದೆ" ಎಂದ.

ಅಕ್ಷಯ "ಓಲಗದವರಿಗೆ ಮುಂಗಡ ಕೊಡಲು ಹೊರಟಿದ್ದಿರೆಂದು ತೋರುವುದು. ಈಗ ಹೊತ್ತಾಗಿರಬಹುದು. ನಾನು ನಿಮ್ಮ ಒಳ್ಳೆಯ ಕೆಲಸಕ್ಕೆ ಅಡ್ಡಿ ಬರುವುದಿಲ್ಲ. ಹೊರಟೆ".

ಅಕ್ಷಯ ಹೊರಟುಹೋದ. ರಮೇಶ ಅನ್ನದಾಬಾಬುಗಳ ಮನೆಗೆ ಬಂದು ಸೇರಿದ. ಮನೆಗೆ ಬರುತಿದ್ದಂತೆಯೇ ಹೇಮನಳಿನಿಯೊಡನೆ ಅವನ ಭೇಟಿಯಾಯಿತು. ಇಂದು ರಮೇಶ ಹೊತ್ತಿಗೆ ಮುಂಚೆಯೇ ಬರುವನು, ಹೀಗೆಂದು ನಿಶ್ಚಯಿಸಿಕೊಂಡು ಹೇಮನಳಿನಿ ಎದುರು ನೋಡುತ್ತ ಕುಳಿತಿದ್ದಳು. ಅವಳ ಕಸೂತಿಯ ಸಾಮಗ್ರಿ ಒಟ್ಟಾಗಿ ಕರವಸ್ತ್ರದಲ್ಲಿ ಕಟ್ಟಿಟ್ಟು ಮೇಜಿನ ಮೇಲೆ ಇಡಲಾಗಿತ್ತು. ಪಕ್ಕದಲ್ಲಿ ಹಾರ್ಮೋನಿಯಂ ಇತ್ತು. ಇಂದು ಸಂಗೀತದ ಅಭ್ಯಾಸ ಸ್ವಲ್ಪ ನಡೆಯಬಹುದೆಂದು ಅವಳ ಆಸೆಯಿತ್ತು. ಅದಲ್ಲದೆ ಅವ್ಯಕ್ತ ಸಂಗೀತವೂ ಇತ್ತಷ್ಟೆ!

ರಮೇಶ ಮನೆಯೊಳಕ್ಕೆ ಬರುತ್ತಲೆ ಹೇಮನಳಿನಿಯ ಮುಖದಲ್ಲಿ ಒಂದು ಉಜ್ವಲ—ಕೋಮಲ ಕಾಂತಿ ಹೊಳೆಯಿತು. ಆದರೆ ಆ ಕಾಂತಿ ಕ್ಷಣ ಹೊತ್ತಿನಲ್ಲಿ ಕಳೆಗುಂದಿತು. ಆಗ ರಮೇಶ ಯಾವ ಮಾತೂ ಆಡದೆ ಪ್ರಶ್ನಿಸಿದ. "ಅನ್ನದಾಬಾಬುಗಳೆಲ್ಲಿ?".

"ಅವರು ಮಲಗುವ ಕೋಣೆಯಲ್ಲಿರುವರು. ಏಕೆ? ಅವರನ್ನು ಈಗಲೇ ನೋಡಬೇಕೆ? ಅವರು ಚಹಾ ಕುಡಿಯುವ ವೇಳೆಗೆ ಇಳಿದು ಬರುವರು" ಎಂದು ಹೇಮನಳಿನಿ ಉತ್ತರ ಹೇಳಿದಳು.

ರಮೇಶ—ಇಲ್ಲ, ನನಗೆ ಬಹಳ ಅವಶ್ಯಕತೆಯಿದೆ; ತಡವಾಗುವುದು ಒಳ್ಳೆಯದಲ್ಲ.

ಹೇಮನಳಿನಿ—ಆದರೆ ಹೋಗಿ, ಅವರು ಕೊಠಡಿಯಲ್ಲೇ ಇರುವರು.

ರಮೇಶ ಹೊರಟು ಹೋದ. ಆವಶ್ಯಕತೆಯಿದೆ! ಜಗತ್ತಿನಲ್ಲಿ ಆವಶ್ಯಕತೆಗೆ ಕೇವಲ ಕಾರಣವಿಲ್ಲವೆ? ಪ್ರೀತಿ ಮಾತ್ರ ಬಾಗಿಲ ಹೊರಗಡೆ ಹೊತ್ತು ಕಾಯುತ್ತ ಕುಳಿತಿರಬೇಕೆ?

ಶರತ್ಕಾಲದ ಆ ಮಸುಕಾದ ದಿನ ನಿಟ್ಟುಸಿರುಬಿಟ್ಟು ತನ್ನ ಆನಂದಭಂಡಾರದ ಚಿನ್ನದ ಹೆಬ್ಬಾಗಿಲನ್ನು ಮುಚ್ಚಿಬಿಟ್ಟಿತು. ಹೇಮನಳಿನಿ ಹಾರ್ಮೋನಿಯಂ ಹತ್ತಿರದಿಂದ ಕುರ್ಚಿ ಸರಿಸಿಕೊಂಡು ಮೇಜೆಯ ಬಳಿ ಕುಳಿತು ಒಮ್ಮನದಿಂದ ಹೊಲಿಯತೊಡಗಿದಳು. ಸೂಜಿ ಚುಚ್ಚಲಾರಂಭಿಸಿದಳು. ಕೇವಲ ಹೊರಗೆ ಮಾತ್ರವಲ್ಲ. ಒಳಗೂ. ರಮೇಶನ ಆವಶ್ಯಕತೆ ಬೇಗ ಮುಗಿಯಲಿಲ್ಲ.

ಆವಶ್ಯಕತೆ ರಾಜನಂತೆ ತನ್ನಎಲ್ಲ ಸಮಯವನ್ನು ತೆಗೆದು ಕೊಳ್ಳುವುದು–ಆದರೆ ಪ್ರೀತಿ ಭಿಕಾರಿ.

೧೪

ರಮೇಶ ಅನ್ನದಾಬಾಬುಗಳ ಕೋಣೆಯನ್ನು ಪ್ರವೇಶಿಸಿದ. ಆಗ ಅನ್ನದಾಬಾಬುಗಳು ಸಮಾಚಾರ ಪತ್ರಿಕೆಯನ್ನು ಮುಖದ ಮೇಲೆ ಹಾಕಿಕೊಂಡು ಆರಾಮ ಕುರ್ಚಿಯಲ್ಲಿ ಮಲಗಿ ನಿದ್ದೆಮಾಡುತಿದ್ದರು. ರಮೇಶ ಕೋಣೆಯೊಳಕ್ಕೆ ಬಂದು ಕೆಮ್ಮುತ್ತಲೇ, ಅವರು ಗಾಬರಿಯಿಂದೆದ್ದು ಪತ್ರಿಕೆಯನ್ನು ಎತ್ತಿಹಿಡಿಯುತ್ತ "ನೋಡಿದೆಯ ರಮೇಶ್, ಈ ಬಾರಿ ಕಾಲರಾ ವ್ಯಾಧಿಯಲ್ಲಿ ಎಷ್ಟು ಜನ ಸತ್ತಿರುವರು" ಎಂದು ಹೇಳಿದರು.

"ಈಗ ಮದುವೆಯನ್ನು ಕೆಲವು ದಿನಗಳಿಗಾಗಿ ಮುಂದಕ್ಕೆ ಹಾಕಬೇಕು —ನನಗೆ ಮುಖ್ಯ ಕೆಲಸವಿದೆ" ಎಂದ ರಮೇಶ.

ಅನ್ನದಾಬಾಬುಗಳ ಬಾಯಿಂದ ನಗರದ ಜನರ ಮರಣದ ಪಟ್ಟಿಯ ವಿವರಣೆ ಒಮ್ಮೆಗೆ ನಿಂತುಹೋಯಿತು. ಕ್ಷಣಕಾಲ ರಮೇಶನ ಮುಖದಕಡೆ ನೋಡುತ್ತ "ಸಮಾಚಾರವೇನು ರಮೇಶ್! ಲಗ್ನಪತ್ರಿಕೆಯಾಗಿದೆಯಲ್ಲ" ಎಂದರು.

"ಈ ಭಾನುವಾರದ ಮುಂದಿನ ಭಾನುವಾರಕ್ಕೆ ದಿನವನ್ನು ತಿದ್ದಿ ಇಂದೇ ಪತ್ರಿಕೆಯನ್ನು ಸರಿಪಡಿಸಬೇಕು" ಎಂದ ರಮೇಶ.

ಅನ್ನದಾ—ರಮೇಶ, ನೀನು ನನ್ನನ್ನು ಗಾಬರಿಗೊಳಿಸುತಿರುವೆ. ಇದೇನು ವ್ಯವಹಾರ? ನಿನ್ನ ಅನುಕೂಲದಂತೆ ನೀನು ದಿನ ತಿದ್ದಿ ಸರಿಪಡಿಸಬಹುದು. ನಿನ್ನ ಕೆಲಸವೇನು; ಕೇಳಬಹುದೆ.

ರಮೇಶ—ಅದು ಅತಿ ಮುಖ್ಯವಾದ ಕೆಲಸ, ಸಾವಕಾಶ ಮಾಡುವುದು ಒಳ್ಳೆಯದಲ್ಲ.

ಅನ್ನದಾಬಾಬುಗಳು ಗಾಳಿಗೆ ಮುರಿದು ಬಿದ್ದ ಬಾಳೆಯ ಗಿಡದಂತೆ ಕುರ್ಚಿಯ ಮೇಲೆ ಒರಗಿಕೊಂಡು ದೊಪ್ಪನೆ ಬಿದ್ದರು—"ವಿಳಂಬ ಮಾಡಿದರೆ ನಡೆಯದು, ಒಳ್ಳೆಯ ಮಾತು, ಬಹಳ ಒಳ್ಳೆಯ ವಿಷಯ. ಈಗ ನಿನ್ನ ಇಷ್ಟದಂತೆ ಮಾಡು. ಆಹ್ವಾನವನ್ನು ಬದಲಾಯಿಸುವ ಏರ್ಪಾಡು ನಿನಗೆ ತೋರಿದಂತೆ ಮಾಡು. ಜನ ನನ್ನನ್ನು ಕೇಳಿದರೆ, ನಾನು ಅದೆಲ್ಲಾ ನನಗೆ ತಿಳಿಯದೆಂದು ಹೇಳುವೆ—ಅದರ ವಿಷಯವೆಲ್ಲ ಅವನೇ ಬಲ್ಲ. ಅವರಿಗೆ ಅನುಕೂಲವಾದಾಗ ಅವರೇ ಹೇಳುವರು" ಎನ್ನುವೆ.

ರಮೇಶ ಉತ್ತರ ಹೇಳದೆ ತಲೆ ತಗ್ಗಿಸಿಕುಳಿತಿದ್ದ. ಅನ್ನದಾಬಾಬುಗಳು, "ಹೇಮನಳಿನಿಗೆ ಈ ವಿಷಯವೆಲ್ಲಾ ಹೇಳಿರುವೆಯಾ? ಎಂದರು.

ರಮೇಶ— ಇಲ್ಲ, ಅವಳಿಗೆ ಇನ್ನೂಗೊತ್ತಿಲ್ಲ.

ಅನ್ನದಾ—ಅವಳೂ ತಿಳಿಯುವುದು ಅಗತ್ಯ. ನಿನಗೊಬ್ಬನಿಗೆ ಅಲ್ಲವಲ್ಲ ಮದುವೆ.

ರಮೇಶ—ನಿಮಗೆ ಹೇಳಿದ ಬಳಿಕ ಅವಳಿಗೆ ಹೇಳುವುದೆಂದು ನಿಶ್ಚಯಿಸಿದ್ದೆ.

ಅನ್ನದಾಬಾಬುಗಳು, "ಹೇಮ್, ಹೇಮ್" ಎಂದು ಕೂಗಿದರು. ಹೇಮನಳಿನಿ ಕೊಠಡಿಯನ್ನು ಹೊಕ್ಕು, "ಏನಪ್ಪಾ" ಎಂದಳು.

ಅನ್ನದಾ—ರಮೇಶ ಹೇಳುತಿರುವನು, ಇವನಿಗೆ ಒಂದು ಮುಖ್ಯ ಕೆಲಸವಿದೆಯಂತೆ. ಈಗ ತನಗೆ ಮದುವೆಯಾಗಲು ಅವಕಾಶವಿಲ್ಲ ಎಂದು.

ಹೇಮನಳಿನಿ ಒಮ್ಮೆ ವಿವರ್ಣಮುಖದೊಡನೆ ರಮೇಶನ ಮುಖ ನೋಡಿದಳು. ರಮೇಶ ಅಪರಾಧಿಯಂತೆ ನಿರುತ್ತರನಾಗಿ ಕುಳಿತಿದ್ದ.

ಈ ವಿಷಯ ಹೇಮನಳಿನಿಯ ಮೇಲೆ ಇಷ್ಟು ಪರಿಣಾಮವನ್ನುಂಟು ಮಾಡುವುದೆಂದು ರಮೇಶ ನಿರೀಕ್ಷಿಸಿರಲಿಲ್ಲ. ಆಕಸ್ಮಿಕ ಅಪ್ರಿಯವಾರ್ತೆ ಅತಿ ಸರಳ ಸ್ವಭಾವದ ಹೇಮನಳಿನಿಯನ್ನು ಈ ರೀತಿ ಮರ್ಮಾಂತಿಕವಾಗಿ ಗಾಯಗೊಳಿಸಿತು. ರಮೇಶ ಅದನ್ನು ತನ್ನ ನೊಂದ ಅಂತಃಕರಣದಲ್ಲಿ ಸಂಪೂರ್ಣವಾಗಿ ಅನುಭವಿಸಿದ. ಆದರೆ. ಒಮ್ಮೆ ಬಿಟ್ಟ ಬಾಣ, ಹಿಂದಕ್ಕೆ ಬರು

ವಂತಿಲ್ಲ—ಆ ಹರಿತವಾದ ಬಾಣ ಹೇಮನಳಿನಿಯ ಹೃದಯದಲ್ಲಿ ಸರಿಯಾಗಿ ನಟ್ಟ ನಡುವೆ ಹೋಗಿ ನಾಟಿದೆ ಎಂದು ರಮೇಶನಿಗೆ ಸ್ಪಷ್ಟವಾಗಿ ತಿಳಿಯಿತು.

ಈ ವಿಷಯವನ್ನು ಬೇರೆ ಯಾವ ರೀತಿಯಲ್ಲೂ ಶಾಂತಗೊಳಿಸುವಂತಿಲ್ಲ ಎಲ್ಲವೂ ಸತ್ಯವೇ—ಮದುವೆಯನ್ನು ಈಗ ಮುಂದಕ್ಕೆ ಹಾಕಬೇಕು, ರಮೇಶನಿಗೆ ಅತಿ ಮುಖ್ಯ ಕೆಲಸವೂ ಇದೆ, ಅದೇನು ಎಂದು ಹೇಳಲು ಅವನಿಗೆ ಇಷ್ಟವಿಲ್ಲ. ಅಂದ ಮೇಲೆ ಈ ವಿಷಯದಲ್ಲಿ ಹೊಸದಾಗಿ ಏನನ್ನು ಹೇಳಬಹುದು.

ಅನ್ನದಾಬಾಬುಗಳು ಹೇಮನಳಿನಿಯಕಡೆ ನೋಡುತ್ತ, "ಕೆಲಸ ನಿಮ್ಮದು, ಈಗ ಇದರ ವಿಚಾರವನ್ನು ನೀವೇ ಇತ್ಯರ್ಥಮಾಡಬೇಕು" ಎಂದರು.

ಹೇಮನಳಿನಿ ಮುಖ ಕೆಳಕ್ಕೆ ಮಾಡಿಕೊಂಡು ಹೇಳಿದಳು, "ಅಪ್ಪಾ ಈ ವಿಷಯವಾಗಿ ನನಗೇನೂ ತಿಳಿಯದು"—ಹೀಗೆಂದು ದಟ್ಟವಾದ ಮೋಡದಲ್ಲಿ ಸೂರ್ಯಾಸ್ತದ ಮಸುಕು ಪ್ರಕಾಶ ಹೇಗೋ ಹಾಗೆ ಮುಖ ಮಾಡಿಕೊಂಡು ಹೊರಟು ಹೋದಳು.

ಅನ್ನದಾಬಾಬುಗಳು ಸಮಾಚಾರ ಪತ್ರಿಕೆಯನ್ನು ಮುಖದ ಹತ್ತಿರ ಹಿಡಿದುಕೊಂಡು ಓದುವವರಂತೆ ನಟಿಸುತ್ತ ಆಲೋಚಿಸಲಾರಂಭಿಸಿದರು. ರಮೇಶ ಮೌನವಾಗಿ ಕುಳಿತಿದ್ದ.

ಇದ್ದಕ್ಕಿದ್ದಂತೆ ರಮೇಶ ಒಮ್ಮೆ ಬೆಚ್ಚಿದವನಂತೆ ಎದ್ದು ಹೊರಟುಹೋದ ಕುಳಿತುಕೊಳ್ಳುವ ಮುಖ್ಯ ಕೊಠಡಿಗೆ ಹೋಗಿ ನೋಡಿದ. ಹೇಮನಳಿನಿ ಕಿಟಕಿಯಬಳಿ ಸುಮ್ಮನೆ ನಿಂತಿರುವಳು. ಅವಳ ನೋಟಕ್ಕೆ ಕಾಣುತಿದ್ದುದು ಮುಂಬರುವ ಪೂಜೆಯ ರಜದ ಕಲ್ಕತ್ತ, ತುಂಬಿ ಬರುವ ನದಿಯಂತೆ ಅದರ ಎಲ್ಲ ಹಾದಿ-ಬೀದಿಗಳ ಹೆಚ್ಚಿದ ಜನ ಪ್ರವಾಹದಿಂದ ಚಂಚಲ-ಕೋಲಾಹಲ ದೊಡನೆ ಕೂಡಿರುವುದು.

ರಮೇಶ ಒಮ್ಮೆಗೇ ಅವಳ ಬಳಿಗೆ ಹೋಗಲು ಹಿಂಜರಿದ. ಹಿಂದುಗಡೆಯಿಂದ ಸ್ವಲ್ಪಹೊತ್ತು ನೆಟ್ಟ ನೋಟದಿಂದ ಅವಳನ್ನು ನೋಡಲಾರಂಭಿಸಿದ. ಶರತ್ಕಾಲದ ಮಧ್ಯಾಹ್ನದ-ಬಿಸಿಲಿನಲ್ಲಿ ಕಿಟಕಿಯ ಬಳಿ ಕುಳಿತಿದ್ದ ಆ ಗಂಭೀರ ಮೂರ್ತಿ ರಮೇಶನ ಹೃದಯದಲ್ಲಿ ಒಂದು ಚಿರಸ್ಥಾಯಿಯಾದ ಚಿತ್ರ ಚಿತ್ರಿಸಿತು.

ಆ ಸುಕುಮಾರ ಕಪೋಲದ ಒಂದಂಶ, ಆ ಪ್ರಯತ್ನಪೂರ್ವಕವಾಗಿ ರಚಿಸಿಕೊಂಡ ತುರುಬಿನ ಭಂಗಿ, ಆ ಕತ್ತಿನ ಮೇಲಿನ ಕೋಮಲ ವಿರಳ ಕೇಶ ರಾಶಿ, ಅದರ ಕೆಳಗೆ ಚಿನ್ನದ ಸರದ ಅಲ್ಪಸ್ವಲ್ಪ ಹೊಳೆಪು, ಎಡ ಭುಜದ ಮೇಲುಗಡೆಯಿಂದ ಇಳಿಬಿದ್ದಿದ್ದ ಸೆರಗಿನ ವಕ್ರಭಾಗ, ಎಲ್ಲವೂ ರೇಖೆರೇಖೆ ಯಾಗಿ ಅವನ ನೊಂದ ಹೃದಯವನ್ನು ಕೊರೆಯುತ್ತ ಕೊರೆಯುತ್ತ ಪ್ರವೇಶಿಸಿತು.

ರಮೇಶ ಮೆಲ್ಲಮೆಲ್ಲನೆ ಹೇಮನಳಿನಿಯ ಹತ್ತಿರ ಬಂದು ನಿಂತ. ರಮೇಶನಿಗಿಂತ ರಸ್ತೆಯ ಜನ ಸಮೂಹ ಹೇಮನಳಿನಿಗೆ ಅತಿ ಕೌತುಕವಾಗಿ ಕಾಣತೊಡಗಿತು. ರಮೇಶ ಕಣ್ಣೀರಿನಿಂದ ಬಿಗಿದ ಧ್ವನಿಯಲ್ಲಿ ಹೇಳಿದ, " ನಿಮ್ಮ ಬಳಿ ನನ್ನದೊಂದು ಭಿಕ್ಷೆಯಿದೆ ".

ರಮೇಶನ ಕಂಠಸ್ವರದಲ್ಲಿ ಉದ್ವೇಗವೇದನೆಯ ನೋವನ್ನನುಭವಿಸಿ ಮುಹೂರ್ತಮಾತ್ರದಲ್ಲಿ ಹೇಮನಳಿನಿ ಮುಖ ತಿರುಗಿಸಿಕೊಂಡು ಬಂದಳು. " ನೀನು ನನ್ನಲ್ಲಿ ಅಪನಂಬಿಕೆ ಪಡಬೇಡ " ಎಂದ ರಮೇಶ. ಇಂದೇ ರಮೇಶ ಮೊದಮೊದಲನೆಯದಾಗಿ ಹೇಮನಳಿನಿಯನ್ನು " ನೀನು " ಎಂದದ್ದು. " ನೀನು ನನ್ನಲ್ಲಿ ಎಂದೆಂದೂ ಅಪನಂಬಿಕೆ ಪಡುವುದಿಲ್ಲವೆಂದು ನನಗೆ ಹೇಳು. ನಾನೂ ಅಂತರಂಗದಲ್ಲಿ ಅಂತರ್ಯಾಮಿಯನ್ನು ಸಾಕ್ಷಿಯಾಗಿ ಇಟ್ಟುಕೊಂಡು ಹೇಳುತ್ತಿರುವೆ, ನಿನ್ನ ಬಳಿ ಎಂದೆಂದೂ ನಾನು ಅಪನಂಬಿಕಸ್ಥನಾಗುವುದಿಲ್ಲ ". ಇದಕ್ಕೆ ಹೆಚ್ಚಾಗಿ ರಮೇಶನಿಂದ ಮಾತನಾಡಲಾಗಲಿಲ್ಲ. ಕಣ್ಣುಗಳಲ್ಲಿ ಕಣ್ಣೀರು ಕಾಣಿಸಿತು. ಆಗ ಹೇಮನಳಿನಿ ತನ್ನ ಎರಡು ಸ್ನಿಗ್ಧ ಕರುಣ ದೃಷ್ಟಿಗಳಿಂದಲೂ ರಮೇಶನ ಮುಖ ನೋಡತೊಡಗಿದಳು. ಆ ಕೂಡಲೇ ಹೊರಟ ಕಣ್ಣೀರು ಕೋಡಿ ಹೇಮನಳಿನಿಯ ಎರಡು ಕೆನ್ನೆಗಳನ್ನೂ ನೆನೆಸುತ್ತ ಕೆಳಕ್ಕೆ ಬೀಳಲಾರಂಭಿಸಿತು. ನೋಡನೋಡುತ್ತ ಆ ಮರೆಯಾದ ವಾತಾಯನದ ಕೆಳಗೆ ಇಬ್ಬರ ನಡುವೆ ಒಂದು ಮಾತಿಲ್ಲದ ಶಾಂತಿ ಮತ್ತು ಸಹಾನುಭೂತಿಯ ಸ್ವರ್ಗದೃಶ್ಯ ಸೃಷ್ಟಿಯಾಯಿತು.

ಕ್ಷಣ ಕಾಲ ಈ ಕಣ್ಣೀರು ಸುರಿಯುವ ಸುಗಭೀರ ಮೌನದಲ್ಲಿ ಹೃದಯ ಮನಗಳನ್ನು ಸ್ಥಿರವಾಗಿಟ್ಟು ಒಂದು ವಿಶ್ರಾಂತಿ ನಿಟ್ಟುಸಿರು ಬಿಟ್ಟು ರಮೇಶ, " ನಾನು ಏತಕ್ಕಾಗಿ ಈಗ ಮದುವೆಯನ್ನು ಒಂದು ವಾರ ಮುಂದೆ ಹಾಕಿರುವೆ, ಅದರ ಕಾರಣವನ್ನು ನೀನು ತಿಳಿದುಕೊಳ್ಳಬೇಕೆ ? ಎಂದು ಕೇಳಿದ.

ಅದನ್ನು ತಿಳಿದುಕೊಳ್ಳಬೇಕಾಗಿಲ್ಲ—ಎಂದು ಹೇಮನಳಿನಿ ಮೌನದಿಂದ ತಲೆಯಲ್ಲಾಡಿಸಿದಳು.

"ಮದುವೆಯಾದ ಬಳಿಕ ನಾನು ನಿನಗೆ ಎಲ್ಲ ಸಂಗತಿಯನ್ನೂ ವಿವರಿಸುವೆ" ಎಂದ ರಮೇಶ.

ಈ ಮಾತಿನಿಂದ ಹೇಮನಳಿನಿಯ ಕೆನ್ನೆಗಳು ಸ್ವಲ್ಪ ಕೆಂಪೇರಿದುವು. ಇಂದು ಊಟ ಮುಗಿದ ಬಳಿಕ ಹೇಮನಳಿನಿ ರಮೇಶನನ್ನು ಸಂಧಿಸುವ ಆಶೆಯಲ್ಲಿ ಉತ್ಸುಕ ಮನದ ನಡುವೆ ಅವಳು ಅನೇಕ ಹಾಸ್ಯಾಲಾಪಗಳನ್ನೂ, ಹಲವು ಗೂಢ ಪ್ರಶ್ನೋತ್ತರಗಳನ್ನೂ ಸಿದ್ಧಪಡಿಸಿಕೊಳ್ಳುತ್ತಿದ್ದಳು, ಕೆಲವು ಸಣ್ಣ-ಪುಟ್ಟ ಸುಖ ಚಿತ್ರಗಳನ್ನೂ ಕಲ್ಪನೆಯ ಮೂಲಕ ಸೃಷ್ಟಿಸಿಕೊಂಡಿದ್ದಳು. ಆದರೆ ಈ ಅಲ್ಪ ಕ್ಷಣದಲ್ಲಿ ಇಬ್ಬರ ಹೃದಯದಲ್ಲೂ ವಿಶ್ವಾಸದ ಸೂತ್ರ ಬದಲಾಯಿಸಿತು, ಮಾತು-ಕತೆ ನಡೆಯಲಿಲ್ಲ. ಸ್ವಲ್ಪ ಹೊತ್ತು ಇಬ್ಬರೂ ಪಕ್ಕಪಕ್ಕದಲ್ಲಿ ನಿಂತಿದ್ದರು—ಇವರ ಗುಪ್ತ ಆನಂದ, ಇವರ ಗಭೀರ ಶಾಂತಿ, ಇವರ ಪ್ರೇಮ ಸಮಾಧಾನಗಳನ್ನು ಕಲ್ಪಿಸಿಕೊಳ್ಳುವುದೂ ಅಸಾಧ್ಯ.

ಹೇಮನಳಿನಿ, "ನೀವು ಒಮ್ಮೆ ತಂದೆಯ ಹತ್ತಿರ ಹೋಗಿ. ಅವರು ಬೇಸರಗೊಂಡಿರಬಹುದು" ಎಂದಳು.

ರಮೇಶ ಪ್ರಫುಲ್ಲಮನದೊಡನೆ ಜಗತ್ತಿನ ದೊಡ್ಡ-ಪುಟ್ಟ ನೋವು ಬೇಸರಗಳನ್ನು ಎದುರಿಸಲು ಹೊರಟುಹೋದ.

೧೫

ರಮೇಶ ಪುನಃ ತಮ್ಮ ಕೊಠಡಿಯೊಳಕ್ಕೆ ಬರುತಿರುವುದನ್ನು ನೋಡಿ ಅನ್ನದಾಬಾಬುಗಳು ಉದ್ವಿಗ್ನಭಾವದಿಂದ ಅವನ ಮುಖ ನೋಡಿದರು.

ರಮೇಶ, "ಆಹ್ವಾನಿತರ ಪಟ್ಟಿಯನ್ನು ನನ್ನ ಕೈಗೆ ಕೊಟ್ಟರೆ, ದಿನ ಬದಲಾಯಿಸಿ ಕಾಗದವನ್ನು ಇಂದೇ ಕಳುಹಿಸಬಹುದು" ಎಂದು ಹೇಳಿದ.

ಅನ್ನದಾಬಾಬುಗಳು, "ಅಂದರೆ ದಿನಬದಲಾಯಿಸುವುದೇ ತೀರ್ಮಾನವಾಯಿತೇ ?" ಎಂದು ಕೇಳಿದರು.

"ಹೌದು, ಇದಲ್ಲದೆ ಬೇರೆ ಮಾರ್ಗವೇ ತೋರದು" ಎಂದ ರಮೇಶ.

ಅನ್ನದಾಬಾಬುಗಳು ಹೇಳಿದರು, "ನೋಡಪ್ಪ, ಹಾಗಾದರೆ ನಾನು ಇದಕ್ಕೆ ಬರುವುದಿಲ್ಲ. ಏನೇನು ವ್ಯವಸ್ಥೆ ಮಾಡಬೇಕೋ ನೀನೇ ಮಾಡು. ನನಗೆ ಜನ ನಗುವಂತಾಗಬಾರದು. ಮದುವೆ ಕೆಲಸವನ್ನು ನಿನ್ನ ಇಷ್ಟದಂತೆ

ಹುಡುಗಾಟವೆಂದು ತಿಳಿಯುವುದಾದರೆ, ನನ್ನಂಥ ವಯಸ್ಕರು ಇದಕ್ಕೆ ಪ್ರವೇಶಿಸದಿರುವುದು ಒಳ್ಳೆಯದು. ಇದೋ ನಿಮ್ಮ ಆಹ್ವಾನಿತರ ಪಟ್ಟಿ ತೆಗೆದುಕೋ. ಈ ಮಧ್ಯೆ ನಾನು ಎಷ್ಟು ರೂಪಾಯಿ ವೆಚ್ಚಮಾಡಿರುವೆನೋ ಅದರಲ್ಲಿ ಬಹಳ ನಷ್ಟವಾಗುವುದು. ಹೀಗೆ ಬಾರಿಬಾರಿಗೂ ರೂಪಾಯಿ ಸುರಿಯುವುದೆಂದರೆ ನನ್ನಿಂದ ಸಾಧ್ಯವಿಲ್ಲ ".

ಎಲ್ಲ ವೆಚ್ಚವನ್ನೂ ಸಿದ್ಧತೆಗಳ ಭಾರವನ್ನೂ ರಮೇಶ ತಾನೇ ವಹಿಸಿಕೊಳ್ಳಲು ಸಮ್ಮತಿಸಿದ. ಅವನು ಏಳಲು ಹವಣಿಸುತಿದ್ದಾಗ ಅನ್ನದಾಬಾಬುಗಳು, " ರಮೇಶ, ಮದುವೆಯಾದ ಬಳಿಕ ನೀನು ಎಲ್ಲಿ ವಕೀಲಿಯನ್ನು ಆರಂಭಿಸುವೆ ? ಏನಾದರೂ ನಿಶ್ಚಯಿಸಿರುವೆಯಾ ? ಕಲ್ಕತ್ತೆಯಲ್ಲಲ್ಲವೆ ?" ಎಂದು ಕೇಳಿದರು.

" ಇಲ್ಲ, ಪಶ್ಚಿಮ ಪ್ರಾಂತದಲ್ಲಿ ಒಂದು ಒಳ್ಳೆಯ ಸ್ಥಳದಲ್ಲಿ ಏರ್ಪಾಡು ಮಾಡುತಿರುವೆ " ಎಂದ ರಮೇಶ.

ಅನ್ನದಾಬಾಬು—ಅದೇ ಒಳ್ಳೆಯದು. ಪಶ್ಚಿಮವೇ ಸರಿ. ಎಟಾವಾ ಇದೆಯಲ್ಲ. ಅಂತಹ ಸಾಮಾನ್ಯ ಸ್ಥಳವಲ್ಲ. ಅಲ್ಲಿಯ ನೀರು ಜೀರ್ಣ ಶಕ್ತಿಗೆ ಬಹಳ ಉತ್ತಮ—ಅಲ್ಲಿ ನಾನು ಒಂದು ತಿಂಗಳಿದ್ದೆ—ಆ ಒಂದು ತಿಂಗಳಲ್ಲಿ ನನ್ನ ಆಹಾರದ ಪರಿಮಾಣ ದ್ವಿಗುಣವಾಯಿತು. ನೋಡಪ್ಪ, ಪ್ರಪಂಚದಲ್ಲಿ ನನಗಿರುವುದು ಇವಳೊಬ್ಬಳೇ ಮಗಳು—ನಾನು ಯಾವಾಗಲೂ ಅವಳ ಬಳಿ ಇರದಿದ್ದರೆ ಅವಳಿಗೆ ಸಂತೋಷವೇ ಇರದು. ನನಗೂ ನಿಶ್ಚಿಂತ ನಾಗಿರಲು ಸಾಧ್ಯವಿಲ್ಲ. ನೀನು ಒಂದು ಆರೋಗ್ಯಕರ ಸ್ಥಳದಲ್ಲಿ ಇರಬೇಕೆಂಬುದೇ ನನ್ನ ಆಸೆ.

ಅನ್ನದಾಬಾಬುಗಳು ರಮೇಶನ ಒಂದು ಅಪರಾಧದ ಅವಕಾಶ ಪಡೆದುಕೊಂಡು ಆ ಸದವಕಾಶದಲ್ಲಿ ತಮ್ಮ ದೊಡ್ಡ ದೊಡ್ಡ ಕೋರಿಕೆಗಳನ್ನು ಮುಂದಿಡಲಾರಂಭಿಸಿದರು. ಆ ವೇಳೆಯಲ್ಲಿ ಅವರು ರಮೇಶನಿಗೆ ಎಟಾವಾ ಎಂದು ಹೇಳದೆ ಗಾರೋ ಅಥವಾ ಚಿರಾಪುಂಜಿಯ ವಿಷಯ ಹೇಳಿದ್ದರೂ ಅವನು ಕೂಡಲೇ ಸಮ್ಮತಿಸುತಿದ್ದ. " ಅವನು ಹೇಳಿದ, ಹೇಗೆ ಹೇಳಿದರೆ ಹಾಗೆ, ನಾನು ಎಟಾವಾದಲ್ಲೇ ವಕೀಲಿ ನಡೆಸುವೆ "— ಹೀಗೆಂದು ರಮೇಶ ಕರೆಯೋಲೆ ತಿದ್ದಿ ಕಳುಹಿಸುವ ಕಾರ್ಯಭಾರ ವಹಿಸಿಕೊಂಡು ತೆರಳಿದ.

ಸ್ವಲ್ಪಹೊತ್ತಿನ ನಂತರ ಅಕ್ಷಯ ಕೊಠಡಿಯೊಳಕ್ಕೆ ಬರುತ್ತಲೇ ಅನ್ನದಾ ಬಾಬುಗಳು ಹೇಳಿದರು, "ರಮೇಶ ತನ್ನ ಮದುವೆಯ ದಿನವನ್ನು ಒಂದು ವಾರ ಮುಂದಕ್ಕೆ ಹಾಕಿರುವನು".

ಅಕ್ಷಯ—ಉಹೊಂ, ನೀವು ಹೇಳುತ್ತಿರುವುದೇನು. ಅದು ಎಂದಿಗಾದರೂ ಸಾಧ್ಯವೆ. ನಾಡಿದ್ದು ಮದುವೆ.

ಅನ್ನದಾ—ಹಾಗೆ ನಡೆಯದಿದ್ದರೆ ಚೆನ್ನಾಗಿತ್ತು. ಸಾಧಾರಣ ಜನರಿಗೆ ಹಾಗೆ ನಡೆಯದು. ಆದರೆ ಇತ್ತೀಚೆಗೆ ನೀನು ನೋಡಿರುವ ಪ್ರಸಂಗಗಳಿಂದ ಎಲ್ಲವೂ ಸಾಧ್ಯ.

ಅಕ್ಷಯ ಮುಖ ಬಹಳ ಗಂಭೀರವಮಾಡಿಕೊಂಡು ಆಡಂಬರದೊಡನೆ ಆಲೋಚಿಸ ತೊಡಗಿದ. ಕ್ಷಣ ಕಾಲದ ಬಳಿಕ, "ನೀವು ಒಂದೇ ಸಲಕ್ಕೆ ಯಾರನ್ನು ಸತ್ಪಾತ್ರ ಎಂದು ಹೇಳುವಿರೋ, ಅವರ ವಿಷಯದಲ್ಲಿ ಎರಡು ಕಣ್ಣೂ ಇಟ್ಟಿರಬೇಕು. ಜೀವಾವಧಿ ಹುಡುಗಿಯನ್ನು ಯಾರ ವಶಕ್ಕೆ ಒಪ್ಪಿಸುವಿರೋ ಅವರ ವಿಷಯವನ್ನು ಚೆನ್ನಾಗಿ ವಿಚಾರಿಸಿ ತಿಳಿಯುವುದು ಉಚಿತ. ಅವರು ಸ್ವರ್ಗದೇವತೆಯಾದರೂ ಸರಿ, ಸ್ವಲ್ಪ ನಿಧಾನಿಸಿದರೆ ನಷ್ಟವೇನೂ ಇಲ್ಲ" ಎಂದ.

ಅನ್ನದಾ—ರಮೇಶನಂಥ ಹುಡುಗನಲ್ಲೂ ಸಂಶಯಪಡುವುದಾದರೆ ಜಗತ್ತಿನಲ್ಲಿ ಯಾರೊಡನೆಯೂ ಯಾವ ಸಂಬಂಧವನ್ನೂ ಇಡಲಾಗುವುದಿಲ್ಲ.

ಅಕ್ಷಯ—ಒಳ್ಳೆಯದು. ದಿನ ಬದಲಾಯಿಸಿರುವರಲ್ಲ, ರಮೇಶಬಾಬು, ಅದರ ಕಾರಣ ಹೇಳಿದರೆ ?

ಅನ್ನದಾಬಾಬುಗಳ ಕೈಯಿಂದ ತಲೆ ಸವರಿಕೊಳ್ಳುತ್ತ "ಇಲ್ಲ, ಯಾವ ಕಾರಣವನ್ನೂ ಹೇಳಲಿಲ್ಲ—ಪ್ರಶ್ನಿಸಿದ್ದಕ್ಕೆ ಮುಖ್ಯ ಕೆಲಸವಿದೆ ಅಂದ" ಎಂದು ತಿಳಿಸಿದರು.

ಅಕ್ಷಯ ಮುಖ ತಿರುಗಿಸಿಕೊಂಡು ಸ್ವಲ್ಪ ನಕ್ಕು. ಬಳಿಕ, "ಬಹುಶಃ ನಿಮ್ಮ ಮಗಳ ಹತ್ತಿರ ರಮೇಶಬಾಬು ಖಂಡಿತವಾಗಿಯೂ ಕಾರಣ ಹೇಳಿರ ಬಹುದಲ್ಲವೆ" ಎಂದ.

ಅನ್ನದಾಬಾಬು—ಇರಬಹುದು.

ಅಕ್ಷಯ—ಒಮ್ಮೆ ಅವಳನ್ನು ಕರೆದು ಕೇಳುವುದು ಒಳ್ಳೆಯದಲ್ಲವೆ? "ಸರಿಯಾಗಿ ಹೇಳಿದೆ—" ಎಂದು ಹೇಳಿ ಅನ್ನದಾಬಾಬುಗಳು ಗಟ್ಟಿಯಾಗಿ

ಹೇಮನಳಿನಿಯನ್ನು ಕೂಗಿದರು. ಹೇಮನಳಿನಿ ಕೊಠಡಿಯನ್ನು ಪ್ರವೇಶಿಸಿ ಅಕ್ಷಯನನ್ನು ನೋಡಿ ಅಕ್ಷಯನಿಗೆ ತನ್ನ ಮುಖ ಕಾಣಿಸದಂತೆ ತನ್ನ ತಂದೆಯ ಹತ್ತಿರ ನಿಂತುಕೊಂಡಳು.

ಅನ್ನದಾಬಾಬುಗಳು ಪ್ರಶ್ನಿಸಿದರು, " ಇದ್ದಕ್ಕಿದ್ದಂತೆ ಮದುವೆಯ ದಿನ ಬದಲಾಯಿಸಿದೆ. ರಮೇಶ ಅದರ ಕಾರಣವನ್ನೇನಾದರೂ ನಿನಗೆ ಹೇಳಿ ರುವನೆ " ?

ಹೇಮನಳಿನಿ ಮೈ ಅಲುಗಿಸುತ್ತ " ಇಲ್ಲ " ಎಂದಳು.

ಅನ್ನದಾಬಾಬು—ನೀನು ಅವನನ್ನು ಕಾರಣ ಕೇಳಲಿಲ್ಲವೆ ?

ಹೇಮನಳಿನಿ—ಇಲ್ಲ.

ಅನ್ನದಾ—ಆಶ್ಚರ್ಯವಾದ ಸಂಗತಿ. ರಮೇಶ ಹೇಗೋ ನೀನು ಹಾಗೆಯೇ, " ನನ್ನ ಮದುವೆಗೆ ಅವಕಾಶವಿಲ್ಲ " ಎಂದು ಬಂದು ಹೇಳಿದ—ಬಹಳ ಒಳ್ಳೆಯದು, ಇನ್ನೊಂದು ದಿನ ನಡೆಯಲಿ ಎಂದು ನೀನು ಹೇಳಿದೆ· ಸಾಕು, ಇನ್ನು ಯಾವ ಮಾತು ಕತೆಯೂ ಇಲ್ಲ.

ಅಕ್ಷಯ ಹೇಮನಳಿನಿಯ ಪಕ್ಷವಹಿಸುತ್ತ ಹೇಳಿದ, ಒಬ್ಬರು ಯಾವಾಗ ಕಾರಣವನ್ನು ಗುಟ್ಟು ಮಾಡಿರುವರೋ, ಆಗ ಆ ವಿಷಯವಾಗಿ ಅವರನ್ನು ಪ್ರಶ್ನಿಸಿದರೆ ಚೆನ್ನಾಗಿರುವುದೆ ? ಹೇಳುವಹಾಗಿದ್ದರೆ, ರಮೇಶಬಾಬು ತಾವಾ ಗಿಯೇ ಹೇಳುತಿದ್ದರು.

ಹೇಮನಳಿನಿಯ ಮುಖ ಕೆಂಪೇರಿತು. ಅವಳು, " ಈ ವಿಷಯವಾಗಿ ನಾನು ಹೊರಗಿನ ಜನರಿಂದ ಯಾವ ಮಾತನ್ನೂ ಕೇಳಲು ಇಷ್ಟಪಡುವುದಿಲ್ಲ. ಏನು ನಡೆದಿದೆಯೋ ಅದರಿಂದ ನನ್ನ ಮನಸ್ಸಿಗೆ ಯಾವ ದುಃಖವೂ ಇಲ್ಲ " ಎಂದಳು.

ಹೀಗೆಹೇಳಿ ಹೇಮನಳಿನಿ ವೇಗವಾಗಿ ಕೊಠಡಿಯಿಂದಹೊರಟುಹೋದಳು. ಅಕ್ಷಯ ಬಣ್ಣಗೆಟ್ಟ ನಗು ಬರುಮಾಡಿಕೊಳ್ಳುತ್ತ ಹೇಳಿದ, "ಜಗತ್ತಿನಲ್ಲಿ ಆಪ್ತರ ಬಳಿಯಲ್ಲೇ ಹೆಚ್ಚು ತಿರಸ್ಕಾರ ಒಳ್ಳೆಯದೇ. ಅದರಿಂದಲೇ ನಾನು ಅತಿ ಯಾಗಿ ಗೆಳೆತನದ ಗೌರವ ಅನುಭವಿಸುವೆ. ನೀವುಗಳು ನನ್ನನ್ನು ಕಡೆಗಣಿಸಿ ಅಥವಾ ಬೈಯಿರಿ, ರಮೇಶನಲ್ಲಿ ನಂಬಿಕೆ ಇಡದಿರುವುದೇ ನನ್ನ ಗೆಳತನದ ಕರ್ತವ್ಯ ಎಂದು ತಿಳಿದಿರುವೆ. ಎಲ್ಲಿ ನಿಮಗೆ ವಿಪತ್ತು ಸಂಭವಿಸುವುದೆಂದು ಕಾಣುವುದೋ, ಅಲ್ಲಿ ನಾನು ಸಂದೇಹ ಪಡದೆ ಇರಲಾರೆ—ನನ್ನಲ್ಲಿ ಇನ್ನೊಂದು

ಕೆಟ್ಟ ದೌರ್ಬಲ್ಯ—ಇದನ್ನು ನಾನು ಒಪ್ಪಿಕೊಳ್ಳಲೇ ಬೇಕು. ಏನೇ ಆಗಲಿ-ನಾಳೆಯೇ ಯೋಗೇನ ಬರುವ. ಅವನು ಇದನ್ನೆಲ್ಲ ನೋಡಿ—ಕೇಳಿ ತನ್ನ ತಂಗಿಯ ವಿಷಯದಲ್ಲಿ ನಿಶ್ಚಿಂತನಾಗಿರುವುದಾದರೆ, ಆಗ ನಾನು ಈ ವಿಷಯವಾಗಿ ಯಾವ ಮಾತೂ ಆಡುವುದಿಲ್ಲ".

ರಮೇಶನ ವ್ಯವಹಾರದ ವಿಷಯವಾಗಿ ಪ್ರಶ್ನೆಮಾಡುವ ಕಾಲ ಒದಗಿದೆ, ಈ ಮಾತು ಅನ್ನದಾಬಾಬುಗಳಿಗೆ ತಿಳಿಯಲಿಲ್ಲವೆಂದಲ್ಲ—ಆದರೆ ಯಾವುದು ಅಗೋಚರವೋ, ಅದನ್ನು ಪ್ರಯತ್ನ ಪೂರ್ವಕವಾಗಿ ಕೆದಕಿದರೆ ಅದರೊಳಗಿಂದ ಒಮ್ಮೆಗೆ ಒಂದು ವಿಷ ಉತ್ಪತ್ತಿಯಾಗ ಬಹುದೆಂದು ಅವರು ಸ್ವಾಭಾವಿಕವಾಗಿ ಅದರಲ್ಲಿ ಯಾವ ಉತ್ಸುಕತೆಯನ್ನೂ ತೋರಲಿಲ್ಲ.

ಅವರು ಅಕ್ಷಯನ ಮೇಲೆ ಕೋಪಿಸಿಕೊಂಡರು. ಅವರು ಹೇಳಿದರು "ಅಕ್ಷಯ, ನಿನ್ನದು ಅತಿ ಸಂದಿಗ್ಧ ಸ್ವಭಾವ. ಸಿದ್ಧಾಂತ ಮಾಡವೆ ನೀನು—".

ಅಕ್ಷಯ ತನ್ನನ್ನು ಶಾಂತಗೊಳಿಸಿಕೊಳ್ಳಬಲ್ಲನಾದರೂ, ಮೇಲಿಂದ ಮೇಲೆ ಬರುತಿದ್ದ ಮಾತಿನ ಮೂಲಕ ಅವನ ಧೈರ್ಯ ಚಲಿಸಿತು. ಅವನು ಉದ್ರೇಕಗೊಳ್ಳುತ್ತ ಹೇಳಿದ, "ನೋಡಿ ಅನ್ನದಾಬಾಬು, ನನ್ನಲ್ಲಿ ಅನೇಕ ದೋಷವಿದೆ. ನಾನು ಯೋಗ್ಯರನ್ನು ದ್ವೇಷಿಸುವೆ. ನಾನು ಒಳ್ಳೆಯವರಲ್ಲಿ ಸಂದೇಹಗೊಳ್ಳುವೆ, ಕುಟುಂಬಸ್ಥರ ಹುಡುಗಿಯರಿಗೆ ಫಿಲಾಸಫಿ ಕಲಿಸುವ ಶಕ್ತಿ ನನಗಿಲ್ಲ. ಅವರೊಡನೆ ಕಾವ್ಯಾಲೋಚನೆ ನಡೆಸುವ ಸಾಮರ್ಥ್ಯವೂ ನನಗಿಲ್ಲ—ನಾನು ಸಾಮಾನ್ಯ ಹತ್ತು ಮಂದಿಯ ನಡುವೆ ಗಣ್ಯ—ಆದರೆ ಬಹಳ ಕಾಲದಿಂದ ನಾನು ನಿಮ್ಮಲ್ಲಿ ವಿಶ್ವಾಸವಿಟ್ಟಿರುವೆ, ನಿಮ್ಮನ್ನು ಹಿಂಬಾಲಿಸುವೆ. ನಾನು ರಮೇಶಬಾಬುಗಳ ಸರಿದೂಗುವುದಿಲ್ಲ—ಆದರೆ ಒಂದೇ ಒಂದು ಹೆಮ್ಮೆ ನನಗಿದೆ. ನಿಮ್ಮ ಹತ್ತಿರ ನಾನು ಯಾವುದನ್ನೂ ಮರೆ ಮಾಚುವುದಿಲ್ಲ. ನಿಮ್ಮ ಹತ್ತಿರ ನನ್ನ ಸಮಸ್ತ ದೈನ್ಯವನ್ನೂ ವ್ಯಕ್ತಪಡಿಸಿ ನಾನು ಭಿಕ್ಷೆಬೇಡಬಲ್ಲೆ. ಆದರೆ ಕನ್ನಹಾಕಿ ಕದಿಯುವುದು ನನ್ನ ಸ್ವಭಾವವಲ್ಲ.

ಈ ಮಾತಿನ ಅರ್ಥವೇನು? ಅದನ್ನು ನಾಳೆಯೇ ತಿಳಿಯಬಹುದು.

೧೬

ಕಾಗದ ತಿದ್ದುವುದರಲ್ಲಿ ರಾತ್ರಿಯಾಯಿತು. ರಮೇಶ ಮಲಗಲು ಹೋದ ಆದರೆ ನಿದ್ದೆ ಬರಲಿಲ್ಲ. ಅವನ ಮನದೊಳಗೆ ಗಂಗಾ ಯಮುನೆಯಂತೆ

ಬಿಳುಪು—ಕಪ್ಪು ಬಣ್ಣಗಳೆರಡರ ಚಿಂತಾಧಾರೆ ಪ್ರವಹಿಸುತಿತ್ತು—ಎರಡರ ಕಲ್ಲೋಲ ಒಂದೆಡೆಗೆ ಸೇರಿ ಅವನ ವಿಶ್ರಾಂತಿಯನ್ನು ಮಾತಿಗೆಳೆಯುತಿತ್ತು.

ಸ್ವಲ್ಪಕಾಲ ಹೊರಳಾಡಿ ಅವನು ಎದ್ದು ಕುಳಿತ. ಕಿಟಕಿಯ ಬಳಿ ನಿಂತು ನೋಡಿದ. ಅವರ ಜನಹೀನ ಬೀದಿಯ ಒಂದು ಕಡೆ ಮನೆಗಳ ನೆರಳು, ಮತ್ತೊಂದು ಕಡೆ ಬೆಳದಿಂಗಳ ಗುರುತು.

ರಮೇಶ ಸ್ತಬ್ಧನಾಗಿನಿಂತಿದ್ದ. ಯಾವುದು ನಿತ್ಯ, ಯಾವುದು ಶಾಂತಿ, ಯಾವುದು ವಿಶ್ವವ್ಯಾಪಿ, ಯಾವುದರಲ್ಲಿ ದ್ವಂದ್ವವಿಲ್ಲ, ದ್ವೇಷವಿಲ್ಲ—ಅದರಲ್ಲಿ ರಮೇಶನ ಸಮಸ್ತ ಅಂತಃಪ್ರಕೃತಿಯೂ ಕರಗಿ ಹೆಚ್ಚಾಗಿ ವ್ಯಾಪಿಸಿಕೊಂಡಿತು.

ಯಾವ ಶಬ್ದಹೀನ ಸೀಮಾಹೀನ ಮಹಾಲೋಕದ ಮರೆಯಿಂದ ಚಿರಕಾಲದಿಂದ ಹುಟ್ಟುಸಾವುಗಳು. ದುಡಿಮೆ ಮತ್ತು ಬಿಡುವು, ಮೊದಲು ಮತ್ತು ಕೊನೆ, ಯಾವುದೋ ಕೇಳದ ಸಂಗೀತದ ಅಪರೂಪ ತಾಳಕ್ಕೆ ಜಗತ್ ನಾಟ್ಯಶಾಲೆಯ ಮಧ್ಯವನ್ನು ಪ್ರವೇಶಿಸುತಿತ್ತೊ, ಅದೇ ನೆರಳು ಬೆಳಕುಗಳ ಅತೀತ ದೇಶದಿಂದ ನರನಾರಿಯರ ಸ್ಪಂದ ಪ್ರೇಮವನ್ನು ಈ ನಕ್ಷತ್ರ ಪ್ರಕಾಶದ ವಿಶ್ವದ ನಡುವೆ ಆವಿರ್ಭೂತವಾಗುತ್ತಿರುವಂತೆ ರಮೇಶ ನೋಡಿದ.

ಆಗ ರಮೇಶ ಮೆಲ್ಲಮೆಲ್ಲನೆ ಮಾಳಿಗೆ ಏರಿ ಬಂದ. ಅನ್ನದಾಬಾಬುಗಳ ಮನೆಯ ಕಡೆ ನೋಡಿದ. ಎಲ್ಲವೂ ನಿಸ್ತಬ್ಧ. ಮನೆಯ ಗೋಡೆಯ ಮೇಲೆ ಛಾವಣೀಕೆಳಗೆ, ಕಿಟಕಿ—ಬಾಗಿಲುಗಳ ಕೆತ್ತನೆಯ ನಡುವೆ, ಸುಣ್ಣ ಬಳಿದ ಗೋಡೆಯ ಮೇಲೆ ಬೆಳದಿಂಗಳು ಮತ್ತು ನೆರಳಿನ ವಿಚಿತ್ರ ಆಕಾರದ ರೇಖೆ ಹರಡಿಕೊಂಡಿದೆ.

ಇದೇನು ಆಶ್ಚರ್ಯ! ಈ ಜನಭರಿತ ನಗರದಲ್ಲಿ ಆ ಸಾಮಾನ್ಯ ಮನೆಯೊಳಗೆ ಓರ್ವ ಮಾನವಿಯ ವೇಷದಲ್ಲಿ ಇದೇನು! ಈ ರಾಜಧಾನಿಯಲ್ಲಿ ಎಷ್ಟು ವಿದ್ಯಾರ್ಥಿಗಳು, ಎಷ್ಟು ವಕೀಲರು, ಎಷ್ಟು ಪ್ರವಾಸಿಹಾಗೂ ನಿವಾಸಿಗಳು ಇರುವರು. ಅವರಲ್ಲಿ ರಮೇಶನಂಥ ಸಾಧಾರಣ ಮನುಷ್ಯನೋರ್ವ ಎಲ್ಲಿಂದಲೋ ಒಂದು ದಿನ ಆಶ್ವಯುಜದ ಹೊಂಬಿಸಿಲಲ್ಲಿ ಆ ಕಿಟಕಿಯಲ್ಲಿ ಓರ್ವ ಬಾಲಿಕೆಯ ಪಕ್ಕದಲ್ಲಿ ನೀರವವಾಗಿ ನಿಂತು ಜೀವನವೂ ಜಗತ್ತೂ ಎಲ್ಲೆಯಿಲ್ಲದ ಆನಂದಮಯ ರಹಸ್ಯದ ನಡುವೆ ತೇಲುವುದನ್ನು ನೋಡಿದ—ಇದೇನು ಆಶ್ಚರ್ಯ! ಹೃದಯದೊಳಗೆ ಇಂದು ಇದೇನಾಶ್ಚರ್ಯ, ಹೃದಯದ ಹೊರಗೆ ಇಂದು ಇದೇನಾಶ್ಚರ್ಯ!

ರಾತ್ರಿ ಬಹಳ ಹೊತ್ತಿನವರೆಗೆ ರಮೇಶ ಮಾಳಿಗೆಯಲ್ಲಿ ಓಡಾಡುತಿದ್ದ. ಮೆಲ್ಲಮೆಲ್ಲನೆ ಯಾವಾಗಲೋ ಒಮ್ಮೆ ಅರ್ಧ—ಚಂದ್ರ ಎದುರು ಮನೆಯ ಹಿಂದುಗಡೆ ಮುಳುಗಿಹೋದ. ಪೃಥ್ವಿಯಲ್ಲಿ ರಾತ್ರಿಯ ಕತ್ತಲೆ, ದಟ್ಟವಾಯಿತು—ಆಗ ಆಕಾಶ ಬೀಳ್ಕೊಡುವ ಪ್ರಕಾಶದ ಆಲಿಂಗನದಿಂದ ರಕ್ತವರ್ಣವಾಯಿತು.

ರಮೇಶನ ದಣಿದ ದೇಹ ಚಳಿಯಿಂದ ನಡುಗಿತು. ಇದ್ದಕ್ಕಿದ್ದಂತೆ ಒಂದು ಸಂದೇಹ ಮೆಲ್ಲಮೆಲ್ಲನೆ ಅವನ ಎದೆಯಲ್ಲಿ ಒತ್ತತೊಡಗಿತು. ಮನಸಿಗೆ, ಜೀವನನ ರಣಕ್ಷೇತ್ರದಲ್ಲಿ ನಾಳೆ ಪುನಃ ಸಂಗ್ರಾಮ ನಡೆಸಲು ಹೊರಡಬೇಕಾಗುವುದು, ಎಂದು ತೋರಿತು. ಆದರೂ ಆ ಆಕಾಶದಲ್ಲಿ ಚಿಂತೆಯ ಸುಳಿವಿಲ್ಲ, ಬೆಳದಿಂಗಳ ನಡುವೆ ಪ್ರಯತ್ನದ ಚಾಂಚ್ಯಲ್ಯವಿಲ್ಲ. ರಾತ್ರಿಯಲ್ಲಾದರೋ ನೀರವ ಶಾಂತಿ, ವಿಶ್ವಪ್ರಕೃತಿ ಆ ಅರಣ್ಯ ನಕ್ಷತ್ರಲೋಕದ ಚಿರಕರ್ಪೂದಲ್ಲಿ ಚಿರವಿಶ್ರಾಂತಿಯೊಡನೆ ವಿಲೀನ—ಆದರೂ ಮನುಷ್ಯರ ಹೋಗ ಬರುವು—ಅಳಿವುಳಿವುಗಳಿಗೆ ಅಂತವಿಲ್ಲ, ಸುಖದಲ್ಲಿ—ದುಃಖದಲ್ಲಿ, ಅಡ್ಡಿಯಲ್ಲಿ —ಆತಂಕದಲ್ಲಿ ಸಮಸ್ತ ಜನ ಸಮಾಜ ಅಲ್ಲೋಲ ಕಲ್ಲೋಲ. ಒಂದುಕಡೆ ಅನಂತದ ಅನಿತ್ಯ ಶಾಂತಿ, ಮತ್ತೊಂದು ಕಡೆ ಜಗತ್ತಿನ ಈ ನಿತ್ಯಸಂಗ್ರಾಮ— ಎರಡೂ ಒಂದೇಕಾಲದಲ್ಲಿ ಒಟ್ಟಿಗೆ ಇರಲು ಹೇಗೆ ಸಾಧ್ಯ. ಅತಿ ಚಿಂತೆಯಲ್ಲೂ ರಮೇಶನ ಮನಸಿನಲ್ಲಿ ಈ ಪ್ರಶ್ನೆ ಉದಯಿಸಿತು. ಕ್ಷಣಕಾಲ ಮೊದಲು ರಮೇಶ ಜಗತ್ತಿನ ಅಂತಪುರದ ಒಳಗೆ ಪ್ರೇಮದ ಯಾವ ಒಂದು ಶಾಶ್ವತ ಸಂಪೂರ್ಣ ಶಾಂತ ಮೂರ್ತಿಯನ್ನು ನೋಡಿದ್ದನೋ—ಅದೇ ಪ್ರೇಮವು ಸ್ವಲ್ಪ ಹೊತ್ತಿನ ಬಳಿಕ ಪ್ರಪಂಚದ ಹೋರಾಟದಲ್ಲಿ, ಜೀವನದ ಸಮಸ್ಯೆಯಲ್ಲಿ ಅಡಿಗಡಿಗೂ ಚೂರು ಚೂರಾಗುವುದನ್ನು ನೋಡತೊಡಗಿದ. ಇದರಲ್ಲಿ ಯಾವುದು ಸತ್ಯ ! ಯಾವುದು ಮಾಯೆ !

೧೭

ಮರುದಿನ ಬೆಳಿಗ್ಗಿನ ಗಾಡಿಯಲ್ಲಿ ಯೋಗೇಂದ್ರ ಪಶ್ಚಿಮ ಪ್ರಾಂತದಿಂದ ಹಿಂದಿರುಗಿ ಬಂದ. ಇಂದು ಶನಿವಾರ, ನಾಳೆ ಭಾನುವಾರ ಹೇಮನಳಿನಿಯ ಮದುವೆ. ಆದರೆ ಯೋಗೇಂದ್ರ ತಮ್ಮ ಮನೆಯ ಬಾಗಿಲಬಳಿ ಬಂದು ಉತ್ಸವದ ಸ್ವಾದ ಗಂಧವನ್ನು ಆಘ್ರಾಣಿಸಲಿಲ್ಲ. ಇಷ್ಟು ಹೊತ್ತಿಗೆ ತಮ್ಮ ಮನೆಯ ಮುಂಭಾಗದಲ್ಲಿ ದೇವದಾರು ಎಲೆಯ ತೋರಣ ನೇತಾಡಲು ಪ್ರಾರಂಭಿಸಿರಬ

ಹುದು ಎಂದು ಯೋಗೇಂದ್ರ ಮನಸ್ಸಿನಲ್ಲೇ ತೀರ್ಮಾನಿಸಿದ್ದ—ಸಮೀಪಕ್ಕೆ ಬಂದು ನೋಡಿದ. ಕಾಂತಿಹೀನ ಮಲಿನತೆಯಿಂದ ಪಕ್ಕದ ಮನೆಯೊಡನೆ ತಮ್ಮ ಮನೆಯ ಯಾವ ವ್ಯತ್ಯಾಸವೂ ಇರಲಿಲ್ಲ.

ಪ್ರಾಯಃ ಯಾರಿಗಾದರೂ ರೋಗರುಜಿನವಾಗಿರುವುದೇ ಎಂಬ ಹೆದರಿಕೆಯಾಯಿತು. ಮನೆಯನ್ನು ಪ್ರವೇಶಿಸಿ ನೋಡಿದ, ಚಹದ ಮೇಜಿ ಯಲ್ಲಿ ಅವನಿಗಾಗಿ ಉಪಹಾರ ಸಿದ್ಧವಾಗಿಟ್ಟಿದೆ ಮತ್ತು ಅನ್ನದಾಬಾಬು ಅರ್ಧ ಕುಡಿದ ಚಹದ ಬಟ್ಟಲನ್ನು ಎದುರಿಗೆ ಇಟ್ಟುಕೊಂಡು ಸಮಾಚಾರ ಪತ್ರಿಕೆ ಓದುತಿರುವರು.

ಯೋಗೇಂದ್ರ ಮನೆಗೆ ಬರುತ್ತಲೇ ವಿಚಾರಿಸಿದ, "ಹೇಮ ಹೇಗಿರು ವಳು ? ".

ಅನ್ನದಾಬಾಬು—ಚೆನ್ನಾಗಿರುವಳು.

ಯೋಗೇಂದ್ರ—ಮದುವೆ ಏನಾಯಿತು ?

ಅನ್ನದಾಬಾಬು—ನಾಳೆ ಭಾನುವಾರದ ಮುಂದಿನ ಭಾನುವಾರ ನಡೆ ಯುವುದು.

ಯೋಗೇಂದ್ರ—ಏಕೆ.

ಅನ್ನದಾಬಾಬು—ಏಕೆ, ಅದನ್ನು ನಿನ್ನ ಸ್ನೇಹಿತನ ಬಳಿ ಕೇಳು. ರಮೇಶ ನನಗೆ ಮುಖ್ಯ ಕೆಲಸವಿದೆ, ಈ ಭಾನುವಾರದ ಮದುವೆ ಸಲ್ಲಿಸಬೇಕಾ ಗುವುದು, ಎಂದಷ್ಟೇ ನಮಗೆ ಹೇಳಿದ.

ಯೋಗೇಂದ್ರ ತನ್ನ ಅಸಾಮರ್ಥ್ಯ ತಂದೆಯಮೇಲೆ ಒಳಗೊಳಗೆ ಕೋಪಿ ಸಿಕೊಂಡು, "ಅಪ್ಪಾ, ನಾನು ಇರದಿದ್ದರಿಂದ ನಿಮಗೆ ಇಷ್ಟೆಲ್ಲ ತೊಂದರೆ ಸಂಭವಿಸಿತು. ರಮೇಶನಿಗೆ ಇದ್ದಕ್ಕಿದ್ದಂತೆ ಏನು ಕೆಲಸ. ಅವನು ಸ್ವತಂತ್ರ. ಅವನಿಗೆ ತನ್ನವರೆಂದು ಯಾರೂಇಲ್ಲ. ಒಂದು ವೇಳೆ ಅವನ ಆಸ್ತಿಪಾಸ್ತಿಯ ಸಂಬಂಧವಾಗಿ ಯಾವುದಾನರೂ ಎಡರು ತೊಡರಿದ್ದರೆ, ಅದನ್ನು ಬಹಿರಂಗ ವಾಗಿ ಹೇಳುವುದರಲ್ಲಿ ತೊಂದರೆ ಏನಿದೆ. ರಮೇಶನನ್ನು ನೀವು ಇಷ್ಟು ಸುಲ ಭವಾಗಿ ಬಿಟ್ಟುಬಿಟ್ಟರೇಕೆ ? " ಎಂದು ಕೇಳಿದ.

ಅನ್ನದಾಬಾಬು—ಹಾಗಾದರೆ ಸರಿ, ಅವನು ಇಲ್ಲಿಂದ ಓಡಿ ಹೋಗಿಲ್ಲ ವಲ್ಲ, ನೀನೇ ಅವನನ್ನು ಕೇಳಿ ತಿಳಿಯಬಹುದಲ್ಲ.

ಕೇಳಿ ಯೋಗೇಂದ್ರ ಕೂಡಲೆ ಒಂದು ಬಟ್ಟಲು ಬಿಸಿ ಚಹವನ್ನು ಅವಸರ ಅವಸರವಾಗಿ ಮುಗಿಸಿ ಹೊರಟು ಹೋದ.

ಅನ್ನದಾಬಾಬುಗಳು ಹೇಳಿದರು, "ಓಹೋ, ಯೋಗೇನ, ಇಷ್ಟು ಅವಸರವೇಕೆ? ನೀನು ಏನೂ ತಿನ್ನಲಿಲ್ಲವಲ್ಲ" ಎಂದರು.

ಆಮಾತು ಯೋಗೇಂದ್ರನ ಕಿವಿಗೆ ಬೀಳಲಿಲ್ಲ. ಅವನು ರಮೇಶನ ಮನೆಗೆ ಬಂದು ವೇಗವಾಗಿ ಹೆಜ್ಜೆಹಾಕುತ್ತ ಮೆಟ್ಟಲು ಏರಿ ಮಹಡಿಗೆ ಹೋದ. "ರಮೇಶ! ರಮೇಶ್" ರಮೇಶನ ಸದ್ದೇಇಲ್ಲ. ಎಲ್ಲಾ ಕೊಠಡಿಯಲ್ಲೂ ಹುಡುಕಿ ನೋಡಿದ, ರಮೇಶ ಮಲಗುವ ಕೋಣೆಯಲ್ಲಿಲ್ಲ. ಮಾಳಿಗೆಯಲ್ಲಿಲ್ಲ. ಮೊದಲಮಹಡಿಯಲ್ಲಿಲ್ಲ. ಬಹಳ ಹೊತ್ತು ಕೂಗಿ ಕೂಗಿ ಕಡೆಗೆ ಕೆಲಸದವನನ್ನು ನೋಡಿ, "ಯಜಮಾನರೆಲ್ಲಿ?" ಎಂದು ಪ್ರಶ್ನಿಸಿದ.

"ಯಜಮಾನರು ಅಷ್ಟುಹೊತ್ತಿಗೇ ಹೊರಗಡೆ ಹೋದರು" ಎಂದು ಆಳು ತಿಳಿಸಿದ.

ಯೋಗೇಂದ್ರ—ಯಾವಾಗ ಬರುವರು?

ಯಜಮಾನರು ತಮ್ಮ ಬಟ್ಟೆಬರೆಗಳನ್ನು ಸ್ವಲ್ಪ ತೆಗೆದುಕೊಂಡು ಹೋಗಿರುವರು. ಅವರು ತಿರುಗಿ ಬರಲು ನಾಲ್ಕೈದು ದಿನಗಳಾಗುವುದೆಂದು ಹೇಳಿ ಹೋಗಿರುವರು. ಎಲ್ಲಿ ಹೋಗಿರುವರೋ ಅದು ಆಳಿಗೆ ತಿಳಿಯದು, ಎಂಬುದಾಗಿ ಕೆಲಸದವನಿಂದ ಅರಿತುಕೊಂಡ.

ಯೋಗೇಂದ್ರ ಗಂಭೀರವಾಗಿ ಚಹದ ಮೇಜೆಯುಮುಂದೆ ಬಂದು ಕುಳಿತ. ಅನ್ನದಾಬಾಬುಗಳು "ಏನಾಯಿತು" ಎಂದರು.

ಯೋಗೇಂದ್ರ ಬೇಸರದಿಂದ ಹೇಳಿದ, "ಆಗುವುದೇನು? ನಾಳೆ ಯಾರಿಗೆ ಹುಡುಗಿಯನ್ನು ಕೊಟ್ಟು ಮದುವೆ ಮಾಡಬೇಕೊ ಅವರಿಗೆ ಏನು ಕೆಲಸವಿದೆ, ಅವರು ಯಾವಾಗ ಎಲ್ಲಿರುವರು, ಅವರ ಸುದ್ದಿ—ಸಮಾಚಾರವನ್ನೇ ನೀವು ಇಟ್ಟುಕೊಳ್ಳಲಿಲ್ಲ. ಅದೂ ಅಲ್ಲದೆ ನಿಮ್ಮ ನೆರಮನೆಯಲ್ಲೇ ಅವರ ವಾಸ".

"ಏನು, ನಿನ್ನೆ ರಾತ್ರಿಯೂ ರಮೇಶ ಅದೇಮನೆಯಲ್ಲಿದ್ದ" ಎಂದರು ಅನ್ನದಾಬಾಬುಗಳು.

ಯೋಗೇಂದ್ರ ಉದ್ರೇಕಗೊಂಡು, "ಅವನು ಎಲ್ಲಿಗೆ ಹೋಗುವನೆಂದು ನೀವು ಅರಿಯಿರಿ, ಅವನು ಎಲ್ಲಿಗೆ ಹೋದನೆಂದು ಅವನ ಸೇವಕ ಅರ್‍ಇಯನು.

ಇದೇನು ಮುಚ್ಚುಮರೆ ನಡವಳಿಕೆ, ನನಗೆ ಇದೆಲ್ಲ ಸರಿಬೀಳದು. ಅಪ್ಪಾ, ನೀವು ಹೇಗೆ ನಿಶ್ಚಿಂತರಾಗಿರುವಿರಿ ?" ಎಂದು ಕೇಳಿದ.

ಅನ್ನದಾಬಾಬುಗಳು ಈ ಆಕಸ್ಮಿಕ ತಿರಸ್ಕಾರದಿಂದ ಬಹಳ ಚಿಂತೆಗೊಳ್ಳ ತೊಡಗಿದರು. ಮುಖ ಗಂಭೀರಮಾಡಿಕೊಂಡು ಹೇಳಿದರು. "ಹಾಗಾದರೆ ಇದೆಲ್ಲ ಏನು ?".

ವ್ಯವಹಾರ ಜ್ಞಾನವಿಲ್ಲದೆ ರಮೇಶ ಅನಾಯಾಸವಾಗಿ ನಿನ್ನೆ ರಾತ್ರಿ ಅನ್ನದಾಬಾಬುಗಳ ಬಳಿ ಹೇಳಿ ಹೋಗಬಹುದಾಗಿದ್ದಿತ್ತು. ಆದರೆ ಆಮಾತು ಅವನ ಮನಸ್ಸಿಗೇ ಬರಲಿಲ್ಲ. ತಾನು "ಮುಖ್ಯಕೆಲಸವಿದೆ" ಎಂದು ಹೇಳಿ ರುವೆನಲ್ಲ, ಅದರಲ್ಲೇ ಅವನ ಎಲ್ಲಾ ವಿಷಯವೂ ಅಡಕವಾಗಿದೆಯೆಂದು ರಮೇಶನ ಭಾವನೆ. ಆ ಒಂದು ಮಾತಿನಲ್ಲೇ ಮೊದಲಿಂದ ಕಡೆಯವರೆಗೆ ಎಲ್ಲಾರೀತಿಯು ಬಿಡುವುದೊರೆತಿದೆ ಯೆಂದು ತಿಳಿದು, ಅವನು ತನ್ನ ಮುಂದಿನ ಕೆಲಸ ನಡೆಸಲು ತಲ್ಲಣಿಸುತ್ತ ತಿರುಗಾಡುತಿದ್ದ.

ಯೋಗೇಂದ್ರ—ಹೇಮನಳಿನಿ ಎಲ್ಲಿ ?

ಅನ್ನದಾಬಾಬು—ಅವಳು ಇಂದು ಹೊತ್ತಿಗೆ ಮುಂಚೆ ಚಹ ಕುಡಿದು ಮಹಡಿಗೆ ಹೋದಳು.

ಯೋಗೇಂದ್ರ "ರಮೇಶನ ಈ ಎಲ್ಲಾ ವಿಚಿತ್ರ ವ್ಯವಹಾರದಿಂದ ಪಾಪ ಅವಳು ನಾಚಿಗೊಂಡಿರುವಳೆಂದು ತೋರುವುದು. ಅದರಿಂದಲೇ ಅವಳು ನನ್ನನ್ನು ನೋಡಲು ಹೆದರಿಕೊಂಡು ಮರೆಯಾಗಿರುವಳು" ಎಂದು ಹೇಳಿದ.

ಸಂಕುಚಿತ ಹಾಗೂ ವ್ಯಥಿತ ಹೇಮನಳಿನಿಯನ್ನು ಸಮಾಧಾನ ಪಡಿಸಲು ಯೋಗೇಂದ್ರ ಮಹಡಿಗೆ ಹೋದ. ಹೇಮನಳಿನಿ ತನ್ನ ಕೊಠಡಿಯಲ್ಲಿ ಕುರ್ಚಿಯ ಮೇಲೆ ಮೌನವಾಗಿ ಒಬ್ಬಳೇ ಕುಳಿತಿದ್ದಳು. ಯೋಗೇಂದ್ರನ ಕಾಲ ಸಪ್ಪಳ ಕೇಳಿ ಅವಳು ಅವಸರದಿಂದ ಒಂದು ಪುಸ್ತಕ ತೆಗೆದುಕೊಂಡು ಓದುವಳಂತೆ ನಟಿಸಿದಳು. ಯೋಗೇಂದ್ರನು ಕೋಣೆಯೊಳಕ್ಕೆ ಬರುತಲೇ ಪುಸ್ತಕ ಇಟ್ಟು ಎದ್ದು ನಿಲ್ಲುತ್ತ ನಗುಮುಖದೊಡನೆ ಕೇಳಿದಳು, "ಏನಣ್ಣ ಯಾವಾಗ ಬಂದೆ. ನೀನು ಅಷ್ಟು ಆರೋಗ್ಯವಾಗಿರುವಂತೆ ಕಾಣುವುದಿಲ್ಲವಲ್ಲ"

ಯೋಗೇಂದ್ರ ಕುರ್ಚಿಯಲ್ಲಿ ಕುಳಿತುಕೊಂಡು, "ಚೆನ್ನಾಗಿರುವಂಥ ವಿಷಯವೇನೂ ಇಲ್ಲ. ನಾನು ಎಲ್ಲಾ ಸುದ್ದಿಯನ್ನೂ ಕೇಳಿದೆ ಹೇಮ್ ಆದರೆ ನೀನು ಈ ವಿಷಯವಾಗಿ ಏನೂ ಯೋಚಿಸಬೇಡ. ನಾನು ಇಲ್ಲ ಎಂದು

ಹೇಳಿ ಇಷ್ಟೆಲ್ಲ ಗೊಂದಲ ನಡೆದಿದೆ. ನಾನು ಎಲ್ಲವನ್ನೂ ಸರಿಪಡಿಸುವೆ. ಅದುಸರಿ ಹೇಮ್, ರಮೇಶ ನಿನಗೆ ಯಾವಕಾರಣವನ್ನೂ ಹೇಳಲಿಲ್ಲವೆ ?" ಎಂದು ವಿಚಾರಿಸಿದ.

ಹೇಮನಳಿನಿಗೆ ತೊಂದರೆಗಿಟ್ಟುಗೊಂಡಿತು. ರಮೇಶನ ವಿಷಯದಲ್ಲಿ ಈ ಎಲ್ಲ ಸಂದಿಗ್ಧ ವಿಚಾರಣೆ ಅವಳಿಗೆ ಅಸಹನೀಯವಾಯಿತು. ರಮೇಶ ಅವಳಿಗೆ ಮದುವೆದಿನ ಬದಲಾಯಿಸಲು ಯಾವಕಾರಣವನ್ನೂ ಹೇಳಿಲ್ಲ.

ಈ ಮಾತನ್ನು ಯೋಗೇಂದ್ರನ ಹತ್ತಿರ ಹೇಳಲು ಇಷ್ಟವಿಲ್ಲ. ಹಾಗೆಂದು ಸುಳ್ಳು ಹೇಳುವುದು ಅವಳಿಗೆ ಸಾಧ್ಯವಿಲ್ಲ. "ಅವರು ನನಗೆ ಕಾರಣ ತಿಳಿಸ ಬೇಕು ಎಂದಿದ್ದರು ನಾನು ಕೇಳಲು ಇಷ್ಟಪಡಲಿಲ್ಲ" ಎಂದಳು ಹೇಮನಳಿನಿ.

"ಇದು ಅತಿ ಅಭಿಮಾನದ ಮಾತು ಅಲ್ಲದೆ ಇಂಥ ಅಭಿಮಾನ ಸಂಪೂರ್ಣ ಅಸ್ವಾಭಾವಿಕ" ಎಂದು ಯೋಗೇಂದ್ರ ಆಲೋಚಿಸಿದ. "ಸರಿ, ನೀನು ಏನೂ ಹೆದರಬೇಡ, ನಾನು ಕಾರಣ ಇಂದೇ ತಿಳಿದುಬರುವೆ" ಎಂದ.

ಹೇಮನಳಿನಿ ತೊಡೆಯಮೇಲಿದ್ದ ಪುಸ್ತಕದ ಹಾಳೆಯನ್ನು ಅನಾವಶ್ಯಕ ವಾಗಿ ತಿರುವುತ್ತ ತಿರುವುತ್ತ ಹೇಳಿದಳು, "ಅಣ್ಣಾ" ನನಗೆ ಸ್ವಲ್ಪವೂ ಭಯ ವಿಲ್ಲ. 'ಕಾರಣ' ವನ್ನು ಹೊರಗೆಡಹಲು ನೀನು ಅವರನ್ನು ಪೀಡಿಸುವುದು ನನಗೆ ಇಷ್ಟವಿಲ್ಲ".

"ಇದೂ ಆತ್ಮಗೌರವದಮಾತು" ಎಂದು ಯೋಗೇಂದ್ರನು ಭಾವಿಸಿದ. ಕೂಡಲೆ ಹೊರಡಲು ಪ್ರಯತ್ನಿಸಿದ.

ಆಗ ಹೇಮನಳಿನಿ ಕುರ್ಚಿ ಬಿಟ್ಟು ಎದ್ದು ಹೇಳಿದಳು, "ಇಲ್ಲ ಅಣ್ಣಾ ಈ ವಿಷಯವಾಗಿ ನೀನು ಅವರೊಡನೆ ವಿವಾದ ನಡೆಸಲು ಹೋಗಕೂಡದು. ಅವರ ವಿಷಯವಾಗಿ ನೀವು ಏನು ಬೇಕಾದರೂ ತಿಳಿದುಕೊಳ್ಳಿ. ನನಗೆ ಅವರ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ".

ಆಗ ಯೋಗೇಂದ್ರನಿಗೆ ಒಮ್ಮೆಗೆ ಮನಸ್ಸಿನಲ್ಲಿ, "ಇವಳು ಆತ್ಮ ಗೌರವ ದಿಂದ ಮಾತನಾಡುತಿರುವಂತೆ ಕಾಣಿಸದು" ಎಂದು ತೋರಿತು. ಆಗ ಸ್ನೇಹ ಮಿಶ್ರಿತ ಕರುಣೆಯಿಂದ ಅವನಿಗೆ ಒಳಗೇ ನಗು ಬಂದು. "ಇವರಿಗೆ ಪ್ರಪಂಚದ ಜ್ಞಾನವೇ ಇಲ್ಲ. ಇಷ್ಟೊಂದು ವಿದ್ಯೆಕಲಿತಿರುವರು. ಪ್ರಾಪಂಚಿಕ ವಿಷಯವೂ ತಕ್ಕಮಟ್ಟಿಗೆ ತಿಳಿದಿರುವರು. ಎಲ್ಲಿ ಸಂದೇಹ ಪಡಬೇಕು ಎಂಬ ಜ್ಞಾನವೂ

ಇವರಿಗೆ ಇಲ್ಲ" ಎಂದು ಯೋಚಿಸಿದನು. ಈ ನಿಃಸಂಶಯ ನಂಬಿಕೆಯೊಡನೆ ರಮೇಶನ ಕಪಟ ವ್ಯವಹಾರವನ್ನು ಹೋಲಿಸಿ ಯೋಗೇಂದ್ರನಿಗೆ ರಮೇಶನ ಮೇಲೆ ಮನಸ್ಸಿನಲ್ಲೇ ಮತ್ತಷ್ಟು ಕೋಪಗೊಂಡ, "ಕಾರಣ" ಕಂಡುಹಿಡಿಯುವ ಪ್ರತಿಜ್ಞೆ ಅವನ ಮನಸಿನಲ್ಲಿ ಇನ್ನೂ ದೃಢವಾಯಿತು. ಯೋಗೇಂದ್ರ ಎರಡನೆಯಬಾರಿ ಹೋಗಲು ತೊಡಗಿದಾಗ ಹೇಮನಳಿನಿ ಸಮೀಪಕ್ಕೆ ಹೋಗಿ ಅವನ ಕೈಹಿಡಿದುಕೊಂಡು, "ಅಣ್ಣಾ, ನೀನು ಆಣೆಯಿಡು, ಅವರ ಬಳಿ ಈ ಎಲ್ಲ ಸಂಗತಿಯನ್ನೂ ಒಮ್ಮೆಗೇ ಪ್ರಸ್ತಾಪಿಸಬೇಡ" ಎಂದಳು.

"ನೋಡೋಣ" ಎಂದು ಹೇಳಿದ ಯೋಗೇಂದ್ರ.

ಹೇಮನಳಿನಿ—"ಇಲ್ಲ ಅಣ್ಣ, ನೋಡೋಣ ಅಲ್ಲ. ನನಗೆ ಮಾತು ಕೊಟ್ಟು ಹೋಗು. ನಾನು ನಿನಗೆ ಖಂಡಿತವಾಗಿಯೂ ಹೇಳುವೆ, ನಿನಗೆ ಯಾವ ಚಿಂತೆಯೂ ಬೇಡ. ಒಮ್ಮೆ ನನ್ನ ಈ ಮಾತನ್ನು ನಡೆಸು".

ಹೇಮನಳಿನಿಯ ಈ ಸ್ಥೈರ್ಯ ನೋಡಿ ಯೋಗೇಂದ್ರ, "ಹಾಗಾದರೆ ಖಂಡಿತ ರಮೇಶ ಹೇಮಳ ಹತ್ತಿರ ಎಲ್ಲ ಸಂಗತಿಯನ್ನೂ ಹೇಳಿರುವನು. ಆದರೆ ಹೇಮಳಿಗೆ ಅದೂ-ಇದೂ ಹೇಳಿ ಮರೆಮಾಡಲು ಸಾಧ್ಯವಿಲ್ಲ" ಎಂದು ಭಾವಿಸಿದ.

"ನೋಡು ಹೇಮ, ಅಪನಂಬಿಕೆಯ ಮಾತಲ್ಲ. ವಧು ಪಕ್ಷದ ಪೋಷಕರ ಕರ್ತವ್ಯ ಯಾವುದೋ ಅದನ್ನು ಮಾಡಬೇಕು. ಒಂದುವೇಳೆ ನಿನ್ನ ಮೇಲೆ ಅವನ ಭಾರ ಬಿದ್ದಿರಬಹುದು. ಅದು ನಿನಗೂ ತಿಳಿದಿದೆ. ಆದರೆ ಅಷ್ಟಾದರೆ ಸಾಲದು. ನಮ್ಮ ಮೇಲೂ ಅವನ ಭಾರ ಬಿದ್ದಿದೆ. ನಿಜ ಹೇಳುವುದಕ್ಕೆ ಏನು ಹೇಮ, ಈಗ ನಿನಗಿಂತಲೂ ನಮಗೆ ಅವನ ಮೇಲ್ವಿಚಾರಣೆಯ ವಿಷಯ ಸೇರಿದೆ — ಮದುವೆ ಆದ ಬಳಿಕ ನಾವು ಹೆಚ್ಚು ಮಾತನಾಡುವಹಾಗಿಲ್ಲ.

ಹೀಗೆ ಹೇಳಿ ಯೋಗೇಂದ್ರ ಅವಸರ ಅವಸರವಾಗಿ ಹೊರಟುಹೋದ. ಪ್ರೀತಿ ಮರೆಯಲ್ಲಿ ಯಾವ ಆವರಣವನ್ನು ಹುಡುಕುವುದೋ, ಅದು ಆಗ ಉಳಿಯಲಿಲ್ಲ. ಹೇಮನಳಿನಿ ಹಾಗೂ ರಮೇಶನ ಯಾವ ಸಂಬಂಧ ಕ್ರಮವಾಗಿ ವಿಶೇಷರೀತಿಯಲ್ಲಿ ನಿಕಟವಾಗಿ ಇಬ್ಬರನ್ನೂ ಅತಿಯಾಗಿ ಇಬ್ಬರನ್ನಾಗಿಯೇ ಮಾಡಿತು. ಇಂದು ಅದರ ಮೇಲೆ ಹತ್ತು ಜನರ ಸಂದೇಹದ ಕಠಿಣ ಸ್ಪರ್ಧೆ ಬಂದು ಬಾರಿಬಾರಿಗೂ ಆಕ್ರಮಣ ನಡೆಸುತಿರುವುದು. ನಾಲ್ಕೂಕಡೆಯ ಈ

ಎಲ್ಲ ಹೋರಾಟದ ಪ್ರಹಾರದಿಂದ ಹೇಮನಳಿನಿ ಎಷ್ಟು ದುಃಖಿತಳಾಗಿರುವ ಳೆಂದರೆ, ನೆಂಟರಿಷ್ಟರನ್ನು ನೋಡುವುದು ಕೂಡ ಅವಳನ್ನು ಹಿಂಜರಿಯುವಂತೆ ಮಾಡಿರುವುದು, ಯೋಗೇಂದ್ರ ಹೊರಟುಹೋದ. ಹೇಮನಳಿನಿ ಕುರ್ಚಿ ಯಲ್ಲಿ ಮೌನವಾಗಿ ಕುಳಿತುಕೊಂಡಳು.

ಯೋಗೇಂದ್ರ ಹೊರಗಡೆ ಹೋದೊಡನೆಯೇ ಅಕ್ಷಯ ಬಂದು ಹೇಳಿದ, "ಇದೇನು, ಯೋಗೇಂದ್ರ ಬಂದಿರುವೆ ಎಲ್ಲ ಸಮಾಚಾರ ಕೇಳಿದೆಯಾ ? ಈಗ ನೀನು ಏನು ಯೋಚಿಸುವೆ ? "

ಯೋಗೇಂದ್ರ—ಮನಸ್ಸು ನಾನಾರೀತಿಯಲ್ಲಿದೆ. ಆ ಎಲ್ಲ ಅನುಮಾನ ವನ್ನೂ ತೆಗೆದುಕೊಂಡು ವಾದವಿವಾದಮಾಡುವುದರಿಂದೇನು ? ಇದು ಚಹದ ಮೇಜೆಯ ಮುಂದೆ ಕುಳಿತು ಮನಶ್ಶಾಸ್ತ್ರದ ಸೂಕ್ಷ್ಮ ಆಲೋಚನೆ ನಡೆಸುವ ಸಮಯವಲ್ಲ.

ಅಕ್ಷಯ—ಸೂಕ್ಷ್ಮ ಆಲೋಚನೆ ನಡೆಸುವುದು ನನ್ನ ಸ್ವಭಾವವಲ್ಲ ಎಂದು ನಿನಗೆ ಗೊತ್ತೇ ಇದೆ. ಅದನ್ನು ಮನಶ್ಶಾಸ್ತ್ರವೆನ್ನು, ದರ್ಶನವೆನ್ನು ಅಥವಾ ಕಾವ್ಯವೆನ್ನು. ನಾನು ಕೆಲಸದ ವಿಷಯ ಚೆನ್ನಾಗಿ ಬಲ್ಲೆ–ನಿನ್ನೊಡನೆ ಆ ಮಾತನ್ನೇ ಹೇಳಲು ಬಂದಿರುವೆ.

ಅಧೈರ್ಯಸ್ವಭಾವದ ಯೋಗೇಂದ್ರ, " ಸರಿ ಕೆಲಸದ ಮಾತು ನಡೆಯಲಿ ರಮೇಶ ಎಲ್ಲಿಗೆ ಹೋಗಿರುವ ? ಈಗ ಹೇಳಲು ಸಾಧ್ಯವೆ ? " ಎಂದ.

ಅಕ್ಷಯ—ಸಾಧ್ಯ ಎಂದ.

" ಎಲ್ಲಿಗೆ" ಎಂದು ಯೋಗೇಂದ್ರ ಪ್ರಶ್ನಿಸಿದ.

" ಅದನ್ನು ಈಗ ನಾನು ನಿನಗೆ ಹೇಳಲಾರೆ. ಇಂದು ಮೂರು ಗಂಟೆ ವೇಳೆಗೆ ನೆಟ್ಟಗೆ ನಿನಗೆ ರಮೇಶನ ಭೇಟಿ ಮಾಡಿಸಬೇಕು " ಎಂದ ಅಕ್ಷಯ.

ಯೋಗೇಂದ್ರ ಕೇಳಿದ, " ಸಮಾಚಾರವೇನು ? ನೀವೆಲ್ಲರೂ ಸಜೀವ ಸಮಸ್ಯೆಯಾಗಿರುವಿರಿ. ನಾನು ಈ ಕೆಲವು ದಿನಗಳು ಮಾತ್ರ ಸುತ್ತಾಡಲು ಹೋಗಿದ್ದೆ. ಆ ಸುಯೋಗದಲ್ಲಿ ಪ್ರಪಂಚವೇ ಇಷ್ಟು ಭಯಾನಕ ರಹಸ್ಯಮ ಯವಾಗಿರುವುದು. ಇಲ್ಲ ಇಲ್ಲ ಅಕ್ಷಯ. ಈಗ ವಾದವಿವಾದ ಮಾಡುವು ದರಿಂದ ಉಪಯೋಗವಿಲ್ಲ ".

ಅಕ್ಷಯ—ಕೇಳಿ ಸಂತೋಷಗೊಂಡೆ. ಮಾತುಕತೆ ನಡೆಸುವುದಿಲ್ಲ ಎಂದು ನಾನು ಒಂದುರೀತಿಯಲ್ಲಿ ತೀರ್ಮಾನಿಸಿರುವೆ. ನಿನ್ನ ತಂಗಿಯಾದರೋ

ನನ್ನ ಮುಖ ನೋಡುವುದನ್ನೇ ನಿಲ್ಲಿಸಿರುವಳು, ನಿಮ್ಮ ತಂದೆ ನನ್ನನ್ನು ಸಂದಿಗ್ಧ ಪ್ರಕೃತಿಯವನು ಎಂದು ಬೈಯುವರು, ಮತ್ತು ರಮೇಶ ಬಾಬುವೂ ನನ್ನನ್ನು ನೋಡಿ ಆನಂದಪುಳಕಿತನಾಗುವುದಿಲ್ಲ. ಈಗ ನೀನೊಬ್ಬನೇ ಉಳಿದಿರುವೆ. ನಿನಗೆ ನಾನು ಹೆದರಿಕೊಳ್ಳುವೆ–ನೀನು ಸೂಕ್ಷ್ಮ ತತ್ವಾನ್ವೇಷಕನಲ್ಲ, ಸ್ಥೂಲ ಕೆಲಸವೇ ನಿನಗೆ ಸಹಜವಾದುದು–ನಾನು ದುರ್ಬಲ ವ್ಯಕ್ತಿ–ನಿನ್ನ ವೇದನೆ ನನಗೆ ಅಸಹನೀಯ.

ಯೋಗೇಂದ್ರ—ನೋಡು ಅಕ್ಷಯ. ನಿನ್ನ ಆ ಎಲ್ಲ ಕತ್ತಿಯ ವರಸೆಯ ನಡತೆ ನನಗೆ ಸರಿಬೀಳದು. ಚೆನ್ನಾಗಿಯೂ ಗೊತ್ತು. ನೀನು ಹೇಳಬೇಕಾದ ಸಮಾಚಾರ ಒಂದಿದೆ ಎಂದು, ಅದನ್ನು ಮರೆಮಾಡಿ ಇಂಥ ಕೆಟ್ಟ ಆಲೋಚನೆ ಪ್ರಯತ್ನವೇಕೆ? ಸುಲಭವಾಗಿ ಹೇಳಿಬಿಡು. ರಹಸ್ಯಬೇಡ.

ಅಕ್ಷಯ—ಹಾಗಾದರೆ ಸರಿ, ಸರಿಯಾಗಿ ಮೊದಲಿಂದಲೇ ಹೇಳುವೆ, ನಿನಗೆ ಅನೇಕ ಸಂಗತಿ ತಿಳಿದಿದೆಯಲ್ಲವೆ?

೧೮

ದರ್ಜಿಪಾಡಾದಲ್ಲಿದ್ದನಲ್ಲ ರಮೇಶ, ಆ—ಮನೆಯ ಅವಧಿ ಮುಗಿದಿರಲಿಲ್ಲ. ಅದನ್ನು ಬೇರೆಯವರಿಗೆ ಬಾಡಿಗೆಗೆ ಕೊಡುವ ವಿಷಯವನ್ನು ಯೋಚಿಸಲು ಅವಕಾಶ ಸಿಗಲಿಲ್ಲ, ಅವನು ಈ ಕೆಲವು ತಿಂಗಳಲ್ಲಿ ಜಗತ್ತಿನ ಹೊರಗೆಅದೃಶ್ಯನಾಗಿಬಿಟ್ಟಿದ್ದ. ಲಾಭನಷ್ಟದ ನಡುವೆಯೇ ಬರಲಿಲ್ಲ.

ಇಂದು ಮುಂಜಾನೆ ಅವನು ಆ ಮನೆಗೆ ಹೋಗಿ, ಮನೆ-ಬಾಗಿಲು ಚೊಕ್ಕಟಮಾಡಿದ. ಮಂಚದ ಮೇಲೆ ಹಾಸಿಗೆ ಹಾಸಿದೆ ಮತ್ತು ಊಟ ಉಪಚಾರದ ಸಿದ್ಧತೆಯೂ ಆಗಿದೆ. ಇಂದು ಶಾಲೆ ಬಿಟ್ಟ ಬಳಿಕ ಕಮಲಳನ್ನು ಕರೆತರಬೇಕು.

ಇನ್ನೂ ಹೊತ್ತಿರುವುದು. ಇಷ್ಟರಲ್ಲಿ ರಮೇಶ ಮಂಚದ ಮೇಲೆ ಬೋರಲಾಗಿ ಬಿದ್ದುಗೊಂಡು ಭವಿಷ್ಯತ್ತಿನ ವಿಷಯ ಆಲೋಚಿಸಲಾರಂಭಿಸಿದ. ಅವನು ಇನ್ನೂ ಎಟಾವಾ ನೋಡಿಲ್ಲ—ಆದರೂ ಪಶ್ಚಿಮದ ದೃಶ್ಯ ಕಲ್ಪಿಸಿ ಕೊಳ್ಳುವುದು ಕಷ್ಟವಲ್ಲ. ನಗರದ ಬಳಿ ಅವರ ಮನೆ—ಮರಗಿಡಗಳ ನೆರಳು ಕೂಡಿದ ದೊಡ್ಡ ಬೀದಿ ಅವರ ತೋಟವನ್ನು ಸೀಳಿಕೊಂಡು ಹೋಗಿರುವುದು, ಬೀದಿಯ ಆ ಕಡೆ ದೊಡ್ಡ ಮೈದಾನ, ಅದರ ನಡುವೆ ಕೊಳ, ಅಲ್ಲಲ್ಲಿ ಪಶು-ಪಕ್ಷಿಗಳನ್ನು ಬೆದರಿಸಲು ಅಟ್ಟಣೆ ಹಾಕಿದೆ. ತೋಟಕ್ಕೆ ನೀರು ಹಾಯಿಸಲು

ಎತ್ತು ಕಟ್ಟಿ ನೀರು ಎಳೆಯಲಾಗುವುದು. ನಡುಹಗಲಲ್ಲಿ ಅದರ ಕರುಣ ಶಬ್ದ ಕೇಳಿಬರುವುದು—ಬೀದಿಯಿಂದ ಬೇಕಾದಷ್ಟು ಧೂಳು ಎಬ್ಬಿಸುತ್ತ ಆಗಾಗ ಕುದುರೆಗಾಡಿ ಹೋಗುವುದು, ಅದರ ಗಡಗಡ ಶಬ್ದದಲ್ಲಿ ಬಿಸಿಲಿನಿಂದ ಸುಡುತ್ತಿರುವ ಆಕಾಶ ಎಚ್ಚರಗೊಳ್ಳುವುದು. ಈ ಸುದೂರ ಪ್ರವಾಸದ ತೀಕ್ಷ್ಣ ತಾಪ, ಉದಾಸೀನ ಮಧ್ಯಾಹ್ನ ಹಾಗೂ ಶೂನ್ಯ ನಿರ್ಜನತೆಯಲ್ಲಿ ಅವನು ತನ್ನ ಬಾಗಿಲು ಮುಚ್ಚಿದ ಬಂಗಲೆಯಲ್ಲಿ ದಿನವೆಲ್ಲ ಹೇಮನಳಿನಿ ಒಬ್ಬಳೇ ಇರುವಳು ಎಂದು ಊಹಿಸಿ ಅತಿ ದುಃಖ ಅನುಭವಿಸಿದ. ಅವಳ ಪಕ್ಕದಲ್ಲೇ ಚಿರಸಖಿ ಯಂತೆ ಕಮಲೆಯನ್ನು ನೋಡಿ ಅವನು ವಿಶ್ರಾಂತಿಯನ್ನನುಭವಿಸಿದ.

ಈಗ ತಾನು ಕಮಲೆಗೆ ಏನೂ ಹೇಳುವುದಿಲ್ಲ ಎಂದು ರಮೇಶ ತೀರ್ಮಾನಿಸಿದ. ಮದುವೆಯಾದ ಬಳಿಕ ಹೇಮನಳಿನಿ ಅವಳನ್ನು ಎದೆಯುಬಳಿ ಎಳೆದುಕೊಂಡು ಸಮಯಕಾಯ್ದು ಸಕರುಣ ಸ್ನೇಹದೊಡನೆ ಕ್ರಮಕ್ರಮವಾಗಿ ಅವಳಿಗೆ ತನ್ನ ಪ್ರಕೃತ ಇತಿಹಾಸ ತಿಳಿಸುವಳು—ಸ್ವಲ್ಪ ವೇದನೆಯುಂಟುಮಾಡಬೇಕಾದುದು, ಕಮಲೆಯ ಜೀವನದ ಈ ಜಟಿಲ ರಹಸ್ಯಜಾಲ ಮೆಲ್ಲಮೆಲ್ಲಗೆ ಬಿಡಿಸಿದಂತಾಗುವುದು. ಆ ಬಳಿಕ ಆ ದೂರ ವಿದೇಶದಲ್ಲಿ, ಅವರ ಪರಿಚಿತ ಸಮಾಜದ ಹೊರಗೆ, ಯಾವ ತೊಂದರೆಯೂ ಇಲ್ಲದೆ ಕಮಲೆ ಅತಿ ಸಹಜವಾಗಿ ಅವಳೊಡನೆ ಕಲೆತು ಸಮ್ಮಿಳಿತಳಾಗುವಳು.

ಆ ಮಧ್ಯಾಹ್ನದಲ್ಲಿ ಬೀದಿಯೆಲ್ಲ-ನಿಸ್ತಬ್ಧ; ಆಫೀಸಿಗೆ ಹೋಗಬೇಕಾದವರು ಆಫೀಸಿಗೆ ಹೋಗುವರು, ಯಾರು ಹೋಗಬೇಕಾಗಿಲ್ಲವೋ ಅವರು ಹಗಲು ನಿದ್ದೆಗೆ ಹವಣಿಸುತಿರುವರು. ಹೆಚ್ಚು ಧಗೆಯಿಲ್ಲದ ಆಶ್ವಯುಜದ ಮಧ್ಯಾಹ್ನ ಮಧುರವಾಗಿರುವುದು—ಮುಂಬರುವ ರಜದ ಉಲ್ಲಾಸ ಆಗ ಆಕಾಶವನ್ನು ಆನಂದದ ಹೊಳಪಿನಿಂದ ಎತ್ತಿಹಿಡಿರುವುದು. ರಮೇಶ ತನ್ನ ನಿರ್ಜನ ಮನೆಯಲ್ಲಿ ನಿಸ್ತಬ್ಧ ಮಧ್ಯಾಹ್ನದಲ್ಲಿ ಸುಖದ ಚಿತ್ರವನ್ನು ಮತ್ತಷ್ಟು ಅಂದಗೊಳಿಸಿ ಚಿತ್ರಿಸತೊಡಗಿದ.

ಇಂಥ ವೇಳೆಯಲ್ಲಿ ಒಂದು ದೊಡ್ಡ ಗಾಡಿಯ ಶಬ್ಧ ಕೇಳಿಬಂತು. ಆ ಗಾಡಿ ರಮೇಶನ ಮನೆಯ ಬಾಗಿಲ ಬಳಿ ಬಂದುನಿಂತಿತು. ರಮೇಶ ಶಾಲೆಯ ಗಾಡಿ ಕಮಲೆಯನ್ನು ತಲಪಿಸಲು ತಂದಿರುವುದೆಂದು ತಿಳಿದ. ಅವನ ಎದೆ ಧಸಕ್ಕೆಂದಿತು. ಕಮಲೆಯನ್ನು ಹೇಗೆ ನೋಡುವುದು, ಅವಳೊಡನೆ ಹೇಗೆ ಮಾತನಾಡುವುದು. ಕಮಲೆಯೇ ಆಗಲಿ ರಮೇಶನನ್ನು ಯಾವ ಭಾವದಿಂದ

ನೋಡಬೇಕು, ಒಮ್ಮೆಗೇ ಈ ಚಿಂತೆ ಅವನನ್ನು ಅಲ್ಲೋಲ ಕಲ್ಲೋಲ ಗೊಳಿಸತೊಡಗಿತು.

ಕೆಳಗೆ ಅವನ ಇಬ್ಬರು ಸೇವಕರಿದ್ದರು. ಮೊದಲು ಅವರು ಎಳೆದಾಟ ಕಿತ್ತಾಟಮಾಡಿ ಕಮಲೆಯ ಪೆಟ್ಟಿಗೆ ಹೊತ್ತುತಂದು ವರಾಂಡದಲ್ಲಿಟ್ಟರು. ಅವರ ಹಿಂದುಗಡೆ ಕಮಲೆ ಮನೆಯ ಬಾಗಿಲ ಎದುರಿಗೆ ಬಂದು ಹೆದರುತ್ತ ನಿಂತಳು, ಒಳಕ್ಕೆ ಪ್ರವೇಶಿಸಲಿಲ್ಲ.

ರಮೇಶ, " ಕಮಲಾ, ಬಾ ಒಳಕ್ಕೆ" ಎಂದ.

ಕಮಲ ಒಂದು ಸಂಕೋಚದ ಆಕ್ರಮಣ ಬಿಟ್ಟು ಮನೆಯೊಳಕ್ಕೆ ಬಂದಳು. ಬಿಡುವಿನ ದಿನಗಳಲ್ಲಿ ರಮೇಶ ಅವಳನ್ನು ವಿದ್ಯಾಲಯದಲ್ಲೇ ಇಟ್ಟಿರಲು ಆಶಿಸಿದ್ದ. ಅವಳು ಅತ್ತು ಗೋಳಾಡಿಕೊಂಡು ಬಂದಿರುವಳು. ಈ ಘಟನೆ ಹಾಗೂ ಕೆಲವು ತಿಂಗಳ ಅಗಲಿಕೆಯಿಂದ ರಮೇಶನೊಡನೆ ಅವಳ ಮನಸಿನಲ್ಲಿ ವಿಷಣ್ಣತೆ ನಡೆದಿದೆ. ಅದರಿಂದಲೇ ಕಮಲ ಮನೆಯೊಳಕ್ಕೆ ಬಂದು ರಮೇಶನ ಮುಖ ನೋಡದೆ ಸ್ವಲ್ಪ ಮೈ ಸೊಟ್ಟಗೆ ಮಾಡಿಕೊಂಡು ತೆರೆದ ಬಾಗಿಲ ಕಡೆ ನೊಡುತ್ತಾ ನಿಂತಳು.

ರಮೇಶ ಕಮಲೆಯನ್ನು ನೋಡಿದ ಮಾತ್ರಕ್ಕೇ ಆಶ್ಚರ್ಯಚಕಿತನಾದ. ಮತ್ತೊಮ್ಮೆ ಅವಳನ್ನು ಹೊಸದಾಗಿ ನೋಡಿದ. ಈ ಕೆಲವು ತಿಂಗಳಲ್ಲಿ ಅವಳಲ್ಲಿ ವಿಚಿತ್ರ ರೀತಿಯ ಪರಿವರ್ತನೆಯಾಗಿದೆ. ಅತಿ ಹೆಚ್ಚಿನ ಎಲೆಗಳಿಲ್ಲದ ಬಳ್ಳಿಯಂತೆ ಅವಳು ಬೆಳೆದಿರುವಳು. ಹಳ್ಳಿ ಹುಡುಗಿಯ ಅಪರಿಸ್ಫುಟ ಸರ್ವಾಂಗದಲ್ಲಿ ಅತಿ ಆರೋಗ್ಯಕರವಾದೊಂದು ಪರಿಪುಷ್ಟತೆ ಇತ್ತಲ್ಲ. ಅದು ಎಲ್ಲಿ ಹೋಯಿತು? ಅವಳ ಗುಂಡಾದ ಮುಖ ಬಾಡಿ ನೀಳವಾಗಿ ಒಂದು ವಿಶೇಷತೆಯನ್ನು ಪಡೆದಿರುವುದು, ಅವಳ ಕೆನ್ನೆಗಳೆರಡೂ ಅವಳ ಹಿಂದಿನ ಕಪ್ಪು ಹೊಳಪನ್ನು ಬಿಟ್ಟು ಕೋಮಲ ಬಿಳುಪು ಬಣ್ಣವಾಗಿರುವುದು. ಈಗ ಅವಳ ನಡೆನುಡಿ-ಭಾವಭಂಗಿಯಲ್ಲಿ ಯಾವರೀತಿಯ ಜಡತೆಯೂ ಇಲ್ಲ. ಇಂದು ಮನೆಯೊಳಕ್ಕೆ ಬಂದು ಅವಳು ತೆಳ್ಳನೆಯ ದೇಹವಲ್ಲಿ-ಸ್ವಲ್ಪ ಬಾಗಿದ ಮುಖದಿಂದ ತೆರೆದ ಕಿಟಕಿಯ ಎದುರಿಗೆ ನಿಂತಳು. ; ಅವಳ ಮುಖದ ಮೇಲೆ ಶರತ್ಕಾಲದ–ಮದ್ಯಾಹ್ನದ ಬಿಸಿಲು ಬಂದು ಬಿದ್ದಿತು. ಅವಳ ತಲೆಯ ಮೇಲೆ ಬಟ್ಟೆಯಿಲ್ಲ. ಮುಂದುಗಡೆ ಕೆಂಪು ರಿಬ್ಬನ್ ( ಟೇಪು ) ಕಟ್ಟಿದ ಜಡೆ ಬೆನ್ನ ಮೇಲೆ ಬಿದ್ದಿರುವುದು, ಮಾಸಲು ಹಳದೀ ಬಣ್ಣದ ಮೆರೂನ್ ಸೀರೆ ಅವಳ

ಅರಳುತಿರುವ ಶರೀರದಲ್ಲಿ ಸೇರಿ ಸುತ್ತಿಕೊಂಡಿದೆ–ಆಗ ರಮೇಶ ಅವಳ ಕಡೆ ಕ್ಷಣಕಾಲ ನೋಡಿ ಸುಮ್ಮನೆ ನಿಂತ.

ಕಮಲೆಯ ಸೌಂದರ್ಯ ಈ ಕೆಲವು ತಿಂಗಳಲ್ಲಿ ರಮೇಶನ ಮನದಲ್ಲಿ ನೆಳಲು ಬೆಳಕಿನಂತೆ ಮಸಕಾಗಿತ್ತು ; ಇಂದು ಅದೇ ಚೆಲುವು ಹೊಸ ಬಗೆಯಲ್ಲಿ ವಿಕಾಸಹೊಂದಿ ಒಮ್ಮೆಗೇ ಅವನನ್ನು ವಿಸ್ಮಯಗೊಳಿಸಿದೆ. ಅವನು ಇದಕ್ಕೆ ಸಿದ್ಧನಾಗಿರಲಿಲ್ಲ.

ರಮೇಶ, " ಕುಳಿತುಕೋ " ಎಂದ.

ಕಮಲ ಒಂದು ಕುರ್ಚಿಯಲ್ಲಿ ಕುಳಿತಳು. " ಶಾಲೆಯಲ್ಲಿ ನಿನ್ನ ಓದು ಬರೆಹ ಹೇಗೆ ನಡೆಯುತಿತ್ತು " ಎಂದ ರಮೇಶ

ಕಮಲೆ ಅತಿ ಸಂಕ್ಷೇಪವಾಗಿ " ಚೆನ್ನಾಗಿ " ಎಂದಳು.

" ಒಂದೇ ಬಾರಿಗೆ ಹೇಗೆ ಹೇಳಲು ಸಾಧ್ಯ " ಎಂದು ರಮೇಶ ಯೋಚಿಸಲಾರಂಭಿಸಿದ. ಇದ್ದಕ್ಕಿದ್ದಂತೆ ಒಂದು ಮಾತು ಮನಸಿಗೆ ಹೊಳೆಯಿತು–ಹೇಳಿದ, " ಬಹಳಹೊತ್ತಿನಿಂದ ಊಟವಿಲ್ಲವೆಂದು ಕಾಣುವುದು. ನಿನ್ನ ಊಟ ಸಿದ್ಧವಾಗಿದೆ. ಇಲ್ಲಿಗೇ ತರಹೇಳಲೇ ? "

"ಊಟ ಬೇಡ, ನಾನು ಊಟಮಾಡಿ ಬಂದಿರುವೆ" ಎಂದಳು ಕಮಲೆ.

ರಮೇಶ ಹೇಳಿದ, " ಸ್ವಲ್ಪವಾದರೂ ತಿನ್ನು ? ಮಿಠಾಯಿ ಬೇಡದಿದ್ದರೆ ಹಣ್ಣಿದೆ-ಸೀತಾಫಲ, ಸೇಬು, ದಾಳಿಂಬೆ—"

ಕಮಲ ಯಾವ ಮಾತೂ ಆಡದೆ ಕತ್ತಲ್ಲಾಡಿಸಿದಳು.

ರಮೇಶ ಮತ್ತೊಮ್ಮೆ ಕಮಲೆಯ ಮುಖದ ಕಡೆ ನೋಡಿದ, ಕಮಲೆ ಆಗ ಸ್ವಲ್ಪ ಮುಖ ಬಗ್ಗಿಸಿಕೊಂಡು ತನ್ನ ಇಂಗ್ಲೀಷು ಕಲಿಯುವ ಪುಸ್ತಕದಿಂದ ಚಿತ್ರ ನೋಡುತ್ತಿದ್ದಳು. ಸುಂದರ ಮುಖ, ಮಾಯೆಯ ಕೋಲಿನಂತೆ ತನ್ನ ನಾಲ್ಕೂಕಡೆಯಸುತ್ತ ಸೌಂದರ್ಯವನ್ನು ಕಾಂತಿಯುಕ್ತವನ್ನಾಗಿ ಮಾಡಿತು. ಶರತ್ಕಾಲದ ಬಿಸಿಲು ಆಗ ಜೀವ ಹೊಂದಿತು. ಆಶ್ವಯುಜದ ದಿನಗಳಲ್ಲಿ ಆಕಾರ ಧರಿಸಿತು. ಕೇಂದ್ರ ಹೇಗೆ ತನ್ನ ಪರಿಧಿಯನ್ನು ನಿಯಮಿಸಿ ಕೊಳ್ಳುವುದೋ ಹಾಗೆ ಈ ಹುಡುಗಿ ಆಕಾಶ, ಗಾಳಿ, ಬೆಳಕುಗಳನ್ನು ತನ್ನ ಸುತ್ತಲೂ ವಿಶೇಷ ರೀತಿಯಲ್ಲಿ ಆಕರ್ಷಿಸಿ ತಂದಳು. ಆದರೂ ಅವಳು ಸ್ವತಃ ಇವು ಯಾವುದನ್ನೂ ಅರಿಯದೆ ಸುಮ್ಮನೇ ಕುಳಿತು ತಾನು ಓದುವ ಪುಸ್ತಕದ ಚಿತ್ರ ನೋಡುತ್ತಿದ್ದಳು.

ರಮೇಶ ಅವಸರ ಅವಸರವಾಗಿ ಎದ್ದುಹೋಗಿ ಒಂದು ತಟ್ಟೆಯಲ್ಲಿ ಸ್ವಲ್ಪ ಸೇಬು, ಮರಸೇಬು, ದಾಳಿಂಬೆ ತೆಗೆದುಕೊಂಡು ಬಂದ. "ಕಮಲ, ನೀನು ತಿನ್ನುವುದಿಲ್ಲವೆಂದು ಕಾಣುವುದು, ನನಗೆ ಹಸಿವೆಯಾಗಿದೆ, ನಾನು ಇನ್ನು ನೆಪ ಹೇಳಲಾರೆ" ಎಂದ.

ಕೇಳಿ ಕಮಲ ಸ್ವಲ್ಪ ನಕ್ಕಳು. ಈ ಆಕಸ್ಮಿಕ ನಗುವಿನ ಪ್ರಕಾಶದಲ್ಲಿ ಇಬ್ಬರ ಮನಸಿನ ತಪ್ಪು ಭಾವನೆಯನ್ನೂ ಬಹಳವಾಗಿ ದೂರಮಾಡಿತು.

ರಮೇಶ ಕತ್ತಿಯಿಂದ ಸೇಬು ಕತ್ತರಿಸತೊಡಗಿದ, ಆದರೆ ಯಾವ ರೀತಿಯಲ್ಲೂ ರಮೇಶನ ಕೈಯಲ್ಲಿ ಸಾಮರ್ಥ್ಯವಿರಲಿಲ್ಲ. ಅವನಿಗೆ ಬಹಳ ಹಸಿವು. ಮತ್ತೊಂದುಕಡೆ ಹೇಗೆಹೇಗೋ ಕತ್ತರಿಸುವ ಭಂಗಿ ನೋಡಿ ಹುಡುಗಿಗೆ ಬಹಳ ನಗು ಬಂತು—ಅವಳು ಖಿಲಖಿಲನೆ ನಕ್ಕಳು.

ರಮೇಶ ಈ ಹಾಸ್ಯೋಚ್ಛ್ವಾಸದಿಂದ ಸಂತೋಷಗೊಳ್ಳುತ್ತ, "ನನಗೆ ಚೆನ್ನಾಗಿ ಕತ್ತರಿಸಲು ಬಾರದು ಎಂದು ತಿಳಿದಿರುವೆಯಾ. ಸರಿ, ಕತ್ತರಿಸು ನೋಡೋಣ. ನಿನ್ನ ವಿದ್ಯೆ ಹೇಗೆ" ಎಂದು ಹೇಳಿದ.

"ಈಳಿಗೆಮಣೆಯಾಗಿದ್ದಿದ್ದರೆ ನಾನು ಹೆಚ್ಚುತ್ತಿದ್ದೆ, ಚಾಕುವಿನಿಂದ ಸಾಧ್ಯವಿಲ್ಲ" ಎಂದಳು ಕಮಲ.

ರಮೇಶ ಹೇಳಿದ, "ಈಳಿಗೆ ಮಣೆ ಇಲ್ಲಿಲ್ಲವೆಂದು ನೀನು ತಿಳಿದಿರುವೆಯಾ" ಎಂದು ಸೇವಕನನ್ನು ಕರೆದು "ಈಳಿಗೆ ಮಣೆ ಇದೆಯೇ" ಎಂದು ಕೇಳಿದ. "ಅವನು 'ಇದೆ', ರಾತ್ರಿ ಊಟಕ್ಕೆ ಎಲ್ಲವನ್ನೂ ತಂದಿದೆ" ಎಂದ.

"ಚೆನ್ನಾಗಿ ತೊಳೆದು ಒಂದು ಈಳಿಗೆ ಮಣೆ ತೆಗೆದುಕೊಂಡು ಬಾ" ಎಂದ ರಮೇಶ.

ಸೇವಕ ಈಳಿಗೆ ಮಣೆ ತಂದ.

ಕಮಲೆ ಎಕ್ಕಡ ಬಿಟ್ಟು ಈಳಿಗೆ ಮಣೆಯ ಬಳಿ ಕೆಳಗೆ ಕುಳಿತಳು ಮತ್ತು ನಗು ಮುಖದಿಂದ ನಿಪುಣ ಹಸ್ತದಿಂದ ಹೆರೆದು ಹೆರೆದು ಹಣ್ಣಿನ ಸಿಪ್ಪೆ ತೆಗೆದು ಹೋಳುಹೋಳಾಗಿ ಹೆಚ್ಚತೊಡಗಿದಳು. ರಮೇಶ ಅವಳ ಎದುರಿಗೆ ನೆಲದ ಮೇಲೆ ಕುಳಿತು ಹಣ್ಣಿದ ಚೂರುಗಳನ್ನು ತಟ್ಟೆಯಲ್ಲಿ ತುಂಬಿದ.

"ನೀನೂ ತಿನ್ನಬೇಕು" ಎಂದ ರಮೇಶ.

"ಊಹೂಂ" ಎಂದಳು ಕಮಲ.

" ಹಾಗಾದರೆ ನಾನೂ ತಿನ್ನುವುದಿಲ್ಲ " ಎಂದ ರಮೇಶ. ಕಮಲ ರಮೇಶನ ಮುಖದ ಮೇಲೆ ಎರಡು ಕಣ್ಣುಗಳನ್ನೂ ನೆಟ್ಟು, " ಸರಿ, ನೀನು ಮೊದಲು ತಿನ್ನು. ಆಬಳಿಕ ನಾನು ತಿನ್ನುವೆ " ಎಂದಳು.

"ನೋಡು, ಕಡೆಗೆ ಮೋಸಮಾಡಬಾರದು" ಎಂದ ರಮೇಶ. ಕಮಲೆ ಗಂಭೀರ ಭಾವದಿಂದ ಕತ್ತಲ್ಲಾಡಿಸುತ್ತ, "ಇಲ್ಲ, ಸತ್ಯವಾಗಿ ಹೇಳುವೆ, ಮೋಸ ಮಾಡುವುದಿಲ್ಲ " ಎಂದಳು.

ಹುಡುಗಿಯ ಈ ಸತ್ಯ ಪ್ರತಿಜ್ಞೆಯಿಂದ ಸಮಾಧಾನಗೊಂಡ ರಮೇಶ ತಟ್ಟೆಯಿಂದ ಒಂದು ಚೂರು ಹಣ್ಣು ತೆಗೆದು ಬಾಯಿಗೆ ಹಾಕಿಕೊಂಡ.

ಇದ್ದಕ್ಕಿದ್ದಂತೆ ಅವನ ದವಡೆ ನಿಂತುಹೋಯಿತು. ಆಕಸ್ಮಿಕವಾಗಿ ತನ್ನೆದುರುಗಡೆ, ನೋಡಿದ, ಬಾಗಿಲ ಹೊರಗೆ ಯೋಗೇಂದ್ರ ಮತ್ತು ಅಕ್ಷಯ ಬಂದು ನಿಂತಿರುವರು.

ಅಕ್ಷಯ ಹೇಳಿದ, " ರಮೇಶ ಬಾಬು, ಕ್ಷಮಿಸಬೇಕು, ನೀವು ಇಲ್ಲಿ ಒಂಟಿಯಾಗಿರುವಿರಿ ಎಂದು ನಾನು ಭಾವಿಸಿದ್ದೆ. ಯೋಗೇನ್, ಸುದ್ದಿ ತಿಳಿಸದೆ ಇದ್ದಕ್ಕಿದ್ದಂತೆ ಹೀಗೆ ಬಂದು ಸೇರಿದ್ದು ಸರಿಯಾಗಲಿಲ್ಲ. ನಡೆ, ನಾವು ಕೆಳಗೆ ಹೋಗಿ ಕುಳಿತುಕೊಳ್ಳೋಣ ".

ಈಳಿಗೆ ಮಣೆ ಬಿಟ್ಟು ಕಮಲೆ ಗಾಬರಿಯಿಂದ ಎದ್ದು ನಿಂತಳು. ಮನೆಯಿಂದ ಪಲಾಯನವಾಗುವ ಮಾರ್ಗವೊಂದೇ ಇಬ್ಬರಿಗೂ ಉಳಿದಿತ್ತು. ಯೋಗೇಂದ್ರ ಸ್ವಲ್ಪ ಸರಿದುಕೊಂಡು ದಾರಿಬಿಟ್ಟ, ಆದರೆ ಕಮಲೆಯ ಮುಖದ ಮೇಲಿಂದ ಕಣ್ಣು ತೆಗೆಯಲಿಲ್ಲ-ಅವಳನ್ನು ತೀವ್ರದೃಷ್ಟಿಯಿಂದ ನಿಟ್ಟಿಸಿದ. ಕಮಲ ಸಂಕೋಚದಿಂದ ಪಕ್ಕದ ಕೊಠಡಿಗೆ ಹೊರಟುಹೋದಳು.

## ೧೯

ಯೋಗೇಂದ್ರ, " ರಮೇಶ, ಈ ಹುಡುಗಿ ಯಾರು " ಎಂದು ಕೇಳಿದ.

" ನನ್ನ ನೆಂಟಳು " ಎಂದ ರಮೇಶ.

" ಯಾವ ರೀತಿಯಲ್ಲಿ ನೆಂಟಳು. ಹಿರಿಯಳಲ್ಲವೆಂದು ತೋರುವುದು. ಸ್ನೇಹದ ನೆಂಟಸ್ಥಿಕೆಯಂತೆಯೂ ಕಾಣುವುದಿಲ್ಲ. ನಿನ್ನ ಎಲ್ಲ ಆತ್ಮೀಯರ ವಿಷಯವನ್ನೂ ನಿನ್ನಿಂದ ಕೇಳಿರುವೆ, ಈ ನೆಂಟಳ ವಿಷಯವಾಗಿ ಎಂದೂ ಕೇಳಿರಲಿಲ್ಲವಲ್ಲ " ಎಂದು ಯೋಗೇಂದ್ರ ಕೇಳಿದ.

" ಯೋಗೇಶ್, ಇದು ಬಹಳ ಅನ್ಯಾಯ, ಸ್ನೇಹಿತರ ಹತ್ತಿರ ರಹಸ್ಯವಾಗಿಡುವ ವಿಷಯ ಮನುಷ್ಯರಿಗೆ ಇರುವುದೆ ಇಲ್ಲವೇನು ?" ಎಂದು ಅಕ್ಷಯ ಹೇಳಿದ

ಯೋಗೇಂದ್ರ—" ಏನು ರಮೇಶ, ಬಹಳ ಗೋಪನೀಯವೇನು ? "

ರಮೇಶನ ಮುಖ ಕೆಂಪಾಯಿತು. ಅವನು, " ಹೌದು, ಗೋಪ್ಯ. ಈ ಹುಡುಗಿಯ ವಿಷಯವಾಗಿ ನಾನು ನಿಮ್ಮೊಡನೆ ಯಾವ ಮಾತನ್ನೂ ಹೇಳ ಬಯಸುವುದಿಲ್ಲ " ಎಂದ.

ಯೋಗೇಂದ್ರ—ಆದರೆ ದುರದೃಷ್ಟವಶದಿಂದ, ನಾನು ನಿನ್ನೊಡನೆ ಮಾತನಾಡಲು ಅತಿ ಉತ್ಸುಕನಾಗಿರುವೆ. ಹೇಮಳೊಡನೆ ಒಂದುವೇಳೆ ನಿನ್ನ ಮದುವೆ ನಿಶ್ಚಯವಾಗದಿದ್ದಿದ್ದರೆ, ಯಾರೊಡನೆಯಾದರೂ ನಿನಗೆ ಯಾವ ನೆಂಟಸ್ಥಿಕೆಯಾದರೂ ಇರಬಹುದಾಗಿತ್ತು. ಆ ವಿಷಯವಾಗಿ ಇಷ್ಟು ವಿಚಾರಣೆ ನಡೆಸಬೇಕಾದ ಅಗತ್ಯವೂ ಇರಲಿಲ್ಲ-ಯಾವುದು ರಹಸ್ಯವೋ ಅದು ರಹಸ್ಯವಾಗಿಯೇ ಇರಬಹುದಾಗಿತ್ತು.

" ನಾನು ನಿನಗೆ ಇಷ್ಟು ಮಾತ್ರ ಹೇಳಬಲ್ಲೆ, ಹೇಮನಳಿನಿಯೊಡನೆ ಪವಿತ್ರಸಂಬಂಧವಿಟ್ಟುಕೊಳ್ಳಲು ನನಗೆ ಅಡ್ಡಿ ಮಾಡುವಂಥ ಯಾವ ಸಂಬಧವೂ ಯಾರೊಡನೆಯೂ ಜಗತ್ತಿನಲ್ಲಿ ನನಗಿರುವುದಿ " ಎಂದು ರಮೇಶ ಹೇಳಿದ.

ಯೋಗೇಂದ್ರ—" ಬಹುಶಃ ನಿನಗೆ ಯಾವುದೂ ಅಡ್ಡಿ ಬರದಿರಬಹುದು. ಆದರೆ ಹೇಮನಳಿನಿಯ ಆತ್ಮೀಯರಿಗೆ ಅಡ್ಡಿ ಬರಬಹುದು. ನಾನು ನಿನ್ನನ್ನು ಕೇಳುವುದಿಷ್ಟೆ ! ನಿನಗೆ ಯಾರೊಡನೆ ಯಾವ ಸಂಬಂಧವಾದರೂ ಇರಲಿ, ಅದನ್ನು ರಹಸ್ಯವಾಗಿಡಲು ಕಾರಣವೇನು ? "

ರಮೇಶ—ಆ ಕಾರಣ ಹೇಳಿದರೆ, ಗೋಪ್ಯವಾಗಿಡಲು ಸಾಧ್ಯವಿಲ್ಲ. ನೀನು ಬಾಲ್ಯದಿಂದಲೂ ನನ್ನನ್ನು ಬಲ್ಲೆ-ಯಾವ ಕಾರಣವನ್ನೂ ಕೇಳದೆ ಕೇವಲ ನನ್ನ ಮಾತಿನಲ್ಲಿ ನೀವು ನಂಬಿಕೆ ಇಡಬೇಕು.

ಯೋಗೇಂದ್ರ—ಈ ಹುಡುಗಿಯ ಹೆಸರು ಕಮಲ ಎಂದಲ್ಲವೆ ?

ರಮೇಶ—ಹೌದು.

ಯೋಗೇಂದ್ರ—ಇವಳನ್ನು ನಿನ್ನ ಹೆಂಡತಿಯೆಂದು ಹೇಳಿಕೊಂಡಿರುವೆಯಲ್ಲವೆ.

ರಮೇಶ—ಹೌದು ಹೇಳಿಕೊಂಡಿರುವೆ.

ಯೋಗೇಂದ್ರ—ಆದರೂ ನಿನ್ನಲ್ಲಿ ನಂಬಿಕೆ ಇಡಬೇಕು ? ' ಈ ಹುಡುಗಿ ನಿನ್ನ ಹೆಂಡತಿ ಅಲ್ಲವೆಂದು ; ' ನೀನು ನಮಗೆ ತಿಳಿಸಬಯಸುವೆ ಇತರರಿಗೆ ' ಇವಳು ನನ್ನ ಹೆಂಡತಿ ' ಎಂದು ಹೇಳುವೆ, ಇದು ಖಂಡಿತ ಸತ್ಯಪರಾಯಣತೆಯ ದೃಷ್ಟಾಂತವಲ್ಲ.

ಅಕ್ಷಯ–ಅಲ್ಲದೆ ವಿಶ್ವವಿದ್ಯಾಲಯದ ನೀತಿಬೋಧೆಯಲ್ಲೂ ಈ ದೃಷ್ಟಾಂತ ಸಂಬೀಳದು. ಆದರೆ ಅಪ್ಪಾ ಯೋಗೇನ್, ಜಗತ್ತಿನಲ್ಲಿ ಎರಡು ಪಕ್ಷದವರಿಗೆ ಎರಡು ಬಗೆಯ ಮಾತು ಹೇಳುವುದಕ್ಕೆ ಅವಸ್ಥಾವಿಶೇಷದ ಆವಶ್ಯಕತೆ ಇರಬಹುದು. ಮೊದಲಿನಿಂದ ಕಡೆಯವರೆಗೆ ಅದರಲ್ಲಿ ಒಂದು ಸತ್ಯವಿರಬಹುದು ಪ್ರಾಯಃ ರಮೇಶಬಾಬು ನಿಮಗೆ ಏನು ಹೇಳುತ್ತಿರುವರೋ ಅದೂ ಸತ್ಯ.

ರಮೇಶ—ನಾನು ನಿಮಗೆ ಯಾವ ಮಾತೂ ಹೇಳುತ್ತಿಲ್ಲ. ಹೇಮನಳಿನಿಯೊಡನೆ ನನ್ನ ವಿವಾಹ ಕರ್ತವ್ಯವಿರುದ್ಧವಲ್ಲ, ಎಂದು ಮಾತ್ರ ನಾನು ಹೇಳುವೆ. ಕಮಲೆಯ ವಿಷಯವಾಗಿ ನಿಮ್ಮೊಡನೆ ಎಲ್ಲ ವಿಷಯವನ್ನೂ ಹೇಳಲು ಬಹಳ ಅಡ್ಡಿ ಇದೆ–ನೀನು ನನ್ನಲ್ಲಿ ಸಂದೇಹಗೊಂಡರೂ ಆ ಅನ್ಯಾಯಕ್ಕೆ ನಾನು ಏನೂ ಮಾಡಲಾರೆ. ನನ್ನ ಸ್ವಂತ ಸುಖ–ದುಃಖ, ಮಾನ–ಅವಮಾನಗಳ ವಿಷಯವಾಗಿದ್ದಿದ್ದರೆ ನಾನು ನಿಮ್ಮಲ್ಲಿ ಗೋಪ್ಯಮಾಡುತಿರಲಿಲ್ಲ. ಆದರೆ ಇತರರ ವಿಷಯದಲ್ಲಿ ಅನ್ಯಾಯಮಾಡಲಾರೆ.

ಯೋಗೇಂದ್ರ—ಎಲ್ಲವನ್ನೂ ಹೇಮನಳಿನಿಗೆ ಹೇಳಿರುವೆಯೊ.

ರಮೇಶ—" ಇಲ್ಲ ಮದುವೆಯಾದ ಬಳಿಕ ಅವಳಿಗೆ ತಿಳಿಸಬೇಕೆಂದು ತೀರ್ಮಾನಿಸಿರುವೆ. ಒಂದುವೇಳೆ ನೀವು ಇಷ್ಟಪಟ್ಟರೆ, ಈಗಲೇ ಅವಳಿಗೆ ಹೇಳುವೆ ".

ಯೋಗೇಂದ್ರ—ಸರಿ, ಕಮಲೆಯನ್ನು ಈ ವಿಷಯವಾಗಿ ಒಂದೆರಡು ಪ್ರಶ್ನೆ ಕೇಳಬಹುದೆ ?

ರಮೇಶ—ಉಹೂಂ, ಖಂಡಿತ ಸಾಧ್ಯವಿಲ್ಲ. ನನ್ನನ್ನು ಒಂದುವೇಳೆ ಅಪರಾಧಿ ಎಂದು ತಿಳಿಯುವಿರಾದರೆ, ಆಗ ನನಗೆ ಯಥೋಚಿತ ಶಿಕ್ಷೆಮಾಡಬಹುದು—ಆದರೆ ನಿಮ್ಮೆದುರಿಗೆ ಪ್ರಶ್ನೋತ್ತರ ಮಾಡಲು ನಿರ್ದೋಷಿ ಕಮಲೆಯನ್ನು ನಿಲ್ಲಿಸಲು ಸಾಧ್ಯವಿಲ್ಲ.

ಯೋಗೇಂದ್ರ—ಯಾರನ್ನೂ ಪ್ರಶ್ನಿಸಬೇಕಾದ ಯಾವ ಅಗತ್ಯವೂ ಇಲ್ಲ. ಏನು ತಿಳಿಯಬೇಕೋ, ಅದನ್ನು ತಿಳಿದುಕೊಂಡೆ. ಪ್ರಮಾಣ

ಯಥೇಷ್ಟವಾಗಿದೆ. ಈಗ ನಿನಗೆ ನಾನು ಸ್ಪಷ್ಟವಾಗಿ ಹೇಳುತ್ತಿರುವೆ, ಈ ಬಳಿಕ ನಮ್ಮ ಮನೆಗೆ ಬರುವ ಪ್ರಯತ್ನವನ್ನೇನಾದರೂ ಮಾಡಿದ್ದೇ ಆದರೆ, ಆಗ ನಿನ್ನನ್ನು ಅವಮಾನಗೊಳಿಸಬೇಕಾದೀತು.

ಬಣ್ಣಗೆಟ್ಟ ಮುಖದೊಡನೆ ರಮೇಶ ಸ್ತಬ್ಧನಾಗಿ ಕುಳಿತಿದ್ದ.

" ಇನ್ನೊಂದು ಮಾತು—ಹೇಮನಳಿನಿಗೆ ನೀನು ಪತ್ರ ಬರೆಯಬಾರದು. ಅವಳೊಡನೆ ಬಹಿರಂಗ ಅಥವಾ ಅಂತರಂಗವಾಗಿಯೂ ನಿನ್ನ ಗಾಢ ಸಂಬಂಧ ಉಳಿಯದು. ಪತ್ರಬರೆದರೂ, ಯಾವ ವಿಷಯವನ್ನೂ ನೀನು ರಹಸ್ಯವಾಗಿ ಡಲು ಇಷ್ಟಪಟ್ಟರೂ, ಆ ವಿಷಯವಾಗಿ ಸಮಸ್ತ ಪ್ರಮಾಣದೊಡನೆ ಎಲ್ಲರೆದು ರಿಗೂ ಪ್ರಕಟಪಡಿಸುವೆ ; ನಿನ್ನೊಡನೆ ಹೇಮಳ ಮದುವೆ ಏಕೆ ನಿಂತು ಹೋಯಿತು ಎಂದು ಯಾರಾದರೂ ಈಗ ನನ್ನನ್ನು ಕೇಳಿದರೆ, ಈ ಮದುವೆ ನನಗೆ ಒಪ್ಪಿಗೆಯಿಲ್ಲವೆಂದು ನಿಂತಿತು ಎನ್ನುವೆ. ಒಳಗುಟ್ಟು ಹೇಳುವುದಿಲ್ಲ. ಆದರೆ ನೀನು ಎಚ್ಚರಿಕೆಯಿಂದಿರದಿದ್ದರೆ, ಆಗ ಎಲ್ಲ ವಿಷಯವೂ ಬಹಿರಂಗ ವಾಗಿ ಹೋಗುವುದು. ನೀನು ಇಷ್ಟು ಆಷಾಡಭೂತಿಯಂತೆ ನಡೆದುಕೊಂಡಿರುವೆ. ಆದರೂ ನಾನು ನಿನ್ನ ವಿಷಯದಲ್ಲಿ ಸಮಾಧಾನ ತಾಳಿರುವೆ, ಅದು ನಿನ್ನ ಮೇಲೆ ದಯೆ ತೋರುವುದಕ್ಕಾಗಲ್ಲ— ಇದರಲ್ಲಿ ನನ್ನ ತಂಗಿ ಹೇಮಳ ಸಂಪರ್ಕವೂ ಇದ್ದುದರಿಂದಲೆ ನೀನು ಇಷ್ಟು ಸುಲಭವಾಗಿ ಬಿಡುಗಡೆ ಹೊಂದಿದೆ. ನಾನು ಕಡೆಯದಾಗಿ ನಿನಗೆ ಹೇಳುವುದಿಷ್ಟೆ ! ಗೂಢವಾಗಲೋ ಹೇಮಳೊಡನೆ ನಿನ್ನ-ಸ್ನೇಹವಿತ್ತು ಎಂಬ ವಿಷಯ ನಿನ್ನ ಮಾತುಕತೆಯಲ್ಲಾ ಗಲಿ ಅಥವಾ ವ್ಯವಹಾರದಲ್ಲಾಗಲಿ ಎಂದಿಗೂ ಸ್ಪಷ್ಟವಾಗುವಂತಿರಬಾರದು. ಈ ಸಂದರ್ಭದಲ್ಲಿ ನಿನ್ನಿಂದ ಆಣೆ ಇಡಿಸಲು ಇಷ್ಟವಿಲ್ಲ. ಕಾರಣ, ಇಷ್ಟು ಸುಳ್ಳಿನ ಬಳಿಕ ನಿನ್ನ ಬಾಯಿಯಲ್ಲಿಸತ್ಯ ಶೋಭಿಸದು. ಅಂತೆಯೇ ನಾಚಿಕೆ ಯೇನಾದರೂ ಇರುವುದಾದರೆ, ಅಪಮಾನವೇನಾದರೂ ಇರುವುದಾದರೆ, ನೀನು ಈ ಮಾತನ್ನು ಸ್ವಪ್ನದಲ್ಲೂತಿರಸ್ಕರಿಸಬೇಡ ".

ಅಕ್ಷಯ—ಆಹಾ ಯೋಗೇನ್, ಇನ್ನೇನು, ರಮೇಶಬಾಬು ನಿರುತ್ತರ ರಾಗಿರುವರು, ಆದರೂ ನಿನ್ನ ಮನಸಿನಲ್ಲಿ ದಯೆಯುಂಟಾಗಿದೆಯಲ್ಲವೆ ? ಇನ್ನು ಹೊರಡು. ರಮೇಶಬಾಬು, ನಾನು ಇಲ್ಲಿಗೆ ಬಂದೆ ಎಂದು ಮನಸಿಗೆ ಏನೂ ತಿಳಿದುಕೊಳ್ಳಬೇಡಿ.

ಯೋಗೇಂದ್ರ—ಅಕ್ಷಯ ಹೊರಟುಹೋದರು. ರಮೇಶ ಕಠೋರ ಮೂರ್ತಿಯಂತೆ ಕಠಿಣನಾಗಿ ಕುಳಿತಿದ್ದ. ಹತ ಬುದ್ಧಿಯ ಭಾವನೆ ಹೋದ ಮೇಲೆ, ಮನೆಯಿಂದ ಹೊರಗೆ ಹೋಗಿ ವೇಗವಾಗಿ ನಡೆದಾಡುತ್ತಾ ಎಲ್ಲ ಘಟನೆಗಳನ್ನೂ ಒಮ್ಮೆ ಸಿಂಹಾವಲೋಕನ ಮಾಡಬೇಕೆಂದು ಅವನಿಗೆ ಇಷ್ಟವಾಯಿತು. ಆದರೆ, ಕಮಲ ಇರುವಳು-ಅವಳನ್ನು ಮನೆಯಲ್ಲಿ ಒಂಟಿಯಾಗಿ ಬಿಟ್ಟುಹೋಗುವುದಕ್ಕಾಗುವುದಿಲ್ಲ ಎಂದು ತೋರಿತು.

ರಮೇಶ ಪಕ್ಕದ ಕೋಣೆಗೆ ಹೋಗಿ ನೋಡಿದ. ಕಮಲೆ ರಸ್ತೆಯ ಕಡೆಯ ಕಿಟಕಿಯ ಒಂದು ಬಾಗಿಲು ತೆರೆದು ಸುಮ್ಮನೆ ಕುಳಿತಿದ್ದಳು. ರಮೇಶನ ಕಾಲುಸಪ್ಪಳ ಕೇಳಿ ಅವಳು ಕಿಟಕಿ ಮುಚ್ಚಿ ಮುಖ ತಿರುಗಿಸಿ ನೋಡಿದಳು. ರಮೇಶ ಮೇಜೆಯ ಮೇಲೆ ಕುಳಿತ.

" ಅವರಿಬ್ಬರೂ ಯಾರು, ಇಂದು ಬೆಳಗ್ಗೆ ನಮ್ಮ ಶಾಲೆಗೆ ಬಂದಿದ್ದರು "? ಎಂದಳು ಕಮಲ.

ರಮೇಶ ಆಶ್ಚರ್ಯಮೊಡನೆ ಕೇಳಿದ, " ಶಾಲೆಗೆ ಬಂದಿದ್ದರೆ " ?

" ಹೌದು ಅವರು ನಿನಗೇನು ಹೇಳಿದರು " ಎಂದು ಕಮಲ ಕೇಳಿದಳು.

ರಮೇಶ, " ನೀನು ನನಗೆ ಏನಾಗಬೇಕು ಎಂದು ನನ್ನನ್ನು ಕೇಳುತಿದ್ದರು " ಎಂದ.

ಕಮಲ ಅತ್ತೆಯ ಮನೆಯ ಮೇಲ್ವಿಚಾರಣೆಯ ಅಭಾವದಿಂದ ನಾಚುವುದನ್ನು ಕಲಿಯಲಿಲ್ಲವಾದರೂ, ಆಶೈಶವ-ಸಂಸ್ಕಾರವಶದಿಂದ ರಮೇಶನ ಈ ಮಾತಿನಿಂದ ಅವಳ ಮುಖ ಕೆಂಪಾಯಿತು.

ರಮೇಶ, " ನೀನು ನನಗೇನೂ ಆಗಬೇಕಿಲ್ಲ ಎಂದು ಅವರಿಗೆ ನಾನು ಉತ್ತರ ಹೇಳಿದೆ" ಎಂದ.

ಕಮಲ, ರಮೇಶ ತನ್ನನ್ನು ಅನ್ಯಾಯವಾಗಿ ನಾಚಿಕೆಗೊಳಿಸುತ್ತ ಕಾಡುತ್ತಿರುವನು ಎಂದು ಭಾವಿಸಿದಳು. ಅವಳು ಮುಖ ತಿರುಗಿಸಿಕೊಂಡು ಗದರು ಧ್ವನಿಯಲ್ಲಿ '' ಹೋಗು '' ಎಂದಳು.

ರಮೇಶ ಕಮಲೆಯ ಬಳಿ ಎಲ್ಲ ಸಂಗತಿಯನ್ನೂ ಹೇಗೆ ಬಹಿರಂಗ ಪಡಿಸುವುದು ಎಂದು ಆಲೋಚಿಸತೊಡಗಿದ.

ಕಮಲ ಇದ್ದಕ್ಕಿದ್ದಂತೆ ಬೆಚ್ಚಿ ಬಿದ್ದು, " ಅದೋ, ನಿನ್ನ ಹಣ್ಣನ್ನು ಕಾಗೆ ತೆಗೆದುಕೊಂಡು ಹೋಗುತಿದೆ" ಎಂದಳು. ಹೀಗೆಂದು ಅವಳು ಅವಸರ

ದಿಂದ ಪಕ್ಕದ ಕೊಠಡಿಗೆ ಹೋಗಿ ಕಾಗೆ ಓಡಿಸಿ ಹಣ್ಣಿನ ತಟ್ಟೆ ತೆಗೆದುಕೊಂಡು ಬಂದಳು.

ರಮೇಶನ ಎದುರಿಗೆ ತಟ್ಟೆ ಇಡುತ್ತ " ನೀನು ತಿನ್ನುವುದಿಲ್ಲವೆ ? " ಎಂದಳು.

ಆಗ ರಮೇಶನಿಗೆ ಆಹಾರದಲ್ಲಿ ಉತ್ಸಾಹವಿರಲಿಲ್ಲ—ಆದರೆ ಕಮಲೆಯ ಈ ಪ್ರಯತ್ನ ಅವನ ಹೃದಯವನ್ನು ಸ್ಪರ್ಶಿಸಿತು. ಅವನು ಹೇಳಿದ, " ಕಮಲಾ, ನೀನು ತಿನ್ನುವುದಿಲ್ಲವೆ ? ".

" ನೀನು ಮೊದಲು ತಿನ್ನು " ಎಂದಳು ಕಮಲ.

ಇಷ್ಟೇ ಮಾತುಕತೆ. ಬೇರೆ ಏನೂ ಇಲ್ಲ. ಆದರೆ ರಮೇಶನ ಆಗಿನ ಸ್ಥಿತಿಯಲ್ಲಿ ಈ ಹೃದಯದ ಕೋಮಲ ಪ್ರಕಾಶವೂ ಅವನ ವಕ್ಷಸ್ಥಳದೊಳಗಿನ ಕಣ್ಣೀರ ಬುಗ್ಗೆಯನ್ನೊಡೆಯಿತು. ರಮೇಶ ಯಾವ ಮಾತೂ ಆಡದೆ ಬಲಾತ್ಕಾರದಿಂದ ಹಣ್ಣು ತಿನ್ನಲಾರಂಭಿಸಿದ.

ಊಟದ ಕೆಲಸ ಮುಗಿದ ಮೇಲೆ ರಮೇಶ, " ಕಮಲ ಈ ದಿನ ರಾತ್ರಿ ನಮ್ಮೂರಿಗೆ ಹೋಗೋಣ " ಎಂದ.

ಕಮಲ ದೃಷ್ಟಿಯನ್ನು ಕೆಳಕ್ಕಿಳಿಸಿ, ಮುಖವನ್ನು ವಿವರ್ಣವಾಗಿ ಮಾಡಿಕೊಂಡು " ಅಲ್ಲಿ ನನಗೆ ಒಗ್ಗುವುದಿಲ್ಲ " ಎಂದಳು.

ರಮೇಶ—ಶಾಲೆಯಲ್ಲಿರಲು ಸರಿಬೀಳುವುದೆ ?

ಕಮಲ—ಇಲ್ಲ. ನನ್ನನ್ನು ಶಾಲೆಗೆ ಕಳುಹಿಸಬೇಡ. ನನಗೆ ನಾಚಿಕೆಯಾಗುವುದು. ಹುಡುಗಿಯರು ನನ್ನ ಹತ್ತಿರ ನಿನ್ನ ವಿಷಯ ವಿಚಾರಿಸುವರು.

ರಮೇಶ—ನೀನೇನು ಹೇಳುವೆ ?

ಕಮಲ—ನಾನೇನೂ ಹೇಳುತ್ತಿರಲಿಲ್ಲ. ನೀನು ರಜದಲ್ಲಿ ನನ್ನನ್ನು ಶಾಲೆಯಲ್ಲಿರಿಸಲು ಕಾರಣವೇನೆಂದು ಅವರು ಕೇಳುತಿದ್ದರು—ನಾನು . . . .

ಕಮಲೆಗೆ ಮಾತು ಮುಗಿಸಲಾಗಲಿಲ್ಲ. ಅವಳ ಹೃದಯದ ನೊಂದ ಭಾಗದಲ್ಲಿ ಪುನಃ ದುಃಖ ಮಿಡಿಯಿತು.

ರಮೇಶ—ಅವರು ನನಗೇನೂ ಆಗಬೇಕಾಗಿಲ್ಲ ಎಂದು ನೀನೇಕೆ ಅವರಿಗೆ ಹೇಳಲಿಲ್ಲ ?

ಕಮಲೆ ಕೋಪಿಸಿಕೊಂಡ ರಮೇಶನ ಮುಖದ ಕಡೆ ವಕ್ರನೋಟ ನೋಡುತ್ತ " ಹೋಗು " ಎಂದಳು.

ಮತ್ತೆ ರಮೇಶ ಒಳಗೊಳಗೇ "ಏನು ಮಾಡುವುದು ?" ಎಂದು ಆಲೋಚಿಸತೊಡಗಿದ. ಇತ್ತ ರಮೇಶನ ಹೃದಯದೊಳಗೆ ಬಾರಿಬಾರಿಗೂ ಒಂದು ತೀವ್ರ ವೇದನೆ ಕೀಟದಂತೆ ಆಳವಾಗಿ ಕೊರೆದು ಹೊರ ಬರಲು ಪ್ರಯತ್ನಿಸುತಿತ್ತು. ಇಷ್ಟು ಹೊತ್ತಿಗೆ ಯೋಗೇಂದ್ರ ಹೇಮನಳಿನಿಗೆ ಏನು ಹೇಳಿರಬಹುದು, ನಿಜಸ್ಥಿತಿಯನ್ನು ಹೇಗೆ ಹೇಮನಳಿನಿಗೆ ತಿಳಿಸುವುದು, ಹೇಮನಳಿನಿಯೊಡನೆ ಎಂದೆಂದಿಗೂ ತನ್ನ ಅಗಲಿಕೆಯಾಗಬಹುದು, ಆಗ ಜೀವಿಸುವುದು ಹೇಗೆ—ಈ ಎಲ್ಲ ಜ್ವಾಲಾಮಯ ಪ್ರಶ್ನೆ ಒಳಗೊಳಗೇ ಸಂಗ್ರಹ ವಾಗತೊಡಗಿತು. ಆದರೂ ಸರಿಯಾಗಿ ಅವನ್ನು ಆಲೋಚಿಸುವ ಅವಕಾಶ ದೊರೆಯುತ್ತಿರಲಿಲ್ಲ. ಕಮಲೆಯೊಡನೆ ರಮೇಶನ ಸಂಬಂಧ ಕಲ್ಕತ್ತೆಯಲ್ಲಿ ಅವನ ಸ್ನೇಹಿತರ ಮತ್ತು ಶತ್ರುಮಂಡಲಿಯ ನಡುವೆ ತೀವ್ರ ಆಲೋಚನೆಯ ವಿಷಯವಾಗಿರುವುದು ರಮೇಶನಿಗೆ ತಿಳಿದಿತ್ತು. ರಮೇಶ ಕಮಲೆಯ ಗಂಡ, ಈ ಅಪಪ್ರಚಾರದಲ್ಲಿ ಆ ಜನರ ಹೇಳಿಕೆ ಸಾಕಷ್ಟು ವ್ಯಾಪಿಸಿತು. ಇಂಥ ವೇಳೆಯಲ್ಲಿ ರಮೇಶ ಕಮಲೆಯನ್ನು ಇಟ್ಟುಕೊಂಡು ಒಂದು ದಿನವೂ ಕಲ್ಕತ್ತೆ ಯಲ್ಲಿರುವುದು ಉಚಿತವಲ್ಲ. ಅನ್ಯಮನಸ್ಕ ರಮೇಶನ ಆ ಚಿಂತೆಯ ನಡುವೆ ಇದ್ದಕ್ಕಿದ್ದಂತೆ ಕಮಲೆ ಅವನ ಮುಖದ ಕಡೆ ನೋಡುತ್ತಾ ಹೇಳಿದಳು, "ನೀನು ಏನು ಯೋಚಿಸುತಿರುವೆ ? ನೀನು ಊರಿನಲ್ಲಿರಲು ಇಷ್ಟಪಟ್ಟರೆ ನಾನೂ ಅಲ್ಲಿಯೇ ಇರುವೆ."

ಹುಡುಗಿಯ ಬಾಯಿಂದ ಈ ಆತ್ಮಸಂಯಮದ ಮಾತು ಕೇಳಿ ರಮೇಶನ ಹೃದಯ ಮತ್ತೊಮ್ಮೆ ನೊಂದಿತು—ಪುನಃ ಅವನು ಯೋಚಿಸತೊಡಗಿದ "ಏನು ಮಾಡುವುದು ?" ಮೇಲೂ ಅವನು ಅನ್ಯಮನಸ್ಕನಾಗಿ ಯೋಚಿಸುತ್ತ ಯೋಚಿಸುತ್ತ ನಿರುತ್ತರನಾಗಿ ಕಮಲೆಯ ಮುಖದ ಕಡೆ ನೋಡುತಿದ್ದ.

ಕಮಲ ಮುಖ ಗಂಭೀರ ಮಾಡಿಕೊಂಡು "ಒಳ್ಳೆಯದು, ನಾನು ರಜದಲ್ಲಿ ಶಾಲೆಯಲ್ಲಿರಲು ಇಷ್ಟಪಡಲಿಲ್ಲವೆಂದು ನೀನು ಕೋಪಿಸಿಕೊಂಡಿರು ವೆಯಾ ? ನಿಜ ಹೇಳು" ಎಂದು ವಿಚಾರಿಸಿದಳು

"ಖಂಡಿತವಾಗಿ ಹೇಳುವೆ, ನಿನ್ನ ಮೇಲೆ ಕೋಪವಿಲ್ಲ, ನಾನು ನನ್ನ ಮೇಲೆಯೇ ಕೋಪಗೊಂಡಿರುವೆ" ಎಂದ ರಮೇಶ.

ರಮೇಶ ಭಾವನೆಯ ಜಾಲದಿಂದ ಬಲವಂತವಾಗಿ ತನ್ನನ್ನು ಬಿಡಿಸಿ ಕೊಂಡು ಕಮಲೆಯೊಡನೆ ಮಾತಾಡಲು ತೊಡಗಿದ. "ಅದು ಸರಿ ಕಮಲ,

ಶಾಲೆಯಲ್ಲಿ ಇಷ್ಟು ದಿನ ಏನು ಕಲಿತೆ ಹೇಳು ಕೇಳೋಣ " ಎಂದು ಅವಳನ್ನು ಕೇಳಿದ.

ಕಮಲೆ ಅತ್ಯಂತ ಉತ್ಸಾಹದೊಡನೆ ತನ್ನ ಶಿಕ್ಷಣದ ಪರಿಚಯ ಕೊಡ ತೊಡಗಿದಳು. ಈಗ ಭೂಮಿ ಗುಂಡಾಗಿರುವ ಸಂಗತಿ ಅವಳಿಗೆ ತಿಳಿಯದ್ದಲ್ಲ, ಎಂದು ಹೇಳಿ ಅವಳು ರಮೇಶನನ್ನು ಬೆರಗುಗೊಳಿಸಲು ಪ್ರಯತ್ನಿಸಿದಳು.

ರಮೇಶ ಮುಖ ಗಂಭೀರ ಮಾಡಿಕೊಂಡು ಭೂಮಂಡಲದ ಗೋಳಾಕಾರದಲ್ಲಿ ಸಂದೇಹ ವ್ಯಕ್ತಪಡಿಸಿದ. " ಇದು ಎಂದಾದರೂ ಸಾಧ್ಯವೇ " ಎಂದ.

ಕಮಲ ಕಣ್ಣರಳಿಸಿಕೊಂಡು ಹೇಳಿದಳು " ಚೆನ್ನಾಯಿತು, ನಮ್ಮ ಪುಸ್ತಕದಲ್ಲಿ ಬರೆದಿದೆ—ನಾವು ಓದಿರುವೆವು ".

ರಮೇಶ ಆಶ್ಚರ್ಯ ತೋರಿಸುತ್ತ, " ಏನು ಹೇಳಿದೆ, ಪುಸ್ತಕದಲ್ಲಿ ಬರೆದಿದೆಯೆ ? ಎಷ್ಟು ದೊಡ್ಡ ಪುಸ್ತಕ " ಎಂದು ಕೇಳಿದ.

ಈ ಪ್ರಶ್ನೆಯಿಂದ ಕಮಲ ಸ್ವಲ್ಪ ನಾಚಿಕೊಂಡು ಹೇಳಿದಳು, " ಅಷ್ಟೇನೂ ದೊಡ್ಡ ಪುಸ್ತಕವಲ್ಲ—ಆದರೆ ಅಚ್ಚುಹಾಕಿದ ಪುಸ್ತಕ ಅದರಲ್ಲಿ ಚಿತ್ರ ಕೊಟ್ಟಿದೆ ".

ಇಷ್ಟು ದೊಡ್ಡ ಪ್ರಮಾಣದ ಬಳಿಕ ರಮೇಶ ಸೋಲು ಒಪ್ಪಿಕೊಳ್ಳ ಬೇಕಾಯಿತು. ಆಮೇಲೆ ಕಮಲೆಯ ಶಿಕ್ಷಣದ ವಿವರಣೆ ಮುಗಿಸಿ ವಿದ್ಯಾಲಯದ ವ್ಯವಸ್ಥಾಪಕಿ ಹಾಗೂ ಉಪಾಧ್ಯಾಯಿನಿಯರ ಮಾತು, ಅಲ್ಲಿಯ ದಿನಚರಿ ಕುರಿತು ಹರಟತೊಡಗಿದಳು. ರಮೇಶ ಅನ್ಯಮನಸ್ಕನಾಗಿ ಯೋಚಿಸುತ್ತ ನಡುನಡುವೆ ತಲೆಯಲ್ಲಾಡಿಸುತ್ತ, ಒಮ್ಮೊಮ್ಮೆ ಮಾತಿನ ಕಡೆಯ ಭಾಗವನ್ನು ಅನುಸರಿಸಿ ಒಂದೆರಡು ಪ್ರಶ್ನೆ ಕೇಳಿದ. ಒಮ್ಮೆ ಕಮಲ, "ನೀನು ನನ್ನ ಮಾತನ್ನು ಸ್ವಲ್ಪವೂ ಕೇಳುತ್ತಿಲ್ಲ" ಎಂದಳು. ಹೀಗೆ ಹೇಳಿ ಅವಳು ಕೋಪಿಸಿಕೊಂಡು ಕೂಡಲೇ ಎದ್ದಳು.

ರಮೇಶ ಗಾಬರಿಯಿಂದ, " ಇಲ್ಲ ಇಲ್ಲ ಕಮಲ, ಕೋಪಿಸಿಕೊಳ್ಳಬೇಡ, ಈ ದಿನ ನನ್ನ ಆರೋಗ್ಯ ನೆಟ್ಟಗಿಲ್ಲ " ಎಂದ.

" ನೆಟ್ಟಗಿಲ್ಲ " ಎಂದು ಕೇಳಿ ಆಗ ಕಮಲ ಹಿಂದಿರುಗಿ ಬಂದು ; " ನಿನಗೆ ಹುಷಾರಿಲ್ಲವೆ ? ಏನಾಗಿದೆ " ಎಂದು ಕೇಳಿದಳು.

" ಅಷ್ಟು ಅನಾರೋಗ್ಯವೂ ಇಲ್ಲ—ಏನೂ ಇಲ್ಲ. ನನಗೆ ಅಕಾರಣವಾಗಿ ಆಗಾಗ ಹೀಗಾಗುವುದು—ಈಗ ನಾನು ಹೊರಡುವೆ" ಎಂದ ರಮೇಶ.

ಕಮಲ ರಮೇಶನನ್ನು ದಂಡಿಸುತ್ತ ಸಂತೋಷಗಡಿಸುವುದಕ್ಕಾಗಿ "ನಮ್ಮ ಭೂವಿವರಣೆಯಲ್ಲಿ ಚಿತ್ರ ಇದೆಯಲ್ಲ, ತೋರಿಸುವೆ" ಎಂದಳು.

ರಮೇಶ ಕೋಪ ತೋರಿಸುತ್ತ ನೋಡಲಾಶಿಸಿದ. ಕಮಲ ಅವಸರ ದಿಂದ ತನ್ನ ಪುಸ್ತಕ ತಂದು ರಮೇಶನ ಎದುರಿಗೆ ತೆರೆದಿಟ್ಟಳು, "ಈ ಎರಡು ಗೋಳಗಳಿವೆಯಲ್ಲ. ನಿಜವಾಗಿ ಎರಡೂ ಒಂದೇ. ಎರಡು ಗೋಳಗಳ ಹಿಂಭಾಗ ಒಟ್ಟಿಗೆ ಎಂದಾದರೂ ಕಾಣುವುದೆ ?" ಎಂದಳು.

ರಮೇಶ ಸ್ವಲ್ಪ ಯೋಚಿಸುವನಂತೆ ನಟಿಸುತ್ತ ಹೇಳಿದ, "ಚಪ್ಪಟೆ ಭಾಗವೂ ಕಾಣುತ್ತಿದೆಯಲ್ಲ".

ಆದುದರಿಂದಲೇ ಈ ಚಿತ್ರದಲ್ಲಿ ಭೂಮಿಯ ಎರಡು ಭಾಗವೂ ಬೇರೆ ಯಾಗಿ ಅಚ್ಚು ಹಾಕಿದೆ" ಎಂದಳು ಕಮಲ.

ಈ ರೀತಿ ಸಂಜೆ ಕಳೆಯಿತು.

## ೨೦

ಯೋಗೇಂದ್ರ ಒಳ್ಳೆಯ ಸುದ್ದಿ ತರುವನು, ಎಲ್ಲ ಗೊಂದಲವೂ ಅತಿ ಸಹಜವಾಗಿ ಮುಕ್ತಾಯವಾಗುವುದು ಎಂದು ಅನ್ನದಾಬಾಬುಗಳು ಏಕಾಂತ ಮನದಲ್ಲಿ ಆಶಿಸುತಿದ್ದರು. ಯೋಗೇಂದ್ರ ಹಾಗೂ ಅಕ್ಷಯ ಮನೆಯೊಳಕ್ಕೆ ಬರುತ್ತಲೇ, ಅನ್ನದಾಬಾಬುಗಳು ಭೀತಭಾವದಿಂದ ಅವರ ಮುಖದ ಕಡೆ ನೋಡಿದರು.

"ಅಪ್ಪಾ, ನೀವು ರಮೇಶನನ್ನು ಇಷ್ಟು ಹೆಚ್ಚಿಸಿರುವಿರಿ ಎಂದು ಯಾರು ಬಲ್ಲರು. ಹೀಗೆ ತಿಳಿದಿದ್ದರೆ ನಾನು ನಿಮ್ಮೊಡನೆ ಅವನು ಮಾತನಾಡುವುದಕ್ಕೇ ಅವಕಾಶ ಕೊಡುತಿರಲಿಲ್ಲ" ಎಂದು ಯೋಗೇಂದ್ರ ಹೇಳಿದ.

ಅನ್ನದಾಬಾಬು—ರಮೇಶನೊಡನೆ ಹೇಮನಳಿನಿಯ ಮದುವೆ ನೀನು ಇಷ್ಟಪಟ್ಟಿದ್ದು. ಈ ಮಾತನ್ನು ನೀನು ನನಗೆ ಅನೇಕ ಬಾರಿ ಹೇಳಿರುವೆ. ಅಡ್ಡಿಪಡಿಸುವ ಇಷ್ಟ ನಿನಗಿರುವುದಾದರೆ, ಆಗ ನಾನು . . . .

ಯೋಗೇಂದ್ರ—ಸಂಪೂರ್ಣ ವಿಘ್ನಪಡಿಸುವ ವಿಷಯ ನನ್ನ ಮನಸಿಗೆ ಬರಲಿಲ್ಲ. ಆದರೆ ಹೀಗೆಂದು . . . . .

ಅನ್ನದಾ—ಅದೇ ನೋಡು, ಅದರಲ್ಲಿ "ಹೀಗೆಂದು" ಎಲ್ಲಿ ನಿಲ್ಲಲು ಸಾಧ್ಯ. ಇಲ್ಲ ಮುಂದುವರಿಯಬೇಕು. ಇಲ್ಲ ಅಡ್ಡಿಮಾಡಬೇಕು. ಇದರ ನಡುವೆ ಇನ್ನೇನಿದೆ ?

ಯೋಗೇಂದ್ರ "ಹೀಗೆಂದು ಒಂದೇಸಾರಿಗೆ ಇಷ್ಟುದೂರ ಮುಂದುವ . .

ಅಕ್ಷಯ ನಗುತ್ತ, "ಎಷ್ಟು ಬಗೆಯ ವಸ್ತುಯಿದೆ, ಯಾರು ತಮ್ಮ ಬುದ್ಧಿಯಿಂದ ಮುಂದುವರಿಯುವರೋ, ಅವರಿಗೆ ಆಶ್ರಯ ಕೊಡಬೇಕಾಗಿರದು. ಸದರ ಕೊಡುತ್ತ ಕೊಡುತ್ತ ತಾವಾಗಿಯೇ ಅಭಿವೃದ್ಧಿಹೊಂದುವರು. ಆದರೆ ಆಗಿಹೋದ ವಿಚಾರ ಹೇಳುವುದರಿಂದ ಪ್ರಯೋಜನವೇನು? ಈಗ ಏನು ಮಾಡಬೇಕೋ ಅದನ್ನು ಆಲೋಚಿಸಬೇಕು" ಎಂದು ಹೇಳಿದ.

ಅನ್ನದಾಬಾಬುಗಳು ಹೆದಹೆದರುತ್ತ ವಿಚಾರಿಸಿದರು, "ನೀವು ರಮೇಶನನ್ನು ನೋಡಿದ್ದಿರಾ ?"

ಯೋಗೇಂದ್ರ—ಚೆನ್ನಾಗಿ ನೋಡಿದೆವು. ಇಷ್ಟು ನೋಡುವೆವು ಎಂದು ನಿರೀಕ್ಷಿಸಿರಲಿಲ್ಲ. ಹೆಚ್ಚೇನು, ಅವನ ಹೆಂಡತಿಯ ಪರಿಚಯವೂ ಆಯಿತು.

ಅನ್ನದಾಬಾಬುಗಳು ನೀರವ ವಿಸ್ಮಯದೊಡನೆ ನೋಡುತಿದ್ದರು. ಕ್ಷಣಕಾಲದ ಬಳಿಕ ಕೇಳಿದರು. "ಯಾರ ಹೆಂಡತಿಯ ಪರಿಚಯುವಾಯಿತು"?

ಯೋಗೇಂದ್ರ—ರಮೇಶನ ಹೆಂಡತಿಯದು.

ಅನ್ನದಾ—ನೀನು ಹೇಳುವುದೇನು ? ನನಗೆ ಯಾವುದೂ ಅರ್ಥವಾಗದು. ಯಾವ ರಮೇಶನ ಹೆಂಡತಿ ?

ನಮ್ಮ ರಮೇಶನ-ನಾಲ್ಕೈದು ತಿಂಗಳ ಹಿಂದೆ ಅವನು ಊರಿಗೆ ಹೋಗಿದ್ದನಲ್ಲ-ಮದುವೆಗಾಗಿಯೇ ಹೋಗಿದ್ದ.

ಅನ್ನದಾ—ಆದರೆ ಅವರ ತಂದೆ ಸತ್ತುಹೋದರೆಂದು ಮದುವೆ ನಡೆದಿರಲಾರದು.

ಯೋಗೇಂದ್ರ—ಸಾವಿಗೆ ಮೊದಲೇ ಮದುವೆಯಾಗಿತ್ತು.

ಅನ್ನದಾಬಾಬು ಸ್ತಬ್ಧರಾಗಿ ಕುಳಿತು ತಲೆಯ ಮೇಲೆ ಕೈಯಾಡಿಸ ತೊಡಗಿದರು.

ಕ್ಷಣಕಾಲ ಯೋಚಿಸಿ ಹೇಳಿದರು, "ಹಾಗಾದರೆ ನಮ್ಮ ಹೇಮಳೊಡನೆ ಅವನ ಮದುವೆ ನಡೆಯುವುದಿಲ್ಲ !".

ಯೋಗೇಂದ್ರ—ನಾವೂ ಅದನ್ನೇ ಹೇಳುತ್ತಿರುವುದು.

ಅನ್ನದಾಬಾಬು—ನೀವೂ ಅದನ್ನೇ ಹೇಳುವಿರಾದರೂ ಇತ್ತ ಮದುವೆಯ ಸಿದ್ಧತೆಯೆಲ್ಲ ಪ್ರಾಯಃ ಮುಗಿದಿದೆ—ಈ ಭಾನುವಾರ ಆಗುವುದಿಲ್ಲವೆಂದು ಮುಂದಿನ ಭಾನುವಾರ ದಿನ ನಿಶ್ಚಯಿಸಿ ತಾರೀಕು ಬದಲಾಯಿಸಿದೆ—ಈಗ ಅದನ್ನೂ ನಿಲ್ಲಿಸಿ ಹೊಸದಾಗಿ ಪತ್ರ ಬರೆಯಬೇಕು.

"ಪೂರ್ತಿಯಾಗಿ ನಿಲ್ಲಿಸುವ ಆವಶ್ಯಕತೆಯೇನು ?—ಸ್ವಲ್ಪ ಬದಲಾಯಿಸಿ ಕೆಲಸ ನಡೆಸಬೇಕಾಗುವುದು" ಎಂದ ಯೋಗೇಂದ್ರ.

ಅನ್ನದಾಬಾಬು ಆಶ್ಚರ್ಯದೊಡನೆ, "ಅದರಲ್ಲಿ ಬದಲಾವಣೆಯೆಲ್ಲಿ ?" ಎಂದರು.

ಯೋಗೇಂದ್ರ—ಎಲ್ಲಿ ಬದಲಾಯಿಸಲು ಸಾಧ್ಯವೋ ಅಲ್ಲೇ ಮಾಡ ಬೇಕು. ರಮೇಶನಿಗೆ ಬದಲಾಗಿ ಬೇರೆ ವರ ನಿಶ್ಚಯಿಸಿಕೊಂಡು ಬಂದಿರುವೆ. ಹೇಗಾದರೂ ಮಾಡಿ ಭಾನುವಾರವೇ ಕೆಲಸ ನಡೆಸಬೇಕು. ಇಲ್ಲವಾದರೆ ಜನರಿಗೆ ಮುಖ ತೋರಿಸಲು ಸಾಧ್ಯವಿಲ್ಲ.

ಹೀಗೆ ಹೇಳಿ ಯೋಗೇಂದ್ರ ಒಮ್ಮೆ ಅಕ್ಷಯನ ಮುಖದ ಕಡೆ ನೋಡಿದ. ಅಕ್ಷಯ ವಿನಯದಿಂದ ತಲೆ ತಗ್ಗಿಸಿದ.

ಅನ್ನದಾ—ವರ ಇಷ್ಟು ಬೇಗ ನಿಶ್ಚಯವಾಯಿತೆ ?

ಯೋಗೇಂದ್ರ—ಆ ವಿಷಯದಲ್ಲಿ ನೀವು ನಿಶ್ಚಿಂತರಾಗಿರಿ.

ಅನ್ನದಾ—ಆದರೆ ಹೇಮಳನ್ನು ಒಪ್ಪಿಸಬೇಕು.

ಯೋಗೇಂದ್ರ—ರಮೇಶನ ಎಲ್ಲ ವ್ಯವಹಾರ ಕೇಳಿದರೆ ಅವಳು ಖಂಡಿತ ಸಮ್ಮತಿಸುವಳು.

ಅನ್ನದಾ—ಹಾಗಾದರೆ ಯಾವುದು ನಿನಗೆ ಒಳ್ಳೆಯದೆಂದು ತೋರು ವುದೋ ಅದನ್ನೇ ಮಾಡು. ಆದರೆ ರಮೇಶನಿಗೆ ಸ್ಥಿತಿಗತಿಯಿತ್ತು, ಮತ್ತು ಸಂಪಾದನೆ ಮಾಡುವಷ್ಟು ವಿದ್ಯೆ-ಬುದ್ಧಿಯಿತ್ತು. ಅವನು ಎಟಾವಕ್ಕೆ ಹೋಗಿ ವಕೀಲಿ ಮಾಡುವುದಾಗಿ ಮೊನ್ನೆ ನನ್ನೊಡನೆ ತೀರ್ಮಾನವಾಗಿ ಹೇಳಿದ್ದ. ಈ ಮಧ್ಯೆ ನೋಡು ಮತ್ತೆ ಏನು ನಡೆದಿದೆ !

ಯೋಗೇಂದ್ರ—ಅಪ್ಪಾ, ಎಟಾವಾದಲ್ಲಿ ರಮೇಶ ಈಗ ವಕೀಲಿ ನಡೆಸು ವನೆಂದು ಯಾರು ಯೋಚನೆ ಮಾಡುತ್ತಿರುವರು, ಒಮ್ಮೆ ಹೇಮಳನ್ನು ಕರೆದುಕೊಂಡು ಬರುವೆ, ಇನ್ನು ಹೆಚ್ಚು ಅವಕಾಶವಿಲ್ಲ.

ಸ್ವಲ್ಪ ಹೊತ್ತಿನ ಬಳಿಕ ಯೋಗೇಂದ್ರ ಹೇಮನಳಿನಿಯೊಡನೆ ಕೊಠಡಿ

ಯನ್ನು ಪ್ರವೇಶಿಸಿದ. ಅಕ್ಷಯ ಕೊಠಡಿಯ ಒಂದು ಮೂಲೆಯಲ್ಲಿ ಪುಸ್ತಕದ ಬೀರುವಿನ ಮರೆಯಲ್ಲಿ ಕುಳಿತಿದ್ದ.

" ಹೇಮ್ ಕುಳಿತುಕೋ. ನಿನ್ನೊಡನೆ ಒಂದು ಮಾತು ಹೇಳಬೇಕು" ಎಂದ ಯೋಗೇಂದ್ರ.

ಹೇಮನಳಿನಿ ಸ್ತಬ್ಧಳಾಗಿ ಕುರ್ಚಿಯಲ್ಲಿ ಕುಳಿತುಕೊಂಡಳು ತನ್ನ ಪರೀಕ್ಷೆ ನಡೆಯುವುದು ಎಂದು ಅವಳು ಭಾವಿಸಿದಳು.

ಯೋಗೇಂದ್ರ ಪೀಠಿಕಾರೂಪದಲ್ಲಿ ಕೇಳಿದ, " ರಮೇಶನ ವ್ಯವಹಾರದಲ್ಲಿ ಸಂದೇಹಕ್ಕೆ ಕಾರಣವನ್ನು ನೀನು ಸ್ವಲ್ಪವಾದರೂ ತಿಳಿದಿರುವೆಯಾ ? ".

ಹೇಮನಳಿನಿ ಯಾವ ಮಾತೂ ಆಡದೆ ಸುಮ್ಮನೆ ಮೈಯಲ್ಲಾಡಿಸಿದಳು.

ಯೋಗೇಂದ್ರ—ಅವನು ಮದುವೆಯ ದಿನವನ್ನು ಒಂದು ವಾರ ಮುಂದಕ್ಕೆ ಹಾಕಿರುವನಲ್ಲ, ಅದಕ್ಕೆ ನಮ್ಮ ಹತ್ತಿರ ಹೇಳಬಾರದಂಥ ಕಾರಣ ವಾದರೂ ಏನಿರಬಹುದು ?

ಹೇಮನಳಿನಿ ನೆಲ ನೋಡುತ್ತ, " ಖಂಡಿತ ಕಾರಣವಿದೆ" ಎಂದಳು.

ಯೋಗೇಂದ್ರ—ಅದು ಸರಿ. ಕಾರಣ ಇದ್ದೇ ಇದೆ. ಆದರೆ ಅದು ಸಂದೇಹಜನಕವಲ್ಲವೆ ?

ಮತ್ತೆ ಹೇಮನಳಿನಿ ನೀರವವಾಗಿ ತಲೆಯಲ್ಲಾಡಿಸುತ್ತ " ಇಲ್ಲ" ಎಂದು ತಿಳಿಸಿದಳು.

ಈ ತಪ್ಪುನಂಬಿಕೆಗಾಗಿ ಯೋಗೇಂದ್ರ ಎಲ್ಲರಿಗಿಂತ ಹೆಚ್ಚಾಗಿ ರಮೇಶನ ಮೇಲೆ ಕೋಪಿಸಿಕೊಂಡ. ಸಮಾಧಾನದಿಂದ ಪೀಠಿಕೆ ಹಾಕಿ ವಿಷಯ ತಿಳಿಯಲಾಗಲಿಲ್ಲ.

ಯೋಗೇಂದ್ರ ಕಠಿಣಭಾವದಿಂದ ಹೇಳತೊಡಗಿದ, "ರಮೇಶ ನಾಲ್ಕೈದು ತಿಂಗಳ ಹಿಂದೆ ತಮ್ಮ ತಂದೆಯೊಡನೆ ಊರಿಗೆ ಹೋಗಿದ್ದ ವಿಷಯ ನಿನಗೆ ನೆನಪಿರಬಹುದು. ಆ ಬಳಿಕ ಅನೇಕ ದಿನ ಅವನಿಂದ ಯಾವ ಪತ್ರವ್ಯವ ಹಾರವೂ ಇಲ್ಲದೆ ಆಶ್ಚರ್ಯಗೊಂಡಿದ್ದೆವು. ಇದೂ ನಿನಗೆ ತಿಳಿದ ವಿಷಯ. ಅಂದರೆ ರಮೇಶ ಎರಡು ಹೊತ್ತೂ ನಮ್ಮಲ್ಲಿಗೆ ಬರುತ್ತ, ಒಂದೇ ಸಮ ನಮ್ಮ ನೆರಮನೆಯಲ್ಲಿ ವಾಸಿಸುತಿದ್ದ. ಅವನು ಕಲ್ಕತ್ತೆಗೆ ಬಂದು ನಮ್ಮನ್ನು ಒಮ್ಮೆಯೂ ನೋಡಲಿಲ್ಲ. ಹೆಚ್ಚು ಬಾಡಿಗೆ ಕೊಟ್ಟುಕೊಂಡು ಬೇರೆ ಮನೆಯಲ್ಲಿದ್ದ. ಇಷ್ಟಾದರೂ ನೀನು ಎಲ್ಲ ಹಿಂದಿನಂತೆಯೇ ಎಂದು ಪ್ರೀತಿ

ಯಿಂದ ಅವನನ್ನು ಮನೆಗೆ ಕರೆಯಲಿಲ್ಲವೆ? ನಾನು ಇದ್ದಿದ್ದರೆ ಎಂದಾದರೂ ಹೀಗೆ ನಡೆಯುತಿತ್ತೆ"?

ಹೇಮನಳಿನಿ ತೆಪ್ಪನೆ ಕುಳಿತಿದ್ದಳು.

ಯೋಗೇಂದ್ರ—ರಮೇಶನ ಇಂಥ ವ್ಯವಹಾರಕ್ಕೆ ಕಾರಣವನ್ನು ನೀನು ಹುಡುಕಿ ನೋಡಿರುವೆಯಾ? ಈ ವಿಷಯವಾಗಿ ಒಂದು ಪ್ರಶ್ನೆಯೂ ನಿನ್ನ ಮನಸಿನಲ್ಲಿ ಹುಟ್ಟಲಿಲ್ಲ—ರಮೇಶನ ಮೇಲೆ ಇಷ್ಟು ಗಾಢ ಪ್ರೇಮ?

ಹೇಮನಳಿನಿ ನಿರುತ್ತರಳಾಗಿದ್ದಳು.

ಯೋಗೇಂದ್ರ—ಇದು ಒಳ್ಳೆಯ ವಿಷಯವೆ- ನಿನ್ನದು ಸರಳ ಸ್ವಭಾವ. ಯಾರಲ್ಲೂ ಸಂದೇಹ ಪಡುವುದಿಲ್ಲ—ನನ್ನ ಮೇಲೂ ಅಪಾರ ನಂಬಿಕೆಯಿದೆ ಯೆಂದು ನಾನು ಆಶಿಸುವೆ. ರಮೇಶ ತನ್ನ ಹೆಂಡತಿ ಕಮಲೆಯನ್ನು ಇಲ್ಲಿ ಬೋರ್ಡಿಂಗ್‌ನಲ್ಲಿ ಬಿಟ್ಟು ಓದಿಸುತಿರುವನೆಂದು, ನಾನು ಸ್ವತಃ ಶಾಲೆಗೆ ಹೋಗಿ ತಿಳಿದುಕೊಂಡೆ. ರಜದಲ್ಲೂ ಅವಳನ್ನು ಅಲ್ಲೇ ಇಡಲು ಏರ್ಪಾಟು ಮಾಡಿದ್ದ. ರಜದಲ್ಲಿ ಕಮಲೆಯನ್ನು ಶಾಲೆಯಲ್ಲಿ ಇಟ್ಟುಕೊಳ್ಳಲು ಸಾಧ್ಯ ವಿಲ್ಲವೆಂದು ಇದ್ದಕ್ಕಿದ್ದಂತೆ ಎರಡು ಮೂರು ದಿನಗಳ ಹಿಂದೆ ಶಾಲೆಯ ವ್ಯವ ಸ್ಥಾಪಕಿಯಿಂದ ರಮೇಶನಿಗೆ ಪತ್ರ ಬಂತು. ಇಂದು ಅವರಿಗೆ ರಜ ಬಂತು— ಶಾಲೆಯ ಗಾಡಿ ಕಮಲೆಯನ್ನು ದರ್ಜಿಪಾಡಾದ ಅವನ ಹಳೆಯ ವಾಸದ ಮನೆಗೆ ಕರೆತಂದಿತು. ಅದೇ ಮನೆಗೆ ನಾನೂ ಹೋಗಿದ್ದೆ. ಹೋಗಿ ನೋಡಿದೆ, ಕಮಲೆ ಈಳಿಗೆಮಣೆಯಲ್ಲಿ ಸೇಬಿನ ಸಿಪ್ಪೆ ಹೆರೆದು ಹೆಚ್ಚುತ್ತಿದ್ದಳು. ರಮೇಶ ಅವಳೆದುರಿಗೆ ನೆಲದಲ್ಲಿ ಕುಳಿತು ಒಂದೊಂದೇ ಚೂರು ತೆಗೆದುಕೊಂಡು ಬಾಯಿಗೆ ಹಾಕಿಕೊಳ್ಳುತಿದ್ದ. "ವಿಷಯವೇನು" ಎಂದು ರಮೇಶನನ್ನು ಕೇಳಿದೆ. ರಮೇಶ, "ನಾನು ಈಗ ನಿಮ್ಮೊಡನೆ ಏನೂ ಮಾತನಾಡೆ" ಎಂದ. ಕಮಲ ತನ್ನ ಹೆಂಡತಿಯಲ್ಲ, ಎಂದು ರಮೇಶ ಒಂದು ಮಾತಾದರೂ ಹೇಳ ಬಹುದಾಗಿತ್ತು. ಅಷ್ಟೇ ಅಲ್ಲದೆ, ಆ ಮಾತನ್ನು ಅವಲಂಬಿಸಿ ಎಲ್ಲ ಬಗೆಯ ಸಂದೇಹವನ್ನೂ ಶಾಂತಗೊಳಿಸಲು ಪ್ರಯತ್ನಿಸಬೇಕಾಗಿತ್ತು. ಆದರೆ ಹೌದು-ಇಲ್ಲ ಎಂದು ಕೂಡ ಹೇಳಬಯಸಲಿಲ್ಲ. ಈಗ ಇಷ್ಟಾದ ಮೇಲೂ ರಮೇಶನನ್ನು ನಂಬಲು ಇಷ್ಟಪಡುವೆಯಾ?

ಪ್ರಶ್ನೆಯ ಉತ್ತರದ ಅಪೇಕ್ಷೆಯಿಂದ ಯೋಗೇಂದ್ರ ಹೇಮನಳಿನಿಯ ಮುಖ ನಿರೀಕ್ಷಿಸಿದ. ಅವಳ ಮುಖ ಅಸ್ವಾಭಾವಿಕ ವಿವರ್ಣತೆಯನ್ನು ಪಡೆದಿದೆ

ಮತ್ತು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ, ಎರಡು ಕೈಗಳಿಂದಲೂ ಕುರ್ಚಿಯ ಕೈಯನ್ನು ಬಲವಾಗಿ ಹಿಡಿದುಕೊಳ್ಳಲು ಪ್ರಯತ್ನಿಸುತಿದ್ದಳು. ಸ್ವಲ್ಪ ಕಾಲದ ಬಳಿಕ ಎದುರುಗಡೆಗೆ ಬಾಗಿ ಮೂರ್ಛೆಗೊಂಡು ಅವಳು ಕುರ್ಚಿಯಿಂದ ಕೆಳಕ್ಕೆ ಬಿದ್ದುಬಿಟ್ಟಳು.

ಅನ್ನದಾಬಾಬುಗಳು ವ್ಯಾಕುಲಗೊಂಡರು. ಅವರು ನೆಲದ ಮೇಲೆ ಬಿದ್ದಿದ್ದ ಹೇಮನಳಿನಿಯ ತಲೆಯನ್ನು ಎರಡು ಕೈಗಳಿಂದಲೂ ಎದೆಯ ಬಳಿಗೆ ಎಳೆದುಕೊಳ್ಳುತ್ತ ಹೇಳಿದರು, "ಅಮ್ಮಾ, ಏನಾಯಿತಮ್ಮ! ಅವರ ಮಾತನ್ನು ನೀನು ಸ್ವಲ್ಪವೂ ನಂಬಬೇಡ—ಎಲ್ಲವೂ ಸುಳ್ಳು ?"

ಯೋಗೇಂದ್ರ ತನ್ನ ತಂದೆಯನ್ನು ಒತ್ತರಿಸುತ್ತ ಅವಸರವಾಗಿ ಹೇಮನಳಿನಿಯನ್ನು ಒಂದು ಸೋಫಾದ ಮೇಲೆ ಮಲಗಿಸಿದ, ಬಳಿಯಲ್ಲೇ ತಂಬಿಗೆಯಲ್ಲಿ ನೀರಿತ್ತು, ಆ ನೀರು ತೆಗೆದುಕೊಂಡು ಅವಳ ಮುಖ-ಕಣ್ಣುಗಳಲ್ಲಿ ಅನೇಕ ಬಾರಿ ಎರೆಚಿದ, ಮತ್ತು ಅಕ್ಷಯ ಒಂದು ಬೀಸಣಿಗೆ ತಂದು ಅವಳಿಗೆ ವೇಗವಾಗಿ ಗಾಳಿ ಬೀಸತೊಡಗಿದ.

ಸ್ವಲ್ಪ ಕಾಲದ ಬಳಿಕ ಹೇಮನಳಿನಿ ಕಣ್ಣುಬಿಡುತಿದ್ದಂತೆಯೇ ಬೆಚ್ಚಿಬಿದ್ದಳು—ಅನ್ನದಾಬಾಬುಗಳ ಕಡೆ ನೋಡಿ ಕಿರುಚುತ್ತ ಹೇಳಿದಳು, "ಅಪ್ಪಾ, ಅಪ್ಪಾ, ಅಕ್ಷಯಬಾಬುಗಳನ್ನು ಇಲ್ಲಿಂದ ಹೊರಟುಹೋಗುವಂತೆ ಹೇಳಿ".

ಅಕ್ಷಯ ಬೀಸಣಿಗೆ ಇಟ್ಟು ಕೊಠಡಿಯ ಹೊರಗೆ ಬಾಗಿಲ ಮರೆಯಲ್ಲಿ ಹೋಗಿ ನಿಂತ. ಅನ್ನದಾಬಾಬುಗಳು ಸೋಫಾದ ಮೇಲೆ ಹೇಮನಳಿನಿಯ ಪಕ್ಕದಲ್ಲಿ ಕುಳಿತು ಅವಳ ಮುಖ-ಮೈ ಮೇಲೆ ಕೈ ಆಡಿಸಲಾರಂಭಿಸಿದರು—ಮತ್ತು ಗಭೀರ ನಿಟ್ಟುಸಿರು ಬಿಟ್ಟು ಸುಮ್ಮನೆ ಒಮ್ಮೆ ''ಅಮ್ಮಾ'' ಎಂದರು.

ನೋಡುತ್ತ ನೋಡುತ್ತ ಹೇಮನಳಿನಿಯ ಎರಡು ಕಣ್ಣುಗಳಿಂದಲೂ ನೀರು ಹರಿಯತೊಡಗಿತು. ಅವಳ ಹೃದಯ ಉಕ್ಕಿ ಉಕ್ಕಿ ಬಂತು. ತಂದೆಯ ತೊಡೆಯ ಮೇಲೆ ಎದೆಯನ್ನು ಒತ್ತಿಟ್ಟುಕೊಳ್ಳುತ್ತ ತನ್ನ ಅಸಹನೀಯ ವೇದನೆಯ ವೇಗವನ್ನು ತಡೆಯಲು ಪ್ರಯತ್ನಿಸಿದಳು. ಅನ್ನದಾಬಾಬು ಕಣ್ಣೀರಿನಿಂದ ಬಿಗಿದ ಸ್ವರದಲ್ಲಿ, ''ಅಮ್ಮ, ನೀನು ನಿಶ್ಚಿಂತಳಾಗಿರಮ್ಮ. ರಮೇಶನನ್ನು ನಾನು ಚೆನ್ನಾಗಿ ಬಲ್ಲೆ—ಅವನು ಎಂದಿಗೂ ಅಪನಂಬಿಕಸ್ಥನಲ್ಲ. ಯೋಗೇನ ಖಂಡಿತ ತಪ್ಪುಮಾಡಿರುವ'' ಎಂದು ಹೇಳತೊಡಗಿದರು.

ಆಗ ಯೋಗೇಂದ್ರನಿಗೆ ಸುಮ್ಮನಿರಲಾಗಲಿಲ್ಲ. "ಅಪ್ಪ, ಸುಳ್ಳು

ಸಮಾಧಾನ ಹೇಳಬೇಡಿ. ಇಂಥ ಕಷ್ಟವನ್ನು ಹೋಗಲಾಡಿಸುವುದರ ಬದಲು ಅವಳಿಗೆ ದ್ವಿಗುಣವಾದ ಕಷ್ಟವಾಗುವುದು; ಅಪ್ಪ, ಹೇಮಳಿಗೆ ಈಗ ಸ್ವಲ್ಪ ಆಲೋಚಿಸಲು ಅವಕಾಶ ಕೊಡಿ" ಎಂದ.

ಹೇಮನಳಿನಿ ಆಗ ತಂದೆಯ ತೊಡೆ ಬಿಟ್ಟು ಎದ್ದು ಕುಳಿತಳು. ಮತ್ತು ಯೋಗೇಂದ್ರನ ಮುಖದ ಕಡೆ ನೋಡುತ್ತ "ನಾನು ಯೋಚಿಸಬೇಕಾದುದನ್ನೆಲ್ಲ ಯೋಚಿಸಿರುವೆ. ಅವರ ಬಾಯಿಂದಲೇ ಕೇಳುವವರೆಗೂ ನಾನು ಯಾವ ಬಗೆಯಲ್ಲೂ ನಂಬುವುದಿಲ್ಲ. ಇದು ಸತ್ಯವೆಂದು ತಿಳಿ" ಎಂದು ಹೇಳಿದಳು.

ಹೀಗೆ ಹೇಳಿ ಅವಳು ಎದ್ದಳು. ಅನ್ನದಾಬಾಬುಗಳು ಕಳವಳದೊಡನೆ ಅವಳನ್ನು ಹಿಡಿದುಕೊಂಡರು. "ಮಲಗಿಕೋ" ಎಂದು ಹೇಳಿದರು.

ಹೇಮನಳಿನಿ ಅನ್ನದಾಬಾಬುಗಳ ಕೈಹಿಡಿದುಕೊಂಡು ಅವರು ಮಲಗುವ ಕೋಣೆಗೆ ಹೋದಳು. ಹಾಸಿಗೆಯಲ್ಲಿ ಮಲಗಿಕೊಂಡು, "ಅಪ್ಪ, ನಾನು ಸ್ವಲ್ಪ ಒಬ್ಬಳೇ ಇರಲು ಅವಕಾಶ ಕೊಡಿ, ನಾನು ನಿದ್ದೆಮಾಡುವೆ" ಎಂದಳು.

ಅನ್ನದಾಬಾಬುಗಳು, "ಹರಿಯ ತಾಯಿಯನ್ನು ಕರೆಯಲೆ? ಗಾಳಿ ಬೀಸುವಳು" ಎಂದು ಕೇಳಿದರು.

"ಗಾಳಿ ಬೀಸಬೇಕಾಗಿಲ್ಲ ಅಪ್ಪ" ಎಂದಳು ಹೇಮನಳಿನಿ.

ಅನ್ನದಾಬಾಬುಗಳು ಪಕ್ಕದ ಕೊಠಡಿಗೆ ಹೋಗಿ ಕುಳಿತರು. ಆರು ತಿಂಗಳ ಹೆಣ್ಣು ಮಗುವನ್ನು ಬಿಟ್ಟು ಇವರ ಹೆಂಡತಿ ಸತ್ತು ಹೋದಳು. ಆ ಹೇಮಳ ತಾಯಿಯ ವಿಷಯವನ್ನು ಅವರು ಆಲೋಚಿಸತೊಡಗಿದರು. ಆ ಸೇವೆ, ಆ ಧೈರ್ಯ, ಆ ಚಿರಪ್ರಸನ್ನತೆ ಮನಸಿಗೆ ಬಂತು. ಆ ಗೃಹಲಕ್ಷ್ಮಿಯ ಪ್ರತಿಮೆಯಂತೆಯೇ ಹುಡುಗಿ ಇಷ್ಟು ದಿನದಿಂದ ಅವರ ತೊಡೆಯ ಮೇಲೆ ಬೆಳೆದು ದೊಡ್ಡವಳಾಗಿರುವಳು. ಅವಳ ಅನಿಷ್ಟ-ಆಶಂಕೆಯಿಂದ ಅವರ ಹೃದಯ ವ್ಯಾಕುಲಗೊಂಡಿತು. ಪಕ್ಕದ ಕೋಣೆಯಲ್ಲಿ ಕುಳಿತು ಮನಸಿನಲ್ಲೇ ಅವಳನ್ನು ಸಂಬೋಧಿಸುತ್ತ, "ಅಮ್ಮ, ನಿನ್ನ ಎಲ್ಲ ವಿಘ್ನಗಳೂ ದೂರವಾಗಲಿ, ಚಿರಕಾಲ ನೀನು ಸುಖವಾಗಿರು—ನೀನು ಸುಖವಾಗಿರುವುದನ್ನು ನೋಡಿ, ಆರೋಗ್ಯವಾಗಿರುವುದನ್ನು ನೋಡಿ, ಯಾರನ್ನು ಪ್ರೀತಿಸುವೆಯೋ ಅವರ ಮನೆಯಲ್ಲಿ ಲಕ್ಷ್ಮಿಯಂತೆ ಪ್ರತಿಷ್ಠಿತಳಾದುದನ್ನು ನೋಡಿ, ನಾನು ನಿಮ್ಮ ತಾಯ ಬಳಿ ಹೋಗುವೆ" ಎಂದು ಹೇಳತೊಡಗಿದರು. ಹೀಗೆ ಹೇಳಿ ಮೇಲು ವಸ್ತ್ರದ ತುದಿಯಿಂದ ತೋಯ್ದ ಕಣ್ಣು ಒರೆಸಿಕೊಂಡರು.

ಮೊದಲಿನಿಂದಲೂ ಯೋಗೇಂದ್ರನಿಗೆ ಹುಡಗಿಯರ ಬುದ್ಧಿಯ ವಿಷಯ ದಲ್ಲಿ ಬಹಳ ತಿರಸ್ಕಾರವಿತ್ತು, ಇಂದು ಅದು ಮತ್ತಷ್ಟು ದೃಢವಾಯಿತು. ಇವರು ಪ್ರತ್ಯಕ್ಷಪ್ರಮಾಣವನ್ನೂ ನಂಬುವುದಿಲ್ಲ. ಇವರನ್ನು ಕಟ್ಟಿಕೊಂಡು ಮಾಡುವುದೇನು. ಎರಡೂ ಎರಡೂ ನಾಲ್ಕಾಗುವುದಕ್ಕೆ ಅವರಲ್ಲಿ ಮಾನವರಿಗೆ ಸುಖ ಇರಲಿ ಅಥವಾ ದುಃಖವಿರಲಿ ಅದನ್ನು ಇವರು ಸ್ಥಳವಿಶೇಷದಿಂದ ಅನಾಯಾಸವಾಗಿ ಒಪ್ಪದಿರುವರು. ಯುಕ್ತಿ ಒಂದು ವೇಳೆ ಕಪ್ಪನ್ನು ಕಪ್ಪು ಎಂದರೆ ಇವರ ಪ್ರೇಮ ಅದನ್ನು ಬಿಳುಪು ಎನ್ನುವುದು, ಆಗ ದೌರ್ಭಾಗ್ಯ— ಯುಕ್ತಿಯ ಮೇಲೆ ಇವರು ಬಹಳ ಕೋಪಗೊಳ್ಳುವರು. ಇವರನ್ನು ಇಟ್ಟು ಕೊಂಡು ಜಗತ್ತು ನಡೆಯುವುದು ಹೇಗೆ, ಅದು ಎಷ್ಟು ಆಲೋಚಿಸಿವರೂ ಯೋಗೇಂದ್ರನಿಗೆ ಹೊಳೆಯಲಿಲ್ಲ.

ಯೋಗೇಂದ್ರ ಅಕ್ಷಯ, ಎಂದು ಕೂಗಿದ.

ಅಕ್ಷಯ ಮೆಲ್ಲಮೆಲ್ಲನೆ ಕೊಠಡಿಗೆ ಬಂದ. "ಎಲ್ಲವನ್ನೂ ಕೇಳಿರುವೆ, ಈಗ ಇವಕ್ಕೆ ಉಪಾಯವೇನು ?" ಎಂದು ಯೋಗೇಂದ್ರ ಕೇಳಿದ.

"ಅಪ್ಪ, ನನ್ನನ್ನು ಈ ಎಲ್ಲ ಸಮಾಚಾರಕ್ಕೂ ಸುಮ್ಮನೆ ಏಕೆ ಎಳೆಯುವೆ. ನಾನು ಇಷ್ಟು ದಿನಗಳೂ ಯಾವ ಮಾತೂ ಆಡಲಿಲ್ಲ, ನೀನು ಬಂದು ನನ್ನನ್ನು ಈ ತೊಂದರೆಗೆ ಗುರಿಮಾಡಿದೆ" ಎಂದ ಅಕ್ಷಯ.

ಯೋಗೇಂದ್ರ, "ಸರಿ ಸರಿ, ಆ ಉಪಚಾರದ ಮಾತು ಆ ಮೇಲೆ ನಡೆ ಯಲಿ, ಈಗ ಹೇಮನಳಿನಿಯ ಬಳಿ ರಮೇಶ ತಾನಾಗಿ ಎಲ್ಲ ವಿಷಯವನ್ನೂ ಒಪ್ಪಿಕೊಳ್ಳುವಂತೆ ಮಾಡದೆ ಉಪಾಯವಿಲ್ಲ".

ಅಕ್ಷಯ—ಹುಚ್ಚನಾಗಿಹೋದೆಯಾ ? ಅವನು ತನ್ನ ಬಾಯಿಂದ . . .

ಯೋಗೇಂದ್ರ—ಇಲ್ಲವಾದರೆ ಒಂದು ಕಾಗದ ಬರೆಯೋಣ, ಹಾಗೆ ಮಾಡಿದರೆ ಸರಿಯಾಗುವುದು. ನೀನು ಈ ಭಾರ ವಹಿಸಬೇಕು. ಇನ್ನು ತಡಮಾಡಿದರೆ ನಡೆಯುವುದಿಲ್ಲ.

"ಎಷ್ಟು ದೂರ ಏನು ಮಾಡಲು ಸಾಧ್ಯವೋ ನೋಡೋಣ" ಎಂದ ಅಕ್ಷಯ.

## ೨೧

ರಾತ್ರಿ ಒಂಬತ್ತರ ಹೊತ್ತಿಗೆ ರಮೇಶ ಕಮಲೆಯನ್ನು ಕರೆದುಕೊಂಡು ಸಿಯಾಲದಹ—ಸ್ಟೇಷನ್ನಿಗೆ ಪ್ರಯಾಣ ಹೊರಟ. ಹೋಗುವಾಗ ಒಂದು

ಬಳಸು ದಾರಿಯಿಂದ ಹೊರಟ. ಗಾಡಿಯವನನ್ನು ಅನಾವಶ್ಯಕವಾಗಿ ಹಲವಾರು ಹಾದಿ ತಿರುಗಿಸಿದ. ಕಲೂಟೊಲಾದಲ್ಲಿ ಒಂದು ಮನೆಯ ಮುಂದೆ ಅತಿ ಉತ್ಸುಕತೆಯಿಂದ ತಲೆ ಚಾಚಿ ನೋಡಿದ. ಪರಿಚಿತ ಮನೆಯಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ.

ರಮೇಶ ಆಗ ಒಂದು ನಿಟ್ಟುಸಿರು ಬಿಟ್ಟ. ನಿದ್ದೆ ಮಾಡುತಿದ್ದ ಕಮಲೆ ಗಾಬರಿಯಿಂದ ಎದ್ದಳು. "ನಿನಗೇನಾಗಿದೆ" ಎಂದು ಕೇಳಿದಳು.

ರಮೇಶ "ಏನೂ ಇಲ್ಲ" ಎಂದು ಉತ್ತರ ಹೇಳಿದ. ಮತ್ತೆ ಏನೂ ಹೇಳಲಿಲ್ಲ—ಗಾಡಿಯ ಅಂಧಕಾರದಲ್ಲಿ ನೀರವವಾಗಿ ಕುಳಿತ. ನೋಡ ನೋಡುತ್ತ ಗಾಡಿಯ ಮೂಲೆಯಲ್ಲಿ ತಲೆಯಿಟ್ಟುಕೊಂಡು ಕಮಲ ಪುನಃ ನಿದ್ದೆ ಹೋದಳು. ಕ್ಷಣಕಾಲ ಕಮಲಳ ಇರುವಿಕೆ ರಮೇಶನಿಗೆ ಅಸಹನೀಯ ವಾಗಿ ತೋರಿತು.

ಗಾಡಿ ಸಕಾಲಕ್ಕೆ ನಿಲ್ದಾಣ ಸೇರಿತು. ಮೊದಲೇ ಒಂದು ಎರಡನೆಯ ತರಗತಿ ಗಾಡಿಯನ್ನು ರಿಸರ್ವ್ ಮಾಡಿಸಿದ್ದ—ರಮೇಶ ಮತ್ತು ಕಮಲ ಅದರಲ್ಲಿ ಏರಿದರು. ಒಂದು ಕಡೆಯ ಬೆಂಚಿನ ಮೇಲೆ ಕಮಲೆಗಾಗಿ ಹಾಸಿಗೆ ಹಾಸಿ ಗಾಡಿಯ ದೀಪದ ಕೆಳಗೆ ತೆರೆ ಎಳೆದು ಕತ್ತಲು ಮಾಡಿ ರಮೇಶ ಕಮಲೆಗೆ ಹೇಳಿದ, "ನಿನ್ನ ನಿದ್ದೆಯ ಕಾಲ ಮೀರಿ ಹೋಗಿದೆ, ಇನ್ನು ನೀನು ಮಲಗಿಕೋ".

"ಗಾಡಿ ಹೊರಟೊಡನೆಯೇ ನಾನು ಮಲಗುವೆ, ಅಲ್ಲಿಯವರೆಗೂ ನಾನು ಈ ಕಿಟಕಿಯ ಬಳಿ ಕುಳಿತು ಸ್ವಲ್ಪ ನೋಡಲೆ?" ಎಂದು ಕಮಲೆ ಕೇಳಿದಳು.

ರಮೇಶ ಸಮ್ಮತಿಸಿದ, ಕಮಲೆ ತಲೆಯ ಮೇಲಕ್ಕೆ ಮುಸುಕು ಎಳೆದು ಕೊಂಡು ನಿಲ್ದಾಣದ ಕಡೆಯ ಬೆಂಚಿನಲ್ಲಿ ಕುಳಿತು ಜನರ ಹೋಗು ಬರುವಿಕೆ ಯನ್ನು ನೋಡತೊಡಗಿದಳು. ರಮೇಶ ನಡುವೆ ಇದ್ದ ಬೆಂಚಿನಲ್ಲಿ ಕುಳಿತು ಅನ್ಯಮನಸ್ಕನಾಗಿ ನೋಡುತ್ತ ಕುಳಿತ, ಎಲ್ಲರೂ ಗಾಡಿಗೆ ಏರುತಿದ್ದರು, ಆ ಹೊತ್ತಿನಲ್ಲಿ ರಮೇಶ ಬೆಚ್ಚಿಬಿದ್ದ, ಅವರ ಪರಿಚಿತ ವ್ಯಕ್ತಿಯೊಬ್ಬ ಗಾಡಿಯ ಕಡೆಗೆ ಬರುತಿರುವಂತೆ ಕಾಣಿಸಿತು.

ಮರುಕ್ಷಣದಲ್ಲೇ ಕಮಲ ಖಿಲಖಿಲನೆ ನಕ್ಕಳು. ರಮೇಶ ಕಿಟಕಿಯಿಂದ ಮುಖ ನೀಡಿ ನೋಡಿದ—ರೈಲ್ವೆ ಕೆಲಸಗಾರನ ತಡೆಯುವಿಕೆಯನ್ನು ಎದುರಿ

ಸುತ್ತ ಒಬ್ಬ ಹೇಗೋ ಹೋಗುತ್ತಿರುವ ಗಾಡಿ ಹತ್ತಿದ. ಮತ್ತು ಎಳೆದಾಟದಲ್ಲಿ ಅವನ ಮೇಲುವಸ್ತ್ರ ರೈಲ್ವೆ ಅಧಿಕಾರಿಯ ಕೈಯಲ್ಲೇ ನಿಂತು ಹೋಯಿತು, ಮೇಲುವಸ್ತ್ರ ತೆಗೆದುಕೊಳ್ಳಲು ಆ ವ್ಯಕ್ತಿ ಕಿಟಕಿಯಿಂದ ಬಗ್ಗುತ್ತ ಕೈ ನೀಡಿದ. ಆಗ ರಮೇಶ ಸ್ಪಷ್ಟವಾಗಿ ಗುರುತಿಸಿದ, ಅವನು ಬೇರೆ ಯಾರೂ ಅಲ್ಲ. ಅಕ್ಷಯ.

ಈ ಮೇಲುವಸ್ತ್ರ ಎಳೆದಾಡುವ ನೋಟದಿಂದ ಬಹಳ ಹೊತ್ತಿನವರೆಗೆ ಕಮಲಳ ನಗು ನಿಲ್ಲಲಿಲ್ಲ.

"ಹತ್ತೂವರೆ ಗಂಟೆ ಹೊಡೆಯಿತು—ಗಾಡಿ ಹೊರಟಿತು. ಇನ್ನು ನೀನು ಮಲಗಿಕೊ" ಎಂದು ಹೇಳಿದ ರಮೇಶ.

ಹುಡುಗಿ ಹಾಸಿಗೆಯಲ್ಲಿ ಮಲಗಿಕೊಂಡು ನಿದ್ದೆ ಬರುವವರೆಗೂ ಆಗಾಗ ಖಿಲಖಿಲ ಎಂದು ನಗುತಿದ್ದಳು.

ಆದರೆ ಈ ಘಟನೆಯಿಂದ ರಮೇಶನಿಗೆ ಅಷ್ಟು ನಗು ಬರಲಿಲ್ಲ. ಯಾವ ಹಳ್ಳಿಯೊಡನೆಯೂ ಅಕ್ಷಯನಿಗೆ ಸಂಬಂಧ ಇರಲಿಲ್ಲ ಎನ್ನುವುದು ರಮೇಶನಿಗೆ ಗೊತ್ತಿತ್ತು. ಅವನು ತಲೆತಲಾಂತರದಿಂದ ಕಲ್ಕತ್ತೆಯ ನಿವಾಸಿ—ಇಂದು ರಾತ್ರಿ ಇಷ್ಟು ಮೇಲುಸಿರಿನಲ್ಲಿ ಅವನು ಕಲ್ಕತ್ತ ಬಿಟ್ಟು ಎಲ್ಲಿಗೆ ಹೋಗುತ್ತಿರುವನು ? ಅಕ್ಷಯ ತನ್ನನ್ನೇ ಹಿಂಬಾಲಿಸುತ್ತಿರುವ ಎಂದು ರಮೇಶ ನಿಶ್ಚಯಿಸಿದ.

ಅಕ್ಷಯ ಒಂದು ವೇಳೆ ತಮ್ಮ ಊರಿಗೆ ಹೋಗಿ ವಿಚಾರಿಸಲು ಆರಂಭಿಸುವ ಮತ್ತು ಅಲ್ಲಿ ರಮೇಶನ ಸ್ವಪಕ್ಷವಿಪಕ್ಷದವರ ಗುಂಪಿನಲ್ಲಿ ಈ ವಿಷಯವಾಗಿ ಒಂದು ವಾದ ವಿವಾದ ನಡೆಯುವುದು, ಆಗ ಎಲ್ಲ ಪ್ರಕರಣವೂ ಅತಿ ಅಕ್ಷಮ್ಯವಾಗುವುದು; ಅದನ್ನು ಯೋಚಿಸಿ ರಮೇಶನ ಹೃದಯದಲ್ಲಿ ಅಶಾಂತಿ ಮೂಡಿತು. ತಮ್ಮ ಕೇರಿಯವರು ಏನು ಹೇಳುವರು, ಅಪಪ್ರಚಾರ ಹೇಗೆ ನಡೆಯುವುದು, ಎಂದು ರಮೇಶ ಅದನ್ನು ಪ್ರತ್ಯಕ್ಷನೆನ್ನುವಂತೆ ನೋಡ ತೊಡಗಿದ. ಕಲ್ಕತ್ತೆಯಂಥ ಪಟ್ಟಣದಲ್ಲಿ ಎಲ್ಲ ಸ್ಥಿತಿಯಲ್ಲೂ ರಹಸ್ಯವಾದ ಎಡೆ ಹುಡುಕಿಕೊಳ್ಳಬಹುದು—ಆದರೆ ಕ್ಷುದ್ರ ಗ್ರಾಮದಲ್ಲಿ ಗಭೀರತೆ ಕಡಿಮೆ ಎಂದು ಹೇಳಿ ಅಲ್ಪ ಆಘಾತದಿಂದಲೂ ಆಂದೋಳನದ ಅಲೆ ಮೇಲಕ್ಕೆ ಏರುವುದು. ಆ ವಿಷಯ ಚಿಂತಿಸಿದಷ್ಟೂ ರಮೇಶನ ಮನಸು ಸಂಕೋಚಗೊಳ್ಳ ತೊಡಗಿತು.

ಬ್ಯಾರಕ್‌ಪುರದಲ್ಲಿ ಗಾಡಿ ನಿಂತಾಗ, ರಮೇಶ ಮುಖ ನೀಡಿ ನೋಡ ತೊಡಗಿದ. ಅಕ್ಷಯ ಇಳಿಯಲಿಲ್ಲ. ನೈಹಾಟಿಯಲ್ಲಿ ಅನೇಕ ಜನ ಹತ್ತಿ-ಇಳಿದು ಹೋದರು. ಅವರ ನಡುವೆ ಅಕ್ಷಯನನ್ನು ನೋಡಲಾಗಲಿಲ್ಲ. ಒಮ್ಮೆ ವ್ಯರ್ಥವಾದ ಆಸೆಯಿಂದ ಬಗುಲಾ ಸ್ಟೇಷನ್ನಿನಲ್ಲೂ ರಮೇಶ ಉದ್ರೇಕ ದಿಂದ ತಲೆ ಮುಂದಕ್ಕೆ ನೀಡಿದ—ಇಳಿಯುವವರ ನಡುವೆ ಅಕ್ಷಯನ ಚಿಹ್ನೆಯೇ ಇಲ್ಲ. ಆ ಬಳಿಕ ಯಾವುದಾದರೂ ಸ್ಟೇಷನ್ನಿನಲ್ಲಿ ಅಕ್ಷಯ ಇಳಿಯುವನೆಂಬ ಆಸೆಯನ್ನು ಅವನು ಊಹಿಸಿಲಾರದಾದ.

ಅರ್ಧ ರಾತ್ರಿಯ ಬಳಿಕ ಬಳಲಿಕೆಗೊಂಡ ರಮೇಶ ನಿದ್ದೆಮಾಡಿದ. ಮರುದಿನ ಬೆಳಗ್ಗೆ ಗಾಡಿ ಗೋಲಾಂದಾ ತಲುಪಿದಾಗ ಅಕ್ಷಯ ತಲೆಯ ಮೇಲೂ ಮುಖದ ಮೇಲೂ ಮೇಲುವಸ್ತ್ರ ಎಳೆದುಕೊಂಡು ಒಂದು ಕೈ ಚೀಲ ಹಿಡಿದುಕೊಂಡು ಅವಸರ ಅವಸರವಾಗಿ ಸ್ಟೀಮರಿನ ಕಡೆಗೆ ವೇಗವಾಗಿ ಹೋಗುತ್ತಿದ್ದುದನ್ನು ರಮೇಶ ನೋಡಿದ.

ರಮೇಶ ಏರಬೇಕಾಗಿದ್ದ ಸ್ಟೀಮರ್ ಹೊರಡಲು ಇನ್ನೂ ಹೊತ್ತು ಇತ್ತು. ಆದರೆ ಮತ್ತೊಂದು ಪಡದಲ್ಲಿ ಇನ್ನೊಂದು ಸ್ಟೀಮರ್ ಹೊರಡುವ ಸಿದ್ಧತೆಯಿಂದ ಬಲವಾಗಿ ಸಿಳ್ಳು ಹಾಕುತ್ತಿತ್ತು. "ಈ ಸ್ಟೀಮರ್ ಎಲ್ಲಿಗೆ ಹೋಗುವುದು ?" ಎಂದು ರಮೇಶ ಕೇಳಿದ. "ಪಶ್ಚಿಮಕ್ಕೆ" ಎಂದು ಉತ್ತರ ಬಂತು.

"ಎಷ್ಟು ದೂರದವರೆಗೆ ಹೋಗುವುದು ?"

"ನೀರು ಕಡಿಮೆಯಾಗದಿದ್ದರೆ ಕಾಶಿಯವರೆಗೆ ಹೋಗುವುದು".

ಕೇಳಿ ರಮೇಶ ಕೂಡಲೇ ಆ ಸ್ಟೀಮರ್ ಏರಿ ಕಮಲೆಯನ್ನು ಒಂದು ಕೋಣೆಯಲ್ಲಿ ಕೂರಿಸಿ ಬಂದ–ಮತ್ತು ಗಡಿಬಿಡಿಯಿಂದ ಕಡಲೆ, ಪುರಿ, ಅವಲಕ್ಕಿ ಹಾಗೂ ಒಂದು ಚಿಪ್ಪು ಬಾಳೆಹಣ್ಣು ಕೊಂಡು ತಂದ.

ಇತ್ತ ಅಕ್ಷಯ ಬೇರೆ ಸ್ಟೀಮರ್‌ನಲ್ಲಿ ಎಲ್ಲರಿಗಿಂತ ಮೊದಲು ಹತ್ತಿ ಬಟ್ಟೆಬರೆಯಿಂದ ಮರೆಮಾಡಿಕೊಂಡು ಒಂದು ಸ್ಥಳದಲ್ಲಿ ನಿಂತುಕೊಂಡ. ಅಲ್ಲಿಂದ ಇತರ ಪ್ರಯಾಣಿಕರ ಹೋಗು–ಬರುವಿಕೆಯನ್ನು ನೋಡಬಹುದಾಗಿತ್ತು. ಪ್ರಯಾಣಿಕರ ಗುಂಪು ಅಷ್ಟಾಗಿರಲಿಲ್ಲ. ಹಡಗು ಹತ್ತಲು ಇನ್ನೂ ಹೊತ್ತು ಇತ್ತು. ಅವರು ಆ ಕಾಲದಲ್ಲಿ ಮುಖ ತೊಳೆದುಕೊಂಡು ಸ್ನಾನ ಮಾಡಿ, ಮತ್ತೆ ಕೆಲವರು ಪಡದಲ್ಲಿ ಅಡಿಗೆ–ಊಟ ಮಾಡತೊಡಗಿದರು.

ಅಕ್ಷಯನಿಗೆ ಗೋಲಾಂದ ಪರಿಚಯವಿಲ್ಲ. ಅವನು ಮನಸಿನಲ್ಲೇ ಹತ್ತಿರ ಎಲ್ಲಾದರೂ ಇರಬಹುದು, ಊಟ ಉಪಚಾರಕ್ಕಾಗಿ ರಮೇಶ ಕಮಲೆಯನ್ನು ಅಲ್ಲಿಗೆ ಕರೆದುಕೊಂಡು ಹೋಗಿರಬಹುದು" ಎಂದು ಯೋಚಿಸತೊಡಗಿದ.

ಕಡೆಗೆ ಸ್ಟೀಮರ್ ಸಿಳ್ಳು ಹಾಕತೊಡಗಿತು. ಆಗಲೂ ರಮೇಶನನ್ನು ಕಾಣಲಿಲ್ಲ. ಅಲುಗಾಡುವ ಹಲಗೆಯ ಮೇಲಿಂದ ಪ್ರಯಾಣಿಕರ ಗುಂಪು ಹಡಗು ಹತ್ತಲಾರಂಭಿಸಿತು. ಬಲವಾಗಿ ಫೂಂಕರಿಸುವ ಸಿಳ್ಳಿನಲ್ಲಿ ಜನರ ಅವಸರ ಮತ್ತಷ್ಟು ಹೆಚ್ಚಾಯಿತು. ಆದರೆ ಬರುವವರ ಅಥವಾ ಬಂದಿರುವವರ ನಡುವೆ ರಮೇಶನ ಸುಳಿವೇ ಇಲ್ಲ. ಏರುವವರ ಸಂಖ್ಯೆ ಮುಗಿಯುತ್ತ ಬಂತು. ಹಲಗೆ ಎಳೆಯಲಾಯಿತು. ಮತ್ತು ಜಹಜು ನಡೆಸುವ ಯಂತ್ರ ಎತ್ತಲು ತಪ್ಪಣೆಯಾಯಿತು. ಆಗ ಅಕ್ಷಯ ಉದ್ರೇಕದಿಂದ ಹೇಳಿದ, "ನಾನು ಇಳಿದು ಹೋಗುವೆ"—ಆದರೆ ಖಲಾಸಿಗಳು ಅವನ ಮಾತಿಗೆ ಕಿವಿಗೊಡಲಿಲ್ಲ. ಹಡ ದೂರವಾಗಿರಲಿಲ್ಲ. ಅಕ್ಷಯ ಸ್ಟೀಮರಿನಿಂದ ನೆಗೆದುಬಿದ್ದ.

ಹಡಕ್ಕೆ ಹತ್ತಿ ರಮೇಶನ ಸಂಗತಿ ತಿಳಿಯುಬರಲಿಲ್ಲ. ಕ್ಷಣಕಾಲ ಕಳೆಯಿತು. ಗೋಲಾಂದಾದಿಂದ ಬೆಳಗಿನ ಪ್ಯಾಸೆಂಜರ್— ಬಂಡಿ ಕಲ್ಕತ್ತೆಯ ಕಡೆಗೆ ಹೊರಟಿತು. ನಿನ್ನೆ ರಾತ್ರಿ ಗಾಡಿ ಹತ್ತುವಾಗ ಎಳೆದಾಟದಲ್ಲಿ ಖಂಡಿತ ನಾನು ರಮೇಶನ ಕಣ್ಣಿಗೆ ಬಿದ್ದಿರಬೇಕು. ರಮೇಶ ತನ್ನ ವಿರುದ್ಧವಾದ ಅಭಿಸಂಧಿಯನ್ನು ತಿಳಿದು ಊರಿಗೆ ಹೋಗದೆ ಪುನಃ ಬೆಳಗಿನ ಗಾಡಿಯಲ್ಲಿ ಕಲ್ಕತ್ತೆಗೆ ಹಿಂದಿರುಗಿ ಹೋಗಿರುವನು ಎಂದು ಅಕ್ಷಯ ಮನಸಿನಲ್ಲೇ ಭಾವಿಸಿದ. ಕಲ್ಕತ್ತೆಯಲ್ಲಿ ಯಾರಾದರೂ ಗುಪ್ತವಾಗಿರಲು ಪ್ರಯತ್ನಿಸಿದರೆ, ಅವರನ್ನು ಕಂಡುಹಿಡಿಯುವುದು ಕಷ್ಟ.

## ೨೨

ಅಕ್ಷಯ ಗೋಲಾಂದಾದಲ್ಲಿ ಒದ್ದಾಡುತ್ತ-ತವಕಿಸುತ್ತ ಹಗಲು ಕಳೆದು ಸಂಜೆಯ ಟಪಾಲು ಗಾಡಿ ಹತ್ತಿದ. ಮರುದಿನ ಬೆಳಗ್ಗೆ ಕಲ್ಕತ್ತೆ ಸೇರಿ ಮೊದಲು ರಮೇಶನ ದರ್ಜಿಪಾಡಾದ ಮನೆಗೆ ಬಂದು ನೋಡಿದ. ಅದರ ಬಾಗಿಲು ಮುಚ್ಚಿತ್ತು. ಅಲ್ಲಿಗೆ ಯಾರೂ ಬರಲಿಲ್ಲ ಎಂದು ವಿಚಾರಿಸಿ ತಿಳಿದುಕೊಂಡ.

ಕಲೂಟೋಲಾಕ್ಕೆ ಬಂದು ನೋಡಿದ, ರಮೇಶನ ಮನೆ ಬರಿದು, ಅನ್ನದಾಬಾಬುಗಳ ಮನೆಗೆ ಬಂದು, "ಓಡಿಹೋದ—ಹಿಡಿಯಲಾಗಲಿಲ್ಲ" ಎಂದು ಯೋಗೇಂದ್ರನಿಗೆ ತಿಳಿಸಿದ.

"ಅದು ಹೇಗೆ" ಎಂದ ಯೋಗೇಂದ್ರ.

ಅಕ್ಷಯ ತನ್ನ ಪ್ರಯಾಣದ ವಿಷಯ ವಿವರಿಸಿದ.

ಅಕ್ಷಯನನ್ನು ನೋಡಿ ರಮೇಶ ಕಮಲೆಯನ್ನು ಕರೆದುಕೊಂಡು ಓಡಿ ಹೋದ, ಈ ರಮೇಶನ ವಿರುದ್ಧವಾದ ನಡುವಳಿಕೆಯಿಂದ ಯೋಗೇಂದ್ರನ ಸಂದೇಹ ದೃಢನಂಬಿಕೆಯಾಗಿ ಮಾರ್ಪಟ್ಟಿತು.

"ಆದರೆ ಅಕ್ಷಯ, ಈ ಎಲ್ಲ ಹಂಚಿಕೆ ಯಾವ ಕೆಲಸಕ್ಕೂ ಬಾರದು. ಹೇಮನಳಿನಿ ಮಾತ್ರವಲ್ಲ, ತಂದೆಯವರೂ ಇದನ್ನೇ ನಂಬಿರುವರು. ರಮೇಶನ ಬಾಯಿಂದಲೇ ಕಡೆಯ ಮಾತು ಕೇಳದೆ ಅವರು ರಮೇಶನನ್ನು ಅಪನಂಬಿಕಸ್ಥ ನನ್ನಾಗಿ ಎಣಿಸುವುದಿಲ್ಲ ಎಂದು ಅವರು ಹೇಳುವರು. ಇಷ್ಟೇಕೆ ರಮೇಶ ಈಗಲೂ ಬಂದು, "ನಾನು ಈಗ ಏನೂ ಹೇಳುವುದಿಲ್ಲ" ಎಂದರೂ ಖಂಡಿತ ತಂದೆಯವರು ಅವನೊಡನೆ ಹೇಮಳ ಮದುವೆ ನಡೆಸಲು ಹಿಂಜರಿಯುವುದಿಲ್ಲ. ಇವರಿಂದ ನಾನು ಎಷ್ಟು ತೊಂದರೆಗೆ ಈಡಾದೆ. ತಂದೆಯವರು ಹೇಮ ನಳಿನಿಯ ಅಲ್ಪಕಷ್ಟವನ್ನೂ ಸಹಿಸಲಾರರು—ರಮೇಶನಿಗೆ ಹೆಂಡತಿಯಿರಲಿ, ನಾನು ಅವನನ್ನೇ ಮದುವೆಯಾಗುವೆನೆಂದು ಹೇಮ ಹಟ ಹಿಡಿಯುವುದಾದರೆ ಬಹುಶಃ ತಂದೆಯವರು ಅದಕ್ಕೆ ಸಮ್ಮತಿಸುವರು ಎಂದು ತಿಳಿಯುವೆ. ಏನೇ ಆಗಲಿ, ಆದಷ್ಟು ಬೇಗ, ರಮೇಶ ಒಪ್ಪಿಕೊಳ್ಳುವಂತೆ ಮಾಡಬೇಕು. ನೀನು ನಿರಾಸೆಯಾದರೆ ನಡೆಯದು. ನಾನೇ ಈ ಕೆಲಸದಲ್ಲಿ ತೊಡಗುವೆ, ಆದರೆ ಯಾವ ಬಗೆಯಲ್ಲೂ ಸಂಗತಿ ನನ್ನ ತಲೆಗೆ ಬರಬಾರದು—ಬೇಕಾದರೆ ನಾನು ರಮೇಶನೊಡನೆ ಹಣಾಹಣಿಗೆ ತೊಡಗುವೆ. ಇನ್ನೂ ನೀನು ಮುಖ ತೊಳೆದು, ಚಹ ಕುಡಿದಿಲ್ಲವೆಂದು ತೋರುವುದು" ಎಂದು ಯೋಗೇಂದ್ರ ಹೇಳಿದ.

ಅಕ್ಷಯ ಮುಖ ತೊಳೆದುಕೊಂಡು ಚಹ ಕುಡಿಯುತ್ತ ಕುಡಿಯುತ್ತ ಆಲೋಚಿಸತೊಡಗಿದ. ಆಗ ಅನ್ನದಾಬಾಬುಗಳು ಹೇಮನಳಿನಿಯ ಕೈ ಹಿಡಿದುಕೊಂಡು ಚಹ ಕುಡಿಯುವ ಕೊಠಡಿಗೆ ಬಂದರು. ಅಕ್ಷಯನನ್ನು ನೋಡಿದ ಕೂಡಲೇ ಹೇಮನಳಿನಿ ತಿರುಗಿ ಕೊಠಡಿಯಿಂದ ಹೊರಟುಹೋದಳು.

ಯೋಗೇಂದ್ರ ಕೋಪಿಸಿಕೊಂಡು, "ಇದು ಹೇಮಳ ದೊಡ್ಡ ಅಪರಾಧ.

ಅಪ್ಪಾ, ನೀವು ಅವಳ ಈ ಎಲ್ಲ ಅಗೌರವಕ್ಕೆ ಅವಕಾಶ ಕೊಡಬೇಡಿ. ಅವಳನ್ನು ಬಲವಂತವಾಗಿ ಇಲ್ಲಿಗೆ ಕರೆದುಕೊಂಡು ಬರುವುದು ಒಳ್ಳೆಯದು. ಹೇಮ್, ಹೇಮ್, ಎಂದ.

ಹೇಮನಳಿನಿ ಆಗ ಅಂತಃಪುರಕ್ಕೆ ಹೊರಟುಹೋದಳು. ಅಕ್ಷಯ, "ಯೋಗೇನ್, ನೀನು ನನ್ನ ಕೆಲಸವನ್ನು ಮತ್ತಷ್ಟು ಹಾಳುಮಾಡುವೆ. ಅವಳ ಹತ್ತಿರ ನನ್ನ ವಿಷಯವಾಗಿ ಯಾವ ಮಾತೂ ಹೇಳಬೇಡ. ಸಕಾಲದಲ್ಲಿ ಇದರ ಪ್ರತೀಕಾರವಾಗುವುದು. ಬಲಾತ್ಕರಿಸುವುದಾದರೆ ಎಲ್ಲವೂ ಹಾಳಾಗುವುದು" ಎಂದು ಹೇಳಿದ.

ಹೀಗೆ ಹೇಳಿ ಚಹ ಕುಡಿದು ಅಕ್ಷಯ ಹೊರಟುಹೋದ. ಅಕ್ಷಯನ ಧೈರ್ಯಕ್ಕೆ ಕೊರತೆಯಿರಲಿಲ್ಲ. ಎಲ್ಲ ಸಂಗತಿಯೂ ತನಗೆ ಪ್ರತಿಕೂಲ ವಾದಾಗ, ಅವನು ಸುಮ್ಮನೆ ಕೂಡುವವನಲ್ಲ. ಅವನ ಮಾನಸಿಕ ಸ್ಥಿತಿ ಹೇಗೂ ಬದಲಾಯಿಸದು. ಬಿಗುಮಾನದಿಂದ ಅವನು ಮುಖ ದಪ್ಪಗೆ ಮಾಡಿ ಕೊಳ್ಳುವುದಿಲ್ಲ ಅಥವಾ ದೂರ ಹೊರಟು ಹೋಗುವುದಿಲ್ಲ. ಅನಾದರ ಅವಮಾನಗಳಲ್ಲಿ ಅವನು ಧೈರ್ಯವಾಗಿರುವ ಸ್ಥಿರಪ್ರಕೃತಿಯವ. ಅವನ ವಿಷಯದಲ್ಲಿ ಯಾರು ಹೇಗೆ ನಡೆದುಕೊಂಡರೂ, ಅವನು ಸಮಾಧಾನ ವಾಗಿರುವನು.

ಅಕ್ಷಯ ಹೋದ ಬಳಿಕ ಅನ್ನದಾಬಾಬು ಹೇಮನಳಿನಿಯನ್ನು ಕರೆದು ಕೊಂಡು ಚಹದ ಮೇಜೆಯ ಬಳಿಗೆ ಬಂದರು. ಇಂದು ಅವಳ ಕೆನ್ನೆಗಳು ಬಿಳಿಚಿಕೊಂಡಿದ್ದುವು—ಅವಳ ಕಣ್ಣಿನ ಕೆಳಗೆ ಕಪ್ಪುಗೆರೆ ಬಿದ್ದಿತ್ತು, ಒಳಗೆ ಬಂದು ಅವಳು ದೃಷ್ಟಿ ತಗ್ಗಿಸಿದಳು. ಯೋಗೇಂದ್ರನ ಮುಖದ ಕಡೆ ನೋಡ ಲಾರದಾದಳು. ಯೋಗೇಂದ್ರ ತನ್ನ ಹಾಗೂ ರಮೇಶನ ಮೇಲೆ ಕೋಪ ಗೊಂಡಿರುವ, ತಮ್ಮ ವಿರುದ್ಧವಾಗಿ ಕೆಟ್ಟ ಆಲೋಚನೆ ಮಾಡುವ ಎಂದು ಅವಳು ಭಾವಿಸಿದಳು. ಇದರಿಂದ ಯೋಗೇಂದ್ರನೊಡನೆ ಪ್ರತ್ಯಕ್ಷ ಭೇಟಿ ಅಥವಾ ಪರಸ್ಪರ ದೃಷ್ಟಿಸುವಿಕೆಯೂ ಅವಳಿಗೆ ಬಹಳ ಕಠಿಣವೆನಿಸಿತು.

ಪ್ರೀತಿಯಲ್ಲಿ ಹೇಮನಳಿನಿಯ ನಂಬಿಕೆ ಕೆಡಿಸಿದರೂ, ಯುಕ್ತಿಯನ್ನು ಒಮ್ಮೆಗೇ ಅಲುಗಾಡಿಸಲು ಸಾಧ್ಯವಿಲ್ಲ. ಯೋಗೇಂದ್ರನ ಇದಿರಿನಲ್ಲಿ ಹೇಮ ನಳಿನಿ ನಿನ್ನೆ ತನ್ನ ದೃಢನಂಬಿಕೆ ತೋರಿಸಿ ಹೋಗಿದ್ದಳು. ಆದರೆ ರಾತ್ರಿಯ ಅಂಧಕಾರದಲ್ಲಿ ಮಲಗುವ ಮನೆಯಲ್ಲಿ ಒಂಟಿಯಾಗಿರುವಾಗ ಆ ಬಲಸಂಪೂರ್ಣ

ವಾಗಿ ನಿಲ್ಲಲಿಲ್ಲ. ವಸ್ತುತಃ ಮೊದಲಿನಿಂದಲೂ ರಮೇಶನ ವ್ಯವಹಾರದ ಯಾವ ಗುಟ್ಟೂ ತಿಳಿಯಬರಲಿಲ್ಲ. ಸಂದೇಹದ ಕಾರಣಗಳನ್ನು ಹೇಮನಳಿನಿ ಬಲಪೂರ್ವಕ ತನ್ನ ನಂಬಿಕೆಯ ದುರ್ಗದ ನಡುವೆ ಪ್ರವೇಶಿಸಲು ಅವಕಾಶ ಕೊಡಲಿಲ್ಲ—ಅವು ಹೊರಗೇ ನಿಂತು ಎಷ್ಟೇ ಬಲವಾದ ಪೆಟ್ಟಿನಿಂದ ಕದಲಿಸ ಲೆತ್ನಿಸಿದರೂ ತಾಯಿಮಗುವನ್ನು ಎರಡು ಕೈಗಳಿಂದಲೂ ಎದೆಗೆ ಅಪ್ಪಿಕೊಂಡು ರಕ್ಷಿಸುವಂತೆ, ಹೇಮನಳಿನಿ ರಮೇಶನ ವಿಷಯದ ನಂಬಿಕೆಯನ್ನು ಎಲ್ಲ ಪ್ರಮಾಣಗಳ ವಿರುದ್ಧ ಬಲವಂತವಾಗಿ ಹೃದಯದಲ್ಲಿ ಭದ್ರಪಡಿಸಿದಳು. ಆದರೇನು? ಬಲಾತ್ಕಾರ ಎಲ್ಲ ಸಮಯದಲ್ಲೂ ಒಂದೇ ಸಮನಾಗಿರದು.

ಅನ್ನದಾಬಾಬುಗಳು ರಾತ್ರಿ ಹೇಮನಳಿನಿಯ ಪಕ್ಕದ ಕೊಠಡಿಯಲ್ಲೇ ನಿದ್ದೆ ಮಾಡುತಿದ್ದರು. ಹೇಮ ಅತ್ತ-ಇತ್ತ ಹೊರಳಾಡುತಿದ್ದಳು. ಎಂದು ಅವರಿಗೆ ತಿಳಿಯುತಿತ್ತು. ಒಮ್ಮೊಮ್ಮೆ ಅವಳ ಕೊಠಡಿಗೆ ಹೋಗಿ ಅವಳನ್ನು, "ಅಮ್ಮಾ, ನಿನಗೆ ನಿದ್ದೆ ಬರುವುದಿಲ್ಲವೆ?" ಎಂದು ಕೇಳುತಿದ್ದರು. "ಅಪ್ಪಾ" ನೀವೇಕೆ ಎಚ್ಚರವಾಗಿರುವಿರಿ, ನನಗೆ ನಿದ್ದೆ ಬರುತಿದೆ. ನಾನು ಈಗ ಮಲಗುವೆ" ಎಂದು ಹೇಮನಳಿನಿ ಉತ್ತರ ಹೇಳುವಳು.

ಮರುದಿನ ಬೆಳಗ್ಗೆ ಎದ್ದು ಹೇಮನಳಿನಿ ಮಾಳಿಗೆಯಲ್ಲಿ ಓಡಾಡುತಿದ್ದಳು. ರಮೇಶನ ಮನೆಯ ಒಂದೇ ಒಂದು ಬಾಗಿಲು, ಒಂದೇ ಒಂದು ಕಿಟಕಿ ಸಹ ತೆಗೆದಿರಲಿಲ್ಲ.

ಸೂರ್ಯ ಕ್ರಮವಾಗಿ ಪೂರ್ವದ ಸೌಧಶಿಖರದ ಮಾಲೆಯ ಮೇಲೇರಿ ಬಂದ. ಹೇಮನಳಿನಿಗೆ ಅಂದಿನ ಆ ನೂತನ-ಅಭ್ಯುದಿತ ದಿನ ಎಷ್ಟು ಶೂನ್ಯ. ಎಂಥ ಆಶಾಹೀನ ಆನಂದಹೀನವಾಯಿತೆಂದರೆ, ಅವಳು ಅದೇ ಮಾಳಿಗೆಯ ಒಂದು ಮೂಲೆಯಲ್ಲಿ ಕುಳಿತು ಎರಡು ಕೈಗಳಿಂದಲೂ ಮುಖ ಮುಚ್ಚಿಕೊಂಡು ಅಳತೊಡಗಿದಳು. ಅಂದು ಯಾರೂ ಬರುವವರಿಲ್ಲ, ಚಹದ ವೇಳೆಯಲ್ಲಿ ಯಾರನ್ನೂ ನಿರೀಕ್ಷಿಸುವಂತಿರಲಿಲ್ಲ, ನೆರಮನೆಯಲ್ಲಿ ಯಾರೋ ಇರುವರು ಎಂಬ ಕಲ್ಪನೆ ಕೂಡ ಹೊರಟುಹೋಯಿತು.

"ಹೇಮ್ ! ಹೇಮ್ !"

ಹೇಮನಳಿನಿ ಅವಸರ ಅವಸರವಾಗಿ ಎದ್ದು ಕಣ್ಣೊರೆಸಿಕೊಂಡು "ಏನಪ್ಪಾ" ಎಂದು ಕೇಳಿದಳು.

ಅನ್ನದಾಬಾಬುಗಳು ಮಾಳಿಗೆ ಹತ್ತಿ ಬಂದು ಹೇಮನಳಿನಿಯ ಬೆನ್ನು

ಸವರುತ್ತ "ಈ ದಿನ ನಾನು ಏಳುವುದು ಹೊತ್ತಾಯಿತು" ಎಂದರು.

ಅನ್ನದಾಬಾಬುಗಳಿಗೆ ಉದ್ರೇಕದಿಂದ ರಾತ್ರಿ ನಿದ್ರೆ ಬರಲಿಲ್ಲ. ಮುಂಜಾನೆಯ ವೇಳೆಗೆ ನಿದ್ದೆಮಾಡಿದರು. ಬೆಳಕು ಕಣ್ಣು ಚುಚ್ಚಿದಾಗ ಎದ್ದು ಅವಸರ ಅವಸರವಾಗಿ ಮುಖ ತೊಳೆದುಕೊಂಡು ಹೇಮನಳಿನಿಯನ್ನು ವಿಚಾರಿಸಲು ಹೊರಟರು. ಕೊಠಡಿಯಲ್ಲಿ ನೋಡಿದರೆ ಅಲ್ಲಿಲ್ಲ. ಬೆಳಗ್ಗೆ ಅವಳು ಒಬ್ಬಳೇ ಓಡಾಡುತ್ತಿರುವುದನ್ನು ನೋಡಿ ಅವರ ಮನ ನೊಂದಿತು. "ಹೊರಡಮ್ಮ, ಚಹ ಕುಡಿಯಲು ನಡೆ" ಎಂದರು.

ಚಹದ ಮೇಜೆಯ ಬಳಿ ಯೋಗೇಂದ್ರನ ಎದುರಿಗೆ ಕುಳಿತು ಚಹ ಕುಡಿಯಲು ಹೇಮನಳಿನಿಗೆ ಇಷ್ಟವಿಲ್ಲ. ಆದರೆ ಪದ್ಧತಿಯಂತೆ ನಡೆಯದಿದ್ದರೆ ತಂದೆಯನ್ನು ಗೋಳಾಡಿಸಬಹುದು, ಎಂದು ಅವಳು ಬಲ್ಲಳು. ಅದಲ್ಲದೆ, ಅವಳು ಪ್ರತಿನಿತ್ಯವೂ ತಾನೇ ತನ್ನ ತಂದೆಯ ಬಟ್ಟಲಿಗೆ ಚಹ ಹಾಕುವಳು. ಈ ಸೇವೆಯಿಂದ ತಪ್ಪಿಸಿಕೊಳ್ಳಲು ಅವಳಿಗೆ ಇಷ್ಟವಿಲ್ಲ. .

ಕೆಳಕ್ಕೆ ಬಂದು ಕೊಠಡಿಗೆ ಹೋಗುವ ಮೊದಲು ಹೊರಗಡೆಯಿಂದಲೇ ಅವಳು ಯೋಗೇಂದ್ರ ಯಾರೊಡನೆಯೋ ಮಾತನಾಡುತಿರುವುದನ್ನು ಕೇಳಿದಳು. ಆಗ ಅವಳ ಎದೆ ಕಂಪಿಸಿತು—ಇದ್ದಕ್ಕಿದ್ದಂದೆ ರಮೇಶ ಬಂದಿರುವ ಎಂದು ಭಾವಿಸಿದಳು. ಇಷ್ಟು ಮುಂಜಾನೆಯಲ್ಲಿ ಬೇರೆಯಾರು ಬರುವರು.

ನಡುಗುವ ಹೆಜ್ಜೆಯಲ್ಲಿ ಒಳಕ್ಕೆ ಬಂದು ಅಕ್ಷಯನನ್ನು ನೋಡಿ, ಅವಳು ತನ್ನ ಆತ್ಮಗೌರವ ಉಳಿಸಿಕೊಳ್ಳಲಾರದಾದಳು. ಕೂಡಲೆ ಹೊರಕ್ಕೆ ಹೊರಟು ಬಂದಳು.

ಎರಡನೆಯ ಸಲ ಅನ್ನದಾಬಾಬುಗಳು ಅವಳನ್ನು ಕೊಠಡಿಯೊಳಕ್ಕೆ ಕರೆತಂದರು. ಆಗ ಅವಳು ತನ್ನ ತಂದೆಯ ಕುರ್ಚಿಯ ಪಕ್ಕದಲ್ಲಿ ಒರಗಿ ನಿಂತು ತಲೆ ತಗ್ಗಿಸಿಕೊಂಡು ಅವರ ಚಹ ಸಿದ್ಧಪಡಿಸತೊಡಗಿದಳು.

ಹೇಮನಳಿನಿಯ ನಡವಳಿಕೆಯಿಂದ ಯೋಗೇಂದ್ರ ಬಹಳ ಬೇಸರ ಗೊಂಡ. ಹೇಮ ರಮೇಶನಿಗಾಗಿ ಹೀಗೆ ದುಃಖಪಡುವುದು ಅವನಿಗೆ ಅಸಹನೀಯವಾಯಿತು. ಆ ಬಳಿಕ ನೋಡಿದರೆ, ಅನ್ನದಾಬಾಬುಗಳು ಅವಳ ಈ ಶೋಕದಲ್ಲಿಸಂಗಡಿಗರಾಗಿರುವರು. ಮತ್ತು ಅವಳೂ ಜಗತ್ತಿನಲ್ಲಿ ಇತರ ರೆಲ್ಲರಿಗಿಂತಲೂ ಅನ್ನದಾಬಾಬುಗಳ ಸ್ನೇಹದ ನೆರಳಲ್ಲಿ ತನ್ನನ್ನು ಕಾಪಾಡಿ

ಕೊಳ್ಳಲು ಪ್ರಯತ್ನಿಸುತಿರುವಳು. ಆಗ ಅವಳ ಅಧೈರ್ಯ ಮತ್ತಷ್ಟು ಹೆಚ್ಚುವುದು—ನಾವೆಲ್ಲ ಅನ್ಯಾಯಕಾರರು—ನಾವು ಸ್ನೇಹದ ಪರವಾಗಿಯೇ ಕರ್ತವ್ಯಪಾಲನೆಗೆ ಯತ್ನಿಸುತಿರುವುದು, ನಾವೇ ನಿಜವಾಗಿಯೂ ಅವಳ ಮಂಗಳ ಸಾಧನೆಯಲ್ಲಿ ತೊಡಗಿರುವವರು. ಅದಕ್ಕಾಗಿ ಸ್ವಲ್ಪವಾದರೂ ಕೃತಜ್ಞತೆ ತೋರಿಸುವುದಿರಲಿ, ಮನಸಿನಲ್ಲೇ ನಮ್ಮನ್ನು ದೋಷಿಗಳನ್ನಾಗಿ ತಿಳಿದಿರುವಳು. ತಂದೆಯವರಿಗಾದರೋ ಯಾವ ವಿಷಯದಲ್ಲೂ ತಿಳುವಳಿಕೆ ಯಿಲ್ಲ. ಇದು ಸಮಾಧಾನ ಮಾಡುವ ಕಾಲವಲ್ಲ. ಇದು ನೋಯಿಸುವ ಕಾಲ. ಹಾಗೆ ಮಾಡದೆ ಅವರು ಮೇಲು ಮೇಲೂ ಅಪ್ರಿಯ ಸತ್ಯವನ್ನು ಅವಳ ಬಳಿಯಿಂದ ದೂರ ಓಡಿಸಿರುವರು.

ಯೋಗೇಂದ್ರ ಅನ್ನದಾಬಾಬುಗಳನ್ನು ಸಂಬೋಧಿಸುತ್ತ, "ಅಪ್ಪಾ ಏನು ನಡೆಯುತ್ತಿದೆ? ಗೊತ್ತಿದೆಯೆ?" ಎಂದ.

ಅನ್ನದಾಬಾಬು ಕಳವಳದಿಂದ ಹೇಳಿದರು "ಇಲ್ಲ—ಏನು ನಡೆಯು ತ್ತಿದೆ?"

ಯೋಗೇಂದ್ರ—ರಮೇಶ ನಿನ್ನೆ ತನ್ನ ಹೆಂಡತಿಯೊಡನೆ ಗೋಲಾಂದ್ ಮೆಯಿಲಿನಲ್ಲಿ ಊರಿಗೆ ಹೋಗದೆ ಪುನಃ ಅವನು ಕಲ್ಕತ್ತೆಗೆ ಓಡಿಬಂದಿರುವ.

ಹೇಮನಳಿನಿಯ ಕೈ ನಡುಗಿತು—ಚಹದ ಬಟ್ಟಲಿಗೆ ಚಹ ಬಿತ್ತು. ಅವಳು ಕುರ್ಚಿಯಲ್ಲಿ ಕುಳಿತಳು.

ಯೋಗೇಂದ್ರ ಒಮ್ಮೆ ಅವಳ ಮುಖದ ಕಡೆ ನೋಡುತ್ತ ಹೇಳ ತೊಡಗಿದ. "ಓಡಿಹೋಗುವಂತಹ ಕಾರಣವೇನು? ಯಾವುದೂ ನನಗೆ ಅರ್ಥವಾಗನು. ಅಕ್ಷಯನಿಗೆ ಮೊದಲೇ ಎಲ್ಲವೂ ತಿಳಿದಿರುವುದು. ಮೊದಲ ನೆಯದಾಗಿ ಅವನ ವ್ಯವಹಾರವೇ ಬಹಳ ಕೆಟ್ಟದ್ದು—ಅದಲ್ಲದೆ ಈ ಹೇಡಿ ತನ, ಕಳ್ಳನಂತೆ ಹೀಗೆ ಓಡಿಹೋಗಿರುವುದು ನನಗೆ ಬಹಳ ಅಕ್ಷಮ್ಯವಾಗಿ ತೋರುವುದು ಹೇಮ್ ಮನಸಿಗೆ ಏನು ತಿಳಿದುಕೊಳ್ಳುವಳೋ ಗೊತ್ತಿಲ್ಲ— ಆದರೆ ಹೀಗೆ ಓಡಿಹೋಗುವುದೇ ಅವನ ತಪ್ಪಿಗೆ ಸಾಕಷ್ಟು ಪ್ರಮಾಣವಾಗಿದೆ".

ಹೇಮನಳಿನಿ ನಡುಗುತ್ತ ನಡುಗುತ್ತ ಕುರ್ಚಿಯಿಂದ ಎದ್ದು ನಿಂತಳು, "ಅಣ್ಣಾ, ನಾನು ಯಾವ ಪ್ರಮಾಣವನ್ನೂ ಅಪೇಕ್ಷಿಸುವುದಿಲ್ಲ. ನೀವು ಅದರ ಯೋಚನೆ ಮಾಡಬೇಕಾದರೆ ಮಾಡಿ—ನಾನು ಅದನ್ನು ಯೋಚಿಸುವವ ಳಲ್ಲ".

ಯೋಗೇಂದ್ರ—ಯಾರೊಡನೆ ನಿನ್ನ ಮದುವೆಯ ಸಂಬಂಧ ನಡೆಯು ತ್ತಿರುವುದೋ, ಅವನು ನಮಗೆ ಸಂಬಂಧವಿಲ್ಲವೇನು ?

ಹೇಮನಳಿನಿ—ಮದುವೆಯ ಮಾತು ಹೇಳುತ್ತಿರುವವರು ಯಾರು. ನೀವು ನಿಲ್ಲಿಸಲು ಇಷ್ಟಪಟ್ಟರೆ ನಿಲ್ಲಿಸಿಬಿಡಿ—ಅದು ನಿಮ್ಮ ಇಷ್ಟ. ಆದರೆ ನನ್ನ ಮನಸು ಕೆಡಿಸಲು ವ್ಯರ್ಥ ಪ್ರಯತ್ನ ಮಾಡುವಿರಿ.

ಹೇಳುತ್ತ ಹೇಳುತ್ತ ಹೇಮನಳಿನಿಯ ಸ್ವರ ಕುಗ್ಗಿಹೋಯಿತು. ಅಳಲಾ ರಂಭಿಸಿದಳು. ಅನ್ನದಾಬಾಬುಗಳು ಅವಸರ ಅವಸರವಾಗಿ ಎದ್ದು ಕಣ್ಣೀರಿ ನಿಂದ ತೋಯ್ದ ಅವಳ ಮುಖವನ್ನು ಎದೆಗೆ ಅಪ್ಪಿಕೊಂಡು “ ನಡೆ ಹೇಮ್ ನಾವು ಮಹಡಿಗೆ ಹೋಗೋಣ ” ಎಂದರು.

೨೩

ಸ್ಟೀಮರ್ ಹೊರಟಿತು. ಒಂದು-ಎರಡನೆಯ ದರ್ಜೆಯ ಕೊಠಡಿ ಗಳಲ್ಲಿ ಯಾರೂ ಇರಲಿಲ್ಲ. ರಮೇಶ ಒಂದು ಕೋಣೆ ಗೊತ್ತುಮಾಡಿಕೊಂಡು ಹಾಸಿಗೆ ಹಾಸಿದ. ಬೆಳಗ್ಗೆ ಹಾಲು ಕುಡಿದು ಆ ಕೊಠಡಿಯ ಬಾಗಿಲು ತೆರೆದು ಕಮಲೆ ನದಿ ಹಾಗೂ ನದೀ ತೀರ ನೋಡತೊಡಗಿದಳು.

ರಮೇಶ ಹೇಳಿದ “ ನಾವು ಎಲ್ಲಿಗೆ ಹೋಗುತ್ತಿರುವೆವು ? ಬಲ್ಲೆಯಾ ಕಮಲ ”.

“ ಊರಿಗೆ ಹೋಗುತಿರುವೆವು ” ಎಂದಳು ಕಮಲ.

ರಮೇಶ—ಊರು ನಿನಗೆ ಆಗುವುದಿಲ್ಲವಲ್ಲ—ನಾವು ಊರಿಗೆ ಹೋಗು ವುದು ಬೇಡ.

ಕಮಲ—ನನಗಾಗಿ ನೀನು ಊರಿಗೆ ಹೋಗುವುದನ್ನು ನಿಲ್ಲಿಸಿರುವೆಯಾ ?

ರಮೇಶ—ಹೌದು ನಿನಗೋಸ್ಕರ.

ಕಮಲ ಮುಖ ಗಂಟುಹಾಕಿಕೊಂಡು, “ ಏಕೆ ಹಾಗೆ ಮಾಡಿದೆ. ನಾನು ಒಂದು ದಿನ ಏನೋ ಮಾತು ಮಾತಿಗೆ ಹೇಳಿದ್ದೆ, ಅದನ್ನು ಮನಸಿಗೆ ಈ ರೀತಿ ತೆಗೆದುಕೊಳ್ಳುವುದೆ. ನೀನು ಸಣ್ಣ ಮಾತಿಗೂ ಕೋಪಿಸಿಕೊಳ್ಳುವೆ ” ಎಂದಳು.

“ ನಾನು ಸ್ವಲ್ಪವೂ ಕೋಪಿಸಿಕೊಳ್ಳಲಿಲ್ಲ. ಊರಿಗೆ ಹೋಗಲು ನನಗೂ ಇಷ್ಟವಿಲ್ಲ ” ಎಂದು ರಮೇಶ ನಗುತ್ತ ಹೇಳಿದ.

ಆಗ ಕಮಲೆ ಕುತೂಹಲದಿಂದ ಕೇಳಿದಳು, "ಹಾಗಾದರೆ ನಾವು ಎಲ್ಲಿಗೆ ಹೋಗುವೆವು ?"

ರಮೇಶ—ಪಶ್ಚಿಮ ಪ್ರಾಂತ್ಯಕ್ಕೆ.

"ಪಶ್ಚಿಮ" ಎಂದು ಕೇಳಿ ಕಮಲೆಯ ಕಣ್ಣು ಅರಳಿತು. ಪಶ್ಚಿಮ ! ಹೆಚ್ಚುಕಾಲವನ್ನು ಮನೆಯಲ್ಲೇ ಕಳೆದಿರುವವಳಿಗೆ, ಕೇವಲ "ಪಶ್ಚಿಮ" ಎಂದರೆ ಅವಳಿಗೆ ಎಷ್ಟರ ಮಟ್ಟಿಗೆ ಅರ್ಥವಾಗಬಹುದು. ಪಶ್ಚಿಮದಲ್ಲಿ ತೀರ್ಥ ಕ್ಷೇತ್ರ, ಪಶ್ಚಿಮದಲ್ಲಿ ಆರೋಗ್ಯ. ಪಶ್ಚಿಮದಲ್ಲಿ ಹೊಸ ಹೊಸ ದೇಶ, ಹೊಸ ಹೊಸ ನೋಟ, ಎಷ್ಟು ರಾಜ ಹಾಗೂ ಚಕ್ರವರ್ತಿಗಳ ಪುರಾತನ ಕೀರ್ತಿ, ಅದೆಷ್ಟು ಕೆತ್ತನೆಯ ದೇವಾಲಯ, ಅವೆಷ್ಟು ಪ್ರಾಚೀನ ಕತೆಗಳು, ಅವೆಷ್ಟು ವೀರ ಇತಿಹಾಸ.

ಕಮಲೆ ಪುಳಕಿತಳಾಗಿ ಪ್ರಶ್ನಿಸಿದಳು, "ಪಶ್ಚಿಮದಲ್ಲಿ ನಾವು ಹೋಗುವುದೆಲ್ಲಿಗೆ" ?

"ಯಾವುದೂ ನಿಶ್ಚಯವಿಲ್ಲ. ಮಾಂಘೀರ್, ಪಾಟ್ನಾ, ದಾನಾಪುರ, ಬಕ್ಸಾರ್, ಗಾಜೀಪುರ, ಕಾಶಿ, ಎಲ್ಲಾದರೂ ಒಂದು ಸ್ಥಳಕ್ಕೆ ಹೋಗಿ ಇರಬೇಕು" ಎಂದ ರಮೇಶ.

ಈ ಎಲ್ಲ ಕೇಳಿದ ಹಾಗೂ ಕೇಳದ ನಗರಗಳ ಹೆಸರು ಕೇಳಿ ಕಮಲೆಯ ಕಲ್ಪನಾಶಕ್ತಿ ಮತ್ತೂ ಉದ್ರೇಕಗೊಂಡಿತು. ಅವಳು ಚಪ್ಪಾಳೆ ತಟ್ಟುತ್ತ ಹೇಳಿದಳು "ಬಹಳ ಮೋಜೆನಿಸುವುದು".

"ಮೋಜು ಆಮೇಲೆ ಆಗುವುದು. ಆದರೆ ಈ ಕೆಲವು ದಿನ ಊಟ ಉಪಚಾರಕ್ಕೆ ಏನು ಮಾಡುವುದು. ನೀನು ಆಳುಗಳು ಮಾಡಿದ ಅಡುಗೆ ಊಟಮಾಡುವೆಯಾ ?" ಎಂದ ರಮೇಶ.

ಕಮಲ ತಿರಸ್ಕಾರದಿಂದ ಮುಖ ತಿರುವುತ್ತ "ಅಯ್ಯೊ ! ಅದು ನನ್ನಿಂದ ಸಾಧ್ಯವಿಲ್ಲ" ಎಂದು ಹೇಳಿದಳು.

ರಮೇಶ—ಹಾಗಾದರೆ ಬೇರೆ ಉಪಾಯ

ಕಮಲ—ಏಕೆ, ನನಗೆ ಅಡುಗೆ ಬರುವುದಿಲ್ಲವೆ ?

ರಮೇಶ—ನೀನು ಅಡುಗೆ ಮಾಡುವೆಯಾ ?

"ನೀನು ನನ್ನನ್ನು ಏನೆಂದು ತಿಳಿದಿರುವೆಯೋ ಅರಿಯೆ. ಅಡುಗೆ ಮಾಡಲಾರೆ ಎಂದರೇನು ? ನಾನೇನು ಅರಿಯದ ಹುಡುಗಿಯೆ ? ಮಾವನ

ಮನೆಯಲ್ಲಿ ನಾನು ತಪ್ಪದೆ ಅಡುಗೆ ಮಾಡಿರುವೆ" ಎಂದು ಕಮಲೆ ನಗುತ್ತ ಹೇಳಿದಳು.

ಕೂಡಲೇ ರಮೇಶ ಅನುತಾಪ ತೋರ್ಪಡಿಸುತ್ತ "ಹಾಗೆಯೇನು ? ನಿನ್ನನ್ನು ಈ ಪ್ರಶ್ನೆ ಕೇಳಿದ್ದು ಖಂಡಿತ ಸರಿಯಲ್ಲ. ಹಾಗಾದರೆ ಈಗ ಅಡುಗೆಯ ಏರ್ಪಾಡು ಮಾಡಬೇಕು—ಏನು ಹೇಳು" ಎಂದ.

ಹೀಗೆ ಹೇಳಿ ರಮೇಶ ಹೊರಟುಹೋದ ಮತ್ತು ವಿಚಾರಿಸಿಕೊಂಡು ಒಂದುಕಬ್ಬಿಣದ ಒಲೆ ತಂದ. ಅಷ್ಟೇ ಅಲ್ಲ. ಕಾಶೀ ತಲುಪಿಸುವ ವೆಚ್ಚ ಹಾಗೂ ಸಂಬಳದ ಆಸೆ ತೋರಿಸಿ ಉಮೇಶ ಎಂಬ ಒಬ್ಬ ಕಾಯಸ್ಥ ಹುಡುಗನನ್ನು ನೀರು ತರುವುದು, ಪಾತ್ರೆ ತೊಳೆಯುವುದು ಮೊದಲಾದ ಕೆಲಸಕ್ಕಾಗಿ ನೇಮಿಸಿದ.

"ಕಮಲಾ" ಇಂದೇನು ಅಡುಗೆ ಮಾಡುವೆ" ಎಂದು ರಮೇಶ ಕೇಳಿದ. ಕಮಲ, "ನೀನು ಬಹಳ ಸಿದ್ಧತೆ ಮಾಡಿರುವೆಯಲ್ಲ ಬೇಳೆ ಮತ್ತು ಅಕ್ಕಿ—ಇಂದು ಖಿಚಡಿ ಮಾಡುವೆ" ಎಂದಳು.

ರಮೇಶ ಹಡಗಿನ ಸೇವಕನ ಬಳಿಯಿಂದ ಕಮಲೆ ಹೇಳಿದ್ದ ಮಸಾಲೆ ಸಾಮಗ್ರಿಗಳನ್ನು ಶೇಖರಿಸಿ ತಂದ.

ರಮೇಶನ ಮೌಢ್ಯಕ್ಕಾಗಿ ನಕ್ಕು ಕಮಲೆ ಹೇಳಿದಳು, "ಬರಿಯ ಖಾರದ ಪದಾರ್ಥದಿಂದ ಉಪಯೋಗ ! ಅರೆಯುವ ಕಲ್ಲು—ಗುಂಡು ಇಲ್ಲದೆ ಅರೆಯುವುದು ಹೇಗೆ ? ನೀನು ಸರವಾಗಿಲ್ಲ".

ಹುಡುಗಿಯ ಈ ತಿರಸ್ಕಾರ ಸಹಿಸಿಕೊಂಡ ರಮೇಶ ಅರೆಯುವ ಕಲ್ಲು-ಗುಂಡು ತರಲು ಹೊರಟ. ಅರೆಯುವ ಕಲ್ಲು-ಗುಂಡು ಸಿಕ್ಕದೆ ಹಡಗಿನ ಆಳುಗಳಿಂದ ಒಂದು ಕಬ್ಬಿಣದ ಕುಟ್ಟಾಣಿ ಎರವಲು ತಂದ.

ಕುಟ್ಟಾಣಿಯಲ್ಲಿ ಖಾರ ಕುಟ್ಟಿ ಕಮಲೆಗೆ ಅಭ್ಯಾಸವಿಲ್ಲ. ಆದರೆ ಅದರಿಂದಲೇ ಕೆಲಸ ನಡೆಸಬೇಕು. "ಖಾರ ಬೇಕಾದರೆ ಬೇರೆ ಯಾರಿಗಾದರೂ ಕೊಟ್ಟು ಅರೆಸಿಕೊಂಡು ಬರುತಿದ್ದೆ" ಎಂದ ರಮೇಶ.

ಕಮಲೆಗೆ ಅದು ಒಪ್ಪಿಗೆಯಾಗಲಿಲ್ಲ. ಅವಳು ಸ್ವತಃ ಉತ್ಸಾಹದಿಂದ ಕೆಲಸ ಆರಂಭಿಸಿದಳು. ಈ ಅಭ್ಯಾಸವಿಲ್ಲದ ಪದ್ಧತಿಯ ತೊಂದರೆಯಿಂದ ಅವಳಿಗೆ ಕುತೂಹಲ ಉಂಟಾಯಿತು. ಮಸಾಲೆ ಚಿಮ್ಮಿ ಎದ್ದಾಗ ಸುತ್ತಲೂ

ಅದು ಹಾರಿ ಬಿದ್ದಿತು, ಆಗ ಅವಳಿಂದ ನಗು ತಡೆಯಲಾಗಲಿಲ್ಲ. ಅವಳ ನಗು ನೋಡಿ ರಮೇಶನಿಗೂ ನಗು ಬಂತು.

ಈ ರೀತಿ ಮಸಾಲೆ ಅರೆಯುವ ಅಂಕವನ್ನು ಮುಗಿಸಿ, ಸೊಂಟಕ್ಕೆ ಸೆರಗು ಸಿಕ್ಕಿಸಿ ಒಂದು ತಡಿಕೆ ಮರೆಯಲ್ಲಿ ಕಮಲ ಅಡುಗೆಗೆ ಸಿದ್ಧಪಡಿಸಿದಳು. ಕಲ್ಕತ್ತೆಯಿಂದ ಬರುವಾಗ ಒಂದು ಮಡಕೆಯಲ್ಲಿ 'ಸಂದೇಶ್' (ಸಕ್ಕರೆ, ಹಾಲಿನ ಗಿಣ್ಣು ಸೇರಿಸಿ ಮಾಡಿದ ಸಿಹಿ ತಿಂಡಿ) ತಂದಿದ್ದರು. ಆ ಮಡಕೆಯಲ್ಲೇ ಕೆಲಸ ನಡೆಸಬೇಕಾಯಿತು.

ಅಡುಗೆಗೆ ತೊಡಗುತ್ತ ಕಮಲೆ ರಮೇಶನಿಗೆ "ನೀನು ಹೋಗು ಬೇಗ ಸ್ನಾನ ಮುಗಿಸು—ನನ್ನ ಅಡುಗೆ ಹೆಚ್ಚು ಹೊತ್ತಾಗದು" ಎಂದಳು.

ಅಡುಗೆ ಆಯಿತು. ರಮೇಶನೂ ಸ್ನಾನಮಾಡಿ ಬಂದ ಆಗ ತಟ್ಟೆಯಂತೂ ಇಲ್ಲ, ಯಾವುದರಲ್ಲಿ ಊಟಮಾಡುವುದು? ಎಂಬ ಪ್ರಶ್ನೆ ಎದ್ದಿತು.

ರಮೇಶ ಬಹಳ ಹೆದರುತ್ತ ಹೆದರುತ್ತ ಹೇಳಿದ, "ಸ್ಟೀಮರಿನ ಆಳುಗಳಿಂದ ಚೀನಾ ಮಣ್ಣಿನ ತಟ್ಟೆ ಎರವಲು ತರಬೇಕಾಗುವುದು".

"ಛೀ" ಎಂದಳು ಕಮಲ.

ರಮೇಶ ಮೃದು ಸ್ವರದಲ್ಲಿ, "ಇಂಥ ಅನಾಚಾರ ಹಿಂದೆಯೂ ನಾನು ಮಾಡಿರುವೆ" ಎಂದು ತಿಳಿಸಿದ.

"ಹಿಂದೆ ಮಾಡಿದ್ದು, ಹಿಂದಕ್ಕೆ. ಈಗ ಸರಿಯಾಗುವುದಿಲ್ಲ—ನಾನು ಅದನ್ನು ನೋಡಲಾರೆ" ಎಂದಳು ಕಮಲೆ.

ಹೀಗೆ ಹೇಳಿ ಅವಳು ಸಂದೇಶ್ ತಂದಿದ್ದ ಮಡಕೆಯ ಮುಚ್ಚಳ ಇತ್ತಲ್ಲ, ಅದನ್ನೇ ಚೆನ್ನಾಗಿ ತೊಳೆದು ತಂದಳು. "ಈ ದಿನ ನೀನು ಇದರಲ್ಲೇ ಊಟ ಮಾಡು. ಆಮೇಲೆ ನೋಡೋಣ" ಎಂದಳು.

ನೀರಿನಿಂದ ಸಾರಿಸಿ ಊಟಮಾಡುವ ಸ್ಥಳವನ್ನು ಸಿದ್ಧಪಡಿಸಲಾಯಿತು, ಶುದ್ಧ ಮನಸ್ಕನಾಗಿ ರಮೇಶ ಊಟಕ್ಕೆ ಕುಳಿತ. ಒಂದೆರಡು ತುತ್ತು ಬಾಯಿಗೆ ಹಾಕಿಕೊಂಡು "ಆಹಾ, ಸ್ವಾರಸ್ಯವಾಗಿದೆ" ಎಂದ.

ಕಮಲ ನಾಚಿಕೆಯಿಂದ "ಹೋಗು, ಹಾಸ್ಯಮಾಡಬೇಡ" ಎಂದಳು.

"ಹಾಸ್ಯವಲ್ಲ, ಎಂದು ಈಗಲೇ ತಿಳಿಯಬರುವುದು" ಎಂದ ರಮೇಶ. ಹೀಗೆಂದು ಹೇಳಿ ಪಾತ್ರೆಯ ಅನ್ನ ನೋಡುತ್ತ ನೋಡುತ್ತ ಮುಗಿಸಿ ಇನ್ನಷ್ಟು ಕೇಳಿದ. ಈ ಸಲ ಕಮಲ ಹೆಚ್ಚಾಗಿ ಬಡಿಸಿದಳು. ರಮೇಶ ಕೋಪಿಸಿ

ಕೊಂಡು, "ಇದೇನು ಮಾಡುತ್ತಿರುವೆ, ನಿನಗೆ ಸ್ವಲ್ಪ ಮಿಕ್ಕಿದೆಯೋ ಇಲ್ಲವೋ" ಎಂದು ಕೇಳಿದ.

"ಇದೆ ಬೇಕಾದಷ್ಟು—ನೀನು ಅದನ್ನು ಯೋಚಿಸಬೇಡ".

ರಮೇಶ ಹೊಟ್ಟೆತುಂಬ ಊಟಮಾಡಿದ್ದರಿಂದ ಕಮಲೆಗೆ ಅತಿ ಆನಂದ ವಾಯಿತು. "ನೀನು ಯಾವುದರಲ್ಲಿ ಊಟ ಮಾಡುವೆ?" ಎಂದು ರಮೇಶ ಕೇಳಿದ.

"ಏಕೆ, ಆ ಮುಚ್ಚಳದಲ್ಲೇ ಊಟಮಾಡುವೆ" ಎಂದಳು ಕಮಲ.

"ಬೇಡ, ಬೇಡ, ಅದು ಹೇಗೆ ಸಾಧ್ಯ" ಎಂದು ರಮೇಶ ಕೇಳಿದ. ಕಮಲ, "ಚೆನ್ನಾಗಿ ಸಾಧ್ಯ—ನಾನು ಎಲ್ಲ ಸರಿಯಾಗಿ ಮಾಡುವೆ. ಉಮೇಶ, ನೀನು ಯಾವುದರಲ್ಲಿ ಊಟ ಮಾಡುವೆ? ಎಂದು ಕೇಳಿದಳು.

ಉಮೇಶ ಹೇಳಿದ, "ಅಮ್ಮ, ಕೆಳಗೆ ಮಿಠಾಯಿ ಮಾರುತಿರುವರು, ಅವರ ಹತ್ತಿರ ಶಾಲವೃಕ್ಷದ ಎಲೆ ಕೇಳಿತರುವೆ".

"ನೀನು ಆ ಮುಚ್ಚಳದಲ್ಲೇ ಊಟಮಾಡುವೆಯಾದರೆ ಅದನ್ನು ಕೊಡು, ನಾನು ಚೆನ್ನಾಗಿ ತೊಳೆದುಕೊಂಡು ಬರುವೆ" ಎಂದ ರಮೇಶ.

ಕಮಲ ಕೇವಲ ಸಂಕ್ಷೇಪವಾಗಿ "ಹುಚ್ಚನಾಗಿರುವೆಯಾ" ಎಂದಳು. ಕ್ಷಣಕಾಲದ ಬಳಿಕ ಅವಳು ಹೇಳಿದಳು, ವೀಳಯದೆಲೆ ಸಿದ್ಧಪಡಿಸಲಾಗಲಿಲ್ಲ, ನೀನು ತರಿಸಿ ಕೊಡು".

"ಕೆಳಗೆ ಎಲೆಯಡಿಕೆ ಮಾರುವವ ವೀಳಯದೆಲೆ ಮಾರುತಿರುವ" ಎಂದ ರಮೇಶ.

ಹೀಗೆ ಅತಿ ಸಹಜವಾಗಿ ಗೃಹಕೃತ್ಯ ಪ್ರಾರಂಭವಾಯಿತು. ರಮೇಶ ಮನದಲ್ಲೇ ಉದ್ವಿಗ್ನನಾದ. "ದಾಂಪತ್ಯದ ಭಾವವನ್ನು ಹೇಗೆ ಸರಿಯಾಗಿ ಉಳಿಸಿಕೊಳ್ಳುವುದು" ಎಂದು ಅವನು ಆಲೋಚಿಸತೊಡಗಿದ.

ಅಧಿಕಾರ ನಡೆಸಿ ಗೃಹಿಣೀಸ್ಥಾನ ವಹಿಸಲು ಕಮಲ ಬೇರೆ ಯಾರ ಸಹಾಯವನ್ನಾಗಲಿ, ಶಿಕ್ಷಣವನ್ನಾಗಲಿ ನಿರೀಕ್ಷಿಸಲಿಲ್ಲ. ಅವಳು ಸೋದರ ಮಾವನ ಮನೆಯಲ್ಲಿ ಇದ್ದಷ್ಟು ದಿನವೂ, ಅಡುಗೆ ಮಾಡಿರುವಳು–ಬಡಿಸಿರು ವಳು, ತುಂಟಾಟ ಮಾಡಿರುವಳು. ಮನೆಗೆಲಸ ಮಾಡಿರುವಳು. ಅವಳ ನಿಪುಣತೆ ತತ್ಪರತೆ ಮತ್ತು ಕೆಲಸದ ಉತ್ಸಾಹ ನೋಡಿ ರಮೇಶನಿಗೆ ಅತಿ ಆನಂದವಾಯಿತು—ಆದರೂ ಅದರ ಜೊತೆಯಲ್ಲೇ ಅವನು ಮುಂದೆ ಇವಳನ್ನು

ಹೇಗೆ ನೋಡಿಕೊಳ್ಳಬೇಕು ಎಂಬ ವಿಷಯವನ್ನು ಆಲೋಚಿಸತೊಡಗಿದ. ಹತ್ತಿರದಲ್ಲೇ ಇವಳನ್ನು ಇಟ್ಟುಕೊಳ್ಳುವುದು ಹೇಗೆ? ದೂರ ಮಾಡುವುದು ಹೇಗೆ? ಇಬ್ಬರ ನಡುವೆ ಎಲ್ಲಿಯ ರೇಖೆಯೆಳೆಯುವುದು ಆವಶ್ಯಕ. ಆದರೆ ಅದನ್ನೆಲ್ಲಿ ಎಳೆಯುವುದು.

ಹೇಗೆ ಎಳೆದರೆ ಒಳ್ಳೆಯದು? ಇಬ್ಬರ ಮಧ್ಯೆ ಹೇಮನಳಿನಿಯೂ ಇದ್ದರೆ ಆಗ ಎಲ್ಲವೂ ಚೆನ್ನಾಗಿ ತೋರುವುದು. ಆ ಆಸೆಯನ್ನು ತ್ಯಾಗ ಮಾಡಲೇ ಬೇಕಾದರೆ, ಕಮಲೆಯೊಬ್ಬಳನ್ನೇ ಇಟ್ಟುಕೊಂಡು ಎಲ್ಲ ಸಮಸ್ಯೆ ಬಗೆ ಹರಿಸುವುದು ಕಷ್ಟ. ನಿಜವಾದ ಸಂಗತಿ ಕಮಲೆಗೆ ಸ್ಪಷ್ಟವಾಗಿ ತಿಳಿಸುವುದು ಉತ್ತಮ. ಇದನ್ನು ಅದುಮಿಡುವುದು ಸಾಧ್ಯವಿಲ್ಲ ಎಂದು ರಮೇಶ ನಿಶ್ಚಯಿಸಿದ.

## ೨೪

ಇನ್ನೂ ಹೊತ್ತು ಮುಳುಗಿರಲಿಲ್ಲ, ಆ ಹೊತ್ತಿನಲ್ಲಿ ಸ್ಟೀಮರ್ ನದೀ ಮಧ್ಯದ ಒಂದು ನಡುಗಡ್ಡೆಯ ಅರುಗಿನಲ್ಲಿ ನಿಂತಿತು. ಅಂದು ಅದೆಷ್ಟು ಪ್ರಯತ್ನಿಸಿದರೂ ಸ್ಟೀಮರ್ ಮುಂದೆ ಹೋಗಲಿಲ್ಲ. ಎತ್ತರವಾದ ದಡದ ಕೆಳಗೆ ಜಲಚರಪಕ್ಷಿಗಳ ಕಾಲುಗುರುತಿದ್ದ ಕಲ್ಲೂ ಮರಳಿನಿಂದ ಕೂಡಿದ್ದ ತಗ್ಗಾದ ತೀರ ಸ್ವಲ್ಪದೂರದಿಂದ ವಿಸ್ತಾರವಾಗುತ್ತ ಬಂದು ನದಿಯನ್ನು ಸೇರಿತ್ತು. ಆಗ ಸಂಜೆ. ಅಲ್ಲಿ ಹಳ್ಳಿಯ ಹೆಂಗಸರು ನೀರು ತುಂಬಿಕೊಳ್ಳಲು ಕೊಡಗಳನ್ನು ತೆಗೆದುಕೊಂಡು ಬಂದಿದ್ದರು. ಅವರಲ್ಲಿ ಒಬ್ಬಿಬ್ಬರು ಪ್ರೌಢೆಯರನ್ನು ಬಿಟ್ಟು ಇತರರು ಅವಗುಂಠನ ಹಾಗೂ ಹೆದರಿಕೆಯುಳ್ಳವರು ಮುಸುಕಿನೊಳಗಿಂದ ಸ್ಟೀಮರಿನ ಕಡೆ ನೋಡುತ್ತ ಕುತೂಹಲ ನಿವಾರಿಸಿಕೊಳ್ಳುತ್ತಿದ್ದರು. ಎತ್ತಿದ ಮೂಗಿನ ನಾವೆಯ ದುಃಸ್ಥಿತಿಯನ್ನು ಕಂಡು ಹಳ್ಳಿಯ ಹುಡುಗರು ಗುಡ್ಡಗಳ ಮೇಲೆ ನಿಂತು ಗಟ್ಟಿಯಾಗಿ ಕಿರುಚುತ್ತ ಅಣಕಿಸುತ್ತ ಅಣಕಿಸುತ್ತ ಕುಣಿದಾಡುತ್ತಿದ್ದರು.

ಆಚೆಯ ದಡದ ಜನಶೂನ್ಯ ದಿಣ್ಣೆಯ ಹಿಂದೆ ಸೂರ್ಯ ಮುಳುಗಿದ. ರಮೇಶ ಹಡಗಿನ ಕಟಕಟೆ ಹಿಡಿದುಕೊಂಡು ಸಂಜೆಯ ಪ್ರಕಾಶದಿಂದ ಬೆಳಗುತಿದ್ದ ಪಡುವಲ-ದಿಗಂತದ ಕಡೆ ನೀರವವಾಗಿ ನೋಡುತಿದ್ದ. ಕಮಲ ತಾನು ತಡಿಕೆ ಕಟ್ಟಿ ಅಡುಗೆ ಮಾಡುತಿದ್ದ ಸ್ಥಳದಿಂದ ಬಂದು ಕೊಠಡಿಯ

ಬಾಗಿಲ ಬಳಿ ನಿಂತಳು. ರಮೇಶ ಕೂಡಲೇ ತಿರುಗಿ ನೋಡುವನು, ಎಂಬ ನಿರೀಕ್ಷೆ ನೆರವೇರದಿರಲು ಅವಳು ಮೆಲುದನಿಯಲ್ಲಿ ಒಮ್ಮೆ ಕೆಮ್ಮಿದಳು—ಅದರಿಂದ ಯಾವ ಪ್ರತಿಫಲವೂ ದೊರೆಯಲಿಲ್ಲ—ಕಡೆಗೆ ತನ್ನ ಬೀಗದಕ್ಕೈ ಗೊಂಚಲಿನಿಂದ ಬಾಗಿಲು ಟಕಟಕ ಎನಿಸಿದಳು. ಶಬ್ದ ಹೆಚ್ಚಾದ ಕೂಡಲೇ ರಮೇಶ ಹಿಂದಿರುಗಿದ. ಕಮಲೆಯನ್ನು ನೋಡಿ ಅವಳ ಸಮೀಪಕ್ಕೆ ಬಂದು, "ಓಹೋ, ಹೀಗೋ ನಿನ್ನ ಕರೆಯುವ ಪದ್ಧತಿ" ಎಂದ.

"ಇನ್ನು ಹೇಗೆ ಕರೆಯಬೇಕು" ಎಂದಳು ಕಮಲ.

"ಏಕೋ, ಅಪ್ಪ ಅಮ್ಮ ನನಗೆ ನಾಮಕರಣಮಾಡಿರುವುದೇತಕ್ಕೆ?—ಯಾವ ಕೆಲಸಕ್ಕೂ ಬರುವುದಿಲ್ಲವೆ? ಆವಶ್ಯಕತೆ ಬಿದ್ದಾಗ ನನ್ನನ್ನು ರಮೇಶ ಬಾಬು ಎಂದು ಕೂಗುವುದರಲ್ಲಿ ತಪ್ಪೇನು?" ಎಂದು ರಮೇಶ ಕೇಳಿದ.

ಪುನಃ ಅದೇ ಹಾಸ್ಯ! ಕಮಲೆಯ ಕೆನ್ನೆ ಮತ್ತು ಕಿವಿಯ ಬುಡದ ಸಂಜೆಗೆಂಪಿನ ಮೇಲೆ ಮತ್ತಷ್ಟು ರಕ್ತವರ್ಣ ಬೆರೆಯಿತು—ಅವಳು ಕೊರಳು ಕೊಂಕಿಸುತ್ತ, "ನೀನು ಏನೇ ಹೇಳು, ಅದು ಸರಿಯಲ್ಲ. ಕೇಳು, ನಿನ್ನ ಊಟ ಸಿದ್ಧವಾಗಿದೆ. ಸ್ವಲ್ಪ ಹೊತ್ತಿಗೆ ಮುಂಚೆಯೇ ಊಟ ಮಾಡು. ಈ ದಿನ ಬೆಳಗ್ಗೆ ಸರಿಯಾಗಿ ಊಟಮಾಡಲಾಗಲಿಲ್ಲ" ಎಂದಳು.

ನದಿಯ ಗಾಳಿಯಿಂದ ರಮೇಶನಿಗೂ ಹಸಿವೆಯಾಗುತಿತ್ತು. ಏರ್ಪಾಡಿನ ಕೊರತೆಯಿಂದ ಪ್ರಾಯಃ ಕಮಲೆ ಕಳವಳಗೊಂಡಿರಬಹುದು, ಎಂದು ಏನೂ ಮಾತನಾಡಲಿಲ್ಲ—ಇಂಥ ವೇಳೆಯಲ್ಲಿ ಕೇಳದೆಯೇ ಊಟದ ಸುದ್ದಿ ಕೇಳಿ ಅವನ ಮನದಲ್ಲಿ ಆನಂದದ ಅಲೆ ಎದ್ದಿತು, ಅದರಲ್ಲೂ ಒಂದು ವೈಚಿತ್ರ್ಯವಿತ್ತು. ಬರಿಯ ಹಸಿವೆ ತೀರಿಸಿಕೊಳ್ಳುವ ಸನ್ಯಸ ಸುಖವಷ್ಟೇ ಅಲ್ಲ—ತನಗಾಗಿ ಒಂದು ಆಲೋಚನೆ ಎಚ್ಚೆತ್ತಿದೆ, – ಒಂದು ಪ್ರಯತ್ನ ವ್ಯಾಪಿಸಿಕೊಂಡಿದೆ—ತನಗಾಗಿ ಒಂದು ಮಂಗಳಕರ ಪದ್ಧತಿ ಸ್ವತಃ ಕೆಲಸಮಾಡುತ್ತಿದೆ, ಎಂಬುದು ಅರಿವಾದಾಗ, ಈ ಗೌರವ ಅವನಿಂದ ಹೃದಯದಲ್ಲಿ ಅನುಭವಿಸದೆ ಇರಲಾಗಲಿಲ್ಲ. ಆದರೆ ಇದು ತನಗೆ ದೊರೆಯಬೇಕಾದುದಲ್ಲ, ಇವೆಲ್ಲ ಕೇವಲ ಭ್ರಮೆಯ ಮೇಲೆ ನಿಂತಿರುವುದು—ಈ ಚಿಂತೆಯ ಬಲವಾದ ಪೆಟ್ಟನ್ನೂ ಅವನು ತಪ್ಪಿಸಿಕೊಳ್ಳಲಾಗಲಿಲ್ಲ—ಅವನು ತಲೆ ತಗ್ಗಿಸಿಕೊಂಡು ನಿಟ್ಟುಸಿರು ಬಿಟ್ಟು ಕೊಠಡಿಯನ್ನು ಪ್ರವೇಶಿಸಿದ.

ಅವನ ಮುಖಭಾವನೋಡಿ ಕಮಲ ಆಶ್ಚರ್ಯದಿಂದ, ನಿನಗೆ ಊಟ

ಮಾಡಲು ಇಷ್ಟವಿಲ್ಲವೆಂದು ತೋರುವುದು? ಹಸಿವೆ ಇಲ್ಲವೆ? ನಾನು ಬಲಾತ್ಕಾರದಿಂದ ನಿನ್ನನ್ನು ಊಟ ಮಾಡಲು ಕರೆದೆನೆ?" ಎಂದು ಕೇಳಿದಳು.

ಕೂಡಲೇ ರಮೇಶ ಪ್ರಫುಲ್ಲತೆಯ ಸೋಗು ಹಾಕಿಕೊಂಡು ಹೇಳಿದ, "ನೀನು ಬಲಾತ್ಕರಿಸಬೇಕೆ? ನನ್ನ ಹೊಟ್ಟೆಯೇ ಬಲವಂತಪಡಿಸುತಿದೆ, ಈಗ ಅತಿಯಾಗಿ ಬೀಗದಕ್ಕೈ ಟಕಟಕ ಎನಿಸಿ ಕರೆದುಕೊಂಡು ಬಂದು, ಕಡೆಗೆ ಬಡಿಸುವ ವೇಳೆಯಲ್ಲಿ ದರ್ಪಹಾರಿ ಮಧುಸೂದನನ ರೂಪಕಾಣಿಸದಿರಲಿ" ಎಂದ. ಹೀಗೆ ಹೇಳಿ ರಮೇಶ ಸುತ್ತಲೂ ನೊಡುತ್ತ, "ಇದೇನು ಊಟದ ಸಾಮಗ್ರಿಯೇ ಕಣ್ಣಿಗೆ ಕಾಣುವುದಿಲ್ಲವಲ್ಲ. ಎಷ್ಟೇ ಹಸಿವೆಯಾದರೂ ಈ ಪದಾರ್ಥಗಳು ನನಗೆ ಜೀರ್ಣವಾಗದು—ಚಿಕ್ಕಂದಿನಿಂದಲೂ ನನಗೆ ಬೇರೆ ರೀತಿಯ ಅಭ್ಯಾಸ" ಎಂದು—ರಮೇಶ ಕೊಠಡಿಯ ಹಾಸಿಗೆ ಮೊದಲಾದುವುಗಳ ಕಡೆ ಬೆರಳು ತೋರಿಸಿದ.

ಕಮಲ ಖಿಲಖಿಲನೆ ನಕ್ಕಳು. ನಗು ಕಡಿಮೆಯಾದ ಬಳಿಕ, "ಇನ್ನು ಸಾವಕಾಶವಾದರೆ ಸಹಿಸಲು ಸಾಧ್ಯವಿಲ್ಲವೆಂದು ತೋರುವುದು? ಆಕಾಶ ನೋಡುತಿದ್ದಾಗ ಹಸಿವೆ—ನೀರಡಿಕೆ ಇರಲಿಲ್ಲವೆ? ನಾನು ಕರೆದ ಕೂಡಲೇ ಬಹಳ ಹಸಿವೆಯೆಂದು ಗೊತ್ತಾಯಿತೋ? ಸರಿ, ನೀನು ಒಂದು ನಿಮಿಷ ಕುಳಿತಿರು, ನಾನು ತಂದು ಕೊಡವೆ" ಎಂದಳು.

"ತಡವಾದರೆ ಈ ಹಾಸಿಗೆ-ಗೀಸಿಗೆ ಯಾವುದೂ ಉಳಿಯದು—ಆಮೇಲೆ ನನ್ನನ್ನು ಬಯ್ಯಬೇಡ" ಎಂದ ರಮೇಶ.

ರಸಿಕತೆಯ ಈ ಪುನರುಕ್ತಿಯಿಂದ ಕಮಲೆಗೆ ಕಡಿಮೆ ಆನಂದವಾಗಲಿಲ್ಲ. ಅವಳಿಗೆ ಮತ್ತಷ್ಟು ನಗು ಬಂತು. ಸರಳ ಹಾಸ್ಯೋಚ್ಛ್ವಾಸದಿಂದ ಕೊಠಡಿಯನ್ನು ಅಮೃತಮಯವನ್ನಾಗಿ ಮಾಡಿ ಕಮಲ ಆಹಾರ ತರಲು ವೇಗವಾಗಿ ಹೋದಳು. ರಮೇಶನ ಒಣನಗುವಿನ ಕೃತ್ರಿಮಕಾಂತಿ ಕ್ಷಣಕಾಲದಲ್ಲಿ ಮಂಕಾಯಿತು.

ಮೇಲುಗಡೆ-ಎಲೆ-ಮುಚ್ಚಿದ ಒಂದು ಬೆತ್ತದ ಬುಟ್ಟಿ ಹಿಡಿದುಕೊಂಡು ಸ್ವಲ್ಪಹೊತ್ತಿನಲ್ಲೇ ಕಮಲೆ ಕೊಠಡಿಯೊಳಕ್ಕೆ ಬಂದಳು. ಹಾಸಿಗೆಯ ಮೇಲೆ ಬುಟ್ಟಿ ಇಟ್ಟು ಸೆರಗಿನಿಂದ ಕೊಠಡಿಯ ನೆಲ ಒರೆಸತೊಡಗಿದಳು.

ರಮೇಶ ಆತುರದಿಂದ, "ಏನುಮಾಡುತಿರುವೆ?" ಎಂದು ಕೇಳಿದ.

ಕಮಲ, "ನಾನು ಈಗಲೇ ಈ ಬಟ್ಟೆ ಬದಲಾಯಿಸುವೆನು" ಎಂದು ಹೇಳಿ ಎಲೆ ತೆಗೆದು ಹಾಕಿದಳು ಮತ್ತು ಅದರಲ್ಲಿ ಪಳಗಿದ ಕೈಗಳಿಂದ ಪೂರಿ ಪಲ್ಯ ಬಡಿಸಿದಳು.

"ಏನಾಶ್ಚರ್ಯ! ಪೂರಿ ಹೇಗೆ ಮಾಡಿದೆ?" ಎಂದು ಕೇಳಿದ ರಮೇಶ. ಕಮಲ ಸುಲಭವಾಗಿ ರಹಸ್ಯ ತಿಳಿಸದೆ ಬಹಳ ಗಂಭೀರಭಾವದಿಂದ, "ಹೇಗೆ ಹೇಳು ನೋಡೋಣ" ಎಂದಳು.

ರಮೇಶ ಬಹಳ ಆಲೋಚಿಸುವವನಂತೆ ಸೋಗು ಹಾಕುತ್ತ ಹೇಳಿದ, "ಖಂಡಿತ ಖಲಾಸಿಗಳ (ದೋಣಿಯ ಕೆಲಸದವರು) ಉಗ್ರಾಣದಿಂದ".

ಕಮಲ ಬಹಳ ಉದ್ರೇಕದಿಂದ, "ಎಂದಿಗೂ ಇಲ್ಲ. ರಾಮರಾಮ ಅನ್ನು" ಎಂದಳು.

ತಿನ್ನುತ್ತ ತಿನ್ನುತ್ತ ರಮೇಶ ಪೂರಿಯ ಮೂಲಕಾರಣದ ವಿಷಯವಾಗಿ ಸೀಮೆ ರಾಜ್ಯದ ಅಸಂಭವ ಕಲ್ಪನೆಯ ಮೂಲಕ ಕಮಲೆಯನ್ನು ರೇಗಿಸಿದನು. "ಯವನ ಯಾಮಿನೀ ವಿನೋದ ಕತೆಯ ದೀಪದ ಕಂಬದ ಅಲ್ಲಾವುದೀನ ಬೆಲೂಚಿಸ್ಥಾನದಿಂದ ತನ್ನ ದೂತನ ಕೈಯಲ್ಲಿ ಬಿಸಿಬಿಸಿಯಾಗಿ ಮಾಡಿಕೊಟ್ಟು ಉಪಹಾರ ಕಳುಹಿಸಿದ" ಎಂದು ಹೇಳಿದಾಗ ಕಮಲೆಯ ಧೈರ್ಯ ಹೆಚ್ಚು ಕಾಲ ನಿಲ್ಲಲಿಲ್ಲ—ಅವಳು ಮುಖ ತಿರುಗಿಸಿಕೊಂಡು ಹೇಳಿದಳು, "ಹಾಗಾದರೆ ಹೋಗು ನಾನು ಮಾತಾಡುವುದಿಲ್ಲ".

ರಮೇಶ ದುಗುಡದಿಂದ, "ಬೇಡ ಬೇಡ, ನಾನು ಸೋತೆ. ಮಧ್ಯ ನದಿಯಲ್ಲಿ ಪೂರಿ?—ಅದು ಹೇಗೆ ಸಾಧ್ಯ! ಎಷ್ಟು ಯೋಚಿಸಿದರೂ ನನಗೆ ಹೊಳೆಯಲಿಲ್ಲ. ಆದರೂ ತಿನ್ನಲು ರುಚಿಯಾಗಿದೆ" ಎಂದ.

ಹೀಗೆ ಹೇಳಿ ರಮೇಶ ವಿಷಯ ನಿರ್ಣಯಕ್ಕಿಂತ ಹಸಿವೆ ತೀರಿಸುವ ಶ್ರೇಷ್ಠತೆಯನ್ನು ಆದಷ್ಟು ಬೇಗ ಸ್ಪಷ್ಟಗೊಳಿಸ ತೊಡಗಿದ.

ಸ್ಟೀಮರ್ ದಡದಲ್ಲಿ ನಿಂತಿತು, ಬರಿದಾಗಿದ್ದ ಪಾತ್ರೆ ತುಂಬಲು ಕಮಲ ಉಮೇಶನನ್ನು ಹಳ್ಳಿಗೆ ಕಳುಹಿಸಿದ್ದಳು. ಶಾಲೆಯಲ್ಲಿರುವಾಗ ತಿಂಡಿ ತೀರ್ಥಕ್ಕಾಗಿ ರಮೇಶ ಕಮಲೆಗೆ ಅಲ್ಪಸ್ವಲ್ಪ ಹಣ ಕೊಟ್ಟಿದ್ದ. ಅದರಲ್ಲೇ ಅಷ್ಟಿಷ್ಟು ಉಳಿಸಿದ್ದಳು. ಅದನ್ನೇ ಕೊಟ್ಟು ತುಪ್ಪ–ಮೈದಾಹಿಟ್ಟು ತರಿಸಿದಳು. "ಉಮೇಶ ನೀನೇನು ತಿನ್ನುವೆ?" ಎಂದು ಕಮಲ ಉಮೇಶನನ್ನು ಪ್ರಶ್ನಿಸಿದಳು.

ಉಮೇಶ ಹೇಳಿದ, "ಅಮ್ಮಾವರೇ ! ನಿಮ್ಮದಯೆ ಇದ್ದರೆ, ಹಳ್ಳಿಯ ಕವಾಡಿಗರ ಮನೆಯಲ್ಲಿ ಒಳ್ಳೆಯ ಸಿಹಿ ಮೊಸರು ನೋಡಿಕೊಂಡು ಬಂದಿರುವೆ- ಬಾಳೆಹಣ್ಣು ಮನೆಯಲ್ಲೇ ಇದೆ. ಇನ್ನು ಒಂದು ಮೂರುಕಾಸಿಗೋ ಆರುಕಾಸಿಗೋ ಅವಲಕ್ಕಿ-ಪುರಿ ಆದರೆ ಹೊಟ್ಟೆತುಂಬ ಈ ದಿನದ ಫಲಹಾರ ವಾದೀತು.

ಎಳೆಯ ಹುಡುಗನ ಫಲಹಾರದ ಉತ್ಸಾಹದಿಂದ ಕಮಲೆಯೂ ಉತ್ಸಾಹಗೊಂಡಳು—"ಕಾಸೇನಾದರೂ ಉಳಿದಿದೆಯಾ ಉಮೇಶ ?" ಎಂದು ಕೇಳಿದಳು.

"ಏನೂ ಇಲ್ಲ ತಾಯಿ" ಎಂದ ಉಮೇಶ.

ಕಮಲೆಗೆ ಕಷ್ಟಕ್ಕಿಟ್ಟುಕೊಂಡಿತು. ರಮೇಶನ ಬಳಿ ಹೇಗೆ ಬಾಯಿಬಿಟ್ಟು ಹಣ ಕೇಳುವುದು, ಎಂದು ಯೋಚಿಸತೊಡಗಿದಳು. ಸ್ವಲ್ಪ ಹೊತ್ತಿನ ಮೇಲೆ, "ನಿನ್ನ ಅದೃಷ್ಟದಲ್ಲಿ ಈ ದಿನ ಫಲಾಹಾರವಿಲ್ಲದಿದ್ದರೆ, ಪೂರಿ ಇದೆ— ಅದಕ್ಕೆ ಯೋಚನೆಯಿಲ್ಲ, ನಡೆ, ಹಿಟ್ಟು ಕಲಿಸು ನಡೆ" ಎಂದಳು.

"ಆದರೆ ಅಮ್ಮಾ, ಮೊಸರು ನೋಡಿಕೊಂಡು ಬಂದಿರುವೆನಲ್ಲ ಅದಕ್ಕೆ ಏನು ಹೇಳುವುದು" ಎಂದು ಉಮೇಶ ಕೇಳಿದ.

ಕಮಲ "ನೋಡು ಉಮೇಶ್, ಯಜಮಾನರು ಊಟಕ್ಕೆ ಕುಳಿತಾಗ, ನೀನು ಸಾಮಾನು ತರಲು ಹಣ ಕೇಳು" ಎಂದಳು.

ರಮೇಶನ ಊಟ ಸ್ವಲ್ಪಮಟ್ಟಿಗೆ ಮುಂದುವರಿಯಿತು. ಉಮೇಶ ಬಂದು ನಿಂತು ಸಂಕೋಚದಿಂದ ತಲೆ ಕೆರೆಯಲಾರಂಭಿಸಿದ. ರಮೇಶ ಅವನ ಮುಖ ನೋಡಿದ. ಅವನು ಮೆಲ್ಲಗೆ ಕೇಳಿದ, "ಅಮ್ಮಾ, ಸಾಮಾನು ತರಲು ದುಡ್ಡು . . . ."

ಕೂಡಲೇ ರಮೇಶನಿಗೆ, "ಆಹಾರ ಸಿದ್ಧಪಡಿಸಲು ಹಣ ಬೇಕು, ಅಲ್ಲಾವುದ್ದೀನನ ದೀಪ ಅಪೇಕ್ಷಿಸಿದರೆ ನಡೆಯದು" ಎಂದು ತೋರಿತು. ದುಗುಡದಿಂದ ಹೇಳಿದ, "ಕಮಲ, ನಿನ್ನ ಹತ್ತಿರವಾದರೋ ಸ್ವಲ್ಪವೂ ದುಡ್ಡಿಲ್ಲ. ನನಗೇಕೆ ನೆನಪು ಕೊಡಲಿಲ್ಲ".

ಕಮಲ ನೀರವವಾಗಿ ತಪ್ಪು ಒಪ್ಪಿಕೊಂಡಳು. ಊಟ ಮುಗಿದ ಬಳಿಕ ರಮೇಶ ಕಮಲೆಯ ಕೈಗೆ ಒಂದು ಹಣದ ಪೆಟ್ಟಿಗೆ ಕೊಟ್ಟು, "ಸದ್ಯಕ್ಕೆ ನಿನ್ನ ಹಣದ ಆವಶ್ಯಕತೆಯನ್ನು ಇಷ್ಟರಿಂದಲೇ ನಡೆಸಿಕೊ" ಎಂದ

ಈರೀತಿ ಗೃಹಿಣೀತ್ವದ ಎಲ್ಲ ಭಾರವೂ ತಾನಾಗಿಯೇ ಕಮಲೆಯ ಕೈಗೆ ಬಂದಿತ್ತು, ಅದನ್ನು ಕಂಡ ರಮೇಶ ಮತ್ತೊಮ್ಮೆ ಹಡಗಿನ ಕಟಕಟಿ ಹಿಡಿದು ಕೊಂಡು ಪಶ್ಚಿಮ ಆಕಾಶದ ಕಡೆ ನಿಟ್ಟಿಸಿದ. ಪಶ್ಚಿಮ-ಆಕಾಶ ನೋಡುತ್ತ ನೋಡುತ್ತ ಅವನ ಕಣ್ಣು ಮುಂದೆ ಸಂಪೂರ್ಣ ಅಂಧಕಾರ ಕವಿದಿತ್ತು.

ಉಮೇಶ ಇಂದು ಅವಲಕ್ಕಿ-ಮೊಸರು ಬಾಳೆಹಣ್ಣು ಸೇರಿಸಿ ಹೊಟ್ಟೆ ತುಂಬ ಫಲಹಾರ ಮಾಡಿದ. ಕಮಲ ಎದುರಿಗೆ ಕುಳಿತು ಅವನ ಜೀವನ ವೃತ್ತಾಂತವನ್ನೆಲ್ಲ ವಿವರವಾಗಿ ಕೇಳಿ ತಿಳಿದಳು.

ಮನೆಯಲ್ಲಿ ಮಲತಾಯಿ ಕಿರುಕುಳದಿಂದ ತಿರಸ್ಕೃತನಾದ ಉಮೇಶ ಕಾಶಿಯಲ್ಲಿದ್ದ ತನ್ನ ಅಜ್ಜಿಯ ಮನೆಗೆ ಓಡಿಹೋಗುತಿದ್ದ—ಅವನು, "ಅಮ್ಮಾ, ನಿಮ್ಮ ಹತ್ತಿರ ಇಟ್ಟುಕೊಳ್ಳುವುದಾದರೆ, ನಾನು ಎಲ್ಲಿಗೂ ಹೋಗುವುದಿಲ್ಲ" ಎಂದ.

ತಾಯಿಯಿಲ್ಲದ ಹುಡುಗನ ಬಾಯಿಂದ ಅಮ್ಮಾ-ಎಂಬ ಸಂಬೋಧನೆ ಕೇಳಿ ಹುಡುಗಿಯ ಕೋಮಲ ಹೃದಯದ ಯಾವುದೋ ಒಂದು ಗಭೀರ ಸ್ಥಳದಿಂದ ತಾಯಿಯ ಉತ್ತರ ಹೇಳಿದಳು - ಕಮಲ ಸ್ನೇಹ ಸ್ವರದಲ್ಲಿ, "ಆಗಲಿ ಉಮೇಶ, ನೀನು ನಮ್ಮ ಜೊತೆಯಲ್ಲೇ ನಡೆ" ಎಂದಳು.

೨೫

ದಡದ ಮರಗಳ ಸಮೀಪದ ಎಡೆಬಿಡದ ಕಪ್ಪುಬಣ್ಣದ ಗೆರೆ ಸಂಧ್ಯಾ ವಧುವಿನ ಹೊನ್ನ ಸೆರಗಿನಲ್ಲಿ ಕರಿಯ ಅಂಚನ್ನು ಎಳೆಯಿತು. ಹಳ್ಳಿಯ ಹೊರಭಾಗದ ಹೊಲಗದ್ದೆಗಳಲ್ಲಿ ಹಗಲೆಲ್ಲ ಸಂಚರಿಸಿ ಜಲ-ಹಂಸಗಳ ಗುಂಪು ಆಕಾಶದ ಕಾಂತಿಹೀನವಾದ ಸೂರ್ಯಾಸ್ತ ಪ್ರಕಾಶದಲ್ಲಿ ಆಚೆ ದಡದ ಗಿಡ ಮರಗಳಿಲ್ಲದ ಮರಳಿನಲ್ಲಿ ಮರೆಯಾಗಿದ್ದ ಜಲಾಶಯದಲ್ಲಿ ರಾತ್ರಿಯನ್ನು ಕಳೆಯಲು ಹೋಗುತ್ತಿರುವುದು. ಕಾಗೆಗಳ ಗೂಡಿಗೆ ಒಂದಿರುಗುವ ಕಲರವ ನಿಂತಿರುವುದು. ನದಿಯಲ್ಲಿ ಆಗ ದೋಣಿ ಇರಲಿಲ್ಲ:—ಒಂದೇ ಒಂದು ದೊಡ್ಡ ದೋಣಿ ಹೊಂಬಣ್ಣದ ಅಲೆಯಿಲ್ಲದ ನೀರಿನ ಮೇಲೆ ತನ್ನ ಹೊಗೆಯ ಗೆರೆ ಎಳೆಯುತ್ತ ಸದ್ದಿಲ್ಲದೆ ವೇಗವಾಗಿ ಹೋಗುತಿತ್ತು.

ರಮೇಶ ಹಡಗಿನ ಮಾಳಿಗೆಯ ಎದುರುಗಡೆ ಆಗತಾನೆ ಮೂಡುತಿದ್ದ

ಶುಕ್ಲಪಕ್ಷದ ಬಾಲಚಂದ್ರನ ಬೆಳುದಿಂಗಳಲ್ಲಿ ಬೆತ್ತದ ಆರಾಮ ಕುರ್ಚಿ ಹಾಕಿಕೊಂಡು ಕುಳಿತಿದ್ದ.

ಪಶ್ಚಿಮ ಆಕಾಶದಲ್ಲಿ ಮುಚ್ಚಂಜೆಯ ಹೊಂಬಣ್ಣವು ಅದೃಶ್ಯವಾಯಿತು, ಚಂದ್ರನ ಬೆಳುದಿಂಗಳ ಇಂದ್ರಜಾಲದಲ್ಲಿ ಕಠಿಣ ಜಗತ್ತು ಹೇಗೋ ಮೃದುವಾಗುತ್ತ ಬಂತು. ರಮೇಶ ತನ್ನಷ್ಟಕ್ಕೆ ತಾನೆ ಮೆಲುದನಿಯಲ್ಲಿ ಹೇಳಿಕೊಳ್ಳ ತೊಡಗಿದ, "ಹೇಮ್, ಹೇಮ್!" ಆ ಹೆಸರಿನ ಶಬ್ದವೂ ಸುಮಧುರ-ಸ್ಪರ್ಶರೂಪದಲ್ಲಿ ಅವನ ಹೃದಯವನ್ನೆಲ್ಲ ಒಂದೇ ಸಮನಾಗಿ ಆವರಿಸಿಕೊಂಡು ಸುತ್ತಿ ಸುತ್ತಿ ಬರುತಿತ್ತು—ಆ ಹೆಸರಿನ ಶಬ್ದವೂ ಕೂಡ ಎಣೆಯಿಲ್ಲದ-ಕರುಣಾರಸದಿಂದ ತೋಯ್ದ ಎರಡು ಅಸ್ಪಷ್ಟ ದೃಷ್ಟಿಯಂತೆ ಅವನ ಮುಖದಲ್ಲಿ ಸಂಪೂರ್ಣ ನೋವನ್ನುಂಟುಮಾಡಿತು. ರಮೇಶನ ದೇಹವೆಲ್ಲ ಪುಳಕಿತವಾಯಿತು ಮತ್ತು ಎರಡು ಕಣ್ಣುಗಳಲ್ಲೂ ಕಣ್ಣೀರು ಸುರಿಯಿತು.

ಕಳೆದ ಎರಡು ವರ್ಷಗಳ ಅವನ ಜೀವನದ ಸಮಸ್ತ ಇತಿಹಾಸವೂ ಅವನ ಮನದೆದುರಿನಲ್ಲಿ ಬರಲಾರಂಭಿಸಿತು ;—ಹೇಮನಳಿನಿಯೊಡನೆ ಅವನ ಪ್ರಥಮ ಪರಿಚಯದ ದಿನ ನೆನಪಾಯಿತು. ಆ ದಿನವನ್ನು ರಮೇಶ ತನ್ನ ಜೀವನದ ಒಂದು ಪ್ರಮುಖ ದಿನವೆಂದು ತಿಳಿಯಲಾರದಾದ. ಯೋಗೇಂದ್ರ ತನ್ನ ಚಹದ ಮೇಜೆಯ ಬಳಿಗೆ ಅವನನ್ನು ಕರೆದುಕೊಂಡು ಹೋದ. ಅಲ್ಲಿ ಹೇಮನಳಿನಿ ಕುಳಿತಿದ್ದುದನ್ನು ನೋಡಿ ಲಜ್ಜಾಶೀಲ ರಮೇಶ ಖಂಡಿತ ತನ್ನಿಂದ ತೊಂದರೆಯಾಯಿತೆಂದು ತಿಳಿದಿದ್ದ. ಕ್ರಮಕ್ರಮವಾಗಿ ನಾಚಿಕೆ ದೂರವಾಯಿತು, ಹೇಮನಳಿನಿಯೊಡನೆ ಬಳಕೆ ಆಯಿತು. ಕಡೆಗೆ ಆ ಬಳಕೆಯ ಬಂಧನ ರಮೇಶನನ್ನು ಬಂದಿಯನ್ನಾಗಿ ಮಾಡಿತು. ರಮೇಶ ಕಾವ್ಯ-ಸಾಹಿತ್ಯ-ದಲ್ಲಿ ಓದಿದ್ದ ಪ್ರೇಮಕತೆಯನ್ನೆಲ್ಲ, ಹೇಮನಳಿನಿಯೊಡನೆ ಹೋಲಿಸತೊಡಗಿದ. ನಾನು ಪ್ರೀತಿಸುತ್ತಿರುವೆ ಎಂದು ಭಾವಿಸಿ ಅವನು ಮನದಲ್ಲೇ ಒಂದು ಬಗೆಯ ಹೆಮ್ಮೆಪಡಲಾರಂಭಿಸಿದ. ಅವನ ಸಹಪಾಠಿಗಳು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಪ್ರೇಮ ಗೀತೆಯ ಅರ್ಥ ಗಟ್ಟಿಮಾಡುತಿದ್ದರು—ಆದರೆ ರಮೇಶ ನಿಜವಾಗಿಯೂ ಪ್ರೇಮಿಸುತಿದ್ದ,—ಇದನ್ನು ಚಿಂತಿಸಿ ಉಳಿದ ವಿದ್ಯಾರ್ಥಿಗಳನ್ನು ಅವನು ದಯಾಪಾತ್ರರೆಂದು ಭಾವಿಸಿದ. ಅಂದೂ ತಾನು ಪ್ರೀತಿಯ ಹೊರಬಾಗಿಲಲ್ಲೇ ಇದ್ದುದಾಗಿ ರಮೇಶ ಆಲೋಚಿಸಿ ತಿಳಿದ. ಆದರೆ ಆಕಸ್ಮಿಕವಾಗಿ ಕಮಲ ಬಂದು ಅವನ ಜೀವನ ಸಮಸ್ಯೆಯನ್ನು ಜಟಿಲಗೊಳಿಸಿ

ದಳು, ಆಗ ಬಗೆಬಗೆಯ ವಿರುದ್ಧ ಹೋರಾಟ ನೋಡನೋಡುತ್ತ ಹೇಮನಳಿ ನಿಯ ವಿಷಯದಲ್ಲಿ ಅವನ ಪ್ರೇಮ ಆಕಾರ ಧರಿಸಿ ಜೀವಂತವಾಗಿ ಎಚ್ಚೆತ್ತಿತು.

ರಮೇಶ ತನ್ನ ಎರಡು ಕೈಗಳ ಮೇಲೂ ತಲೆ ಇಟ್ಟುಕೊಂಡು ಆಲೋಚಿಸತೊಡಗಿದ, ಸಮಸ್ತ ಜೀವನವೂ ಎದುರಿಗೆ ಬಿದ್ದಿರುವುದು—ತನ್ನ ಹಸಿದ ಹೊಟ್ಟೆಗಿಲ್ಲದ ಜೀವನ—ಬಿಡಿಸಲಾಗದ ಸಂಕಟ ಜಾಲದಲ್ಲಿ ಸಿಕ್ಕಿಕೊಂಡಿರುವಿಕೆ, ಈ ಬಲೆಯನ್ನು ಅವನು ಸಂಪೂರ್ಣ ಬಲದಿಂದ ಎರಡು ಕೈಗಳಿಂದಲೂ ಹರಿದು ಬಿಸಾಡಲು ಸಾಧ್ಯವಿಲ್ಲವೆ ?

ಹೀಗೆಂದು ಅವನು ದೃಢ ಸಂಕಲ್ಪದ ಉದ್ವೇಗದಿಂದ ಇದ್ದಕ್ಕಿದ್ದಂತೆ ಮುಖ ಎತ್ತಿ ನೋಡಿದ, ಬಳಿಯಲ್ಲೇ ಮತ್ತೊಂದು ಬೆತ್ತದ ಕುರ್ಚಿಯ ಬೆನ್ನು ಮೇಲೆ ಕೈಯಿಟ್ಟುಕೊಂಡು ಕಮಲ ನಿಂತಿರುವಳು. ಕಮಲ ಬೆಚ್ಚಿಬೀಳುತ್ತ, " ನೀನು ನಿದ್ದೆ ಮಾಡುತಿದ್ದೆಯಾ ? ನಾನು ನಿನ್ನನ್ನು ಎಬ್ಬಿಸಿದೆನೆ " ಎಂದು ಕೇಳಿದಳು.

ನೊಂದ ಕಮಲ ಹಿಂದಿರುಗಿ ಹೋಗಲು ಯತ್ನಿಸುತಿರುವುದನ್ನು ನೋಡಿ ರಮೇಶ ಅವಸರ ಅವಸರವಾಗಿ ಹೇಳಿದ, " ಇಲ್ಲ ಇಲ್ಲ ಕಮಲ, ನಾನು ನಿದ್ದೆ ಮಾಡಲಿಲ್ಲ—ನೀನು ಕುಳಿತುಕೋ, ನಿನಗೆ ಒಂದು ಕತೆ ಹೇಳುವೆ ".

ಕತೆಯ ಹೆಸರು ಕೇಳಿ ಕಮಲೆ ಪುಳಕಿತಳಾಗಿ ಕುರ್ಚಿ ಎಳೆದುಕೊಂಡು ಕುಳಿತಳು. ಕಮಲೆಗೆ ಎಲ್ಲ ವಿಷಯವನ್ನೂ ಬಹಿರಂಗಪಡಿಸುವುದು ಅತ್ಯಾವಶ್ಯಕ, ಎಂದು ರಮೇಶ ತೀರ್ಮಾನಿಸಿದ್ದ. ಒಮ್ಮೆಗೇ ಅಷ್ಟು ಬಲವಾದ ಪೆಟ್ಟು ಕೊಡಲು ಅವನಿಂದ ಸಾಧ್ಯವಾಗಲಿಲ್ಲ—ಅದರಿಂದಲೇ, " ಕುಳಿತುಕೊ, ನಿನಗೊಂದು ಕತೆ ಹೇಳುವೆ " ಎಂದ.

ರಮೇಶ ಹೇಳಿದ, " ಪೂರ್ವ ಕಾಲದಲ್ಲಿ ಒಂದು ಜಾತಿಯ ಕ್ಷತ್ರಿಯರಿದ್ದರು. ಅವರು . . . . ".

ಕಮಲ, " ಯಾವ ಕಾಲದಲ್ಲಿ ? ಅಂದರೆ—ಎಷ್ಟು ವರ್ಷಕ್ಕೆ ಮೊದಲು ? " ಎಂದು ಪ್ರಶ್ನಿಸಿದಳು.

" ಹಾದು ಅದು ಬಹಳ ವರ್ಷಗಳ ಹಿಂದೆ. ಆಗ ನೀನು ಹುಟ್ಟಿಯೇ ಇರಲಿಲ್ಲ" ಎಂದ ರಮೇಶ.

ಕಮಲ—ನೀನೂ ಹುಟ್ಟಿರಲಿಲ್ಲ ಅಲ್ಲವೆ ? ನೀನೂ ಹೆಚ್ಚು ವಯಸ್ಸಿನವನಲ್ಲವಲ್ಲ ! ಆಮೇಲೆ ?.

ರಮೇಶ—ಆ ಕ್ಷತ್ರಿಯರಲ್ಲಿ ಒಂದು ಪದ್ಧತಿಯಿತ್ತು. ಅವರು ಸ್ವತಃ ಮದುವೆಯಾಗಲು ಹೋಗದೆ ಕತ್ತಿಯನ್ನು ಕಳುಹಿಸಿಕೊಡುತಿದ್ದರು. ಆ ಕತ್ತಿಯೊಡನೆ ಮದುಮಗಳ ಮದುವೆ ನಡೆದ ಬಳಿಕ ಅವಳನ್ನು ಮನೆಗೆ ಕರೆತಂದು ಮತ್ತೊಮ್ಮೆ ಮದುವೆ ಮಾಡಿಕೊಳ್ಳುವರು.

ಕಮಲ—ಛೀ ಛೀ. ಇದೆಂಥ ಮದುವೆ !

ರಮೇಶ—ನಾನೂ ಆ ರೀತಿಯ ಮದುವೆ ಒಪ್ಪುವುದಿಲ್ಲ—ಆದರೆ ಮಾಡುವುದೇನು—ನಾನು ಹೇಳುತಿದ್ದೆನಲ್ಲ ಕ್ಷತ್ರಿಯರು, ಅವರು ತಾವು ಸ್ವತಃ ಮಾವನ ಮನೆಗೆ ಹೋಗಿ ಮದುವೆ ಮಾಡಿಕೊಳ್ಳುವುದು ಅವಮಾನವೆಂದು ತಿಳಿದಿದ್ದರು. ನಾನು ಯಾವ ರಾಜನ ಕತೆ ಹೇಳುತಿದ್ದೆನೋ, ಅವನು ಆ ಜಾತಿಯ ಕ್ಷತ್ರಿಯನಾಗಿದ್ದ. ಒಂದು ದಿನ ಅವನು . . . .

ಕಮಲ—ನೀನು ಹೇಳಲೇ ಇಲ್ಲವಲ್ಲ, ಅವನು ಎಲ್ಲಿಯ ರಾಜ ?

ರಮೇಶ ಹೇಳಿದ, "ಮದ್ರದೇಶದ ರಾಜ. ಆ ರಾಜ ಒಂದು ದಿನ . . ."

ಕಮಲ—ಮೊದಲು ರಾಜನ ಹೆಸರು ಹೇಳು.

ಕಮಲ ಕತೆಯನ್ನು ಸಂಪೂರ್ಣವಾಗಿ ತಿಳಿಯಲು ಆಶಿಸಿದಳು—ಅವಳ ಬಳಿ ಯಾವುದನ್ನೂ ಸಂಕ್ಷೇಪ ಮಾಡುವಂತಿಲ್ಲ. ರಮೇಶ, ಮುಂದುವರಿಯುತ್ತ ಮತ್ತಷ್ಟು ಪ್ರಶ್ನೆಯೇಳುವುದು—ಮತ್ತು ಕಮಲೆಗೆ ಕತೆ ಕೇಳಲು ಕುತೂಹಲ ವಿದ್ದರೂ, ಕತೆಯಲ್ಲಿ ಎಲ್ಲೂ ಮೋಸವನ್ನು ಅವಳು ಸಹಿಸಳು ಎಂದು ನಿರ್ಧರಿಸಿದ.

ರಮೇಶ ಆಕಸ್ಮಿಕ ಪ್ರಶ್ನೆಯಿಂದ ಸ್ವಲ್ಪ ನಿಲ್ಲಿಸಿ ಹೇಳಿದ, "ರಾಜನ ಹೆಸರು ರಣಜಿತ್ ಸಿಂಹ".

ಕಮಲ ಒಮ್ಮೆ ಪುನರಾವರ್ತಿಸಿದಳು, "ರಣಜಿತ್‌ಸಿಂಹ, ಮದ್ರ ದೇಶದ ರಾಜ. ಆಮೇಲೆ" ?

ರಮೇಶ—ಆಮೇಲೆ ಒಂದು ದಿನ ರಾಜ ಭಟರ ಬಾಯಿಂದ ಕೇಳಿದ, ತಮ್ಮ ಜಾತಿಯ ಬೇರೊಬ್ಬ ರಾಜನಿಗೆ ಅತಿ ಚೆಲುವೆಯಾದ ಒಬ್ಬಳು ಮಗಳು.

ಕಮಲ—ಅವನೆಲ್ಲಿಯ ರಾಜ.

ರಮೇಶ - ಅವನು ಕಂಚಿಯ ರಾಜನೆಂದು ತಿಳಿದುಕೊ.

ಕಮಲ—ಏಕೆ ತಿಳಿದುಕೊಳ್ಳಬೇಕು. ಹಾಗಾದರೆ ನಿಜವಾಗಿಯೂ ಕಂಚಿಯ ರಾಜನಲ್ಲ ?

ರಮೇಶ—ಕಂಚಿಯ ರಾಜನೇ ಹೌದು. ನೀನು ಅವನ ಹೆಸರು ತಿಳಿಯ ಬೇಕೇನು ? ಅವನ ಹೆಸರು ಅಮರಸಿಂಹ.

ಕಮಲ—ಅವನ ಮಗಳ ಹೆಸರು ಹೇಳಲಿಲ್ಲವಲ್ಲ ? ಅವಳು ಪರಮ ಸುಂದರಿಯಾದ ಹುಡುಗಿ !

ರಮೇಶ—ಹೌದೌದು, ಮರೆತು ಹೋಗಿತ್ತು. ಆ ಹುಡುಗಿಯ ಹೆಸರು . . . ಅವಳ ಹೆಸರು . . . ಓ, ಅವಳ ಹೆಸರು ಚಂದ್ರಾ . . .

ಕಮಲ—ಆಶ್ಚರ್ಯ, ನೀನು ಹೀಗೆ ಮರೆತುಹೋಗುವೆ ? ನಿನಗೆ ನನ್ನ ಹೆಸರೇ ಮರೆತು ಹೋಗಿತ್ತು.

ರಮೇಶ—ಕೋಸಲದ ರಾಜ ಭಟರ ಬಾಯಿಂದ ಈ ಮಾತು ಕೇಳಿ . .

ಕಮಲ—ಕೋಸಲದ ರಾಜ ಎಲ್ಲಿಂದ ಬಂದ. ನೀನು ಹೇಳಿದ್ದು— ಮದ್ರದೇಶದ ರಾಜ.

ರಮೇಶ—ಅವನು ಯಾವುದೋ ಒಂದು ರಾಜ್ಯದ ರಾಜನೆಂದು ತಿಳಿದುಕೊ. ಅವನು ಕೋಸಲಕ್ಕೂ ರಾಜ, ಮದ್ರದೇಶಕ್ಕೂ ರಾಜ.

ಕಮಲ—ಬಹುಶಃ ಎರಡೂ ನೆರೆಹೊರೆಯ ರಾಜ್ಯಗಳೇನೊ ?

ರಮೇಶ—ಒಂದಕ್ಕೊಂದು ಸೇರಿದಂತೆ.

ಹೀಗೆ ಒಂದೇ ಸಮನಾಗಿ ತಪ್ಪುತ್ತ ತಪ್ಪುತ್ತ ಮತ್ತು ಜಾಗರೂಕಳಾದ ಕಮಲೆಯ ಪ್ರಶ್ನೆಯ ಸಹಾಯದಿಂದ ಆ ಎಲ್ಲ ತಪ್ಪುಗಳನ್ನು ಹೇಗೋ ಸರಿ ಪಡಿಸಿಕೊಳ್ಳುತ್ತ ರಮೇಶ ಈ ಭಾವದ ಕತೆ ಹೇಳಿದ—

" ಮದ್ರರಾಜ ರಣಜಿತ್‌ಸಿಂಹ ರಾಜಕುವರಿಯನ್ನು ಮದುವೆಯಾಗುವ ವಿಷಯ ತಿಳಿಸಲು ಕಂಚಿಯ ರಾಜನ ಬಳಿಗೆ ದೂತರನ್ನು ಕಳುಹಿಸಿದ. ಕಂಚಿಯ ರಾಜ ಅಮರಸಿಂಹ ಸಂತೋಷದಿಂದ ಸಮ್ಮತಿಸಿದ.

ಆಗ ರಣಜಿತ್‌ಸಿಂಹನ ಕಿರಿಯ ತಮ್ಮ ಇಂದ್ರಜಿತ್ ಸಿಂಹ ಸೈನ್ಯ-ಸಾಮಂತರೊಡನೆ ನಿಶಾನೆ ಹಾರಿಸುತ್ತ, ಕೊಂಬು-ಕಹಳೆ, ಭೇರಿ-ದುಂದುಭಿ-ನಗಾರಿ ಮೊಳಗಿಸುತ್ತ ಕಂಚಿಯ ರಾಜೋದ್ಯಾನದಲ್ಲಿ ಗುಡಾರ ಹಾಕಿದ. ಕಂಚೀ ನಗರದಲ್ಲಿ ಉತ್ಸವದ ಸಿದ್ಧತೆ ನಡೆಯಿತು.

ರಾಜ ಪುರೋಹಿತರು ಗುಣಿಸಿ ನೋಡಿ ಶುಭ ಲಗ್ನ ನಿಶ್ಚಯಿಸಿದರು.

ಕೃಷ್ಣಪಕ್ಷದ ದ್ವಾದಶೀ ತಿಥಿಯ ರಾತ್ರಿ ಎರಡೂವರೆ ಘಳಿಗೆಯ ನಂತರ ಮುಹೂರ್ತ. ರಾತ್ರಿ ನಗರದ ಮನೆಮನೆಯಲ್ಲೂ ಹೂಮಾಲೆ ಜೋಲಾಡಿತು. ಸಾಲು ದೀಪ ಉರಿಯಿತು. ಈ ದಿನ ರಾತ್ರಿ ರಾಜಕುಮಾರಿ ಚಂದ್ರಳ ಮದುವೆ.

ಆದರೆ ಯಾರೊಡನೆ ಮದುವೆ, ರಾಜಕನ್ಯೆ ಚಂದ್ರಳಿಗೆ ಅದು ತಿಳಿಯದು. ಅವಳು ಹುಟ್ಟಿದಾಗ ಪರಮಹಂಸ ಪರಮಾನಂದ ಸ್ವಾಮಿಗಳು ರಾಜನಿಗೆ ಹೇಳಿದ್ದರು, "ನಿನ್ನ ಈ ಹುಡುಗಿಯ ಕಡೆಗೆ ಅಶುಭಗ್ರಹದ ದೃಷ್ಟಿಯಿದೆ. ಮದುವೆಯ ಕಾಲದಲ್ಲಿ ವರನ ಹೆಸರನ್ನು ಹುಡುಗಿ ತಿಳಿಯ ಬಾರದು".

ಯಥಾ ಕಾಲದಲ್ಲಿ ಕತ್ತಿಯೊಡನೆ ರಾಜಕನ್ಯೆಯ ಮಾಂಗಲ್ಯಧಾರಣೆ ನಡೆಯಿತು. ಇಂದ್ರಜಿತ್ ಸಿಂಹ ಬಳುವಳಿಯೊಡನೆ ಬಂದು ತನ್ನ ಅಣ್ಣನ ಹೆಂಡತಿಗೆ ನಮಸ್ಕರಿಸಿದ. ಮದ್ರರಾಜ್ಯದ ರಣಜಿತ್ ಹಾಗೂ ಇಂದ್ರಜಿತ್ ಇಬ್ಬರೂ ಎರಡನೆಯ ರಾಮ–ಲಕ್ಷ್ಮಣರಂತೆ ಇದ್ದರು. ಇಂದ್ರಜಿತ್ ಆರ್ಯೆ ಚಂದ್ರಳ ಅವಕುಂಠನ ಹಾಕಿದ್ದ ನಾಚಿಕೆಯಿಂದ ಕೆಂಪೇರಿದ್ದ ಮುಖದ ಕಡೆ ನೋಡಲಿಲ್ಲ—ಅವನು ಅವಳ ಕಾಲ್ಗಡಗದಿಂದ ಕೂಡಿದ್ದ ಸುಕುಮಾರ ಚರಣ ಗಳ ಅಲತಿಗೆಯ ಗೆರೆಯನ್ನು ಮಾತ್ರ ನೋಡಿದ್ದ.

ಪದ್ಧತಿಯಂತೆ ಮದುವೆಯ ಮರುದಿನವೇ ಮುತ್ತಿನ ಹಾರದ ತೆರೆ ಹಾಕಿದ ಪಲ್ಲಕ್ಕಿಯಲ್ಲಿ ಮದುವಣಗಿತ್ತಿಯನ್ನು ಕರೆದುಕೊಂಡು ಇಂದ್ರಜಿತ್ ಸ್ವದೇಶದ ಕಡೆ ಪ್ರಯಾಣ ಹೊರಟ. ಅಶುಭಗ್ರಹದ ವಿಷಯ ನೆನೆದು ಸಂಶಯದಿಂದ ಕಂಚಿಯ ರಾಜ ಮಗಳ ತಲೆಯ ಮೇಲೆ ಬಲಗೈಯಿಟ್ಟು ಆಶೀರ್ವದಿಸಿದ. ತಾಯಿ ಮಗಳ ಕೆನ್ನೆಗೆ ಮುತ್ತಿಟ್ಟು ಕಣ್ಣೀರು ಸುರಿಸಿದಳು—ದೇವಮಂದಿರಗಳಲ್ಲಿ ಸಹಸ್ರ ಬ್ರಾಹ್ಮಣರು ಸ್ವಸ್ತ್ಯಯನ ಮಾಡಲು ನೇಮಿತ ರಾದರು.

ಕಂಚಿಯಿಂದ ಮದ್ರ ಬಹಳ ದೂರ—ಸುಮಾರು ಒಂದು ತಿಂಗಳ ದಾರಿ. ಎರಡನೆಯ ರಾತ್ರಿ ವೇತಸಾ–ನದೀ ತೀರದಲ್ಲಿ ಶಿಬಿರ ಹಾಕಿ ಇಂದ್ರಜಿತ್ತಿನ ಸೈನ್ಯ ಬಲ ವಿಶ್ರಮಿಸಿಕೊಳ್ಳಲು ಸಿದ್ಧಮಾಡುತಿರುವಾಗ, ಅರಣ್ಯದ ನಡುವೆ ದೀವಟಿಗೆ ಬೆಳಕು ಕಾಣಿಸಿತು. ಏನು ಸಂಗತಿ ಎಂದು ತಿಳಿದು ಬರಲು ಇಂದ್ರಜಿತ್ ಸೈನ್ಯ ಕಳುಹಿಸಿದ.

ಸೈನಿಕರು ಬಂದು, "ಕುಮಾರಾ, ಇದು ಬೇರೊಂದು ಮದುವೆಯ ಪ್ರಯಾಣಿಕರ ಗುಂಪು ಇವರೂ ನಮ್ಮ ಪಂಗಡದ ಕ್ಷತ್ರಿಯರು—ಕತ್ತಿಯೊಡನೆ ಮದುವೆ ಮುಗಿಸಿ ಮದುವಣಗಿತ್ತಿಯನ್ನು ಗಂಡನ ಮನೆಗೆ ಕರೆದುಕೊಂಡು ಹೋಗುತಿರುವರು. ದಾರಿಯಲ್ಲಿ ಬಹಳ ವಿಘ್ನಭಯವಿದೆ, ಅದರಿಂದ ಇವರು ಕುಮಾರನ ಆಶ್ರಯ ಬೇಡುತ್ತಿರುವರು—ಅಪ್ಪಣೆಯಾದರೆ ಸ್ವಲ್ಪದೂರ ಇವರೂ ನಮ್ಮ ನೆರವಿನಲ್ಲಿ ಪ್ರಯಾಣ ಮಾಡುವರು" ಎಂದು ಹೇಳಿದರು

ಕುಮಾರ ಇಂದ್ರಜಿತ್ ಹೇಳಿದ, ಶರಣಾಗತರಾದವರಿಗೆ ಆಶ್ರಯ ಕೊಡುವುದು ನಮ್ಮ ಧರ್ಮ—ಎಚ್ಚರಿಕೆಯಿಂದ ಇವರನ್ನು ರಕ್ಷಿಸೋಣ.

ಈ ರೀತಿ ಎರಡು ಶಿಬಿರಗಳೂ ಒಂದೆಡೆ ಸೇರಿದುವು.

ಮೂರನೆಯ ರಾತ್ರಿ ಅಮಾವಾಸ್ಯೆ. ಎದುರುಗಡೆ ಸಣ್ಣ ಸಣ್ಣ ಬೆಟ್ಟ, ಹಿಂದುಗಡೆ ಕಾಡು. ದಣಿದ ಸೈನಿಕರು ಜೀರುಂಡೆ ಧ್ವನಿ ಹಾಗೂ ಸಮೀಪದ ನಿರ್ಝರಿಣಿಯ ಕಲಕಲ ಧ್ವನಿಯಿಂದ ಗಾಢನಿದ್ರೆಯಲ್ಲಿ ಮುಳುಗಿದರು.

ಇದ್ದಕ್ಕಿದ್ದಂತೆ ಗದ್ದಲದೊಡನೆ ಎಲ್ಲರೂ ಎದ್ದು ನೋಡಿದರು, ಮದ್ರ-ಶಿಬಿರದ ಕುದುರೆಗಳು ಹುಚ್ಚು ಹಿಡಿದವುಗಳಂತೆ ಒದ್ದಾಡುತಿದ್ದುವು-ಯಾರೋ ಅವುಗಳ ಹಗ್ಗ ಕತ್ತರಿಸಿದ್ದರು—ಅಲ್ಲಲ್ಲಿ ಒಂದೊಂದು ಗುಡಾರಕ್ಕೆ ಬೆಂಕಿ ಬಿದ್ದಿರುವುದು ಮತ್ತು ಅವುಗಳ ಪ್ರಕಾಶದಲ್ಲಿ ಅಮಾವಾಸ್ಯೆಯ ರಾತ್ರಿ ರಕ್ತವರ್ಣವಾಗಿರುವುದು.

ದರೋಡೆಗಾರರು ಆಕ್ರಮಣ ಮಾಡಿರುವರು ಎಂದು ತಿಳಿಯಿತು. ಹೊಡೆದಾಟ ಬಡಿದಾಟ ನಡೆಯಿತು—ಕತ್ತಲೆಯಲ್ಲಿ ಶತ್ರು-ಮಿತ್ರ ಭೇದ ತಿಳಿಯುವುದು ಕಷ್ಟ. ಎಲ್ಲ ಬಗೆಯ ಹಿಡಿತವೂ ಮೀರಿಹೋಯಿತು. ದರೋಡೆಗಾರರು ಆ ಸದವಕಾಶದಲ್ಲಿ ಲೂಟಿ ಮಾಡಿಕೊಂಡು ಕಾಡು ಗುಡ್ಡಗಳಲ್ಲಿ ಮರೆಯಾಗಿ ಹೋದರು.

ಯುದ್ಧ—ಮುಗಿದ ಬಳಿಕ ರಾಜಕುಮಾರಿ ಮತ್ತೆ ಕಾಣಿಸಲಿಲ್ಲ. ಅವಳು ಭಯದಿಂದ ಶಿಬಿರ ಬಿಟ್ಟು ಹೊರಕ್ಕೆ ಬಂದಳು ಮತ್ತು ಓಡಿಹೋಗುತಿದ್ದ ಒಂದು ಗುಂಪಿನವರನ್ನು ತನ್ನವರೆಂದು ತಿಳಿದು ಅವರ ಜೊತೆ ಸೇರಿಕೊಂಡಳು.

ಅವರು ಮತ್ತೊಂದು ಮದುವೆ ಪಂಗಡದವರು. ಗೊಂದಲದಲ್ಲಿ ಅವರ ಮದುಮಗಳನ್ನು ದರೋಡೆಗಾರರು ಅಪಹರಿಸಿಕೊಂಡು ಹೋದರು. ರಾಜ

ಕುಮಾರಿ ಚಂದ್ರಳನ್ನೇ ಅವರು ತಮ್ಮ ಗುಂಪಿನ ಮದುವಣಿಗಿತ್ತಿಯೆಂದು ತಿಳಿದು ಜಾಗ್ರತೆಯಾಗಿ ತಮ್ಮ ಊರಿಗೆ ಪ್ರಯಾಣ ಮಾಡಿದರು.

ಅವರು ದರಿದ್ರ ಕ್ಷತ್ರಿಯರು; ಕಳಿಂಗದ ಸಮುದ್ರ ತೀರದಲ್ಲಿ ಅವರ ವಾಸ. ಅಲ್ಲಿ ರಾಜಕುವರಿಯೊಡನೆ ಬೇರೆ ಪಕ್ಷದ ವರನ ಭೇಟಿಯಾಯಿತು. ವರನ ಹೆಸರು ಚಿತ್‌ಸಿಂಹ.

ಚಿತ್‌ಸಿಂಹನ ತಾಯಿ ಬಂದು ತಿಲಕವಿಟ್ಟು ಸೊಸೆಯನ್ನು ಮನೆ ತುಂಬಿಸಿಕೊಂಡಳು. ನೆಂಟರಿಷ್ಟರು ಎಲ್ಲರೂ ಬಂದು ಹೇಳಿದರು, "ಆಹಾ, ಇಂಥ ಚೆಲುವು ಅಪೂರ್ವ!".

ಏನೂ ತಿಳಿಯದ ಚಿತ್‌ಸಿಂಹ ನವವಧುವನ್ನು ಮನೆಯ ಮಂಗಳ ಲಕ್ಷ್ಮಿಯೆಂದು ತಿಳಿದು ಮನಸಿನಲ್ಲೇ ಪೂಜಿಸಲಾರಂಭಿಸಿದ. ರಾಜ ಕುಮಾರಿಯೂ ಸತೀಧರ್ಮದ ಮರ್ಯಾದೆ ತಿಳಿದಿದ್ದಳು. ಅವಳು ಚಿತ್ ಸಿಂಹನನ್ನು ತನ್ನ ಗಂಡನೆಂದು ಭಾವಿಸಿ ಅವನ ಬಳಿ ಒಳಗೊಳಗೇ ಆತ್ಮ ಜೀವನ ಸಮರ್ಪಿಸಿದಳು.

ನವಪರಿಣಯದ ನಾಚಿಕೆ ಹೋಗಲು ಸ್ವಲ್ಪದಿನ ಬೇಕಾಯಿತು. ನಾಚಿಕೆ ದೂರವಾಗಲು, ಮಾತುಕತೆಯಲ್ಲಿ ಚಿತ್‌ಸಿಂಹ, ತಾವು ಸೊಸೆ ಎಂದು ಮನೆತುಂಬಿಸಿಕೊಂಡವಳು ರಾಜಕುಮಾರಿ ಚಂದ್ರ" ಎಂದು ಅರಿತುಕೊಂಡ.

೨೬

ಕಮಲ ಉಸಿರಾಡದೆ ಒಂದೇ ಮನದಿಂದ ಪ್ರಶ್ನಿಸಿದಳು, "ಆಮೇಲೆ"?

"ಇಲ್ಲಿಯವರೆಗೆ ಬಲ್ಲೆ, ಆಮೇಲೆ ಅರಿಯೆ. ನೀನೇ ಹೇಳು ನೋಡೋಣ ಆಮೇಲೇನು?" ಎಂದು ರಮೇಶ ಕೇಳಿದ.

ಕಮಲ—ಊಹೂಂ, ಹಾಗೆ ಅಗುವುದಿಲ್ಲ. ಆಮೇಲೆಯೇನು? ನನಗೆ ಹೇಳು.

ರಮೇಶ—ನಿಜವಾಗಿಯೂ ಹೇಳುತ್ತಿರುವೆ, ಯಾವ ಗ್ರಂಥದಿಂದ ಈ ಕತೆ ಓದಿದೆನೋ ಅದು ಇನ್ನೂ ಸಂಪೂರ್ಣವಾಗಿ ಪ್ರಕಟವಾಗಿಲ್ಲ—ಕಡೆಯ ಅಧ್ಯಾಯ ಯಾವಾಗ ಹೊರಬೀಳುವುದೋ, ಯಾರು ಬಲ್ಲರು.

ಕಮಲ ಬಹಳ ಕೋಪಿಸಿಕೊಂಡು ಹೇಳಿದಳು, “ಹೋಗು, ನೀನು ಬಹಳ ಕೆಟ್ಟವನು. ಭಾರಿ ಅನ್ಯಾಯ ನಿನ್ನದು”.

ರಮೇಶ—ಪುಸ್ತಕ ಬರೆಯುತ್ತಿರುವರಲ್ಲ, ಅವರ ಮೇಲೆ ಕೋಪಿಸಿಕೊ. ನಾನು ನಿನ್ನನ್ನು ಕೇಳುವುದಿಷ್ಟೆ, “ಚಂದ್ರಳನ್ನಿಟ್ಟುಕೊಂಡು ಚಿತ್‌ಸಿಂಹ ಏನುಮಾಡಬೇಕು ?”

ಕಮಲ ಆಗ ನದಿಯತ್ತ ನೋಡುತ್ತ ಯೋಚಿಸತೊಡಗಿದಳು—ಬಹಳ ಹೊತ್ತಿನ ಬಳಿಕ, “ನಾನರಿಯೆ, ಅವನೇನು ಮಾಡಬೇಕೊ ಹೇಳಲು ನನ್ನಿಂದ ಸಾಧ್ಯವಿಲ್ಲ” ಎಂದಳು.

ರಮೇಶ ಸ್ವಲ್ಪ ಹೊತ್ತು ಮೌನವಾಗಿದ್ದು—“ಚಿತ್‌ಸಿಂಹ ಚಂದ್ರಳಿಗೆ ಎಲ್ಲ ವಿಷಯವನ್ನೂ ಸ್ಪಷ್ಟವಾಗಿ ಹೇಳಬಹುದೆ ?” ಎಂದು ಕೇಳಿದ.

“ನೀನೂ ಜಾಣನೇ, ಎಲ್ಲವನ್ನೂ ಹೇಳದೆ ಗೊಂದಲಕ್ಕೆ ಬೀಳಿಸುವುದೇ. ಅದು ಸರಿಯೇ ? ಎಲ್ಲವೂ ಸ್ಪಷ್ಟವಾಗಲೇ ಬೇಕು” ಎಂದಳು ಕಮಲ.

ರಮೇಶ ಯಂತ್ರದಂತೆ ಹೇಳಿದ, “ಅದಾಗಲೇ ಬೇಕು”.

ಕ್ಷಣಕಾಲದ ಬಳಿಕ ರಮೇಶ ಕೇಳಿದ, “ಸರಿ ಕಮಲಾ, ಒಂದು ವೇಳೆ . . .”

ಕಮಲ—ಒಂದು ವೇಳೆ ಏನು ?

ರಮೇಶ—ಹೀಗೆ ಭಾವಿಸು, ನಾನೇ ನಿಜವಾಗಿಯೂ ಚಿತ್‌ಸಿಂಹ, ನೀನೇ ಚಂದ್ರ ಆಗಿದ್ದರೆ . . .

“ನೀನು ಇಂಥ ವಿಷಯ ನನಗೆ ಹೇಳಬೇಡ; ಖಂಡಿತ ಹೇಳುವೆ, ಇದೆಲ್ಲಾ ನನಗೆ ಚೆನ್ನೆನಿಸದು” ಎಂದಳು ಕಮಲ.

ರಮೇಶ—ಇಲ್ಲ, ನೀನು ಹೇಳಲೇ ಬೇಕು—ಹಾಗಾದರೆ ನನ್ನ ಕರ್ತವ್ಯವೇನು ? ನಿನ್ನ ಕರ್ತವ್ಯವೇನು ?

ಕಮಲ ಈ ಪ್ರಶ್ನೆಗೆ ಯಾವ ಉತ್ತರವನ್ನೂ ಹೇಳದೆ ಕುರ್ಚಿಯಿಂದ ಎದ್ದು ವೇಗವಾಗಿ ಹೊರಟು ಹೋದಳು. ಉಮೇಶ ತಮ್ಮ ಕೊಠಡಿಯ ಹೊರಗೆ ಮೌನವಾಗಿ ಕುಳಿತು ನದಿಯತ್ತ ನೋಡುತಿರುವುದನ್ನು ಕಂಡಳು “ಉಮೇಶ್, ನೀನು ಎಂದಾದರೂ ಭೂತ ನೋಡಿರುವೆಯಾ ?” ಎಂದು ವಿಚಾರಿಸಿದಳು.

“ನೋಡಿರುವೆ ತಾಯಿ” ಎಂದ ಉಮೇಶ.

ಕೇಳಿ ಕಮಲ ಸಮೀಪದಲ್ಲಿದ್ದ ಬೆತ್ತದ ಕುರ್ಚಿ ಎಳೆದುಕೊಂಡು ಕುಳಿತಳು—“ಎಂಥ ಭೂತ ನೋಡಿರುವೆ ಹೇಳು” ಎಂದಳು.

ಕಮಲ ಬೇಸರಗೊಂಡು ಹೊರಟು ಹೋಗಲು ರಮೇಶ ಪುನಃ ಅವಳನ್ನು ಕರೆಯಲಿಲ್ಲ.

ಅರ್ಧ ಚಂದ್ರ ಅವನ ಕಣ್ಣೆದುರಿಗೆ ದಟ್ಟವಾದ ಬಿದಿರು ಕಾಡಿನ ನಡುವೆ ಮರೆಯಾದ. ಹಡಗಿನ ಮೇಲುಗಡೆಯ ದೀಪ ಆರಿಸಿ ನಾವಿಕರೂ ಆಳುಗಳೂ ಹಡಗಿನ ಕೆಳಭಾಗಕ್ಕೆ ಆಹಾರ ಹಾಗೂ ವಿಶ್ರಾಂತಿಗಾಗಿ ಹೋದರು. ಒಂದು, ಎರಡನೆಯ ದರ್ಜೆಯ ಪ್ರಯಾಣಿಕರು ಯಾರೂ ಇರಲಿಲ್ಲ. ಮೂರನೆಯ ದರ್ಜೆಯ ಹಲವಾರು ಪ್ರಯಾಣಿಕರು ಅಡುಗೆಗೆ ನೀರು ತರಲು ದಡಕ್ಕೆ ಇಳಿದು ಹೋಗಿದ್ದರು. ದಡದಲ್ಲಿ ಕತ್ತಲು ಕವಿದ ಪೊದರು—ಗಿಡಮರಗಳ ಛಿದ್ರ ಛಿದ್ರದಿಂದ ಸಮೀಪದ ಅಂಗಡಿಗಳ ದೀಪದ ಬೆಳಕು ಕಾಣಬರುತ್ತಿತ್ತು. ತುಂಬು ನದಿಯ ಜಲಪ್ರವಾಹ ದೋಣಿಯ ಲಂಗರಿನ ಕಬ್ಬಿಣದ ಸರಪಳಿಯನ್ನು ಝಣತ್ಕರಿಸಿ ಹರಿಯುತಿತ್ತು ಹಾಗೂ ಮೆಲ್ಲಮೆಲ್ಲನೆ ಗಂಗೆಯ ತುಂಬು ನಾಡಿಯ ಕಂಪವೇಗ ಸ್ಟೀಮರನ್ನು ಡೋಲಾಯಮಾನಗೊಳಿಸುತಿತ್ತು.

ಈ ಅಸ್ಪಷ್ಟ ಅತುಳತೆ, ಈ ಅಂಧಕಾರ ನಿಬಿಡತೆ, ಈ ಅಪರಿಚಿತ ದೃಶ್ಯದ ಅದ್ಭುತ ಚಮತ್ಕಾರದ ನಡುವೆ ಮಗ್ನನಾಗಿ ರಮೇಶ ತನ್ನ ಕರ್ತವ್ಯದ ಸಮಸ್ಯೆ ಬಗೆಹರಿಸಲು ಯತ್ನಿಸಿದ. ಹೇಮನಳಿನಿ ಅಥವಾ ಕಮಲ, ಇಬ್ಬರಲ್ಲಿ ಒಬ್ಬರನ್ನು ತ್ಯಾಗ ಮಾಡಲೇ ಬೇಕು. ಎಂದು ರಮೇಶ ನಿಶ್ಚಯಿಸಿದ. ಇಬ್ಬರನ್ನೂ ಕಾಪಾಡಿಕೊಂಡು ಹೋಗುವಂಥ ಮಾರ್ಗ ಯಾವುದೂ ಇಲ್ಲ. ಆದರೂ ಹೇಮನಳಿನಿಗೆ ಆಶ್ರಯ ಇದೆ—ಈಗಲೂ ಹೇಮನಳಿನಿ ರಮೇಶನನ್ನು ಮರೆಯುಬಹುದು, ಅವಳು ಬೇರೆ-ಯಾರನ್ನಾದರೂ ಮದುವೆಯಾಗಬಹುದು, ಆದರೆ ಕಮಲೆಯನ್ನು ತ್ಯಾಗ ಮಾಡಿದರೆ ಈ ಜೀವನದಲ್ಲಿ ಅವಳಿಗೆ ಬೇರೆ ಯಾವ ಮಾರ್ಗವೂ ಇಲ್ಲ.

ಮಾನವರ ಸ್ವಾರ್ಥಕ್ಕೆ ಕೊನೆಯಿಲ್ಲ. ಹೇಮನಳಿನಿಗೆ ರಮೇಶನನ್ನು ಮರೆಯುವ ಸಂಭವವೂ ಇದೆ, ಅದನ್ನು ಉಳಿಸಿಕೊಳ್ಳುವ ಮಾರ್ಗವೂ ಇದೆ—ರಮೇಶನಿಗಾದರೋ ಬೇರೆ ದಾರಿಯಿಲ್ಲ, ಇದರಿಂದ ರಮೇಶನಿಗೆ ಸ್ವಲ್ಪವೂ ಸಹಾನುಭೂತಿ ದೊರೆಯಲಿಲ್ಲ, ಅವನ ಛಲದ ಅಧೈರ್ಯ ದ್ವಿಗುಣವಾಯಿತು. ಈಗ ಹೇಮನಳಿನಿ ಅವನೆದುರಿಗೇ ಜಾರಿಕೊಂಡು, ಎಂದೆಂದಿಗೂ ದೊರೆಯ

ದಂತೆ ಹೋಗುತಿರುವ ಹಾಗೆ ಭಾಸವಾಯಿತು. ಆದರೂ ಕೈನೀಡಿ ಅವಳನ್ನು ಹಿಡಿದಿಡಲು ಸಾಧ್ಯ.

ಅವನು ಎರಡು ಕೈಗಳ ಮೇಲೂ ಮುಖ ಇಟ್ಟುಕೊಂಡು ಆಲೋಚಿಸ ತೊಡಗಿದ. ದೂರದಲ್ಲಿ ನರಿ ಊಳಿ ಹಾಕಿತು, ಹಳ್ಳಿಯ ಒಂದೆರಡು ಸಹನೆಯಿಲ್ಲದ ನಾಯಿಗಳು ಬೊವ್ ಬೊವ್ ಎಂದವು. ಆಗ ರಮೇಶ ಕೈಯಿಂದ ಮುಖ ಎತ್ತಿ ನೋಡಿದ, ಕಮಲ ಜನಹೀನ ಕತ್ತಲಲ್ಲಿ ಹಡಗಿನ ಕಟಕಟೆ ಹಿಡಿದುಕೊಂಡು ನಿಂತಿದ್ದಳು.

ರಮೇಶ ಕುರ್ಚಿಯಿಂದ ಎದ್ದುಬಂದು, "ಕಮಲ, ನೀನು ಇನ್ನೂ ನಿದ್ದೆಮಾಡಲಿಲ್ಲವೆ? ರಾತ್ರಿ ಬಹಳ ಹೊತ್ತಾಗಿದೆಯಲ್ಲ" ಎಂದು ಕೇಳಿದ.

"ನೀನು ಮಲಗಲು ಹೋಗಲಿಲ್ಲವೆ"? ಎಂದಳು ಕಮಲ.

ರಮೇಶ ಹೇಳಿದ, "ನಾನು ಈಗಲೇ ಹೋಗುವೆ, ಪೂರ್ವದಿಕ್ಕಿನ ಕೊಠಡಿಯಲ್ಲಿ ನನ್ನ ಹಾಸಿಗೆ ಹಾಸಿದೆ. ನೀನು ಇನ್ನು ತಡಮಾಡಬೇಡ".

ಕಮಲ ಮತ್ತೆ ಏನೂ ಹೇಳದೆ ಮೆಲ್ಲಮೆಲ್ಲನೆ ತನ್ನ ನಿರ್ದಿಷ್ಟ ಕೊಠಡಿ ಹೊಕ್ಕಳು. ಅವಳು ರಮೇಶನಿಗೆ ಬೇರೇನನ್ನೂ ಹೇಳಲಾರದಾದಳು, ಸ್ವಲ್ಪ ಹೊತ್ತಿಗೆ ಮುಂಚೆ ಅವಳು ಭೂತದ ಕತೆ ಕೇಳಿದ್ದಳು. ಹಾಗೂ ಅವಳ ಕೋಣೆ ಯಲ್ಲಿ ಯಾರೂ ಇಲ್ಲ.

ಕಮಲ ಇಷ್ಟವಿಲ್ಲದೆ ಹೆಜ್ಜೆಹಾಕುವುದನ್ನು ನೋಡಿ ರಮೇಶ ಮನದಲ್ಲೇ ನೊಂದ ಕೊಂಡ—"ಹೆದರಬೇಡ ಕಮಲ–ನಿನ್ನ ಕೊಠಡಿಯ ಮಧ್ಯದಬಾಗಿಲು ತೆರೆದಿರುವೆ" ಎಂದ.

ಕಮಲ ಗರ್ವದಿಂದ ತನ್ನ ತಲೆಯನ್ನು ಸ್ವಲ್ಪ ಎತ್ತಿಕೊಂಡು ಹೇಳಿದಳು, "ನಾನೇಕೆ ಹೆದರುವೆ"?

ರಮೇಶ ತನ್ನ ಕೋಣೆಗೆ ಬಂದು ದೀಪ ಆರಿಸಿ ಮಲಗಿದ—ತನಗೆ ತಾನೆ, "ಕಮಲೆಯನ್ನು ಬಿಟ್ಟು ಬಿಡಲು ಯಾವ ದಾರಿಯೂ ಇಲ್ಲ, ಆದುದ ರಿಂದೆ ಹೇಮನಳಿನಿಯನ್ನೇ ಬಿಡಬೇಕು. ಇಂದು ಇದು ನಿಶ್ಚಯವಾಯಿತು, ಇನ್ನು ತುಯ್ದಾಟ ಸಾಧ್ಯವಿಲ್ಲ" ಎಂದು ಭಾವಿಸಿದ.

ಹೇಮನಳಿನಿಯನ್ನು ಬಿಟ್ಟುಬಿಟ್ಟೆ ಎನ್ನುವಾಗ ಜೀವನದಲ್ಲಿ ಅದೆಷ್ಟು ಬಿಟ್ಟು ಬಿಡುವಿಕೆ, ಕತ್ತಲೆಯಲ್ಲಿ ಮಲಗಿ ರಮೇಶ ಅದನ್ನು ಅನುಭವಿಸ

ತೊಡಗಿದೆ. ಬಳಿಕ ರಮೇಶನಿಂದ ಹಾಸಿಗೆಯಲ್ಲಿ ಸುಮ್ಮನಿರಲಾಗಲಿಲ್ಲ—ಎದ್ದು ಹೊರಕ್ಕೆ ಬಂದ

ರಾತ್ರಿಯ ಅಂಧಕಾರದಲ್ಲಿ ಒಮ್ಮೆ ಹೀಗೆ ಭಾಸವಾಯಿತು, ಅವನ ನಾಚಿಕೆ ಅವನ ವ್ಯಥೆ ಅನಂತ ದೇಶ ಮತ್ತು ಅನಂತಕಾಲವನ್ನು ಆವರಿಸಿಕೊಂಡಿಲ್ಲ. ಆಕಾಶವನ್ನೆಲ್ಲ ವ್ಯಾಪಿಸಿಕೊಂಡು ಚಿರಕಾಲ ಜ್ಯೋತಿರ್ಲೋಕವೆಲ್ಲ ಮೌನವಾಗಿರುವುದು. ರಮೇಶ ಹಾಗೂ ಹೇಮನಳಿನಿಯ ಕ್ಷುದ್ರ ಇತಿಹಾಸ ಅವನ್ನು ಸೋಂಕುವುದೂ ಇಲ್ಲ—ಈ ಆಶ್ವಯುಜದ ನದಿ ತನ್ನ ಜನಹೀನ ಮರಳು ದಡದ ಹುಲ್ಲುಗಾವಲಿನ ತಳಭಾಗದಿಂದ ನಕ್ಷತ್ರ ಹೊಳೆಯುವ ಇಂಥ ಎಷ್ಟೋ ರಾತ್ರಿ ನಿದ್ದೆ ಮಾಡುವ ಗ್ರಾಮಗಳ ಮರದ ನೆರಳಿನಲ್ಲಿ ಹರಿದು ಹೋಗಿರುವುದು—ಆಗ ರಮೇಶನ ಜೀವನದ ಎಲ್ಲ ಅವಮಾನವೂ ಸ್ಮಶಾನದ ಹಿಡಿ ಬೂದಿಯ ನಡುವೆ ಸ್ಥಿರಧೈರ್ಯ ಪೃಥ್ವಿಯೊಡನೆ ಸೇರಿ ಎಂದೆಂದಿಗೂ ಮೂಕವಾಯಿತು.

## ೨೭

ಮಾರನೆಯ ದಿನ ಕಮಲ ನಿದ್ದೆತಿಳಿದೆದ್ದಾಗ, ಮುಂಜಾನೆ ನಾಲ್ಕೂಕಡೆ ನಿಟ್ಟಿಸಿ ನೋಡಿದಳು, ಕೊಠಡಿಯಲ್ಲಿ ಯಾರೂ ಇಲ್ಲ. ತಾನು ಹಡಗಿನಲ್ಲಿರುವುದು ನೆನಪಾಯಿತು. ಮೆಲ್ಲಮೆಲ್ಲನೆ ಎದ್ದು ಬಾಗಿಲು ತೆರೆದು ನೋಡಿದಳು, ಅಲೆಯಿಲ್ಲದ ನದಿಯ ಮೇಲೆ ಅಷ್ಟಿಷ್ಟು ಶುಭ್ರವಾದ ಮಂಜು ಕವಿದಿದೆ—ಕತ್ತಲು ಬೆಳಕಾಗಿದೆ ಮತ್ತು ಪೂರ್ವದಿಕ್ಕಿನಲ್ಲಿ ಮರಗಿಡಗಳ ಹಿಂಬದಿಯ ಆಕಾಶದಲ್ಲಿ ಹೊಂಬಣ್ಣ ಮೂಡಿದೆ. ನೋಡನೋಡುತ್ತ ನದಿಯ ಬಿಳಿ ನೀಲಿಯ ಪ್ರವಾಹ ಬೆಸ್ತರ ದೋಣಿಗಳಿಂದ ಬೆಳ್ಳನೆಯ ಪಟಗಳಿಂದ ತುಂಬಿಹೋದಂತಾಯಿತು.

ತನ್ನ ಮನಸನ್ನು ಪೀಡಿಸುತಿರುವ ಗುಪ್ತವೇದನೆಯಾವುದು, ಎಂಬುದನ್ನು ಕಮಲ ಎಷ್ಟು ಯೋಚಿಸಿಯೂ ತಿಳಿಯಲಾರದಾದಳು. ಶರತ್ಕಾಲದ ಈ ಇಬ್ಬನಿಯ ಕಣ್ಣೀರು ಸುರಿಸುವ ಉಷೆ ಅದೇಕೋ ಇಂದು ತನ್ನ ಆನಂದ ಸ್ವರೂಪ ಪ್ರಕಟಿಸಲಿಲ್ಲ. ಯಾವುದೋ ಒಂದು ಕಣ್ಣೀರಿನ ಒತ್ತಡ ಹುಡುಗಿಯ ಹೃದಯದೊಳಗಿಂದ ಕಂಠದ ಮೂಲಕ ಹರಿದು ಕಣ್ಣಿನ ಬಳಿ ಒಂದೇ ಸಮನೆ

ಕಾತುರಗೊಳ್ಳುತ್ತಿತ್ತು. ತನಗೆ ಮಾವ ಇಲ್ಲ, ಅತ್ತೆ ಇಲ್ಲ, ಗೆಳತಿ ಇಲ್ಲ, ನೆಂಟರು-ಇಷ್ಟರು ಯಾರೂ ಇಲ್ಲ, ಎಂಬ ಸಂಗತಿ ನಿನ್ನೆ ಅವಳ ಮನಸಿನಲ್ಲಿರಲಿಲ್ಲ—ಈ ಮಧ್ಯೆ ಏನು ನಡೆಯಿತು, ಒಬ್ಬನೇ ಒಬ್ಬ ರಮೇಶ ಅವಳ ಸಂಪೂರ್ಣ ಆಶ್ರಯ ಸ್ಥಳವಲ್ಲ, ಎಂದು ಇಂದು ಮನಸಿಗೆ ಭಾಸವಾಯಿತು. ಹೃದಯದಲ್ಲಿ ಅದೇಕೋ, ಈ ಜಗತ್ತು ಬಹಳ ದೊಡ್ಡದು ಮತ್ತು ತಾನು ಅತಿ ಅಲ್ಪಳು ಎಂದು ಮಿಡಿಯುತಿತ್ತು.

ಕಮಲ ಬಹಳ ಹೊತ್ತು ಬಾಗಿಲು ಹಿಡಿದುಕೊಂಡು ನೀರವವಾಗಿ ನಿಂತಿದ್ದಳು. ನದಿಯ ಜಲಪ್ರವಾಹ ಚಂಚಲ ಜಲಪ್ರವಾಹದಂತೆ ಹೊಳೆಯ ತೊಡಗಿತು. ಖಲಾಸಿಗಳು ಕೆಲಸಕ್ಕೆ ತೊಡಗಿದ್ದರು, ಎಂಜಿನ್ ಧಕ್‌ಧಕ್ ಎನ್ನಲು ಪ್ರಾರಂಭಿಸಿತ್ತು—ಲಂಗರ್ ಎತ್ತುವ ಮತ್ತು ಹಡಗಿನ ಕರ್‌ಖರ್ ಶಬ್ದದಿಂದ ಹೊತ್ತಿಗೆ ಮುಂಚೆಯೇ ಎಚ್ಚೆತ್ತ ಹುಡುಗರ ತಂಡ ನದಿಯ ತೀರಕ್ಕೆ ಬಂದಿತ್ತು.

ಈ ಕೋಲಾಹಲದಿಂದ ಎಚ್ಚೆತ್ತ ರಮೇಶ ಕವಲೆಯ ವಿಷಯ ತಿಳಿಯಲು ಬಾಗಿಲೆದುರಿಗೆ ಬಂದು ನಿಂತ. ಕಮಲೆ ಬೆಚ್ಚಿ ಬಿದ್ದು, ಸೆರಗು ಸರಿಮಾಡಿಕೊಳ್ಳುತ್ತ ತನ್ನನ್ನು ವಿಶೇಷ ರೀತಿಯಲ್ಲಿ ಮರೆಮಾಡಿಕೊಳ್ಳಲು ಯತ್ನಿಸಿದಳು.

ರಮೇಶ, "ಕಮಲಾ, ನೀನು ಹಲ್ಲುಜ್ಜಿ ಮುಖ ತೊಳೆದುಕೊಂಡೆಯಾ" ಎಂದು ಕೇಳಿದ.

ಈ ಪ್ರಶ್ನೆಯಿಂದ ಏಕೋ ಕಮಲೆಗೆ ಕೋಪ ಬರುವಂತಿತ್ತು, ಕಾರಣ ಅವಳನ್ನು ಪ್ರಶ್ನಿಸಿದರೂ ಅವಳು ಯಾವ ಮಾತೂ ಆಡಲಾರದಾದಳು. ಇದ್ದಕ್ಕಿದ್ದಂತೆ ಕೋಪ ಬಂತು. ಅವಳು ಬೇರೆ ಕಡೆ ಮುಖ ತಿರುಗಿಸಿಕೊಂಡು ಕೇವಲ ತಲೆಯಲ್ಲಾಡಿಸಿದಳು.

"ಹೊತ್ತಾದರೆ ಜನರೆಲ್ಲ ಎದ್ದುಬಿಡುವರು—ಈಗಲೇ ಮುಗಿಸಿಕೊಳ್ಳಬೇಕು" ಎಂದು ರಮೇಶ ಹೇಳಿದ.

ಕಮಲ ಅದಕ್ಕೆ ಯಾವ ಉತ್ತರವನ್ನೂ ಹೇಳದೆ ಒಂದು ನೆರಿಹಿಡಿದ ಸೀರೆಯನ್ನೂ ಕುರ್ಚಿಯ ಮೇಲಿಂದ ಒಂದು ರವಿಕೆಯನ್ನೂ ಎಳೆದುಕೊಂಡು ವೇಗವಾಗಿ ರಮೇಶನ ಪಕ್ಕದಿಂದಲೇ ಸ್ನಾನದ ಮನೆಗೆ ನಡೆದಳು.

ರಮೇಶ ಮುಂಜಾನೆ ಎದ್ದು ಕಮಲೆಗೆ ಈ ಮುಂಜಾಗ್ರತೆ ಹೇಳಲು

ಬಂದ, ಆದರೆ ಇದು ಕಮಲೆಯ ವಿಷಯದಲ್ಲಿ ಅತಿ ಅನಾವಶ್ಯಕವೆನಿಸಿತು, ಅಷ್ಟೇ ಅಲ್ಲ, ಇದು ಅವಳನ್ನು ಅಗೌರವಗೊಳಿಸಿತು. ರಮೇಶನ ಸ್ನೇಹದ ಎಲ್ಲೆ ಸ್ವಲ್ಪ ದೂರದವರೆಗೆ ಮಾತ್ರವಿತ್ತು, ಹತ್ತಿರಕ್ಕೆ ಬಂದು ಅದು ತೊಂದರೆಗೊಳಿಸಿತು, ಕಮಲ ಇದನ್ನು ಕೂಡಲೇ ಅರಿಯತೊಡಗಿದಳು. ಅತ್ತೆ ಮನೆಯ ಹಿರಿಯರಾರೂ ಅವಳಿಗೆ ನಾಚಿಕೆಪಡುವುದನ್ನು ಕಲಿಸಲಿಲ್ಲ—ಯಾವಯಾವ ಸಂದರ್ಭದಲ್ಲಿ ತಲೆಯ ಮೇಲಿನ ಮುಸುಕಿನ ಅಳತೆ ಎಷ್ಟೆಷ್ಟಿರಬೇಕು, ಎನ್ನುವುದೂ ಅವಳಿಗೆ ಅಭ್ಯಾಸವಾಗಿರಲಿಲ್ಲ, ಆದರೆ ರಮೇಶ ಎದುರಿಗೆ ಬಂದೊಡನೆಯೇ ಇಂದು ಕಾರಣವಿಲ್ಲದೆಯೇ ಅವಳ ಹೃದಯ ನಾಚಿಕೆಯಿಂದ ಸಂಕುಚಿತವಾಗತೊಡಗಿತು.

ಸ್ನಾನ ಮುಗಿಸಿ ಕಮಲೆ ತನ್ನ ಕೊಠಡಿಗೆ ಬಂದು ಕುಳಿತಾಗ, ಅವಳ ದಿನಚರಿ ಅವಳಿಗೆ ನೆನಪಾಯಿತು. ಹೆಗಲ ಮೇಲಿಂದ ಸೆರಗಿಗೆ ಕಟ್ಟಿದ್ದ ಬೀಗದಕೈ ಗೊಂಚಲು ತೆಗೆದು ಬಟ್ಟೆಯ ಪೆಟ್ಟಿಗೆ ತೆರೆಯುತ್ತಲೇ ಅದರಲ್ಲಿದ್ದ ಪುಟ್ಟ ಹಣದ ಪೆಟ್ಟಿಗೆ ಕಣ್ಣಿಗೆ ಬಿತ್ತು. ಇದೇ ಹಣದ ಪೆಟ್ಟಿಗೆ ಪಡೆದು ಕಮಲ ನಿನ್ನೆ ಒಂದು ಹೊಸ ಗೌರವ ಹೊಂದಿದ್ದಳು. ಅವಳ ಕೈಗೆ ಒಂದು ಸ್ವತಂತ್ರ ಶಕ್ತಿ ಬಂದಿತ್ತು. ಆದುದರಿಂದಲೇ ಅವಳು ಬಹಳ ಜೋಪಾನವಾಗಿ ಪೆಟ್ಟಿಗೆಯನ್ನು ತನ್ನ ಬಟ್ಟೆ ಪೆಟ್ಟಿಗೆಯ ನಡುವೆ ಬೀಗ ಹಾಕಿಟ್ಟಳು. ಈ ದಿನ ಕಮಲ ಆ ಪೆಟ್ಟಿಗೆಯನ್ನು ಕೈಗೆ ತೆಗೆದುಕೊಂಡು ಸಂತೋಷಗೊಳ್ಳಲಿಲ್ಲ. ಈ ದಿನ ಆ ಪೆಟ್ಟಿಗೆ ತನ್ನ ಪೆಟ್ಟಿಗೆ ಎಂದೆನಿಸಲಿಲ್ಲ—ಇದು ರಮೇಶನ ಪೆಟ್ಟಿಗೆ. ಈ ಪೆಟ್ಟಿಗೆಯ ವಿಷಯ ದಲ್ಲಿ ಕಮಲೆಯ ಸಂಪೂರ್ಣ ಹಕ್ಕಿಲ್ಲ. ಖಂಡಿತ ಈ ಹಣದ ಪೆಟ್ಟಿಗೆ ಕಮಲೆಗೆ ಒಂದು ಹೊರೆಯಷ್ಟೆ.

ರಮೇಶ ಕೊಠಡಿಯೊಳಕ್ಕೆ ಬಂದು, "ತೆರೆದ ಪೆಟ್ಟಿಗೆಯೊಳಗೆ ಯಾವುದಾದರೂ ಸಮಸ್ಯೆ ಕಂಡುಬಂದಿದೆಯೇ ? ಸುಮ್ಮನೆ ಕುಳಿತು . . . ?"

ಕಮಲ ಹಣದ ಪೆಟ್ಟಿಗೆ ಎತ್ತಿಹಿಡಿದು, "ಇದು ನಿನ್ನ ಪೆಟ್ಟಿಗೆ" ಎಂದಳು.

"ಅದನ್ನು ತೆಗೆದುಕೊಂಡು ನಾನೇನು ಮಾಡಲಿ" ಎಂದು ರಮೇಶ ಕೇಳಿದ.

ಕಮಲ ಹೇಳಿದಳು, "ನಿನ್ನ ಅನುಕೂಲ, ಅದನ್ನು ತಿಳಿದು ಸಾಮಾನು ಸರಂಜಾಮು ತಂದು ಕೊಡು".

ರಮೇಶ—ನಿನಗೇನೂ ಬೇಕಾಗುವುದಿಲ್ಲವೆ ?

ಕಮಲ ತುಸು ಮೈ ಬಗ್ಗಿಸಿ, " ಹಣದಿಂದ ನನಗೇನುಪಯೋಗ" ? ಎಂದಳು.

ರಮೇಶ ನಕ್ಕು, " ಇಷ್ಟು ದೊಡ್ಡ ಮಾತನ್ನು ಎಷ್ಟು ಜನ ಹೇಳ ಬಲ್ಲರು. ಏನೇ ಆಗಲಿ, ಯಾವುದು ನಿನಗೆ ಬೇಡದ ವಸ್ತುವೋ, ಅದನ್ನು ಇತರರಿಗೆ ಕೊಡಬಹುದೆ? ನಾನದನ್ನು ಹೇಗೆ ತೆಗೆದುಕೊಳ್ಳಲಿ" ಎಂದು ಕೇಳಿದ.

ಕಮಲ ಯಾವ ಉತ್ತರವನ್ನೂ ಹೇಳದೆ ಮೇಜಿನ ಮೇಲೆ ಹಣದ ಪೆಟ್ಟಿಗೆಯಿಟ್ಟಳು.

" ಸರಿ ಕಮಲ, ನಿಜವಾಗಿಯೂ ಹೇಳು, ನಾನು ನನ್ನ ಕತೆ ಮುಗಿಸ ಲಿಲ್ಲವೆಂದು ನೀನು ನನ್ನ ಮೇಲೆ ಕೋಪಗೊಂಡಿರುವೆಯಾ ? " ಎಂದು ರಮೇಶ ಕೇಳಿದ.

ಕಮಲ ತಲೆ ತಗ್ಗಿಸಿಕೊಂಡು, " ಯಾರು ಕೋಪಿಸಿಕೊಂಡಿರುವರು ? " ಎಂದಳು.

ರಮೇಶ—ಕೋಪವಿಲ್ಲದಿದ್ದರೆ, ಆ ಹಣದ ಪೆಟ್ಟಿಗೆ ಇದೆಯಲ್ಲ— ಅದರಿಂದಲೇ ಮಾತಿನ ಸತ್ಯ ತಿಳಿಯಬರುವುದು.

ಕಮಲ—ಕೋಪಮಾಡಿಕೊಳ್ಳದೆ ಹಣದ ಪೆಟ್ಟಿಗೆ ಇಡಬಾರದೆ ? ನಿನ್ನ ಸಾಮಾನನ್ನು ನೀನಿಟ್ಟುಕೊಳ್ಳಬಾರದೇಕೆ.

ರಮೇಶ—ನನ್ನ ಪದಾರ್ಥವಲ್ಲ—ದತ್ತಾಪಹರಣ ಮಾಡಿ ಸತ್ತಮೇಲೆ ಬ್ರಹ್ಮರಾಕ್ಷಸ ಆಗಬೇಕಾದೀತು. ನಿನಗೆ ಆ ಭಯವಿಲ್ಲವೆ ?

ರಮೇಶನ ಬ್ರಹ್ಮರಾಕ್ಷಸನಾಗುವ ಹೆದರಿಕೆಯಿಂದ ಕಮಲ ಕೂಡಲೇ ನಕ್ಕಳು. ಅವಳು ನಗುನಗುತ್ತ ಹೇಳಿದಳು, " ಎಂದಿಗೂ ಇಲ್ಲ. ದತ್ತಾಪ ಹರಣ ಮಾಡಿ ಬ್ರಹ್ಮರಾಕ್ಷಸನಾಗಬೇಕೆ ? ನಾನೆಂದೂ ಕೇಳಿರಲಿಲ್ಲ. "

ಈ ಆಕಸ್ಮಿಕ ನಗುವಿನಿಂದ ಸಂಧಿಯು ಪ್ರಾರಂಭವಾಯಿತು. " ಬೇರೆ ಯವರಿಂದ ಹೇಗೆ ಕೇಳುವೆ ? ಒಂದು ವೇಳೆ ಎಂದಾದರೂ ಬ್ರಹ್ಮರಾಕ್ಷಸನನ್ನು ನೋಡಿದರೆ, ಅವನನ್ನು ಪ್ರಶ್ನಿಸಿ ನಿಜ-ಸುಳ್ಳು ತಿಳಿದುಕೊಳ್ಳಬಹುದು" ಎಂದ ರಮೇಶ.

ಕೂಡಲೆ ಕಮಲ ಕುತೂಹಲಗೊಂಡು ವಿಚಾರಿಸಿದಳು, " ಇರಲಿ,

ಹಾಸ್ಯ ಬೇಡ—ನೀನೆಂದಾದರೂ ನಿಜವಾದ ಬ್ರಹ್ಮರಾಕ್ಷಸನನ್ನು ನೋಡಿ ರುವೆಯಾ ? ".

ರಮೇಶ, "ನಿಜವಾದುದಲ್ಲ, ಆದರೂ ಅನೇಕ ಬ್ರಹ್ಮರಾಕ್ಷಸರನ್ನು ನೋಡಿರುವೆ. ವಾಸ್ತವವಾದದ್ದು ಜಗತ್ತಿನಲ್ಲಿ ವಿರಳ" ಎಂದು ಹೇಳಿದ.

ಕಮಲ—ಏಕೆ, ಉಮೇಶ ಹೇಳುವುದು . . . .

ರಮೇಶ—ಉಮೇಶ ? ಉಮೇಶ ಎಂದರೆ ಯಾರು ?

ಕಮಲ—ಓಹೋ, ನಮ್ಮ ಜೊತೆ ಪ್ರಯಾಣಮಾಡುತಿರುವನಲ್ಲ ಅದೇ ಹುಡುಗ, ಅವನು ನಿಜವಾಗಿಯೂ ಬ್ರಹ್ಮರಾಕ್ಷಸನನ್ನು ನೋಡಿರುವನು.

ರಮೇಶ—ಈ ವಿಷಯಗಳಲ್ಲಿ ನಾನು ಉಮೇಶನಿಗೆ ಸಮನಲ್ಲ, ಎಂದು ನಾನೊಪ್ಪಿಕೊಳ್ಳಲೇ ಬೇಕು.

ಇಷ್ಟರಲ್ಲಿ ಅತಿ ಪ್ರಯತ್ನದಿಂದ ಹಡಗಿನ ಆಳುಗಳು ಹಡಗನ್ನು ನಡೆಸ ತೊಡಗಿದ್ದರು. ಸ್ವಲ್ಪ ದೂರ ಹೋಯಿತು, ಅಷ್ಟರಲ್ಲಿ ತಲೆಯ ಮೇಲೆ ಕುಕ್ಕೆ ಯಿಟ್ಟುಕೊಂಡು ಒಬ್ಬ ಹುಡುಗ ದಡದಿಂದ ನೋಡನೋಡುತ್ತ ಕೈ ಎತ್ತಿ ಹಡಗು ನಿಲ್ಲಿಸಲು ಪ್ರಾರ್ಥಿಸತೊಡಗಿದ. ನಾವಿಕರು ಅವನ ವ್ಯಾಕುಲತೆಯನ್ನು ಗಮನಿಸಲಿಲ್ಲ. ಆ ವ್ಯಕ್ತಿ ರಮೇಶನ ಕಡೆ ನೋಡುತ್ತ "ಬಾಬೂ, ಬಾಬೂ ಎಂದು ಕಿರುಚಲಾರಂಭಿಸಿದ. "ನನ್ನನ್ನು ಅವನು ಸ್ಟೀಮರಿನ ಟಕೆಟ್‌ಕೊಡು ವವನೆಂದು ತಿಳಿದಿರಬೇಕು" ಎಂದು ರಮೇಶ ಹೇಳಿದ. ರಮೇಶ ಅವನಿಗೆ, ''ನನಗೆ ಸ್ಟೀಮರ್ ನಿಲ್ಲಿಸುವ ಶಕ್ತಿಯಿಲ್ಲ'' ಎಂದು ಕೈಯಲ್ಲಾಡಿಸುತ್ತ ತಿಳಿಸಿದ.

ಇದ್ದಕ್ಕಿದ್ದಂತೆ ಕಮಲ ಹೇಳಿದಳು, '' ಅದೋ ಉಮೇಶ, ಉಹೊಂ, ಅವನನ್ನು ಬಿಟ್ಟು ಹೋಗಬಾರದು-ಅವನನ್ನು ಹತ್ತಿಸಿಕೊ ".

ರಮೇಶ, '' ನಾನು ಹೇಳಿದರೆ ಸ್ಟೀಮರ್ ನಿಲ್ಲುವುದೆ ? '' ಎಂದು ಕೇಳಿದ.

ಕಮಲ ಆತುರದಿಂದ, "ಇಲ್ಲ, ನೀನು ನಿಲ್ಲಿಸುವಂತೆ ಹೇಳು—ನೀನು ಹೇಳುವುದಿಲ್ಲವೆ ?—ದಡ ಅಷ್ಟೇನೂ ದೂರವಾಗಿಲ್ಲ" ಎಂದಳು.

ರಮೇಶ ಆಗ ನಾವಿಕರ ಹತ್ತಿರ ಹೋಗಿ ಸ್ಟೀಮರ್ ನಿಲ್ಲಿಸಲು ಪ್ರಾರ್ಥಿಸಿದ—ನಾವಿಕರು, '' ಬಾಬೂ ಕಂಪೆನಿಯ ಅಪ್ಪಣೆಯಿಲ್ಲ" ಎಂದರು.

ಕಮಲ ಹೊರಗೆ ಬಂದು ಹೇಳಿದಳು, "ಅವನನ್ನು ಬಿಟ್ಟು ಹೋಗಲು ಸಾಧ್ಯವಿಲ್ಲ—ಸ್ವಲ್ಪ ನಿಲ್ಲಿಸಿ. ಅವನು ನಮ್ಮ ಉಮೇಶ".

ರಮೇಶ ಆಗ ನಿಯಮ ಮೀರುವ ಹಾಗೂ ತೊಂದರೆ ತಪ್ಪಿಸಿಕೊಳ್ಳುವ ಸಾಮಾನ್ಯ ಉಪಾಯ ಅವಲಂಬಿಸಿದ. ಬಹುಮಾನ ಸಿಗುವ ನಂಬಿಕೆಯಿಂದ ನಾವಿಕರು ಹಡಗು ನಿಲ್ಲಿಸಿ ಉಮೇಶನನ್ನು ಏರಿಸಿಕೊಂಡು ಅವನನ್ನು ಬಹಳವಾಗಿ ಬಯ್ಯಲಾರಂಭಿಸಿದರು. ಅವನು ಅದನ್ನು ಸ್ವಲ್ಪವೂ ಲಕ್ಷ್ಯ ಮಾಡದೆ ಕಮಲೆಯ ಕಾಲ ಬಳಿ ಕುಕ್ಕೆ ಇಳಿಸಿ ಏನೂ ಆಗಲಿಲ್ಲ, ಎಂಬ ಭಾವನೆಯಿಂದ ನಗತೊಡಗಿದ.

ಕಮಲೆಯ ಕಳವಳ ಇನ್ನೂ ಹೋಗಿರಲಿಲ್ಲ. ಅವಳು, "ನಗುವೆಯಾ, ಹಡಗು ನಿಲ್ಲಿಸದಿದ್ದರೆ, ನಿನಗೇನಾಗುತಿತ್ತು?" ಎಂದಳು.

ಉಮೇಶ ಅದಕ್ಕೆ ಸರಿಯಾದ ಉತ್ತರ ಹೇಳದೆ ಕುಕ್ಕೆ ಬಗ್ಗಿಸಿದ. ಒಂದು ಚಿಪ್ಪು ಬಾಳೆಕಾಯಿ, ಬಗೆಬಗೆಯ ತರಕಾರಿ, ಕುಂಬಳದ ಹೂ, ಬದನೆಕಾಯಿ ಹೊರಬಿತ್ತು.

"ಇದನ್ನೆಲ್ಲ ಎಲ್ಲಿಂದ ತಂದೆ?" ಎಂದು ಕಮಲ ಕೇಳಿದಳು.

ಉಮೇಶ ಸಂಗ್ರಹದ ವಿಷಯ ತಿಳಿಸಿದ, ಆದರೆ ಅದು ಸ್ವಲ್ಪವೂ ಸಂತೋಷವುಂಟುಮಾಡುವಂತಿರಲಿಲ್ಲ. ಹಿಂದಿನ ದಿನ ಅವನು ಮೊಸರು ಮೊದಲಾದುವನ್ನು ಕೊಂಡುಬರಲು ಹೋಗಿದ್ದಾಗ ಹಳ್ಳಿಯವರೊಬ್ಬರ ಹಿತ್ತಲಲ್ಲಿ, ಒಬ್ಬರ ತೋಟದಲ್ಲಿ, ಈ ಎಲ್ಲ ತರಕಾರಿಗಳನ್ನೂ ನೋಡಿದ್ದ. ಅಂದು ಮುಂಜಾನೆ ಹಡಗು ಹೊರಡುವ ಮೊದಲು ದಡಕ್ಕಿಳಿದು ಆ ಸಾಮಗ್ರಿಗಳನ್ನು ಆಯಾಸ್ಥಳದಿಂದ ಕಿತ್ತುತರುವುದರಲ್ಲಿ ತೊಡಗಿದ್ದ, ಯಾರೊಬ್ಬರ ಸಮ್ಮತಿಯನ್ನೂ ಎದುರುನೋಡಲಿಲ್ಲ.

ರಮೇಶ ಬಹಳ ಬೇಸರದಿಂದ, "ಬೇರೊಬ್ಬರ ತೋಟದಿಂದ ನೀನು ಇವನ್ನೆಲ್ಲ ಕದ್ದು ತಂದಿರುವೆಯಾ?" ಎಂದ ಕೇಳಿದ.

"ಏಕೆ ಕದಿಯ ಬೇಕು. ತೋಟದಲ್ಲಿ ಬೇಕಾದಷ್ಟಿತ್ತು, ನಾನು ಸ್ವಲ್ಪವಷ್ಟೆ ತಂದಿರುವೆ, ಅದರಲ್ಲಿ ತಪ್ಪೇನು?" ಎಂದ ಉಮೇಶ.

ರಮೇಶ—ಸ್ವಲ್ಪ ತಂದರೆ ಕಳ್ಳತನವಲ್ಲವೆ? ನಿರ್ಭಾಗ್ಯ! ನಡೆ, ಇವನ್ನೆಲ್ಲ ಇಲ್ಲಿಂದ ತೆಗೆದುಕೊಂಡು ಹೋಗು.

ಉಮೇಶ ಒಮ್ಮೆ ಕರುಣಾದೃಷ್ಟಿಯಿಂದ ಕಮಲೆಯ ಮುಖ ನೋಡಿ

ಹೇಳಿದ, "ಅಮ್ಮಾ, ಇದನ್ನು ನಮ್ಮ ಕಡೆ ಗೊಜ್ಜಿನ ಸೊಪ್ಪು ಎನ್ನುವರು, ಇದರ ಗೊಜ್ಜು ಬಹಳ ಮಧುರ–ಮತ್ತೆ ಇವು . . ."

ರಮೇಶ ಮತ್ತಷ್ಟು ರೇಗಿಕೊಂಡು, "ನಿನ್ನ ಸೊಪ್ಪುಗಳನ್ನು ಎತ್ತಿ ಕೊಂಡು ಹೊರಡು. ಇಲ್ಲವಾದರೆ ನಾನು ಎಲ್ಲವನ್ನೂ ನದಿಯ ನೀರಿನಲ್ಲಿ ಎಸೆಯುವೆ" ಎಂದು ಹೇಳಿದ.

ಈ ವಿಷಯದಲ್ಲಿ ಏನು ಮಾಡುವುದೆಂದು ಅವನು ಕಮಲೆಯ ಮುಖ ನಿರೀಕ್ಷಿಸಿದ. ಕಮಲೆ ತೆಗೆದುಕೊಂಡುಹೋಗಲು ಸೂಚಿಸಿದಳು. ಆ ಸಂಕೇತ ದಲ್ಲಿ ಕರುಣೆಯಿಂದ ಕೂಡಿದ್ದ ಗುಪ್ತ ಪ್ರಸನ್ನತೆ ನೋಡಿ ಉಮೇಶ ಕಾಯಿ ಪಲ್ಯಗಳನ್ನು ಎತ್ತಿ ಬುಟ್ಟಿಯಲ್ಲಿ ಹಾಕಿಕೊಂಡು ಮೆಲ್ಲಮೆಲ್ಲನೆ ಹೊರಟುಹೋದ.

"ಇದು ಬಹಳ ಅನ್ಯಾಯ. ಹುಡುಗನಿಗೆ ಪ್ರೋತ್ಸಾಹ ಕೊಡ ಬೇಡ" ಎಂದ ರಮೇಶ.

ಕಾಗದ ಪತ್ರ ಬರೆಯಲು ರಮೇಶ ತನ್ನ ಕೊಠಡಿಗೆ ಹೊರಟು ಹೋದ. ಕಮಲ ತಲೆಯೆತ್ತಿ ನೋಡಿದಳು, ಎರಡನೆಯ ದರ್ಜೆಯ ಹಡಗಿನ ಕೋಣೆ ದಾಟಿ ಹಡಗಿನ ಒಳ ಅಂಗಳದಲ್ಲಿ ಅವರು ತಡಿಕೆ ಕಟ್ಟಿ ಅಡುಗೆ ಮಾಡುತಿದ್ದ ಸ್ಥಳದಲ್ಲಿ, ಉಮೇಶ ನೀರವವಾಗಿ ಕುಳಿತಿದ್ದ.

ಎರಡನೆಯ ದರ್ಜೆಯಲ್ಲಿ ಪ್ರಯಾಣಿಕರಾರೂ ಇರಲಿಲ್ಲ. ಕಮಲ ತಲೆಗೂ ಮೈಗೂ ಹೊದಿಕೆ ಹೊದ್ದುಕೊಂಡು ಉಮೇಶನ ಬಳಿಗೆ ಹೋಗಿ,

"ಅದನ್ನೆಲ್ಲ ಎಸೆದೆಯೋ ಇಲ್ಲವೋ ?" ಎಂದು ಕೇಳಿದಳು.

"ಏಕೆ ಬಿಸಾಡಬೇಕು. ಈ ಕೋಣೆಯಲ್ಲಿ ಎಲ್ಲವನ್ನೂ ಇಟ್ಟಿರುವೆ" ಎಂದ ಉಮೇಶ.

ಕಮಲ ಕೋಪಿಸಿಕೊಳ್ಳುವವಳಂತೆ ಹೇಳಿದಳು, "ಆದರೂ ನೀನು ಬಹಳ ತಪ್ಪುಮಾಡಿರುವೆ. ಇನ್ನೆಂದೂ ಈ ಕೆಲಸ ಮಾಡಬೇಡ. ಸ್ಟೀಮರ್ ಹೊರಟುಬಿಟ್ಟುದನ್ನು ನೋಡಿದೆಯೋ ಇಲ್ಲವೋ".

ಹೀಗೆ ಹೇಳಿ ಕೊಠಡಿಯೊಳಕ್ಕೆ ಗದರು ಧ್ವನಿಯಿಂದ, "ಹೋಗು, ಈಳಿಗೆಮಣೆ ತಂದುಕೊಡು" ಎಂದಳು.

ಉಮೇಶ ಈಳಿಗೆ ಮಣೆ ತಂದು ಕೊಟ್ಟ. ಕಮಲ ಚುರುಕಿನಿಂದ ಉಮೇಶ ತಂದಿದ್ದ ತರಕಾರಿ ಹೆಚ್ಚತೊಡಗಿದಳು.

ಉಮೇಶ—ಅಮ್ಮಾ, ಈ ಕಾಯಿ ಪಲ್ಯದ ಜೊತೆಗೆ ಸಾಸಿವೆ ಕಾರ ಅರೆದು ಹಾಕಿದರೆ ಬಹಳ ರುಚಿ.

ಕಮಲ ಕೋಪದ ಧ್ವನಿಯಲ್ಲಿ " ಸರಿ, ನೀನು ಸಾಸಿವೆ ಅರೆ, ಹೋಗು" ಎಂದಳು.

ಈ ರೀತಿಯಲ್ಲಿ ಉಮೇಶನಿಗೆ ಪ್ರೋತ್ಸಾಹ ಸಿಕ್ಕದಂತೆ, ಕಮಲ ಜಾಗರೂಕತೆ ಅವಲಂಬಿಸಿದಳು. ಅತಿ ಗಂಭೀರ ಮುಖದಿಂದ ಅವನ ಸೊಪ್ಪು, ಅವನ ಕಾಯಿಪಲ್ಯ, ಅವನ ಬದನೆಕಾಯಿ ಹೆಚ್ಚಿ ಅಡುಗೆಗೆ ಹೊರಟಳು.

ಪಾಪ, ಈ ಮನೆಯಿಲ್ಲದ ಹುಡುಗನಿಗೆ ಕಮಲ ಆಶ್ರಯಕೊಡದೆ ಹೇಗೆ ಇರಬಲ್ಲಳು. ತರಕಾರಿ ಕದ್ದದ್ದು ದೊಡ್ಡ ತಪ್ಪು, ಎಂದು ಕಮಲ ತಿಳಿಯಲಿಲ್ಲ–ಆದರೆ ನಿರಾಶ್ರಿತ ಹುಡುಗನ ಅತಿಯಾದ ಆಸೆ ಎಷ್ಟೆಂದು ಅವಳು ಅರಿತುಕೊಂಡಳು. ಕಮಲೆಗೆ ಸ್ವಲ್ಪ ಸಂತೋಷವುಂಟುಮಾಡಲು ಈ ನಿರ್ಭಾಗ್ಯ ಹುಡುಗ, ನಿನ್ನೆಯಿಂದ ಕಾಯಿಪಲ್ಯ ಸಂಗ್ರಹಿಸಿ ತರುವ ಸುಸಮಯ ಎದುರುನೋಡುತಿದ್ದ, ಮತ್ತು ಸ್ವಲ್ಪದರಲ್ಲಿ ಸ್ಟೀಮರ್‌ಗೆ ತಪ್ಪಿಸಿ ಕೊಂಡಿದ್ದ ಈ ಸಹಾನುಭೂತಿ ಕಮಲೆಯನ್ನು ಸ್ಪರ್ಶಿಸದೆ ಬಿಡುವುದೇ?

ಕಮಲ, " ಉಮೇಶ, ನಿನಗಾಗಿ ನಿನ್ನೆಯ ಮೊಸರು ಸ್ವಲ್ಪ ಮಿಕ್ಕಿದೆ, ನಿನಗೆ ಈದಿನ ಮೊಸರು ಹಾಕುವೆ, ಆದರೆ ಎಚ್ಚರಿಕೆ, ಇಂಥ ಕೆಲಸ ಇನ್ನೆಂದೂ ಮಾಡಬೇಡ " ಎಂದಳು.

ಉಮೇಶ ಬಹಳ ದುಃಖಗೊಂಡು ಕೇಳಿದ, "ಅಮ್ಮಾ, ಆದರೆ ಆ ಮೊಸರನ್ನು ನಿನ್ನೆ ನೀವು ಹಾಕಿಕೊಳ್ಳಲಿಲ್ಲವೆ?".

" ನಿನ್ನಹಾಗೆ ಮೊಸರಿನ ಮೇಲೆ ಅಷ್ಟಾಗಿ ಆಸೆಯಿಲ್ಲ. ಇರಲಿ ಉಮೇಶ, ಎಲ್ಲವೂ ಆಯಿತು ಮೀನು ಸಿಕ್ಕುವುದು ಹೇಗೆ? ಮೀನಿಲ್ಲದೆ ಬಾಬುಗಳಿಗೆ ಏನು ಊಟ ಹಾಕುವುದು " ಎಂದಳು ಕಮಲ.

ಉಮೇಶ—ಮೀನು ತರಬಹುದಮ್ಮಾ, ಆದರೆ ಅದು ದುಡ್ಡು ದುಗ್ಗಾಣಿಗೆ ಸಿಗದು.

ಕಮಲ ಪುನಃ ಅಧಿಕಾರಕ್ಕೆ ಆರಂಭಿಸಿದಳು. ತನ್ನ ಚೆಲುವಾದ ಎರಡು ಹುಬ್ಬುಗಳನ್ನೂ ಗಂಟಿಕ್ಕುತ್ತ ಹೇಳಿದಳು, "ಉಮೇಶ, ನಿನ್ನಂಥ ಮುಠ್ಠಾಳನನ್ನು ನಾನು ನೋಡಿಯೇ ಇಲ್ಲ. ನಾನು ನಿನಗೆ ದುಗ್ಗಾಣಿಗೆ ಸಾಮಾನು ತರಹೇಳಿದೆನೆ?".

ಕಮಲ ರಮೇಶನ ಬಳಿ ಹಣ ಕೇಳುವುದು ಸುಲಭವಲ್ಲವೆಂದು ತಿಳಿದಿದ್ದ ಭಾವನೆ ಹಿಂದಿನ ದಿನ ಉಮೇಶನ ಮನಸಿಗೆ ನಾಟಿತ್ತು. ಅಷ್ಟೇ ಅಲ್ಲದೆ, ಯಾವ ವಿಷಯದಲ್ಲೂ ರಮೇಶ ಅವನಿಗೆ ಒಪ್ಪಿಗೆಯಾಗಲಿಲ್ಲ. ಈ ಕಾರಣ ದಿಂದಲೇ ರಮೇಶನನ್ನು ಬೇಡಿಕೊಳ್ಳದೆ, ತಾನು ಮತ್ತು ಕಮಲ, ಇಬ್ಬರೇ ಕಲೆತು ಯಾವ ಮಾರ್ಗದಿಂದ ಸಂಸಾರ ಸಾಗಿಸಬಹುದು, ಎಂದು ಅವನು ತನ್ನ ಕ್ಷುದ್ರ ಸಹಜ ಕೌಶಲದಿಂದ ಮನದಲ್ಲೇ ಲೆಕ್ಕಾಚಾರ ಹಾಕುತಿದ್ದ. ಸೊಪ್ಪು–ಬದನೆ–ಬಾಳೆಕಾಯಿಗಳ ವಿಷಯದಲ್ಲಿ ಒಂದು ಬಗೆಯ ನಿಶ್ಚಿಂತತೆ ಯಿಂದಿದ್ದ, ಆದರೆ ಮೀನಿನ ವಿಷಯದಲ್ಲಿ ಈಗ ಆ ಉಪಾಯವನ್ನು ತಿರ್ಮಾನಿಸುವಂತಿಲ್ಲ. ಜಗತ್ತಿನಲ್ಲಿ ನಿಃಸ್ವಾರ್ಥ ಭಕ್ತಿಯ ಬಲದಿಂದ ಕೇವಲ ಮೊಸರು, ಮೀನುಗಳನ್ನು ಕೂಡ ಸಂಗ್ರಹಿಸಲು ಸಾಧ್ಯವಿಲ್ಲ, ಹಣಬೇಕು— ಖಂಡಿತ ಕಮಲೆಯ ಈ ದರಿದ್ರ ಭಕ್ತ ಬಾಲಕನಿಗೆ ಪ್ರಪಂಚ ಸಾಮಾನ್ಯ ವಾದುದೆಲ್ಲ.

ಉಮೇಶ ಸ್ವಲ್ಪ ಕಾತುರದಿಂದ ಹೇಳಿದ, "ಅಮ್ಮಾ, ಯಜಮಾನರಿಗೆ ಹೇಗಾದರೂ ಹೇಳಿ ಒಂದೆರಡು ರೂಪಾಯಿ ತೆಗೆದುಕೊಂಡರೆ, ಆಗ ಒಂದು ಒಳ್ಳೆಯ ರುಯಿಮೀನು (ಒಂದು ಜಾತಿಯ ಮೀನು) ತರಬಹುದು.

ದುಗುಡದಿಂದ ಕಮಲ ಹೇಳಿದಳು, "ಉಹೂಂ, ನೀನು ಇನ್ನು ಸ್ಟೀಮರ್ನ್ನು ಬಿಟ್ಟು ಇಳಿಯಬಾರದು, ಪುನಃ ನೀನು ತೀರದಲ್ಲಿ ಉಳಿದರೆ ಮತ್ತೆ ಹತ್ತಿಸಿಕೊಳ್ಳುವವರು ಯಾರು".

"ದಡದಲ್ಲೇಕೆ ಇಳಿಯಬೇಕು. ಈ ದಿನ ಮುಂಜಾನೆ ಹಡಗಿನ ಆಳುಗಳು ಬಲೆಹಾಕಿ ಬೇಕಾದಷ್ಟು ಮೀನು ಹಿಡಿದಿರುವರು—ಅಲ್ಪ-ಸ್ವಲ್ಪ ಮಾರಿದರೂ ಮಾರಬಹುದು" ಎಂದ ಉಮೇಶ.

ಇದನ್ನು ಕೇಳಿ ಕೂಡಲೇ ಕಮಲ ಒಂದು ರೂಪಾಯಿ ತಂದು ಉಮೇಶನ ಕೈಗೆ ಕೊಟ್ಟಳು—" ಎಷ್ಟು ಬೇಕೋ ಕೊಟ್ಟು ಮಿಕ್ಕುದನ್ನು ಹಿಂದಕ್ಕೆ ತರಬೇಕು" ಎಂದಳು.

ಉಮೇಶ ಮೀನು ತಂದ, ಆದರೆ ಏನನ್ನೂ ಹಿಂದಕ್ಕೆ ತರಲಿಲ್ಲ. "ಒಂದು ರೂಪಾಯಿಗೆ ಕಡಿಮೆಗೆ ಕೊಡಲೇ ಇಲ್ಲ" ಎಂದ.

ಮಾತು ಸಂಪೂರ್ಣವಾಗಿ ಸತ್ಯವಲ್ಲ, ಎಂದು ಕಮಲ ತಿಳಿದುಕೊಂಡಳು–

ತುಸು ನಕ್ಕು, "ಈ ಸಲ ಸ್ಟೀಮರ್ ನಿಲ್ಲಿಸಿದರೆ ರೂಪಾಯಿ ಮುರಿಸಿಡಬೇಕು" ಎಂದಳು.

ಉಮೇಶನೂ ಗಂಭೀರವಾಗಿ ಹೇಳಿದ, "ಅದು ಬಹಳ ಮುಖ್ಯ, ರೂಪಾಯಿ ಒಮ್ಮೆ ಹೊರಕ್ಕೆ ಹೋದರೆ ಹಿಂದಿರುಗಲು ಸಾಧ್ಯವಿಲ್ಲ".

ರಮೇಶ ಊಟಮಾಡುತ್ತ, "ಬಹಳ ರುಚಿಯಾಗಿದೆ. ಆದರೆ ಇದೆಲ್ಲ ಎಲ್ಲಿತ್ತು? ಈ ಕೆಂಪು ಮೀನಿನ ತಲೆಯೆಲ್ಲಿಯದು?" ಎಂದ. ಹೀಗೆಂದು ತಲೆಯನ್ನು ಪ್ರಯತ್ನಪೂರ್ವಕವಾಗಿ ಎತ್ತಿ ಹಿಡಿದು ಹೇಳಿದ, "ಇದು ಸ್ವಪ್ನವಲ್ಲ, ಮಾಯೆಯಲ್ಲ, ಬುದ್ಧಿಭ್ರಮೆಯಲ್ಲ—ಇದು ನಿಜವಾಗಿಯೂ ತಲೆ—ರೋಹಿತ ಮತ್ಸ್ಯ ಎಂದು ಹೇಳುವರಲ್ಲ, ಅದರದ್ದೇ ತಲೆ".

ಈ ರೀತಿ ಅಂದಿನ ಮಧ್ಯಾಹ್ನ ಭೋಜನ ಅತಿ ಉತ್ಸಾಹದಿಂದ ಮುಗಿಯಿತು. ರಮೇಶ ಹಡಗಿನ ಆರಾಮ-ಕುರ್ಚಿಯಲ್ಲಿ ಕುಳಿತು ಜೀರ್ಣ ಶಕ್ತಿಯ ಕಡೆ ಗಮನಿಸಲಾರಂಭಿಸಿದ. ಕಮಲ ಆಗ ಉಮೇಶನಿಗೆ ಊಟಕ್ಕೆ ಬಡಿಸುತ್ತ ಕುಳಿತಳು. ಮೀನಿನ ವ್ಯಂಜನ ಉಮೇಶನಿಗೆ ಬಹಳ ರುಚಿಸಿತು, ಅದರಿಂದ ಅನ್ನದ ಕಡೆ ಮನಸಿಲ್ಲದೆ ಅವನ ಉತ್ಸಾಹ ಕ್ರಮವಾಗಿ ಆಶಂಕಾ ಜನಕವಾಯಿತು. ಆತುರದಿಂದ ಕಮಲ, "ಉಮೇಶ, ಇನ್ನು ಸಾಕು. ನಿನಗೋಸ್ಕರ ವ್ಯಂಜನ ಇಟ್ಟಿರುವೆ, ಪುನಃ ರಾತ್ರಿ ತಿನ್ನುವೆಯಂತೆ" ಎಂದು ಹೇಳಿದಳು.

ಈ ರೀತಿ ದಿನದ ಕೆಲಸ ಹಾಗೂ ಹಾಸ್ಯ ಕುಚೋದ್ಯದಿಂದ ಬೆಳಗಿನ ಮಾನಸಿಕ ದುಗುಡ ಯಾವಾಗ ಹೋಯಿತೋ, ಅದನ್ನು ಕಮಲ ಅರಿಯ ಲಾರದಾದಳು.

ಹಗಲು ಕಳೆಯುತ್ತ ಬಂತು. ಸೂರ್ಯನ ಬಿಸಿಲು ಓರೆಯಾಗಿ ಅತಿ ಪ್ರಕಾಶಮಾನವಾಗಿ ಪಶ್ಚಿಮ ದಿಕ್ಕಿನಿಂದ ಹಡಗಿನ ಮಾಳಿಗೆಯಲ್ಲಿ ಅಧಿಕಾರ ನಡೆಸತೊಡಗಿತು. ಅಲೆಯೇಳುತಿದ್ದ ನೀರಿನ ಮೇಲೆ ಸಂಜೆಯ ತಾಪವಿಲ್ಲದ ಬಿಸಿಲು ಥಳಥಳಿಸುತಿತ್ತು. ನದಿಯ ಎರಡು ದಡದಲ್ಲೂ ಅದೇ ತಾನೇ ಕಪ್ಪಾದ ಶರತ್ಕಾಲದ ಹುಲ್ಲುಗಾವಲ ಮಧ್ಯದ ಕಾಲುದಾರಿಯ ಮೂಲಕ ಹಳ್ಳಿಯ ಹೆಂಗಸರು ಸ್ನಾನಕ್ಕಾಗಿ ಸೊಂಟದಲ್ಲಿ ಕೊಡವನ್ನಿಟ್ಟುಕೊಂಡು ಬರುತಿದ್ದರು.

ಕಮಲ ಎಲೆಯಡಿಕೆ ಸಿದ್ಧಮಾಡಿ, ತಲೆ ಬಾಚಿಕೊಂಡು—ಮುಖ

ಕೈಕಾಲು ತೊಳೆದುಕೊಂಡು, ಬೇರೆ ಬಟ್ಟೆಯುಟ್ಟು ಸಂಜೆ ಹೊರಗೆ ಬಂದಾಗ, ಸೂರ್ಯ ಹಳ್ಳಿಯ ಬಿದಿರು ಮೆಳೆಗಳ ಹಿಂಬದಿಯಲ್ಲಿ ಅಸ್ತಮಿಸಿದ. ಜಹಜು ಒಂದು ಸ್ಟೀಮರ್-ಘಟ್ಟದಲ್ಲಿ ಲಂಗರ್ ಬಿಟ್ಟಿತು.

ಆ ದಿನ ರಾತ್ರಿ ಕಮಲೆಗೆ ಅಡುಗೆ ಕೆಲಸ ಅಷ್ಟೇನೂ ಹೆಚ್ಚಾಗಿರಲಿಲ್ಲ. ಬೆಳಗಿನ ವ್ಯಂಜನ ರಾತ್ರಿಗೂ ಬಹಳವಾಗಿ ಮಿಕ್ಕಿತ್ತು. ಆಗ ರಮೇಶ ಬಂದು, "ಮಧ್ಯಾಹ್ನ ಊಟ ಹೆಚ್ಚಾಯಿತು, ಈಗ ನಾನು ಊಟಮಾಡುವುದಿಲ್ಲ" ಎಂದು ತಿಳಿಸಿದ.

ಕಮಲ ಕಳವಳದಿಂದ ಕೇಳಿದಳು, "ಸ್ವಲ್ಪವೂ ಊಟಮಾಡುವುದಿಲ್ಲವೆ? ಸ್ವಲ್ಪ ಕರಿದ ಮೀನು . . . ".

ರಮೇಶ ಸಂಕ್ಷೇಪವಾಗಿ, "ಊಹೂಂ, ಮೀನು ಬೇಡ" ಎಂದು ಹೇಳಿ ಹೊರಟು ಹೋದ.

ಆಗ ಕಮಲ ಉಮೇಶನ ಎಲೆಯಲ್ಲಿ ಎಲ್ಲ ಮೀನಿನ ವ್ಯಂಜನ ಮತ್ತು ಗೊಜ್ಜನ್ನು ಒಟ್ಟಿಗೆ ಹಾಕಿದಳು. "ನಿಮಗೆ ಸ್ವಲ್ಪ ಉಳಿಸಿಕೊಳ್ಳಲಿಲ್ಲವೆ?" ಎಂದು ಉಮೇಶ ಕೇಳಿದ.

ಕಮಲ, "ನನ್ನೂಟವಾಯಿತು" ಎಂದಳು.

ಈ ರೀತಿ ಕಮಲೆಯ ಆ ತೇಲುವ ಪುಟ್ಟ ಸಂಸಾರದ ಒಂದು ದಿನದ ಸಮಸ್ತ ಕರ್ತವ್ಯವೂ ನೆರವೇರಿತು.

ಬೆಳದಿಂಗಳು ಆಗ ನೀರು—ನೆಲದ ಮೇಲೆ ಹರಡಿಕೊಂಡಿತ್ತು. ತೀರದಲ್ಲಿ ಹಳ್ಳಿಯಿಲ್ಲ—ಜನಹೀನ ಗದ್ದೆ ಬಯಲಿನ ಅತಿ-ಕೋಮಲ ಸುವಿಸ್ತೀರ್ಣ ಹಸುರಿನ ಮೇಲೆ ನಿಶ್ಶಬ್ದ ಶುಭ್ರ ರಾತ್ರಿ ವಿರಹಿಣಿಯಂತೆ ಎಚ್ಚೆತ್ತು ಕುಳಿತಿದ್ದಿತು.

ತೀರದಲ್ಲಿ ಟಿನ್ನಿನ ಛಾವಣಿ ಹಾಕಿದ ಪುಟ್ಟ ಗುಡಿಸಲಲ್ಲಿ ಸ್ಟೀಮರ್-ಆಫೀಸು. ಅಲ್ಲೊಬ್ಬ ಒಣಕಲು ಮೈಯ ಗುಮಾಸ್ತೆ, ಸ್ಟೂಲಿನ ಮೇಲೆ ಕುಳಿತು ಮೇಜೆಯ ಮೇಲೆ ಚಿಕ್ಕ ಸೀಮೆಯೆಣ್ಣೆ ದೀಪವಿಟ್ಟುಕೊಂಡು ಲೆಕ್ಕ ಬರೆಯುತಿದ್ದ. ತೆರೆದ ಬಾಗಿಲ ಮೂಲಕ ರಮೇಶ ಆ ಗುಮಾಸ್ತೆಯನ್ನು ನೋಡುತಿದ್ದ. ನಿಟ್ಟುಸಿರು ಬಿಟ್ಟು ರಮೇಶ, "ನನ್ನ ಅದೃಷ್ಟ ನನ್ನನ್ನು ಈ ಗುಮಾಸ್ತೆಯಂತೆ ಒಂದು ಇಕ್ಕಟ್ಟಾದ ಹಾಗೂ ನಿಶ್ಚಿತವಾದ ಜೀವನ ಯಾತ್ರೆಯಲ್ಲಿ ಇರಿಸುವುದಾದರೆ—ಲೆಕ್ಕ ಬರೆಯುವೆ, ಕೆಲಸ ಮಾಡುವೆ, ಕೆಲಸದಲ್ಲಿ ತಪ್ಪಿದ್ದರೆ

ಅಧಿಕಾರಿಯಿಂದ ಬೈಗಳು ತಿನ್ನುವೆ, ಕೆಲಸ ಮುಗಿಸಿ ರಾತ್ರಿ ಮನೆಗೆ ಹಿಂದಿರುಗುವೆ—ಆಗ ನಾನು ಬದುಕುವೆ—ನಾನು ಬದುಕುವೆ" ಎಂದು ಭಾವಿಸುತಿದ್ದ.

ಕ್ರಮೇಣ ಆಫೀಸಿನ ದೀಪವಾರಿತು. ಗುಮಾಸ್ತೆ ಬಾಗಿಲಿಗೆ ಬೀಗ ಹಾಕಿ ಮಂಜಿನ ಹೆದರಿಕೆಯಿಂದ ತಲೆಗೆ ಮುಸುಕುಹಾಕಿಕೊಂಡು ಜನಶೂನ್ಯ ಗದ್ದೆಯ ಬಯಲ ಮಧ್ಯದಿಂದ ಮೆಲ್ಲಮೆಲ್ಲನೆ ಎತ್ತಕಡೆಯೋ ಹೊರಟುಹೋದ.

ಕಮಲ ಬಹಳ ಹೊತ್ತಿನಿಂದ ಮೌನವಾಗಿ ಡೆಡಗಿನ ಕಟಕಟಿ ಹಿಡಿದು ಕೊಂಡು ಹಿಂಬದಿಯಲ್ಲಿ ನಿಂತಿದ್ದಳು, ಅದು ರಮೇಶನಿಗೆ ತಿಳಿಯಲಿಲ್ಲ. ಸಂಜೆ ರಮೇಶ ತನ್ನನ್ನು ಕರೆಯಬಹುದು, ಎಂದು ಕಮಲ ನಿರೀಕ್ಷಿಸಿದ್ದಳು. ಇದಕ್ಕಾಗಿ ಕೆಲಸಕಾರ್ಯ ಮುಗಿಸಿಕೊಂಡು ಬಂದರೆ ರಮೇಶ ಅವಳ ಸುದ್ದಿಗೇ ಬರಲಿಲ್ಲ, ಆಗ ಅವಳುತಾನಾಗಿಯೇ ಡೆಡಗಿನ ಮಾಳಿಗೆಯಲ್ಲಿ ಬಂದು ನಿಂತಳು. ಆದರೆ ಅವಳು ರಮೇಶನ ಬಳಿಗೆ ಹೋಗಲಾರದೆ, ಒಮ್ಮೆಗೇ ಸರಿದು ನಿಲ್ಲಬೇಕಾಯಿತು. ಚಂದ್ರನ ಕಾಂತಿ ರಮೇಶನ ಮುಖದ ಮೇಲೆ ಬಿದ್ದಿತು—ಆ ಮುಖ ಎಷ್ಟು ದೂರದಲ್ಲಿ—ಬಹಳ ದೂರದಲ್ಲಿ; ಕಮಲೆಯೊಡನೆ ಅದರ ಪರಿಚಯವಿಲ್ಲ. ಧ್ಯಾನಮಗ್ನ ರಮೇಶ ಮತ್ತು ಈ ಏಕಾಕಿನಿ ಬಾಲಿಕೆಯ ನಡುವೆ ಬೆಳದಿಂಗಳೆಂಬ ಮೇಲುಹೊದಿಕೆಯನ್ನು ತಲೆಯಿಂದ ಕಾಲವರೆಗೆ ಮುಚ್ಚಿಕೊಂಡು ಒಂದು ವಿರಾಟ್ ರಾತ್ರಿ ತುಟಿಗಳ ಮೇಲೆ ಬೆರಳಿಟ್ಟುಕೊಂಡು ನೀರವವಾಗಿ ನಿಂತು ಪಹರೆ ಕೊಡುತಿತ್ತು.

ರಮೇಶ ಎರಡು ಕೈಗಳ ನಡುವೆ ಮುಖ ಮುಚ್ಚಿಕೊಂಡು ಮೇಜೆಯ ಮೇಲೆ ಮುಖವಿಟ್ಟನು. ಆಗ ಕಮಲ ಮೆಲ್ಲಮೆಲ್ಲನೆ ತನ್ನ ಕೊಠಡಿಯ ಕಡೆಗೆ ಹೊರಟಳು. ಒಂದುವೇಳೆ ರಮೇಶನಿಗೆ ಎಚ್ಚರವಾಗಬಹುದು, ಎಂದು ಹೆಜ್ಜೆಯ ಸಪ್ಪಳ ಮಾಡಲಿಲ್ಲ, ಕಮಲ ಅವನ ವಿಷಯ ತಿಳಿನುಕೊಳ್ಳಲ ಬಂದಿದ್ದಳು.

ಆದರೆ ಅವಳ ಮಲಗುವ ಕೋಣೆಯಲ್ಲಿ ಯಾರೂ ಇಲ್ಲ. ಕತ್ತಲು—ಪ್ರವೇಶಿಸಿ ಅವಳ ಹೃದಯ ನಡುಗಿತು, ತಾನು ಏಕಾಂತದಲ್ಲೂ ಪ್ರತ್ಯಕ್ಷಳು ಮತ್ತು ಒಬ್ಬಂಟಿಗಳು ಎಂದು ಭಾವಿಸಿದಳು. ಆ ಕ್ಷುದ್ರ ಮರದ ಕೋಣೆ ಯಾವುದೋ ಒಂದು ಕ್ರೂರ ಅಪರಿಚಿತ ಜಂತು ಹಾ-ಎಂದು ಬಾಯಿಬಿಟ್ಟಿರ್ಪ ವಂತೆ ಅವಳ ಬಳಿ ತನ್ನ ಅಂಧಕಾರವನ್ನು ಸೇರಿಸಿತು ಅವಳು ಎಲ್ಲಿಗೆ ಹೋಗ

ಬಲ್ಲಳು ? ಎಲ್ಲಿ ತನ್ನ ಅಲ್ಪ ದೇಹವನ್ನು ಕೆಡವಿ ಇದು ನನ್ನ ಸ್ವಂತ ಸ್ಥಳವೇ ? ಎಂದು ಕಣ್ಣು ಮುಚ್ಚಿಕೊಂಡು ಹೇಳಬಲ್ಲಳು !

ಕೋಣೆಯೊಳಗೆ ಇಣಿಕಿ ನೋಡಿ ಕಮಲ ಪುನಃ ಹೊರಕ್ಕೆ ಬಂದಳು. ಹೊರಗೆ ಬರುವಾಗ ರಮೇಶನ ಛತ್ರಿ ಟಿನ್ನಿನ ಪೆಟ್ಟಿಗೆಯ ಮೇಲೆ ಬಿದ್ದು ಸದ್ದಾಯಿತು. ಆ ಶಬ್ದದಿಂದ ಗಾಬರಿಗೊಂಡು ರಮೇಶ ಮುಖ ಎತ್ತಿದ ಮತ್ತು ಕುರ್ಚಿ ಬಿಟ್ಟೆದ್ದು, ಕಮಲ ತನ್ನ ಮಲಗುವ ಕೋಣೆಯ ಬಳಿ ನಿಂತಿರುವುದನ್ನು ನೋಡಿದ. "ಇದೇನು ಕಮಲ, ಈ ವೇಳೆಗೆ ನೀನು ಮಲಗಿರಬಹುದೆಂದು ತಿಳಿದಿದ್ದೆ, ನಿನಗೆ ಹೆದರಿಕೆಯಾಗುತ್ತಿಲ್ಲವಷ್ಟೆ ! ಸರಿ, ನಾನಿನ್ನು ಹೊರಗಡೆ ಕುಳಿತುಕೊಳ್ಳುವುದಿಲ್ಲ--ನಾನು ಈ ಪಕ್ಕದ ಕೊಠಡಿಯಲ್ಲೇ ಮಲಗಿಕೊಳ್ಳುವೆ—ಮಧ್ಯದ ಬಾಗಿಲು ತೆರೆದಿಟ್ಟಿರುವೆ" ಎಂದು ಹೇಳಿದ.

ಕಮಲ ಗಡಸುಧ್ವನಿಯಿಂದ ಹೇಳಿದಳು, "ನಾನು ಹೆದರಿಕೊಳ್ಳುವುದಿಲ್ಲ"—ಹೀಗೆಂದು ವೇಗವಾಗಿ ಕತ್ತಲೆಯ ಕೊಠಡಿಯನ್ನು ಹೊಕ್ಕಳು. ಮತ್ತು ರಮೇಶ ತೆರೆದಿಟ್ಟಿದ್ದ ಬಾಗಿಲನ್ನು ಅವಳು ಮುಚ್ಚಿದಳು. ಹಾಸಿಗೆಯ ಮೇಲೆ ಬಿದ್ದುಕೊಂಡು ಮುಖದ ಮೇಲಕ್ಕೆ ಒಂದು ಹೊದಿಕೆ ಎಳೆದುಕೊಂಡಳು—ಅವಳು ಜಗತ್ತಿನಲ್ಲಿ ಬೇರೆ-ಯಾರನ್ನೂ ಪಡೆಯದೆ ಕೇವಲ ತನ್ನನ್ನು ತಾನೇ ಗಟ್ಟಿಯಾಗಿ ಅಪ್ಪಿಕೊಂಡಳು. ಅವಳ ಹೃದಯ ದಂಗೆಯೆದ್ದಿತು. ಎಲ್ಲಿ ಆಶ್ರಯವಿಲ್ಲವೋ, ಸ್ವತಂತ್ರವಿಲ್ಲವೋ, ಅಲ್ಲಿ ಪ್ರಾಣ ಉಳಿಯುವುದಾದರೂ ಎಂತು ?

ರಾತ್ರಿ ಕಳೆಯಲಿಲ್ಲ. ಈ ವೇಳೆಗೆ ಪಕ್ಕದ ಕೊಠಡಿಯಲ್ಲಿ ರಮೇಶ ನಿದ್ದೆಮಾಡುತಿದ್ದ. ಹಾಸಿಗೆಯಲ್ಲಿ ಮಲಗಿರಲು ಇನ್ನು ಸಾಧ್ಯವಾಗಲಿಲ್ಲ. ಮೆಲ್ಲಮೆಲ್ಲನೆ ಹೊರಕ್ಕೆ ಎದ್ದು ಬಂದಳು. ಹಡಗಿನ ಕಟಕಟಿ ಹಿಡಿದುಕೊಂಡು ತೀರದ ಕಡೆ ನೋಡುತ್ತ ನಿಂತಳು. ಎಲ್ಲೂ ಜೀವಜಂತುಗಳ ಸುಳಿವಿಲ್ಲ—ಚಂದ್ರ ಪಶ್ಚಿಮದ ಕಡೆಗೆ ಇಳಿಯುತಿದ್ದ. ಎರಡೂಕಡೆಯ ಗದ್ದೆ ಬಯಲಿನ ನಡುವಿನಿಂದ ಅದೃಶ್ಯವಾಗಿದ್ದ ಇಕ್ಕಟ್ಟಾದ ಹಾದಿಯ ಕಡೆ ನೋಡಿ ಕಮಲ ಆಲೋಚಿಸತೊಡಗಿದಳು, ಪ್ರತಿದಿನವೂ ಈ ದಾರಿಯಿಂದ ಎಷ್ಟು ಮಂದಿ ಹುಡುಗಿಯರು ನೀರು ತುಂಬಿಕೊಂಡು ತಮ್ಮ ಮನೆಗೆ ಹೋಗುವರು. ಮನೆ ! ಮನೆ ಎನ್ನುತ್ತಲೇ ಅವಳ ಪ್ರಾಣ ಹೃದಯದಿಂದ ಹೊರಬರುವಂತಾಯಿತು.

ಒಂದೇ ಒಂದು ಮನೆ—ಆದರೆ ಆ ಮನೆಯೆಲ್ಲಿ! ಶೂನ್ಯ ತೀರ ಬಿಕೋ ಎನ್ನುತಿತ್ತು–ವಿಶಾಲ ಆಕಾಶ ದಿಗಂತದಿಂದ ದಿಗಂತದವರೆಗೆ ನಿಸ್ತಬ್ಧವಾಗಿತ್ತು– ಉಪಯೋಗವಿಲ್ಲದ ಜಗತ್ತು—ಸಣ್ಣ ಹುಡುಗಿಗೆ ಈ ಕೊನೆಯಲ್ಲದ ವಿಶಾಲತೆ ಅತ್ಯಂತ ಅನಾವಶ್ಯಕ—ಕೇವಲ ಅವಳಿಗೆ ಒಂದೇ ಒಂದು ಮನೆಯ ಆವಶ್ಯಕತೆಯಿತ್ತು.

ಈ ವೇಳೆಯಲ್ಲಿ ಇದ್ದಕ್ಕಿದ್ದಂತೆ ಕಮಲ ಬೆಚ್ಚಿಬಿದ್ದಳು—ಯಾರೋ ಒಬ್ಬರು ಅವಳಿಗೆ ಸ್ವಲ್ಪದೂರದಲ್ಲಿ ನಿಂತಿದ್ದರು.

“ ಹೆದರಬೇಡಿ ತಾಯಿ, ನಾನು ಉಮೇಶ. ರಾತ್ರಿ ಬಹಳ ಹೊತ್ತಾಗಿದೆ, ನಿದ್ದೆಮಾಡಲಿಲ್ಲವೇನು ? ”

ಇಷ್ಟು ಹೊತ್ತೂ ಕಣ್ಣೀರು ಬಂದಿರಲಿಲ್ಲ, ನೋಡನೋಡುತ್ತ ಎರಡು ಕಣ್ಣುಗಳಿಂದಲೂ ಆ ಕಣ್ಣೀರು ಪ್ರವಹಿಸಿತು. ದೊಡ್ಡ ದೊಡ್ಡ ಹನಿಗಳು ಯಾವ ಅಡ್ಡಿಯನ್ನೂ ಕೇಳಲಿಲ್ಲ, ಸುಮ್ಮನೆ ಜಾರಿ ಬೀಳತೊಡಗಿತು.

ಮೈ ಕೊಂಕಿಸಿಕೊಂಡು ಕಮಲ ಉಮೇಶನ ಕಡೆಯಿಂದ ಮುಖ ತಿರುಗಿಸಿಕೊಂಡಳು. ನೀರ ಭಾರ ಹೊತ್ತು ಮೋಡ ತೇಲಿ ಹೋಗುವುದು,—ಅದರಂತೆಯೇ ಮತ್ತೊಂದು ಭಾರ ಹೊತ್ತ ಗಾಳಿ ಸ್ಪರ್ಶಿಸಿದ ಕೂಡಲೆ ನೀರ ಭಾರವೆಲ್ಲ ಸುಲಭವಾಗಿ ಸುರಿಯಲಾರಂಭಿಸುವುದು ;— ಈ ನಿರಾಶ್ರಿತ ದರಿದ್ರ ಬಾಲಕನ ಬಳಿ ಕೇವಲ ಎಚ್ಚರಿಕೆಯ ಮಾತು ಕೇಳಿದ್ದರಿಂದಲೇ ಕಮಲ ತನ್ನ ಎದೆ ತುಂಬಿದ ಅಶ್ರುಭಾರವನ್ನು ತಡೆಯಲಾರದಾದಳು. ಏನಾದರೂ ಹೇಳಬೇಕೆಂದು ಪ್ರಯತ್ನಿಸಿದಳು, ಆದರೆ ಗಂಟಲು ಬಿಗಿದು ಮಾತು ಹೊರಬೀಳದಾಯಿತು.

ನೊಂದ ಮನದ ಉಮೇಶನಿಗೆ ಎಷ್ಟು ಯೋಚಿಸಿದರೂ, ಸಂತೈಸುವುದು ಹೇಗೆಂದು ಹೊಳೆಯಲಿಲ್ಲ. ಬಹಳ ಹೊತ್ತು ಸುಮ್ಮನಿದ್ದು ಕಡೆಗೊಮ್ಮೆ “ ಅಮ್ಮಾ ನೀವು ರೂಪಾಯಿ ಕೊಟ್ಟಿದ್ದಿರಲ್ಲ, ಅದರಲ್ಲಿ ಏಳಾಣೆ ಉಳಿದಿದೆ” ಎಂದು ಹೇಳಿದ.

ಆಗ ಕಮಲೆಯ ಕಣ್ಣೀರಿನ ಒತ್ತಡ ಕಡಿಮೆಯಾಗಿತ್ತು. ಉಮೇಶನ ಈ ಅಪ್ರಾಸಂಗಿಕ ಮಾತಿನಿಂದ ಅವಳು ತುಸು ಸ್ನೇಹ ಮಿಶ್ರಿತ ನಗು ನಕ್ಕು, “ ಸರಿ ಒಳ್ಳೆಯದು, ಅದನ್ನು ನಿನ್ನ ಹತ್ತಿರವೇ ಇಟ್ಟುಕೊಂಡಿರು ಹೋಗು, ಇನ್ನು ಮಲಗು ಹೋಗು ” ಎಂದಳು.

ಚಂದ್ರ ಮರಗಳ ಹಿಂಬದಿಯಲ್ಲಿ ಮುಳುಗಿದ. ಈಗ ಕಮಲ ಹಾಸಿಗೆಯಲ್ಲಿ ಬಂದು ಮಲಗಿದ ಕೂಡಲೇ, ಅವಳ ಎರಡು ದಣಿದ ಕಣ್ಣುಗಳಿಗೂ ನಿದ್ದೆ ಹತ್ತಿತು—ಬೆಳಗಿನ ಬಿಸಿಲು ಅವಳ ಕೋಣೆಯ ಬಾಗಿಲು ತಟ್ಟಿದಾಗಲೂ ಅವಳು ನಿದ್ದೆಮಾಡುತಿದ್ದಳು.

೨೮

ದಣುವಿನೊಡನೆ ಕಮಲೆಯ ಮಾರನೆಯ ದಿನ ಪ್ರಾರಂಭವಾಯಿತು. ಆ ದಿನ ಅವಳ ಕಣ್ಣಿಗೆ ಸೂರ್ಯನಬೆಳಕೂ ದಣಿದಿತ್ತು, ನದಿಯಪ್ರವಾಹವೂ ದಣಿದಿತ್ತು, ತೀರದ ಮರಗಿಡಗಳೂ ದಾರಿನಡೆದ ಪ್ರಯಾಣಿಕನಂತೆ ದಣಿದಿದ್ದುವು.

ಉಮೇಶ ಸಹಾಯ ಮಾಡುವುದಕ್ಕಾಗಿ ಅವಳ ಬಳಿಗೆ ಬಂದಾಗ ಕಮಲ ಬೇಸರದಿಂದ, "ಹೋಗು ಉಮೇಶ, ಈ ದಿನ ನೀನು ನನ್ನನ್ನು ಬೇಸರಗೊಳಿಸಬೇಡ" ಎಂದಳು.

ಉಮೇಶ ಸ್ವಲ್ಪದರಲ್ಲಿ ಸುಮ್ಮನಾಗುವ ಹುಡುಗನಲ್ಲ. ಅವನು, "ಬೇಸರಗೊಳಿಸುವುದೇನಮ್ಮ—ಖಾರ ಅರೆಯಲು ಬಂದಿರುವೆ" ಎಂದ.

ಬೆಳಗ್ಗೆ ರಮೇಶ ಕಮಲೆಯ ಮುಖಭಾವ ನೋಡಿ, "ಕಮಲ, ನಿನ್ನ ಆರೋಗ್ಯ ನೆಟ್ಟಗಿಲ್ಲವೆ" ಎಂದು ವಿಚಾರಿಸಿದ.

ಇಂಥ ಪ್ರಶ್ನೆ ಅದೆಷ್ಟು ಅನಾವಶ್ಯಕ ಮತ್ತು ಅಸಂಗತವೆಂಬುದನ್ನು ಕಮಲ ಒಮ್ಮೆ ವೇಗವಾಗಿ ಕತ್ತಲ್ಲಾಡಿಸುವುದರ ಮೂಲಕ ಮೌನವಾಗಿ ಪ್ರಕಟಿಸಿ ಅಡುಗೆ ಮನೆಯತ್ತ ಹೊರಟು ಹೋದಳು.

ಸಮಸ್ಯೆ ದಿನದಿನಕ್ಕೂ ಕಠಿಣವಾಗುತಿರುವುದು, ಎಂದು ರಮೇಶ ಅರಿತುಕೊಂಡ. ಆದಷ್ಟು ಬೇಗ ಇದನ್ನು ಕೊನೆಮುಟ್ಟಿಸುವುದು ಆವಶ್ಯಕ. ಹೇಮನಳಿನಿಯೊಡನೆ ಒಮ್ಮೆ ಸ್ಪಷ್ಟವಾಗಿ ಮಾತುಕತೆ ನಡೆದರೆ ಕರ್ತವ್ಯನಿರ್ಧಾರ ಸುಲಭವಾಗುವುದು, ಎಂದು ರಮೇಶ ಮನದಲ್ಲೇ ಆಲೋಚಿಸತೊಡಗಿದ.

ಬಹಳವಾಗಿ ಯೋಚಿಸಿದ ಬಳಿಕ ಹೇಮಳಿಗೆ ಪತ್ರ ಬರೆಯಲು ಕುಳಿತ. ಒಮ್ಮೆ ಬರೆಯುವುದು, ಒಮ್ಮೆ ಹರಿದುಹಾಕುವುದು, ಆ ವೇಳೆಗೆ, "ಮಹಾಶಯ, ನಿಮ್ಮ ಹೆಸರು?" ಎಂಬುದನ್ನು ಕೇಳಿ ಗಾಬರಿಯಿಂದ ತಲೆಯೆತ್ತಿದ. ಓರ್ವ ವಯಸ್ಕ ಸಭ್ಯಸ್ಥ ನರೆತ ದಾಡಿ ಮತ್ತು ಹಣೆಯ ಮೇಲ್ಭಾಗದ ನರೆತ

ಕೂದಲ ಬಕ್ಕದಲೆಯೊಡನೆ ಎಗುರಿಗೆ ನಿಂತಿರುವುದನ್ನು ನೋಡಿದ. ಏಕಾಂತತೆಯ ಕಡೆಯಿದ್ದ ರಮೇಶನ ಗಮನ ಪತ್ರದ ಯೋಚನೆಯಿಂದ ಆಕಸ್ಮಿಕ ಘಟನೆಯಿಂದ ಕ್ಷಣಹೊತ್ತು ಭ್ರಮೆ ಹಿಡಿದಂತಾಯಿತು.

"ನೀವು ಬ್ರಾಹ್ಮಣರೆ? ನಮಸ್ಕಾರ. ನಿಮ್ಮ ಹೆಸರು ರಮೇಶಬಾಬು—ನಾನದನ್ನು ಮೊದಲೇ ತಿಳಿದುಕೊಂಡೆ—ಆದರೂ ನೋಡಿ, ನಮ್ಮ ದೇಶದಲ್ಲಿ ಹೆಸರು-ಕೇಳುವುದು ಗೆಳೆತನದ ಒಂದು ವೈಶಿಷ್ಟ್ಯ. ಅದೂ ಸಭ್ಯತೆಯೇ. ಇತ್ತೀಚೆಗೆ ಹಲಕೆಲವರು ಕೋಪಗೊಳ್ಳುವರು. ನೀವೂ ಕೋಪಿಸಿಕೊಳ್ಳುವುದಾದರೆ ಕ್ಷಮೆ ಬೇಡುವೆ. ನನ್ನನ್ನು ಕೇಳಿ, ನಾನು ನನ್ನ ಹೆಸರು ಹೇಳುವೆ, ಅಪ್ಪನ ಹೆಸರು ಹೇಳುವೆ, ತಾತನ ಹೆಸರು ಹೇಳಲೂ ಆಕ್ಷೇಪಿಸೆನು".

ರಮೇಶ ನಕ್ಕು, "ನನ್ನ ಕೋಪ ಅಷ್ಟು ಭಯಂಕರವಾದುದಲ್ಲ. ನಿಮ್ಮ ಹೆಸರು ಮಾತ್ರ ತಿಳಿದುಕೊಂಡರೂ ನಾನು ಸಂತೋಷಗೊಳ್ಳುವೆ" ಎಂದ.

"ನನ್ನ ಹೆಸರು ತ್ರೈಲೋಕ್ಯ ಚಕ್ರವರ್ತಿ. ಪಶ್ಚಿಮದಲ್ಲಿ ಎಲ್ಲರೂ ನನ್ನನ್ನು ಚಿಕ್ಕಪ್ಪ ಎಂದು ಬಲ್ಲರು. ನೀವು ಇತಿಹಾಸ ಓದಿರುವಿರೋ? ಭಾರತವರ್ಷದಲ್ಲಿ ಭರತ ಚಕ್ರವರ್ತಿ ರಾಜನಾಗಿದ್ದ—ಹಾಗೆಯೇ ನಾನೂ ಪಶ್ಚಿಮಪ್ರಾಂತಕ್ಕೆಲ್ಲ ಚಕ್ರವರ್ತಿ-ಚಿಕ್ಕಪ್ಪ. ಪಶ್ಚಿಮಕ್ಕೆ ಹೋಗುವುದಾದರೆ, ನಿಮಗೆ ನನ್ನ ಪರಿಚಯವಾಗದೇ ಇರದು. ಆದರೆ ಶ್ರೀಯುತರು ಹೋಗುತಿರುವುದೆಲ್ಲಿಗೆ?"

"ಇನ್ನೂ ಸರಿಯಾಗಿ ಗೊತ್ತಿಲ್ಲ" ಎಂದ ರಮೇಶ.

ತ್ರೈಲೋಕ್ಯ-ನೀವು ನಿಷ್ಕರ್ಷಿಸಲು ತಡವಾಗಬಹುದು, ಆದರೆ ಹಡಗು ನಿಲ್ಲಲು ವಿಳಂಬವಾಗದು.

"ಒಂದು ದಿನ ಗೋಪಾಲಂದದಲ್ಲಿ ಇಳಿದು ನೋಡಿದೆ, ಹಡಗು ಸಿಳ್ಳುಹಾಕುತಿತ್ತು. ನಾನು ತೀರ್ಮಾನಿಸಲು ಹೊತ್ತಾಗಬಹುದು, ಆದರೆ ಹಡಗು ಹೊರಡಲು ನಿಧಾನವಾಗದೆಂದು ತಿಳಿಯಿತು. ಸುಮ್ಮನೆ ಮೊದಲು ಮಾಡಬೇಕಾದ ಕೆಲಸ ಯಾವುದೋ, ಅದನ್ನು ಬೇಗಬೇಗ ಮಾಡಿ ಮುಗಿಸಿದೆ" ಎಂದ ರಮೇಶ.

ತ್ರೈಲೋಕ್ಯ—ನಮಸ್ಕಾರ ಮಹಾಶಯ. ನಿಮ್ಮ ವಿಷಯದಲ್ಲಿ ನನಗೆ ಭಕ್ತಿಯುಂಟಾಗುತ್ತಿದೆ. ನನಗೂ ನಿವಗೂ ಬಹಳ ವ್ಯತ್ಯಾಸ. ನಾನು ಮೊದಲೇ ವಿಷಯ ತೀರ್ಮಾನಿಸುವೆ, ಬಳಿಕ ಹಡಗು ಹತ್ತುವೆ—ಕಾರಣ

ನಾನು ಅತಿ ಹೆದರಿಕೆಯ ಸ್ವಭಾವದವ. ನೀವು ಹೋಗಬೇಕೆಂದು ನಿಶ್ಚಯಿಸಿರುವಿರಿ, ಆದರೆ ಹೋಗುವುದೆಲ್ಲಿಗೆಂದು ನಿಶ್ಚಯಿಸಿಲ್ಲ. ಇದು ಸಾಧಾರಣ ಸಂಗತಿಯೇ ! ಕುಟುಂಬ ಜೊತೆಯಲ್ಲೇ ಇರುವುದೋ.

"ಹೌದು" ಎಂದು ಈ ಪ್ರಶ್ನೆಗೆ ಉತ್ತರ ಹೇಳಲು ರಮೇಶನಿಗೆ ಕ್ಷಣ ಕಾಲ ಹಿಡಿಯಿತು. ಅವನು ನೀರವವಾಗಿರುವುದನ್ನು ನೋಡಿ ಚಕ್ರವರ್ತಿ ಹೇಳಿದರು, "ನನ್ನನ್ನು ಕ್ಷಮಿಸಬೇಕು-ಸಂಸಾರ ಜೊತೆಯಲ್ಲೇ ಇದೆಯೆನ್ನುವುದು ನನಗೆ ಮೊದಲೇ ತಿಳಿದಿತ್ತು. ಸೊಸೆ ಆ ಕೊಠಡಿಯಲ್ಲಿ ಅಡುಗೆ ಮಾಡುತಿದ್ದಳು, ನಾನೂ ಹೊಟ್ಟೆಗಾಗಿ ಅಡುಗೆ ಮನೆ ಹುಡುಕುತ್ತ ಅಲ್ಲಿಗೆ ಹೋಗಿ ಸೇರಿದೆ. ಆಕೆಯೊಡನೆ, "ಅಮ್ಮಾ, ನನ್ನನ್ನು ನೋಡಿ ಸಂಕೋಚಗೊಳ್ಳಬೇಡ—ನಾನು ಪಶ್ಚಿಮ ಪ್ರಾಂತ್ಯದ ಏಕಮಾತ್ರ ಚಕ್ರವರ್ತಿ-ಚಿಕ್ಕಪ್ಪ". ಎಂದೆ. ಆಹಾ, ತಾಯಿ ಸಾಕ್ಷಾತ್ ಅನ್ನಪೂರ್ಣೆ. ನಾನು ಪುನಃ, "ಅಮ್ಮಾ, ಅಡುಗೆ ಮನೆ ಕಂಡುಹಿಡಿದಿರುವೆ, ಈಗ ಊಟದಿಂದ ವಂಚಿತ ನಾನರೆ ನಡೆಯದು, ನನಗೆ ಬೇರೆ ದಾರಿಯಿಲ್ಲ" ಎಂದು ಹೇಳಿದೆ ಆಕೆ ಸ್ವಲ್ಪ ಮಧುರವಾಗಿ ನಕ್ಕಳು, ಪ್ರಸನ್ನಳಾಗಿರುವಳೆಂದು ತಿಳಿದೆ, ಇನ್ನು ನನಗೆ ಈ ದಿನದ ಯೋಚನೆ ಇಲ್ಲ. ಪ್ರತಿಸಲವೂ ಪಂಚಾಂಗದಲ್ಲಿ ಒಳ್ಳೆಯ ಲಗ್ನ ನೋಡಿ ಹೊರಹೊರಡುವೆ, ಆದರೆ ಇಂಥ ಸೌಭಾಗ್ಯ ಎಂದೂ ಲಭಿಸಿರಲಿಲ್ಲ. ನೀವು ಕೆಲಸ ಮಾಡುತಿದ್ದಿರಿ, ನಿಮಗೆ ಹೆಚ್ಚು ತೊಂದರೆ ಕೊಡುವುದಿಲ್ಲ—ಅಪ್ಪಣೆಯಾದರೆ ಸೊಸೆಗೆ ಸ್ವಲ್ಪ ಸಹಾಯ ಮಾಡುವೆ. ನಾನು ಎದುರಿಗಿರುವಾಗ ಆಕೆ ಪದ್ಮಹಸ್ತದಲ್ಲಿ ಬೇಡಿ ಧರಿಸಿಕೊಳ್ಳಬೇಕೆ ? ಇಲ್ಲ ಇಲ್ಲ, ನೀವು ಬರೆಯಿರಿ-ನೀವು ಏಳಬೇಕಾಗಿಲ್ಲ—ನಾನು ಪರಿಚಯ ಮಾಡಿಕೊಂಡು ಹೋಗಲು ಬಂದೆ".

ಹೀಗೆ ಹೇಳಿ ಚಕ್ರವರ್ತಿ-ಚಿಕ್ಕಪ್ಪ ಅಪ್ಪಣೆ ತೆಗೆದುಕೊಂಡು ಅಡುಗೆ ಮನೆಯ ಕಡೆ ಹೋದರು. ಹೋಗಿ, "ಒಳ್ಳೆಯ ವಾಸನೆ ಬರುತ್ತಿದೆ—ವಾಸನೆಯಿಂದಲೇ ಅಡಿಗೆ ಏನೆಂದು ಅರಿಯಬಹುದು ಸರಿ, ಅಮ್ಮಾ, ನಾನು ಗೊಜ್ಜು ಮಾಡುವೆ—ಪಶ್ಚಿಮದ ಬಿಸಿಲಿನಲ್ಲಿ ಯಾರು ವಾಸಿಸಿಲ್ಲವೋ, ಅವರಿಗೆ ಸರಿಯಾಗಿ ಗೊಜ್ಜುಮಾಡಲು ಬರುವುದಿಲ್ಲ. ನೀನು ತಿಳಿದುಕೊಂಡಿರಬಹುದು—ಮುದುಕನೇನೋ ಹೇಳುತ್ತಾನೆ-ಹುಣಿಸೆ ಹಣ್ಣಿಲ್ಲ, ಗೊಜ್ಜು ಮಾಡುವುದು ಹೇಗೆ ? ಎಂದು. ಆದರೆ ನಾನಿರುವಾಗ ನೀನು

ಹುಣಿಸೆಹಣ್ಣಿಗಾಗಿ ಯೋಚಿಸಬೇಡ. ಧೈರ್ಯವಾಗಿರು, ನಾನು ಎಲ್ಲಾ ಸಂಗ್ರಹಿಸಿಕೊಂಡು ತರುವೆ" ಎಂದು ಹೇಳಿದರು.

ಹೀಗೆಂದು ಚಕ್ರವರ್ತಿಗಳು ಕಾಗದ ಸುತ್ತಿದ ಒಂದು ಪಾತ್ರೆಯಲ್ಲಿ 'ಕಾಸುಂದಿ*' ತಂದರು. "ನಾನು ಮಾಡುವ ಗೊಜ್ಜಿದೆಯಲ್ಲಾ, ಇವತ್ತಿಗೆ ಉಪಯೋಗಿಸಿ ಮಿಕ್ಕಿದ್ದನ್ನು ಮುಚ್ಚಿಡಬೇಕು. ರುಚಿ ಹಿಡಿಸಲು ಸರಿಯಾಗಿ ನಾಲ್ಕು ದಿನ ಬೇಕು. ಬಳಿಕ ಸ್ವಲ್ಪ ಬಾಯಿಗೆ ಹಾಕಿಕೊಂಡರೆ ತಿಳಿಯುವುದು, ಚಕ್ರವರ್ತಿ-ಚಿಕ್ಕಪ್ಪ ಅಧಿಕಾರ ಮಾಡಬಲ್ಲ, ಗೊಜ್ಜುಮಾಡಲೂ ಬಲ್ಲ ಎಂದು. ಹೋಗು ತಾಯಿ, ಇನ್ನು ಹೋಗು, ಕೈಕಾಲು ತೊಳೆದುಕೋ ಹೋಗು. ಬಹಳ ಹೊತ್ತಾಗಿದೆ. ಅಡುಗೆ ಯೇನಾದರೂ ಮಾಡುವದಿದ್ದರೆ ನಾನು ಮುಗಿಸುವೆ. ಸ್ವಲ್ಪವೂ ಸಂಕೋಚ ಬೇಡ-ನನಗೆ ಇದೆಲ್ಲ ಚೆನ್ನಾಗಿ ಅಭ್ಯಾಸವಿದೆ—ನನ್ನ ಹೆಂಡತಿಗೆ ಯಾವಾಗಲೂ ಕಾಯಿಲೆ—ಅವಳ ನಾಲಗೆಯ ಅರುಚಿ ಹೋಗಲಾಡಿಸಲು ಗೊಜ್ಜುಮಾಡಿ ನನ್ನ ಕೈ ಪಳಗಿಹೋಗಿದೆ. ಮುದುಕನ ಮಾತು ಕೇಳಿ ನಗುವೆಯಾ—ಹಾಸ್ಯ ಅಲ್ಲ ತಾಯಿ, ನಿಜವಾದ ಮಾತು" ಎಂದು ಹೇಳಿದರು.

ಕಮಲ ನಗುಮುಖದಿಂದ, "ನಾನು ನಿಮ್ಮ ಹತ್ತಿರ ಗೊಜ್ಜುಮಾಡಲು ಕಲಿಯಬೇಕು" ಎಂದಳು.

ಚಕ್ರವರ್ತಿ—ಅಪ್ಪಪ್ಪಾ! ವಿದ್ಯೆ ಇಷ್ಟು ಸುಲಭವಾಗಿ ಹೇಳಿ ಕೊಡುವುದೆ! ಒಂದೇ ದಿನದಲ್ಲಿ ಕಲಿಸಿ ವಿದ್ಯೆಯ ಶ್ರೇಷ್ಠತೆ ಹಾಳು ಮಾಡಿದರೆ, ವೀಣಾಪಾಣಿ ಅಪ್ರಸನ್ನಳಾಗುವಳು. ನಾಲ್ಕಾರು ದಿನ ಈ ಮುದುಕನ ಉಪಚಾರ ಮಾಡಬೇಕು. ನನ್ನನ್ನು ಸಂತೋಷಗೊಳಿಸುವುದು ಹೇಗೆ, ಎಂದು ತಿಳಿಯಲು ನೀನು ಯೋಚಿಸಬೇಕಾಗಿಲ್ಲ—ನಾನೇ ಎಲ್ಲವನ್ನೂ ವಿವರಿಸಿ ಹೇಳುವೆ. ಮೊದಲು-ನಾನು ಅತಿಯಾಗಿ ಎಲೆಯಡಿಕೆ ಹಾಕುವೆ, ಆದರೆ ಅಡಿಕೆ ಗೋಟಾಗಿದ್ದರೆ ಸಾಧ್ಯವಿಲ್ಲ. ನನ್ನನ್ನು ಆಕರ್ಷಿಸುವುದು ಸುಲಭವಾದ ಕೆಲಸವಲ್ಲ—ಆದರೆ ಆ ಹಾಸ್ಯ-ಮುಖದಿಂದಲೇ ಕೆಲಸ ಬಹಳಮಟ್ಟಿಗೆ ಮುಂದುವರಿದಿರುವುದು. ಲೋ, ನಿನ್ನ ಹೆಸರೇನೋ?"

---

* ಕಾಸುಂದಿ—ಎಣ್ಣೆ, ಸಾಸಿವೆಖಾರ, ಉಪ್ಪು, ಬೆಲ್ಲ ಮೊದಲಾದುವು ಸೇರಿಸಿ ಮಾಡಿದ ಹುಣಿಸೇಕಾಯಿ, ಅಥವಾ ಮಾವಿನಕಾಯಿ ಉಪ್ಪಿನಕಾಯಿ.

ಉಮೇಶ ಉತ್ತರ ಕೊಡಲಿಲ್ಲ. ಅವನು ಕೋಪಿಸಿಕೊಂಡಿದ್ದ—ಕಮಲೆಯ ಸ್ನೇಹರಾಜ್ಯದಲ್ಲಿ ಮುದುಕ ತನ್ನ ಪಾಲುಗಾರನಾಗಿ ಬಂದು ನಿಲ್ಲುತಿರುವನೆಂದು ಅವನು ಯೋಚಿಸುತಿದ್ದ. ಅವನು ಸುಮ್ಮನಿರುವುದನ್ನು ನೋಡಿ, " ಅವನ ಹೆಸರು ಉಮೇಶ " ಎಂದು ಕಮಲಹೇಳಿದಳು.

ಮುದಕರು, " ಈ ಹುಡುಗ ಬಹಳ ಒಳ್ಳೆಯವನು, ಒಂದೇಬಾರಿಗೆ ಇವನ ಮನಸ್ಸು ತಿಳಿಯುವುದು ಸಾಧ್ಯವಿಲ್ಲ, ಎನ್ನುವುದು ಸ್ಪಷ್ಟವಾಯಿತು, ಆದರೆ ನೋಡು ತಾಯಿ, ಇವನೊಡನೆ ನಾನು ಹೊಂದಿಕೊಳ್ಳುವೆ. ಇನ್ನು ತಡಮಾಡಬೇಡ, ನನ್ನ ಅಡುಗೆ ಮುಗಿಯಲು ಸ್ವಲ್ಪವೂ ನಿಧಾನವಾಗದು " ಎಂದರು.

ಕಮಲ ಯಾವುದೋ ಒಂದು ಶೂನ್ಯತೆ ಅನುಭವಿಸುತಿದ್ದಳು. ಮುದುಕನನ್ನು ಪಡೆದು ಅನು ಮರೆತುಹೋಯಿತು.

ಮುದುಕನ ಆಗಮನದಿಂದ ರಮೇಶನೂ ಸದ್ಯದ ಮಟ್ಟಿಗೆ ಸ್ವಲ್ಪ ನಿಶ್ಚಿಂತನಾದ. ಮೊದಲು ಕೆಲವು ತಿಂಗಳು ರಮೇಶನು ಕಮಲೆಯನ್ನು ತನ್ನ ಹೆಂಡತಿಯೆಂದೇ ತಿಳಿದಿದ್ದನಲ್ಲ, ಆಗಿನ ಅವನ ಆಚರಣೆ, ಆಗಿನ ಪರಸ್ಪರ ತಡೆಯಿಲ್ಲದ ಸಾಮೀಪ್ಯತೆ ಈಗ ಇಷ್ಟು ದೂರವಾಗಿರುವುದು, ಈ ಆಕಸ್ಮಿಕ ಪ್ರಭೇದ ಹುಡುಗಿಯ ಮನವನ್ನು ನೋಯಿಸದಿರಲಿಲ್ಲ. ಇಂಥ ವೇಳೆಯಲ್ಲಿ ಈ ಚಕ್ರವರ್ತಿ ಬಂದು ರಮೇಶನ ಪರವಾಗಿ ಕಮಲೆಯ ಚಿಂತೆಯನ್ನು ಸ್ವಲ್ಪ ಮಟ್ಟಿಗೆ ಕಡಿಮೆಮಾಡುವುದಾದರೆ, ರಮೇಶ ತನ್ನ ಮನೋವೇದನೆಯ ಕಡೆಗೆ ಸಂಪೂರ್ಣ ಗಮನ ಕೊಡಬಹುದು.

ಕಮಲ ಸಮೀಪದಲ್ಲೇ ತನ್ನ ಕೊಠಡಿಯ ಬಾಗಿಲ ಬಳಿ ಬಂದು ನಿಂತಳು. ಕೆಲಸವಿಲ್ಲದ ದೀರ್ಘಮಧ್ಯಾಹ್ನದಲ್ಲಿ ಚಕ್ರವರ್ತಿ ಏಕಾಕಿಯಾಗಿ ಕುಳಿತಿರಲಿ ಎಂದು ಅವಳ ಮನೋಭಿಲಾಷೆ. ಚಕ್ರವರ್ತಿ ಅವಳನ್ನು ನೋಡಿ, " ಊಹೂಂ ತಾಯಿ, ಇದು ಚೆನ್ನಾಗಿರದು, ಇದು ಎಂದಿಗೂ ಸಾಧ್ಯವಿಲ್ಲ " ಎಂದರು.

ಯಾವುದು ಚೆನ್ನಾಗಿಲ್ಲ, ಎಂದು ತಿಳಿಯದೆ ಕಮಲ ಆಶ್ಚರ್ಯ ಹಾಗೂ ಕಳವಳಗೊಂಡಳು. ಮುದುಕರು ಹೇಳಿದರು, " ಇದೋ ಈ ಎಕ್ಕಡ, ರಮೇಶ ಬಾಬು, ಇದಕ್ಕೆ ನೀವು ಕಾರಣ. ಏನೇ ಹೇಳಿ, ನೀವು ಅನ್ಯಾಯ ಮಾಡುತ್ತಿರುವಿರಿ—ದೇಶದ ಮಣ್ಣು ತುಳಿಯುವುದನ್ನು ಇವು ತಪ್ಪಿಸುವುವಲ್ಲವೆ.

ಅವರಿಂದಲೇ ದೇಶ ಮಣ್ಣಾಗಿ ಹೋಯಿತು ರಾಮಚಂದ್ರ ಸೀತೆಗೆ ಡಾಸನ್ನಿನ* ಬೂಟ್ಸ್ ಹಾಕಿಸಿದ್ದರೆ, ಲಕ್ಷ್ಮಣ ಹದಿನಾಲ್ಕು ವರ್ಷ ಕಾಡಿನಲ್ಲಿ ಅಲೆದಾಡುತಿದ್ದನೆಂದು ಎಣಿಸಿರುವರಲ್ಲವೆ. ಎಂದಿಗೂ ಇಲ್ಲ. ನನ್ನ ಮಾತು ಕೇಳಿ ರಮೇಶಬಾಬು ನಗುವರು—ಮನಸಿನಲ್ಲಿ ಸಮ್ಮತಿಸುತ್ತಲೂ ಇಲ್ಲ! ಮಾತು ಒಪ್ಪುವಂಥದ್ದಲ್ಲ. ನೀವು ಹಡಗಿನ ಸಿಳ್ಳು ಕೇಳಿಯೇ ತಡಮಾಡಲಾರದಾದಿರಿ, ಒಮ್ಮೆಗೇ ಏರಿಕುಳಿತಿರಿ, ಆದರೆ ಎಲ್ಲಿಗೆ ಹೋಗುವುದು, ಎಂದು ಒಮ್ಮೆಯೂ ಯೋಚಿಸಲಿಲ್ಲ".

ರಮೇಶ, "ಚಿಕ್ಕಪ್ಪ, ನಾವು ಹೋಗಬೇಕಾದ ಸ್ಥಳ ನೀವೇ ನಿಶ್ಚಯಿಸಬಹುದಲ್ಲ ಹಡಗಿನ ಸಿಳ್ಳಿಗಿಂತ ನಿಮ್ಮ ಮಾತು ನಿಶ್ಚಯವಾಗುವುದು" ಎಂದು ಹೇಳಿದ.

"ನೋಡಿದಿರಾ, ನಿಮ್ಮ ಯೋಚನಾಶಕ್ತಿ ಇಷ್ಟರಲ್ಲೇ ಅಭಿವೃದ್ಧಿಗೊಂಡಿರಬಹುದು—ಅದೂ ಸ್ವಲ್ಪ ಹೊತ್ತಿನ ಪರಿಚಯ. ಆಗರೆ ಬನ್ನಿ—ಗಾಜೀಪುರಕ್ಕೆ ಬರುವೆಯಾ ತಾಯಿ? ಅಲ್ಲಿ ಗುಲಾಬಿ ತೋಟ ಇದೆ, ಮತ್ತ ಅಲ್ಲೇ ನಿಮ್ಮ ಈ ವೃದ್ಧ ಭಕ್ತ ಇರುವುದು" ಎಂದು ಚಕ್ರವರ್ತಿಗಳು ಹೇಳಿದರು.

ರಮೇಶನೂ ಕಮಲೆಯ ಮುಖ ನೋಡಿದ. ಕಮಲ ಕೂಡಲೇ ಮೈ ಅಲ್ಲಾಡಿಸುತ್ತ ಸಮ್ಮತಿ ಸೂಚಿಸಿದಳು.

ಇದಾದನಂತರ ಉಮೇಶ ಮತ್ತು ಚಕ್ರವರ್ತಿ ಕಲಿತು ಲಜ್ಜಿತ ಕಮಲೆಯ ಕೊಠಡಿಯಲ್ಲಿ ಸಭೆ ಸೇರಿದರು ರಮೇಶ ಒಂದು ನಿಟ್ಟುಸಿರು ಬಿಟ್ಟು ಹೊರಗಡೆಯೇ ನಿಂತುಕೊಂಡ. ಮಧ್ಯಾಹ್ನದಲ್ಲಿ ಹಡಗು ಥಕ್‌ಥಕ್ ಎಂದು ಹೋಗುತಿತ್ತು. ಒಂದೆಡೆ ಭತ್ತದ ಗದ್ದೆ, ಮತ್ತೊಂದೆಡೆ ನೌಕೆ ನಿಲ್ಲಿಸುವ ಘಟ್ಟ, ಇನ್ನೊಂದೆಡೆ ಮರಳು ತೀರ, ಇದೊಂದೆಡೆ ಹಳ್ಳಿಯ ಹುಲ್ಲುಗಾವಲು ಮಗದೊಂದೆಡೆ ಸಂತೆಸಾಳದ ಟಿನ್ನಿನ ಛಾವಣಿ, ಒಂದೆಡೆ ಹಳೆಯ ಅಶ್ವತ್ಥ ವೃಕ್ಷದ ಕೆಳಗೆ ದೋಣಿಗಾಗಿ ಕಾದಿದ್ದ ನಾಲ್ಕಾರು ಮಂದಿ ನದಿ ದಾಟುವ ಪ್ರಯಾಣಿಕರು—ಈ ಶರತ್ಕಾಲದ ಮಧ್ಯಾಹ್ನದ ಸುಮಧುರ ಸ್ತಬ್ಧತೆಯ ನಡುವೆ ಬಳಿಯ ಕೊಠಡಿಯಿಂದ ಕ್ಷಣಕ್ಷಣಕ್ಕೂ ಕಮಲೆಯ ಸ್ನೇಹಪೂರ್ಣ

*ಡಾಸನ್--ಕಲ್ಕತ್ತೆಯಲ್ಲಿದ್ದ ವಿಖ್ಯಾತ ಬೂಟ್ಸ್ ಅಂಗಡಿಯ ಆಂಗ್ಲ ಒಡೆಯ.

ನಗು ರಮೇಶನ ಕಿವಿ ಮುಟ್ಟುತಿದ್ದಾಗ, ಆತನ ಹೃದಯ ಬಡಿದುಕೊಳ್ಳ ತೊಡಗಿತು. ಎಲ್ಲವೂ ಅದೆಷ್ಟು ಸುಂದರ, ಆದರೂ ರಮೇಶನ ದುಃಖ ಜೀವನದೊಡನೆ ಎಂಥ ನಿರ್ದಾಕ್ಷಿಣ್ಯ ಪೆಟ್ಟನೊಂದಿಗೆ ವಿಚ್ಛೇದ.

## ೨೯

ಕಮಲೆಗೆ ಇನ್ನೂ ಸಣ್ಣವಯಸ್ಸು—ಸಂಶಯವಾಗಲಿ, ಆಶಂಕೆ ಅಥವಾ ವೇದನೆಯಾಗಲಿ ಶಾಶ್ವತವಾಗಿ ಅವಳ ಮನದಲ್ಲಿ ಗಟ್ಟಿಯಾಗಿ ನಿಲ್ಲದು.

ಈ ಕೆಲವು ದಿನಗಳು ಅವಳಿಗೆ ರಮೇಶನ ನಡವಳಿಕೆಯ ವಿಷಯವಾಗಿ ಯೋಚಿಸಲು ಅವಕಾಶವೇ ದೊರೆಯಲಿಲ್ಲ. ಎಲ್ಲಿ ಪ್ರವಾಹಕ್ಕೆ ಅಡ್ಡಿ ಬರುವುದೋ ಅಲ್ಲಿ ಕಸಕಡ್ಡಿ ಸೇರುವುದು—ಕಮಲೆಯ ಮಾನಸಿಕ ನದಿಯ ಸಹಜ ಪ್ರವಾಹ ರಮೇಶನ ಆಚರಣೆಯಿಂದ ಒಮ್ಮೆಗೇ ಒಂದೆಡೆಯಲ್ಲಿ ಅಡ್ಡಿ ಪಡೆಯಿತು. ಅಲ್ಲಿಯೇ ಸುಳಿರಚಿತವಾಗಿ ನಾನಾ ಸಂಗತಿಗಳು ಒಂದೇ ಸ್ಥಳದಲ್ಲಿ ಬಾರಿ ಬಾರಿಗೂ ಸುತ್ತಿಬರುತಿತ್ತು. ಮುಮುಕ ಚಕ್ರವರ್ತಿಯೊಡನೆ ನಕ್ಕು, ಹರಟೆ ಹೊಡೆದು, ಅಡುಗೆ ಮಾಡಿ, ಊಟಮಾಡಿ ಕಮಲೆಯ ಹೃದಯ ಪ್ರವಾಹ ಎಲ್ಲ ತಡೆಯನ್ನೂ ದಾಟಿಕೊಂಡು ಹರಿಯತೊಡಗಿತು—ಸುಳಿ ಕತ್ತರಿಸಿ ಹೋಯಿತು, ಏನೇನು ಸಂಗ್ರಹವಾಗುತಿತ್ತೋ ಮತ್ತು ಸುತ್ತಿ ಬರುತಿತ್ತೊ, ಅವೆಲ್ಲ ತೇಲಿಹೋಯಿತು. ಆಗ ಅವಳು ತನ್ನ ವಿಷಯ ಯೋಚಿಸಲಿಲ್ಲ.

ಆಶ್ವಯುಜದ ಸುಂದರ ದಿನಗಳು ನದೀಮಾರ್ಗದ ವಿಚಿತ್ರ ನೋಟವನ್ನು ರಮಣೀಯವನ್ನಾಗಿ ಮಾಡಿ ಅವುಗಳ ನಡುವೆ ಕಮಲೆಯ ಆ ಪ್ರತಿದಿನದ ಆನಂದಿತ ಗೃಹಿಣೀತ್ವವನ್ನು ಹೊನ್ನೀರ ಪ್ರತಿಚ್ಛಾಯೆಯ ಮಧ್ಯೆ ಒಂದೊಂದೇ ಸರಳ ಕವಿತೆಯ ಪುಟಗಳಂತೆ ತಿರುವಿಹಾಕಲಾರಂಭಿಸಿದುವು.

ಕೆಲಸದ ಉತ್ಸಾಹದಿಂದ ದಿನ ಆರಂಭವಾಗುವುದು. ಇತ್ತೀಚೆಗೆ ಉಮೇಶ ಸ್ಟೀಮರ್‌ಗೆ ಹೊತ್ತುಮೀರುತ್ತಿರಲಿಲ್ಲ—ಆದರೂ ಅವನ ಕುಕ್ಕೆ ತುಂಬಿರುತಿತ್ತು. ಕ್ಷುದ್ರ ಮನೆಗೆಲಸದ ನಡುವೆ ಬೆಳಗಿನ ಹೊತ್ತು ಉಮೇಶನ ಆ ಕುಕ್ಕೆ ಅತಿ ಆಶ್ಚರ್ಯಕರ ಸಂಗತಿ, “ಲೋ, ಇದೇನೋ, ಈ ಸೋರೇಕಾಯಿ, ಅಮ್ಮಮ್ಮಾ, ನುಗ್ಗೇಕಾಯಿ, ನೀನೆಲ್ಲಿಂದ ತಂದೆ? ಇದೋ ಇಲ್ಲಿ

ನೋಡಿ ಚಿಕ್ಕಪ್ಪ, ಈ ಚಿಕ್ಕೇಸೊಪ್ಪು. ಈ ಖೊಟ್ಟಾಗಳ* ಸೀಮೆಯಲ್ಲೂ ಸಿಕ್ಕುವುದೆಂಬ ಈ ವಿಷಯ ನನಗೆ ತಿಳಿದೇ ಇರಲಿಲ್ಲ".

ಪ್ರತಿ ದಿನ ಬೆಳಗ್ಗೆ ಬುಟ್ಟಿ ಇಟ್ಟುಕೊಂಡು ಈರೀತಿ ಕಲರವ ಏಳುತಿತ್ತು. ರಮೇಶ ಇದ್ದ ದಿನ, ಇದರ ನಡುವೆ ಒಂದು ವಿಶೇಷ ಧ್ವನಿ ಸೇರುವುದು ಅವನು ಕಳ್ಳತನ ಊಹಿಸದೆ ಇರುತ್ತಿರಲಿಲ್ಲ. ಕಮಲ ಉದ್ವೇಗದಿಂದ, "ಸರಿ, ನಾನು ನನ್ನ ಕೈಯಿಂದ ಅವನಿಗೆ ದುಡ್ಡು ಕೊಟ್ಟು ತರಿಸಿರುವೆ" ಎಂದು ಹೇಳುವಳು.

ರಮೇಶ, "ಅದರಿಂದ ಅವನು ಕದಿಯಲು ಮತ್ತಷ್ಟು ಅನುಕೂಲವಾಗುವುದು, ದುಡ್ಡನ್ನೂ ಕದಿಯಬಹುದು, ತರಕಾರಿಯನ್ನೂ ಕದಿಯಬಹುದು" ಎಂದು ಹೇಳುವನು.

ಹೀಗೆ ಹೇಳಿ ರಮೇಶ ಉಮೇಶನನ್ನು ಕರೆದು ಕೇಳುವನು, "ಸರಿ, ಲೆಕ್ಕ ಹೇಳು ನೋಡೋಣ".

ಇದರಿಂದ ಅವನ ಒಂದು ಸಲದ ಲೆಕ್ಕಾಚಾರದೊಡನೆ ಮತ್ತೊಂದು ಬಾರಿಯ ಲೆಕ್ಕಾಚಾರ ಹೊಂದುತ್ತಿರಲಿಲ್ಲ. ಸರಿಪಡಿಸಲೆತ್ನಿಸಿದರೆ ಉಳಿತಾಯಕ್ಕಿಂತ ವೆಚ್ಚದ ಸಂಖ್ಯೆಯೇ ಹೆಚ್ಚಾಗುವುದು. ಉಮೇಶ ಇದರಿಂದ ಸ್ವಲ್ಪವೂ ಆಧೈರ್ಯಗೊಳ್ಳುತಿರಲಿಲ್ಲ. "ನಾನು ಲೆಕ್ಕ ಇಡಲು ಕಲಿತಿದ್ದರೆ, ನನ್ನ ಗತಿ ಹೀಗಾಗುವುದೇ? ನಾನು ಗುಮಾಸ್ತೆ ಆಗುತಿದ್ದೆ ಏನು ಹೇಳಿ ಅಜ್ಜಯ್ಯ" ಎಂದು ಕೇಳುವನು.

ಚಕ್ರವರ್ತಿಗಳು, "ರಮೇಶಬಾಬು, ಊಟ ಮುಗಿದ ಮೇಲೆ ನೀವು ಅವನ ವಿಚಾರಣೆ ನಡೆಸಿ, ಹಾಗಾದರೆ ಸರಿಯಾಗಿ ವಿಚಾರಿಸಬಹುದು—ನಾನು ಮೊದಲಿಂದಲೂ ಈ ಪೋರನಿಗೆ ಎಚ್ಚರಿಕೆ ಹೇಳದೆ ಇರುತ್ತಿರಲಿಲ್ಲ. ಉಮೇಶ, ಅಪ್ಪಾ, ಕೂಡಿಡುವ ವಿದ್ಯೆ ಸಾಧಾರಣ ವಿದ್ಯೆಯಲ್ಲ—ಕೆಲವರಿಗೇ ಸಾಧ್ಯ. ಎಲ್ಲರೂ ಪ್ರಯತ್ನಿಸುವರು—ಕೃತಕಾರ್ಯರಾಗುವುದು ಎಷ್ಟು ಜನ? ರಮೇಶ ಬಾಬು, ಗುಣಿಗಳನ್ನು ಗೌರವಿಸಲು ನಾನು ಬಲ್ಲೆ. ಇದು ತರಕಾರಿ ತರುವ ಹೊತ್ತಲ್ಲ, ಅದೂ ಇಷ್ಟು ಮುಂಜಾನೆಯೇ ವಿದೇಶದಲ್ಲಿ ಅದೆಷ್ಟು ಮಂದಿ ಹುಡುಗರು ತರಕಾರಿ ಸಂಗ್ರಹಿಸಿ ತಂದಾರು ಹೇಳಿ ನೋಡೋಣ, ಮಹಾ

* ಖೊಟ್ಟಾ—ಯುಕ್ತಪ್ರಾಂತ್ಯ, ದೆಹಲಿ ಆದಿಭಾಗದವರನ್ನು ಬಂಗಾಳಿಗಳು 'ಖೊಟ್ಟಾ' ಎಂದು ಕರೆಯುವುದುಂಟು.

ಶಯರೇ, ಎಲ್ಲರೂ ಸಂದೇಹಪಡಬಹುದು—ಆವರೆ ಸಂಗ್ರಹಿಸುವುದು ಸಾವಿರ ದಲ್ಲಿ ಒಬ್ಬರಿಗೇ ಸಾಧ್ಯ.

ರಮೇಶ—ಚಿಕ್ಕಪ್ಪ, ಇದು ಚೆನ್ನಾಗಿರದು, ಪ್ರೋತ್ಸಾಹಕೊಟ್ಟು ತಪ್ಪು ಮಾಡುತ್ತಿರುವಿರಿ.

ಚಕ್ರವರ್ತಿ—ಹುಡುಗನಿಗೆ ಹೆಚ್ಚು ತಿಳುವಳಿಕೆ ಇಲ್ಲ, ಇರುವಷ್ಟೂ, ಪ್ರೋತ್ಸಾಹದ ಅಭಾವದಿಂದ ನಷ್ಟವಾದರೆ ಬಹಳ ಆಕ್ಷೇಪಣೆಯ ಸಂಗತಿಯಾಗು ವುದು—ಏನೇ ಆಗಲಿ ಕೆಲವು ದಿನಗಳು ನಮ್ಮ ಸ್ಟೀಮರಿನಲ್ಲೇ ಇರುವವನು. ಲೋ ಉಮೇಶ, ನಾಳೆ ಸ್ವಲ್ಪ ಬೇವಿನ ಎಲೆ ತೆಗೆದುಕೊಂಡು ಬಾ—ಹಾಗಲ ಕಾಯೇನಾದರೂ ಸಿಕ್ಕಿದರೆ ಉತ್ತಮವೇ ಆಯಿತು. ಅಮ್ಮಾ, ಒಣ ಶುಂಠಿ ಅಗತ್ಯವಾಗಿ ಬೇಕು. ನಮ್ಮ ಆಯುರ್ವೇದದಲ್ಲಿ ಹೇಳಿದೆ—ಇರಲಿ, ಆಯು ರ್ವೇದದ ಮಾತಿರಲಿ, ಬಹಳ ಹೊತ್ತಾಗಿರುವುದು, ಉಮೇಶ, ಕಾಯಿಪಲ್ಯ ಚೆನ್ನಾಗಿ ತೊಳೆದುಕೊಂಡು ಬಾ.

ರಮೇಶ ಈ ರೀತಿ ಉಮೇಶನ ಮೇಲೆ ಸಂದೇಹಗೊಂಡಷ್ಟೂ, ಬೇಸರ ಪಟ್ಟಷ್ಟೂ, ಉಮೇಶ ಕಮಲೆಯ ಮೆಚ್ಚುಗೆಗೆ ಪಾತ್ರನಾಗುತಿದ್ದ. ಈ ನಡುವೆ ಚಕ್ರವರ್ತಿ ಅವನ ಪಕ್ಷ ವಹಿಸುತ್ತಿದ್ದುದರಿಂದ ರಮೇಶನೊಡನೆ ಕಮಲೆಯ ಸಖ್ಯ ಮತ್ತಷ್ಟು ಸ್ವತಂತ್ರವಾಗುತ್ತ ಬಂತು. ಒಂದು ಕಡೆ ಸೂಕ್ಷ್ಮ ವಿಚಾರಶಕ್ತಿ ಯುಳ್ಳ ರಮೇಶ ಹಾಗೂ ಚಕ್ರವರ್ತಿ, ಅವರ ಕರ್ಮಸೂತ್ರದಲ್ಲಿ, ಸ್ನೇಹಸೂತ್ರ ದಲ್ಲಿ, ಸುಖ-ಸಂತೋಷದಲ್ಲಿ ಅತಿ ಸಾಮಿಪ್ಯತೆಯಿಂದ ಬಂದು. ಚಕ್ರವರ್ತಿ ಬಂದಂದಿನಿಂದ ಅವರ ಉತ್ಸಾಹ ಸಂಪರ್ಕಬಲದಿಂದ ರಮೇಶ ಕಮಲೆಯನ್ನು ಮೊದಲಿಗಿಂತಲೂ ಉತ್ಸಾಹಹೊಸನೆ ನೋಡುತಿದ್ದ. ಆದರೂ ಅವರ ಗುಂಪಿಗೆ ಸೇರಲಾರದಾದ. ದೊಡ್ಡ ಹಡಗು ತೀರದಲ್ಲಿ ನಿಲ್ಲಬೇಕಾದರೆ, ನೀರು ಕಡಿಮೆ ಯೆಂದು ಅದನ್ನು ಲಂಗರ್ ಬಿಡಿಸಿ ದೂರದಲ್ಲೇ ನಿಲ್ಲಿಸಬೇಕಾಗುವುದು, ಇತ್ತ ಸಣ್ಣಸಣ್ಣ ದೋಣಿ-ಪಾನ್ಸಿಗಳು ಸುಲಭವಾಗಿ ತೀರಕ್ಕೆ ಬಂದು ನಿಲ್ಲುವುವು, ರಮೇಶನ ಸ್ಥಿತಿ ಈ ರೀತಿಯಾಯಿತು.

ಹುಣ್ಣಿಮೆಯ ಹತ್ತಿರಹತ್ತಿರ ಒಂದು ದಿನ ಬೆಳಗ್ಗೆ ಎದ್ದು ನೋಡಿದಾಗ, ಗುಂಪು ಗುಂಪು ಕರಿಯ ಮೋಡಗಳು ಸಂಗಡಸಂಗಡವಾಗಿ ಆಕಾಶವನ್ನು ತುಂಬಿಕೊಂಡಿತ್ತು. ತಡೆಬಡೆ ಇಲ್ಲದೆ ಗಾಳಿ ಬೀಸುತಿತ್ತು. ಒಮ್ಮೊಮ್ಮೆ ನಿಂತು ಬಿಸಿಲಿನ ಪ್ರಕಾಶವೂ ಕಾಣುತಿತ್ತು ನಡುಗಂಗೆಯಲ್ಲಿ ಇಂದು ಬೇರೆ

ದೋಣಿ ಇಲ್ಲ, ಕಣ್ಣಿಗೆ ಬೀಳುತಿದ್ದ ಒಂದೆರಡರ ದುಃಸ್ಥಿತಿ ಸ್ಪಷ್ಟವಾಗಿ ತಿಳಿಯು ತಿತ್ತು. ನೀರು ಒಯ್ಯಲು ಬರುತ್ತಿದ್ದ ಹೆಂಗಸರು ಇಂದು ಇನ್ನು ಹೆಚ್ಚು ವಿಳಂಬ ಮಾಡುತ್ತಿರಲಿಲ್ಲ. ನೀರ ಮೇಲೆ ಮೇಘದಿಂದ ಜಾರಿದ ಒಂದು ಭಯಂಕರ ಬೆಳಕು ಹರಡಿಕೊಂಡಿತ್ತು ಮತ್ತು ಕ್ಷಣಕ್ಷಣಕ್ಕೂ ನದಿ-ನೀರು ಒಂದು ತೀರ ದಿಂದ ಮತ್ತೊಂದು ತೀರದವರೆಗೆ ಅಲ್ಲೋಲ ಕಲ್ಲೋಲವಾಗುತಿತ್ತು.

ಪದ್ಧತಿಯಂತೆ ಸ್ಟೀಮರ್ ಹೋಗುತಿತ್ತು. ಮೋಡ ಕವಿದ ನಾನಾ ತೊಂದರೆಗಳ ನಡುವೆ ಹೇಗೆಹೇಗೋ ಕಮಲೆಯು ಅಡುಗೆ ಕೆಲಸ ಮುಂದು ವರಿಸುತಿತ್ತು. ಚಕ್ರವರ್ತಿ ಆಕಾಶದ ಕಡೆ ನೋಡುತ್ತ ಹೇಳಿದರು, "ಅಮ್ಮಾ, ಹೊತ್ತಾದರೆ ಅಡುಗೆ ಮಾಡಲಾಗುವುದಿಲ್ಲ, ಈಗಲೇ ಮಾಡಿಬಿಡ ಬೇಕು. ನೀನು ಖಿಚಡಿ ಮಾಡು, ಅಷ್ಟರಲ್ಲಿ ನಾನು ರೊಟ್ಟಿಮಾಡುವೆ".

ಊಟ-ತಿಂಡಿ ಮುಗಿಯಲು ಇಂದು ಬಹಳ ಹೊತ್ತಾಯಿತು. ಕ್ರಮ ವಾಗಿ ಪ್ರಬಲ ಗಾಳಿಯ ವೇಗ ಹೆಚ್ಚಾಯಿತು. ನದಿ ನೊರೆನೊರೆಯಾಗಿ ಅಲೆಯೇಳತೊಡಗಿತು. ಸೂರ್ಯ ಮುಳುಗಿದನೋ ಇಲ್ಲವೋ ತಿಳಿಯಲಾಗ ಲಿಲ್ಲ. ಹೊತ್ತಿಗೆಮುಂಚೆಯೇ ಸ್ಟೀಮರ್ ಲಂಗರ್ ಬಿಟ್ಟಿತು.

ಸಂಜೆ ಕಳೆಯಿತು. ಛಿದ್ರಛಿದ್ರವಾಗಿದ್ದ ಮೇಘದೊಳಗಿಂದ ಸನ್ನಿ ಬಂದವರ ಬೆಳ್ನಗೆಯಂತೆ ಒಮ್ಮೆ ಬೆಳುದಿಂಗಳ ಪ್ರಕಾಶ ಹೊರಬೀಳಲಾರಂಭಿ ಸಿತು. ಚಂಡಮಾರುತವೂ ಧಾರಾಕಾರವಾದ ಮಳೆಯೂ ಪ್ರಾರಂಭಿಸಿತು.

ಕಮಲ ಒಮ್ಮೆ ನೀರಿನಲ್ಲಿ ಮುಳುಗಿದವಳು—ಬಿರುಗಾಳಿಯ ವೇಗವನ್ನು ಸಹಿಸಲಾರದಾದಳು. ರಮೇಶ ಬಂದು ಅವಳಿಗೆ, "ಸ್ಟೀಮರ್‌ನಲ್ಲಿ ಯಾವ ಭಯವೂ ಇಲ್ಲ. ನೀನು ನಿಶ್ಚಿಂತಳಾಗಿ ನಿದ್ದೆಮಾಡು. ನಾನು ಪಕ್ಕದ ಕೊಠಡಿಯಲ್ಲೇ ಎಚ್ಚರವಾಗಿರುವೆ" ಎಂದು ಧೈರ್ಯ ಹೇಳಿದ.

ಬಾಗಿಲ ಬಳಿ ಬಂದು ಚಕ್ರವರ್ತಿಗಳು, "ಅಮ್ಮಾ, ಹೆದರಬೇಡ ನಿನ್ನನ್ನು ಮುಟ್ಟಲು ಬಿರುಗಾಳಿಯ ಅಪ್ಪನಿಗೆ ಸಾಧ್ಯವೇನು ?" ಎಂದರು.

ಬಿರುಗಾಳಿಯ ಅಪ್ಪನಿಗೆ ಸಾಧ್ಯವಾಗಲು ಎಷ್ಟುಹೊತ್ತು ಎಂದು ಹೇಳು ವುದುಕಷ್ಟ, ಆದರೆ ಬಿರುಗಾಳಿಗೆ ಯಾವುದು ಸಾಧ್ಯ, ಎನ್ನುವುದು ಕಮಲೆಗೆ ತಿಳಿಯದುದಲ್ಲ—ಅವಳು ಅವಸರ ಅವಸರವಾಗಿ ಬಾಗಿಲ ಬಳಿಗೆ ಬಂದು ಕಳ ವಳದಿಂದ, "ಚಿಕ್ಕಪ್ಪ, ನೀವು ಒಳಕ್ಕೆ ಬಂದು ಕುಳಿತುಕೊಳ್ಳಿ" ಎಂದಳು.

ಚಕ್ರವರ್ತಿ ಸಂಕೋಚದಿಂದ ಹೇಳಿದರು, "ನೀನು ಮಲಗುವ ಹೊತ್ತಾಯಿತಲ್ಲ ತಾಯಿ, ಈಗ ನಾನು . . . ''

ಕೋಣೆಯೊಳಗೆ ಇಣಿಕಿ ನೋಡಿದರು, ಅಲ್ಲಿ ರಮೇಶ ಇಲ್ಲ—ಆಶ್ಚರ್ಯ ಗೊಂಡು ಹೇಳಿದರು, "ರಮೇಶ ಬಾಬು, ಈ ಮಳೆಗಾಳಿಯಲ್ಲಿ ಎಲ್ಲಿಗೆ ಹೋದರು ? ಅವರಿಗೆ ತರಕಾರಿ ಕದಿಯುವ ಅಭ್ಯಾಸವಿಲ್ಲವಲ್ಲ".

"ಯಾರು, ಚಿಕ್ಕಪ್ಪ ಅಲ್ಲವೇ ? ಇದೋ ನಾನು ಪಕ್ಕದ ಕೊಠಡಿ ಯಲ್ಲೇ ಇರುವೆ".

ಚಕ್ರವರ್ತಿಗಳು ಪಕ್ಕದ ಕೊಠಡಿ ಇಣಿಕಿ ನೋಡಿದರು, ರಮೇಶ ಹಾಸಿಗೆಯಲ್ಲಿ ಅರ್ಧಂಬರ್ಧ ಮಲಗಿ ದೀಪ ಹಚ್ಚಿಕೊಂಡು ಪುಸ್ತಕ ಓದುತ್ತಿದ್ದ.

"ಸೊಸೆ ಒಂಟಿಯಾಗಿ ಭಯಪಡುತ್ತಿರುವಳು. ನಿಮ್ಮ ಪುಸ್ತಕ ಮಳೆ ಗಾಳಿಯನ್ನು ಹೆದರಿಸಲಾರದು. ಅದನ್ನು ಈಗ ಇಟ್ಟರೂ ಅನ್ಯಾಯವಾಗದು. ಈ ಕೊಠಡಿಗೆ ಬನ್ನಿ" ಎಂದರು ಚಕ್ರವರ್ತಿಗಳು

ಕಮಲ ಅಡಗಿಸಲಾರದ ಒಂದು ಆವೇಶದಿಂದ ತನ್ನನ್ನೇ ಮರೆತು ಕೂಡಲೇ ಚಕ್ರವರ್ತಿಯ ಕೈ ಗಟ್ಟಿಯಾಗಿ ಹಿಡಿದುಕೊಂಡು ಬಿಗಿದ ಕಂಠದಿಂದ ಹೇಳಿದಳು, "ಬೇಡ, ಬೇಡ ಚಿಕ್ಕಪ್ಪ, ಬೇಡ, ಬೇಡ" ಮಳೆಗಾಳಿಯ ಕಲ್ಲೋಲದಲ್ಲಿ ಕಮಲೆಯ ಈ ಮಾತು ರಮೇಶನ ಕಿವಿಗೆ ಬೀಳಲಿಲ್ಲ, ಆದರೆ ಚಕ್ರವರ್ತಿ ವಿಸ್ಮಯದೊಡದೆ ಹಿಂದಿರುಗಿ ಬಂದರು.

ರಮೇಶ ಪುಸ್ತಕ ಇಟ್ಟು ಈ ಕೊಠಡಿಗೆ ಬಂದ. "ಏನು ಚಕ್ರವರ್ತಿ-ಚಿಕ್ಕಪ್ಪ, ಸಂಗತಿಯೇನು ? ಒಂದುವೇಳೆ ಕಮಲ ನಿಮ್ಮನ್ನು . . ." ಎಂದು ಕೇಳಿದ.

ಕಮಲ ಯಾವ ಕಾರಣದಿಂದ, "ಬೇಡ ಬೇಡ" ಎಂದಳೆಂದು ಅವಳನ್ನು ಪ್ರಶ್ನಿಸಿದರೆ ಅವಳು ಹೇಳಲಾರಳು ಈ "ಬೇಡ''ದ ಅರ್ಥ ಹೀಗೆ,—ನನ್ನ ಭಯ ಹೋಗಲಾಡಿಸಬೇಕಾಗುವುದು ಎಂದಾಗಬಹುದು— ಬೇಡ, ಬೇಕಾಗಿಲ್ಲ ! ನನ್ನನ್ನು ಜೊತೆಯಲ್ಲಿಟ್ಟುಕೊಳ್ಳಬೇಕಾದುದು ಅಗತ್ಯ ಎಂದು ತಿಳಿಯಬಹುದು—ಬೇಡ, ಅಗತ್ಯವಿಲ್ಲ ಎಂದೂ ಆದೀತು.

ಮರುಕ್ಷಣವಲ್ಲೇ ಕಮಲ, "ಚಿಕ್ಕಪ್ಪನವರೇ, ರಾತ್ರಿ ಬಹಳ ಹೊತ್ತಾ ಗಿದೆ, ನೀವು ಮಲಗಲು ಹೋಗಿ, ಒಮ್ಮೆ ಉಮೇಶನ ಸುದ್ದಿ ವಿಚಾರಿಸಿ, ಅವನಿಗೆ ಹೆದರಿಕೆಯಾಗಬಹುದು" ಎಂದಳು.

ಬಾಗಿಲ ಬಳಿಯಿಂದ ಒಂದು ಸದ್ದು ಬಂತು, "ಅಮ್ಮಾ, ನಾನು ಯಾವುದಕ್ಕೂ ಹೆದರೆ".

ಉಮೇಶ ಮುದುರಿಕೊಂಡು ಕಮಲೆಯ ಕೊಠಡಿಯ ಬಾಗಿಲ ಬಳಿ ಕುಳಿತಿದ್ದ. ಕಮಲೆಯ ಹೃದಯ ಕರಗಿತು—ಅವಳು ಕೂಡಲೆ ಹೊರಕ್ಕೆ ಬಂದು "ಅಯ್ಯೋ, ಲೋ ಉಮೇಶ, ನೀನು ಮಳೆಯಲ್ಲಿ ನೆನೆಯುವುದೇಕೆ, ಅಯ್ಯೋ ನಿರ್ಭಾಗ್ಯನೇ, ಹೋಗು, ಚಿಕ್ಕಪ್ಪನ ಜೊತೆಯಲ್ಲಿ ಮಲಗು ಹೋಗು" ಎಂದಳು.

ಕಮಲೆಯ ಬಾಯಿಂದ ನಿರ್ಭಾಗ್ಯನೇ ಎಂಬ—ಸಂಬೋಧನೆಯಿಂದ ಉಮೇಶ ಅತಿ ಸಂತೋಷಗೊಂಡು ಚಕ್ರವರ್ತಿ-ಚಿಕ್ಕಪ್ಪನ ಜೊತೆಗೆ ನಿದ್ದೆಮಾಡಲು ಹೋದ.

"ನಿದ್ದೆ ಬರುವವರೆಗೂ, ನಾನು ಕುಳಿತು ಕತೆ ಹೇಳಲೇ" ಎಂದು ರಮೇಶ ಕೇಳಿದ.

ಕಮಲ, "ಬೇಡ, ನನಗೆ ಬಹಳ ನಿದ್ದೆ ಬರುತ್ತಿದೆ" ಎಂದಳು.

ರಮೇಶನಿಗೆ ಕಮಲೆಯ ಮನೋಭಾವ ತಿಳಿಯಲಿಲ್ಲ, ಎನ್ನುವಂತಿಲ್ಲ, ಆದರೂ ಅವನು ಮತ್ತೊಮ್ಮೆ ಹೇಳಲಿಲ್ಲ—ಬಿಗುಮಾನದಿಂದ ಕಳೆಗುಂದಿದ ಕಮಲೆಯ ಮುಖ ನೋಡಿ ಅವನು ಮೆಲ್ಲಮೆಲ್ಲನೆ ತನ್ನ ಕೊಠಡಿಗೆ ಹೊರಟು ಹೋದ.

ಸುಮ್ಮನೆ ಹಾಸಿಗೆಯಲ್ಲಿ ನಿದ್ರೆಯನ್ನು ಎದುರುನೋಡಬಹುದು, ಎನ್ನುವಷ್ಟು ಶಾಂತಿ ಕಮಲೆಯ ಮನಸಿನಲ್ಲಿರಲಿಲ್ಲ. ಆದರೂ ಬಲವಂತವಾಗಿ ಮಲಗಿದಳು. ಮಳೆಯ ವೇಗದೊಡನೆ ನೀರಿನ ಕಲ್ಲೋಲವೂ ಕ್ರಮವಾಗಿ ಹೆಚ್ಚಾಯಿತು. ಹಡಗಿನ ಕೆಲಸಗಾರರ ಗೊಂದಲ ಕೇಳಿಬರಲಾರಂಭಿಸಿತು. ಆಗಾಗ್ಗೆ ಎಂಜಿನ್-ಕೋಣೆಯಲ್ಲಿ ನಾವಿಕರ ಆದೇಶ ಸೂಚಕ ಘಂಟೆ ಬಾರಿಸುತಿತ್ತು. ಪ್ರಬಲ ವಾಯುವೇಗದ ವಿರುದ್ಧ ಹಡಗನ್ನು ನಿಲ್ಲಿಸಲು ಲಂಗರ್ ಬಿಟ್ಟಿದ್ದರೂ ಎಂಜಿನ್ ಮೆಲ್ಲಮೆಲ್ಲನೆ ನಡೆಯುತಿತ್ತು.

ಕಮಲ ಹಾಸಿಗೆ ಬಿಟ್ಟು ಕೊಠಡಿಯ ಹೊರಗೆ ಬಂದು ನಿಂತಳು ಕ್ಷಣಕಾಲ ಮಳೆ ನಿಂತಿರುವುದು, ಆದರೂ ಮಳೆಯ ಗಾಳಿ ಬಾಣದಿಂದ ಗಾಯಗೊಂಡ ಪ್ರಾಣಿಯಂತೆ ಚೀತ್ಕಾರಮಾಡುತ್ತ ದಿಕ್ಕು ದಿಕ್ಕುಗಳಲ್ಲೂ ಓಡಿಯಾಡುತಿತ್ತು. ಮೋಡ ಇದ್ದರೂ ಶುಕ್ಲಪಕ್ಷದ ಚತುರ್ದಶೀ ಆಕಾಶ ಕ್ಷೀಣ

ಕಾಂತಿಯಲ್ಲಿ ಅಶಾಂತ ಸಂಹಾರ ಮೂರ್ತಿಯ ಅಸ್ಪಷ್ಟಭಾನದಂತೆ ಪ್ರಕಾಶಿಸು ತಿತ್ತು. ತೀರ ಸ್ವಲ್ಪವೂ ಕಾಣುತಿರಲಿಲ್ಲ. ನದಿಯು ಮುಂಕಾಗಿ ಕಾಣುತಿತ್ತು. ಆದರೆ ಮೇಲೆ ಕೆಳಗೆ, ದೂರ ಹತ್ತಿರ, ಕಂಡೂ ಕಾಣದೆಯೂ ಒಂದು ಮೂಢ ಉನ್ಮತ್ತತೆ, ಒಂದು ಅಂಧ ಆಂದೋಳನ ಅದ್ಭುತ ಆಕಾರ ತಾಳಿ ಯಮ ರಾಜನ ಎತ್ತಿದ ಕೊಂಬಿನ ಕರಿಯ ಎಮ್ಮೆಯಂತೆ ತಲೆ ಅಲ್ಲಾಡಿಸುತ್ತ ಅಲ್ಲಾಡಿಸುತ್ತ ಬರುತಿತ್ತು.

ಈ ಹುಚ್ಚುರಾತ್ರಿ, ಈ ಚಂಚಲ ಆಕಾಶ ನೋಡಿ ಕಮಲೆಯ ಹೃದಯ ಡೋಲಾಯಮಾನವಾಗತೊಡಗಿತು, ಅದು ಭಯವೋ ಆನಂದವೋ, ನಿಶ್ಚ ಯಿಸಿ ಹೇಳುವಂತಿಲ್ಲ. ಈ ಪ್ರಳಯದ ನಡುವೆ ಒಂದು ತಡೆಯಿಲ್ಲದ ಶಕ್ತಿ, ಒಂದು ಬಂಧನಹೀನ ಸ್ವಾಧೀನತೆ ಇದೆ, ಅದು ಕಮಲೆಯ ಹೃದಯದಲ್ಲಿ ಒಂದು ಸುಪ್ತಗೆಳತಿಯನ್ನು ಎಚ್ಚರಿಸಿತು.

ಈ ವಿಶ್ವವನ್ನೇ ವ್ಯಾಪಿಸಿದ್ದ ಹೋರಾಟದ ವೇಗ ಕಮಲೆಯ ಮನಸನ್ನು ಚಂಚಲಗೊಳಿಸಿತು. ಯಾವುದರ ವಿರುದ್ಧ ಹೋರಾಟ, ಅದರ ಉತ್ತರವನ್ನು ಈ ಮಳೆಗಾಳಿಯ ಆರ್ಭಟದ ನಡುವೆ ಪಡೆಯಲಾಗುವುದೆ? ಇಲ್ಲ, ಅದು ಕಮಲೆಯ ಹೃದಯದ ಕಾತರತೆಯಂತೆ ಹೇಳಲಾರದುದು. ಯಾವುದೋ ಒಂದು ಗುರಿಯಿಲ್ಲದ, ನೆಲೆಯಿಲ್ಲದ ಸ್ಪಪ್ನದ, ಕತ್ತಲೆಯ ಬಲೆಯನ್ನು ಛಿನ್ನ ವಿಚ್ಛಿನ್ನಮಾಡಿಕೊಂಡು ಹೊರಬರಲು ಭೂಮಿ–ಆಕಾಶಗಳಲ್ಲಿ ಈ ತಿಕ್ಕಾಟ ಈ ರೋಷಘರ್ಜಿತ ಅಳು. ದಾರಿಯಿಲ್ಲದ ರಾಜ್ಯದ ಎಲ್ಲೆಯಿಂದ ಅರ್ಧ ರಾತ್ರಿಯಲ್ಲಿ ಗಾಳಿ ಕೇವಲ "ಇಲ್ಲ ಇಲ್ಲ" ಎಂದು ಚೀತ್ಕಾರ ಮಾಡುತ್ತ ಮಾಡುತ್ತ ಬೀಸಿ ಬರುತಿತ್ತು—ಒಂದೇ ಒಂದು ಪ್ರಚಂಡ ಅಸ್ವೀಕಾರ— ಯಾವುದರ ಅಸ್ವೀಕಾರ?—ಅದನ್ನು ಸರಿಯಾಗಿ ಹೇಳುವಂತಿಲ್ಲ—ಆದರೆ ಬೇಡ, ಖಂಡಿತ ಬೇಡ, –ಬೇಡ, –ಬೇಡ –ಬೇಡ.

## ೩೦

ಮೂರನೆಯ ದಿನ ಬೆಳಗ್ಗೆ ಬಿರುಗಾಳಿಯ ವೇಗ ಸ್ವಲ್ಪ ಕಡಿಮೆಯಾಗಿರು ವುದು, ಆದರೆ ಸಂಪೂರ್ಣವಾಗಿ ನಿಂತಿಲ್ಲ—ಲಂಗರ್ ಎತ್ತಬೇಕೇ ಬೇಡವೇ, ಎಂದು ನಾವಿಕರು ಇನ್ನೂ ತೀರ್ಮಾನಿಸಿರಲಿಲ್ಲ, ಮುಖ ಮೇಲಕ್ಕೆ ಮಾಡಿ ಆಕಾಶ ನೋಡುತಿದ್ದರು.

ಮುಂಜಾನೆಯೇ ಚಕ್ರವರ್ತಿಗಳು ರಮೇಶನನ್ನು ವಿಚಾರಿಸಲು ಕಮ ಲೆಯ ಪಕ್ಕದ ಕೊಠಡಿ ಹೊಕ್ಕರು. ಆಗಲೂ ರಮೇಶ ಹಾಸಿಗೆಯಲ್ಲಿ ಮಲಗಿದ್ದುದನ್ನು ನೋಡಿದರು, ಚಕ್ರವರ್ತಿಗಳನ್ನು ನೋಡಿ ಅವನು ಕೂಡಲೇ ಎದ್ದು ಕುಳಿತ ಆ ಕೊಠಡಿಯಲ್ಲಿ ರಮೇಶ ಮಲಗಿದ್ದುದನ್ನು ನೋಡಿ ಚಕ್ರ ವರ್ತಿಗಳು ಮನಸಿನಲ್ಲೇ ಹಿಂದಿನ ರಾತ್ರಿಯ ಘಟನೆಗಳೆಲ್ಲವನ್ನೂ ಜೋಡಿಸಿ ಕೊಂಡರು. " ನಿನ್ನೆ ರಾತ್ರಿ ನೀವು ಈ ಕೊಠಡಿಯಲ್ಲೇ ಮಲಗಿದ್ದಿರಿ ಎಂದು ತೋರುವುದು " ಎಂದು ಪ್ರಶ್ನಿಸಿದರು.

ರಮೇಶ ಈ ಪ್ರಶ್ನೆಗೆ ಉತ್ತರ ಹೇಳದೆ, " ಇದೆಂಥ ದುಃಸ್ಥಿತಿ ಪ್ರಾರಂಭ ವಾಗಿರುವುದು. ನಿನ್ನೆ ರಾತ್ರಿ ಚಿಕ್ಕಪ್ಪನವರ ನಿದ್ದೆ ಹೇಗಿತ್ತು '' ಎಂದು ಕೇಳಿದ.

ಚಕ್ರವರ್ತಿ ಹೇಳಿದರು, '' ರಮೇಶ ಬಾಬು, ನನ್ನನ್ನು ಏನೂ ತಿಳಿಯ ದವನೆಂದು ಎಣಿಸುವಿರಿ, ನನ್ನ ಮಾತುಕತೆಯೂ ಹಾಗೆಯೇ, ಆದರೂ ನಾನು ಅನೇಕ ಕಠಿಣ ವಿಷಯಗಳ ಆಲೋಚನೆ ಮಾಡಿರುವೆ ಹಾಗೂ ಅವುಗಳಲ್ಲಿ ಬಹಳ ಮಟ್ಟಿಗೆ ತೀರ್ಮಾನವನ್ನೂ ಪಡೆದಿರುವೆ—ಆದರೆ ನೀವು ಎಲ್ಲಕ್ಕಿಂತಲೂ ಕಠಿಣವಾಗಿರುವಿರಿ ".

ಕ್ಷಣಕಾಲ ರಮೇಶನ ಮುಖ ಸ್ವಲ್ಪ ಕೆಂಪೇರಿತು, ಕೂಡಲೇ ಎಚ್ಚರ ಗೊಂಡು ಒಮ್ಮೆ ನಕ್ಕು, " ಕಠಿಣವಾಗಿರುವುದು ಎಲ್ಲ ಸಮಯದಲ್ಲೂ ಅಪ ರಾಧವೇ ? ಹಾಗಲ್ಲವಲ್ಲ ಚಿಕ್ಕಪ್ಪ. ತೆಲುಗು ಭಾಷೆಯ ಬಾಲಬೋಧೆ ಕಷ್ಟ, ಆದರೆ ತೆಲುಗುದೇಶದ ಹುಡುಗರಿಗೆ ಅದು ನೀರಿನಂತೆ ಸುಲಭ—ಯಾವುದು ಅರ್ಥವಾಗದೋ ಅದನ್ನು ಕೂಡಲೇ ದೋಷವೆನ್ನಬಾರದು ಮತ್ತು ಯಾವ ಅಕ್ಷರ ತಿಳಿಯುವುದಿಲ್ಲವೋ, ಸುಮ್ಮನೆ ಅದರಮೇಲೆ ನೆಟ್ಟದೃಷ್ಟಿಯಿಟ್ಟರೆ, ಅದು ಎಂದಾದರೂ ತಿಳಿಯಬರುವುದು, ಹೀಗೆ ಆಶಿಸಬಹುದಲ್ಲವೆ ? ". ಎಂದು ಕೇಳಿದ.

ಮುದುಕರು ಹೇಳಿದರು, " ನನ್ನನ್ನು ಕ್ಷಮಿಸಬೇಕು ರಮೇಶಬಾಬು ನನ್ನನ್ನು ಯಾರು ಅರ್ಥಮಾಡಿಕೊಳ್ಳಲಾರರೋ, ಅವರಿಗೆ ತಿಳಿಸಿ ಕೊಡಲು ಪ್ರಯತ್ನಿಸುವುದು ಸಾಹಸವೇ ಸರಿ. ಆದರೆ ಜಗತ್ತಿನಲ್ಲಿ ದೇವರ ದಯೆಯಿಂದ, ನೋಡಿದ ಕೂಡಲೇ ಎಲ್ಲರೊಡನೆ ಗೆಳೆತನ ನೆಲಸುವಂಥ ಒಬ್ಬೊಬ್ಬ ವ್ಯಕ್ತಿಗಳೂ ದೊರೆಯುವರು—ಉದಾಹರಣೆಗೆ, ನೀವು ಆ ಗಡ್ಡದ

ನಾವಿಕನನ್ನು ಕೇಳಿ ನೋಡಿ—ಸೊಸೆಯೊಡನೆ ಅವನ ಸ್ನೇಹವಾತ್ಸಲ್ಯವನ್ನು ಅವನು ಒಪ್ಪಿಕೊಳ್ಳಬೇಕಾಗಿದೆ. ಹಾಗಿಲ್ಲದಿದ್ದರೆ ಅವನನ್ನು ನಾನು ಮುಸಲ್ಮಾನ ಎನ್ನೆನು. ಇಂಥ ವೇಳೆಯಲ್ಲಿ ಇದ್ದಕ್ಕಿದ್ದಂತೆ ನಡುವೆ ತೆಲುಗುಭಾಷೆ ಬಂದು ಕೂತರೆ ಬಹಳ ಗೊಂದಲಕ್ಕಿಟ್ಟುಕೊಳ್ಳುವುದು. ಮಾತುಮಾತಿಗೆ ಕೋಪಿಸಿ ಕೊಂಡರೆ ಆಗವುದಿಲ್ಲ ರಮೇಶಬಾಬು, ಸಂಗತಿ ಯೋಚಿಸಿನೋಡಿ".

"ಯೋಚಿಸಿ ನೋಡಬೇಕು ಎನ್ನುವುದಕ್ಕೇ ಕೋಪಿಸಿಕೊಳ್ಳಬಾರದು—ಆದರೆ ನಾನು ಕೋಪಗೊಳ್ಳಲಿ, ಕೋಪಗೊಳ್ಳದಿರಲಿ, ತಮಗೆ ನೋವಾಗಲಿ ಆಗದಿರಲಿ, ತೆಲುಗು ಭಾಷೆ ಭಾಷೆಯಾಗಿಯೇ ಉಳಿಯುವುದು—ಇದು ಪ್ರಕೃತಿಯ ಕಠಿಣ ನಿಯಮ" ಎಂದ ರಮೇಶ. ಹೀಗೆ ಹೇಳಿ ರಮೇಶ ಒಂದು ನಿಟ್ಟುಸಿರು ಬಿಟ್ಟ.

ಇಷ್ಟರಲ್ಲಿ ರಮೇಶ ಗಾಜೀಪುರಕ್ಕೆ ಹೋಗುವುದು ಸರಿಯೇ ಅಲ್ಲವೇ ಎಂದು ಆಲೋಚಿಸತೊಡಗಿದ. ಮೊದಲು ತಿಳಿಯದ ಜಾಗದಲ್ಲಿ ವಾಸಿಸಲು ಮುದುಕರ ಪರಿಚಯ ತನಗೆ ಬೇಕಾಗುವುದು ಎಂದು ಅವನು ಭಾವಿಸಿದ್ದ. ಆದರೆ ಈಗ ಪರಿಚಯದಿಂದ ತೊಂದರೆಯೂ ಇದೆಯೆಂದು ತೋರಿತು. ಕಮಲೆ ಯೊಡನೆ ತನ್ನ ವಿಷಯವಾಗಿ ಆಲೋಚನೆ ಮತ್ತು ವಿಚಾರಣೆ ನಡೆದರೆ ಒಂದು ದಿನ ತಾನು ಕಮಲೆಯ ಪಕ್ಷವಲ್ಲಿ ನಿಷ್ಠುರವಂತನಾಗುವುದು. ಅದಕ್ಕಿಂತಲೂ ಎಲ್ಲಿ ಎಲ್ಲರೂ ಹೊಸಬರೋ, ಎಲ್ಲಿ ಪ್ರಶ್ನೆಕೇಳುವವರು ಯಾರೂ ಇರುವು ದಿಲ್ಲವೋ, ಅಂಥ ಸ್ಥಳದಲ್ಲಿ ಆಶ್ರಯ ಪಡೆಯುವುದು ಮೇಲು.

ಗಾಜೀಪುರ ಸೇರುವ ಹಿಂದಿನ ದಿನ ರಮೇಶ ಚಕ್ರವರ್ತಿಗಳಿಗೆ ಹೇಳಿದ, "ಚಿಕ್ಕಪ್ಪ, ಗಾಜೀಪುರ ನನ್ನ ವಕೀಲಿ ಕೆಲಸಕ್ಕೆ ಅನುಕೂಲವೆಂದು ಹೇಳಿದ್ದಿ ರಲ್ಲ, ಆದರೂ ನಾನು ಕಾಶಿಗೆ ಹೋಗಲು ನಿಶ್ಚಯಿಸಿರುವೆ".

ರಮೇಶನ ಮಾತಿನಲ್ಲಿ ನಿಃಸಂಶಯದ ಧ್ವನಿ ಕೇಳಿ ಮುದುಕರು ನಗುತ್ತ, "ಬಾರಿಬಾರಿಗೂ ಬೇರೆಬೇರೆ ರೀತಿಯಲ್ಲಿ ತೀರ್ಮಾನಿಸುವುದನ್ನು ನಿಶ್ಚಯ ವೆಂದು ಹೇಳಲಾಗುವುದಿಲ್ಲ—ಅದು ತೀರ್ಮಾನವಾಗದು. ಏನೇ ಆಗಲಿ, ಕಾಶಿಗೆ ಹೋಗುವುದು ಸದ್ಯಕ್ಕೆ ನಿಮ್ಮ ಕಡೆಯ ತೀರ್ಮಾನವೇ ?" ಎಂದು ಕೇಳಿದರು.

ರಮೇಶ ಸಂಕ್ಷೇಪವಾಗಿ, "ಹೌದು" ಎಂದ.

ಮುದುಕರು ಯಾವ ಉತ್ತರವನ್ನೂ ಹೇಳದೆ ಹೊರಟು ಹೋದರು ಮತ್ತು ಸಾಮಾನು ಸರಂಜಾಮು ಕಟ್ಟುವುದರಲ್ಲಿ ತೊಡಗಿದರು.

ಕಮಲ ಬಂದು, " ಚಿಕ್ಕಪ್ಪನವರೇ, ಇಂದು ನಮ್ಮೊಡನೆ ಮನ ಸ್ತಾಪವೇ ? " ಎಂದು ಕೇಳಿದಳು.

ಮುದುಕರು, " ಜಗಳ ಎರಡುವೇಳೆಯೂ ನಡೆಯುವುದು, ಆದರೆ ಒಂದು ದಿನವಾದರೂ ಗೆಲ್ಲಲಿಲ್ಲ " ಎಂದರು.

ಕಮಲ—ಇಂದು ಬೆಳಗಿದಿಂದ ನೀವು ತಲೆ ತಪ್ಪಿಸಿಕೊಂಡು ತಿರುಗು ತ್ತಿರುವಿರಿ.

ಚಕ್ರವರ್ತಿ—ಅಮ್ಮಾ, ನೀನು ನನಗಿಂತ ಹೆಚ್ಚಾಗಿ ತಲೆ ತಪ್ಪಿಸಿ ಕೊಂಡು ಓಡಾಡುತಿರುವೆ, ಆದರೂ ನನ್ನನ್ನು ತಲೆ ತಪ್ಪಿಸಿಕೊಳ್ಳುವವನೆಂದು ದೂರು ಹೇಳುವೆ ?

ಕಮಲೆಗೆ ಮಾತು ಅರ್ಥವಾಗಲಿಲ್ಲ. ಮುದುಕರು, " ರಮೇಶ ಬಾಬು ಈಗ ಹೇಳಿದರಲ್ಲ, ನೀವು ಕಾಶಿಗೆ ಹೋಗುವುದು ನಿಶ್ಚಯವಾಗಿದೆಯಂತೆ " ಎಂದರು.

ಕೇಳಿ ಕಮಲ ಹೌದ.–ಇಲ್ಲ ಎಂದು ಹೇಳಲಿಲ್ಲ. ಕ್ಷಣಕಾಲದ ಬಳಿಕ, " ಚಿಕ್ಕಪ್ಪನವರೇ, ನಿಮಗೆ ಸಾಧ್ಯವಿಲ್ಲ, ಕೊಡಿ, ನಾನು ನಿಮ್ಮ ಪೆಟ್ಟಿಗೆ ಸಿದ್ಧ ಪಡಿಸಿ ಕೊಡುವೆ " ಎಂದಳು.

ಕಾಶಿಗೆ ಹೋಗುವ ವಿಷಯದಲ್ಲಿ ಕಮಲೆಯ ಈ ಉದಾಸೀನತೆಯಿಂದ ಚಕ್ರವರ್ತಿಗಳ ಮನದಲ್ಲಿ ಒಂದು ಗಂಭೀರ ವೇದನೆಯುಂಟಾಯಿತು. " ಒಳ್ಳೆಯದೇ ಆಯಿತು, ಇಂಥ ವಯಸ್ಸಿನಲ್ಲಿ ಪುನಃ ಹೊಸಬಲೆಯಲ್ಲಿ ಏಕೆ ಸಿಕ್ಕಿಕೊಳ್ಳಬೇಕು " ಎಂದು ಭಾವಿಸಿದರು.

ಇಷ್ಟರಲ್ಲಿ ಕಾಶಿಗೆ ಹೋಗುವ ಸಂಗತಿಯನ್ನು ಕಮಲೆಗೆ ಹೇಳಲೋಸುಗ ರಮೇಶ ಬಂದು ಸೇರಿದ. " ನಾನು ನಿನ್ನನ್ನು ಹುಡುಕುತಿದ್ದೆ " ಎಂದ.

ಕಮಲ ಚಕ್ರವರ್ತಿಗಳ ಬಟ್ಟೆಬರೆ ಹುಡುಕಿ ಸೇರಿಸಿಡತೊಡಗಿದಳು. " ಕಮಲ, ಈ ಸಲ ನಾವು ಗಾಜೀಪುರಕ್ಕೆ ಹೋಗಲಾಗುವುದಿಲ್ಲ—ಕಾಶಿಗೆ ಹೋಗಿ ವಕೀಲಿ ಆರಂಭಿಸಲು ನಾನು ತೀರ್ಮಾನಿಸಿರುವೆ ನಿನ್ನ ಅಭಿಪ್ರಾಯ ವೇನು ? " ಎಂದು ರಮೇಶ ಕೇಳಿದ.

ಕಮಲ ಚಕ್ರದರ್ತಿಗಳ ಪೆಟ್ಟಿಗೆಯಿಂದ ದೃಷ್ಟಿ ಕದಲಿಸದೆ ಹೇಳಿದಳು,

" ಊಹೂಂ, ನಾನು ಗಾಜೀಪುರಕ್ಕೇ ಹೋಗುವೆ. ನಾನು ಎಲ್ಲ ಸಾಮಾನು ಗಳನ್ನೂ ಕಟ್ಟಿಟ್ಟಿರುವೆ ".

ಕಮಲೆಯ ಈ ದೃಢ ಉತ್ತರದಿಂದ ರಮೇಶ ಆಶ್ಚರ್ಯಗೊಂಡ— " ನೀನೊಬ್ಬಳೇ ಹೋಗುವೆಯೇನು ? " ಎಂದು ಕೇಳಿದ.

ಕಮಲ ಚಕ್ರವರ್ತಿಗಳ ಮುಖದ ಕಡೆ ತನ್ನ ಸ್ನಿಗ್ಧನೋಟ ಬೀರುತ್ತ, " ಏಕೆ, ಅಲ್ಲಿ ಚಿಕ್ಕಪ್ಪ ಇರುವರಲ್ಲ " ಎಂದಳು.

ಕಮಲೆಯ ಈ ಮಾತಿನಿಂದ ಚಕ್ರವರ್ತಿಗಳು ಕಳವಳಕ್ಕೀಡಾದರು— " ತಾಯಿ, ನೀನು ಈ ಮಗನ ವಿಷಯದಲ್ಲಿ ಇಷ್ಟು ದೂರ ಪಕ್ಷಪಾತ ತೋರುವೆ, ಹೀಗಾದರೆ ರಮೇಶ ಬಾಬು ನನ್ನನ್ನು ಕಣ್ಣೆತ್ತಿಯೂ ನೋಡರು " ಎಂದರು.

ಇದಕ್ಕೆ ಉತ್ತರವಾಗಿ ಕಮಲ, " ನಾನು ಗಾಜೀಪುರಕ್ಕೆ ಹೋಗುವೆ " ಎಂದಳು.

ಈ ವಿಷಯದಲ್ಲಿ ಬೇರೊಬ್ಬರ ಸಮ್ಮತಿ ಕೇಳುವುದಿದೆ, ಎನ್ನುವುದು ಕಮಲೆಯ ಕಂಠಸ್ವರದಿಂದ ವ್ಯಕ್ತವಾಗಲಿಲ್ಲ.

ರಮೇಶ, " ಚಿಕ್ಕಪ್ಪ, ಹಾಗಾದರೆ ಗಾಜೀಪುರವೇ ನಿಶ್ಚಯ " ಎಂದ.

ಮಳೆಯ ತರುವಾಯ ಆ ದಿನ ರಾತ್ರಿ ಬೆಳುದಿಂಗಳು ಶುಭ್ರವಾಗಿ ಹರಡಿಕೊಂಡಿತ್ತು. ರಮೇಶ ಹಡಗಿನ ಆರಾಮ ಕುರ್ಚಿಯಲ್ಲಿ ಕುಳಿತು ಯೋಚಿಸತೊಡಗಿದ, " ಇನ್ನು ಈ ರೀತಿಯಲ್ಲಿ ನಡೆಯದು, ಕ್ರಮವಾಗಿ ವಿದ್ರೋಹಿ ಕಮಲೆಯಿಂದ ಜೀವನದ ಸಮಸ್ಯೆ ಬಹಳ ಕಠಿಣವಾಗುವುದು. ಈ ರೀತಿ ಕೆಲಸದಲ್ಲಿದ್ದು ಗೌರವ ಉಳಿಸಿಕೊಳ್ಳುವುದು ಕಷ್ಟ. ಈ ಸಲ ವಿಷಯವನ್ನು ಬಹಿರಂಗಪಡಿಸಬೇಕು. ಕಮಲೆಯೇ ನನ್ನ ಹೆಂಡತಿ— ನಾನಾದರೋ ಅವಳನ್ನು ಹೆಂಡತಿಯೆಂದೇ ಪರಿಗ್ರಹಿಸಿದ್ದೆ. ಮಂತ್ರ ಉಚ್ಚರಿಸ ಲಿಲ್ಲವೆಂದು ಸಂಕೋಚಪಡುವುದು ಅನ್ಯಾಯ. ಯಮಧರ್ಮ ಅಂದು ಕಮಲೆಯನ್ನು ವಧೂರೂಪದಲ್ಲಿ ನನ್ನ ಹತ್ತಿರ ತಂದು ಬಿಟ್ಟ. ಆ ನಿರ್ಜನ ಮರಳು ದ್ವೀಪದಲ್ಲಿ ತಾನೇ ಮಾಂಗಲ್ಯಧಾರಣೆ ಮಾಡಿಸಿದ—ಅಂಥ ಪುರೋ ಹಿತರು ಜಗತ್ತಿನಲ್ಲೆಲ್ಲಿರುವರು ".

ಹೇಮನಳಿನಿ ಮತ್ತು ರಮೇಶನ ನಡುವೆ ಒಂದು ಯುದ್ಧಭೂಮಿ ನಿಂತಿದೆ. ಅಡ್ಡಿ–ಅವಮಾನ–ಅಪನಂಬಿಕೆ ಕಿತ್ತೊಗೆದು ರಮೇಶ ಗೆಲ್ಲುವು ದಾದರೆ, ಆಗಲೀಗ ತಲೆಯೆತ್ತಿಕೊಂಡು ಹೇಮನಳಿನಿಯ ಪಕ್ಕಕ್ಕೆ ಹೋಗಿ

ನಿಲ್ಲಬಹುದು. ಆ ಯುದ್ಧದ ಮಾತು ನೆನಪಾದರೆ ಅವನಿಗೆ ಹೆದರಿಕೆ ಯಾಗುವುದು—ಗೆಲ್ಲಲು ಯಾವ ಆಸೆಯೂ ಉಳಿದಿಲ್ಲ. ಸ್ಪಷ್ಟಪಡಿಸುವುದು ಹೇಗೆ? ಮತ್ತು ಸ್ಪಷ್ಟಪಡಿಸುವುದಾದರೆ ಎಲ್ಲ ನಡವಳಿಕೆಯೂ ಸಾಧಾರಣ ಜನರೆದುರಿಗೆ ಹಾಸ್ಯಾಸ್ಪದ. ಅಂತೂ ಕಮಲೆಯನ್ನು ಹೆಂಡತಿಯೆಂದು ಪರಿ ಗ್ರಹಿಸುವುದು ಎಲ್ಲರೀತಿಯಲ್ಲೂ ಉತ್ತಮ. ಹೇಮನಳಿನಿಯಾದರೋ ರಮೇಶನನ್ನು ತಿರಸ್ಕರಿಸುವಳು—ಈ ತಿರಸ್ಕಾರವೇ ಅವಳಿಗೆ ಉಪಯುಕ್ತ ಸತ್ಪಾತ್ರದಲ್ಲಿ ಆತ್ಮಸಮರ್ಪಣೆ ಮಾಡಿಕೊಳ್ಳಲು ಅನುಕೂಲ ಮಾಡಿಕೊಡು ವುದು. ಹೀಗೆ ಯೋಚಿಸಿ ರಮೇಶ ಒಂದು ನಿಟ್ಟುಸಿರಿನ ಮೂಲಕ ಆ ಕಡೆಯ ಆಸೆಯನ್ನು ನೆಲಸಮ ಮಾಡಿದ.

## ೩೧

"ಏನೋ, ನೀನೆಲ್ಲಿಗೆ ಹೋಗುವೆ?" ಎಂದು ರಮೇಶ ಕೇಳಿದ.

ಉಮೇಶ, "ನಾನು ತಾಯಿಯವರೊಡನೆ ಹೋಗುವೆ" ಎಂದ.

ರಮೇಶ—ನಾನು ನಿನಗೆ ಕಾಶಿಯವರೆಗೆ ಟಿಕೆಟ್ ಕೊಂಡುಕೊಂಡಿರುವೆ ಇದು ಗಾಜೀಪುರದ ಘಟ್ಟ. ನಾವು ಕಾಶಿಗೆ ಹೋಗುವುದಿಲ್ಲ.

ಉಮೇಶ—ನಾನೂ ಹೋಗುವುದಿಲ್ಲ.

ಉಮೇಶ ತಮ್ಮ ಖಾಯಂ ಏರ್ಪಾಡಿನಲ್ಲಿ ಸೇರಿಕೊಳ್ಳುವನು, ಎಂಬ ಸಂದೇಹ ರಮೇಶನ ಮನಸಿನಲ್ಲಿರಲಿಲ್ಲ—ಆದರೆ ಹುಡುಗನ ಅವಿಚಲಿತ ದೃಢತೆ ನೋಡಿ ರಮೇಶ ಆಶ್ಚರ್ಯಗೊಂಡ. "ಕಮಲಾ, ಉಮೇಶನನ್ನೂ ಕರೆದುಕೊಂಡು ಹೋಗಬೇಕೆ?" ಎಂದು ಕಮಲೆಯನ್ನು ಪ್ರಶ್ನಿಸಿದ.

"ಕರೆದುಕೊಂಡು ಹೋಗದಿದ್ದರೆ ಅವನು ಎಲ್ಲಿಗೆ ಹೋಗಬೇಕು" ಎಂದಳು ಕಮಲ.

ರಮೇಶ—ಏಕೆ, ಕಾಶಿಯಲ್ಲಿ ಅವನ ನೆಂಟರಿರುವರಲ್ಲ.

ಕಮಲ—ಇಲ್ಲ, ಅವನು ನಮ್ಮೊಡನೆ ಬರುವುದಾಗಿ ಹೇಳಿರುವ. ಉಮೇಶ್, ನೋಡು, ನೀನು ಚಿಕ್ಕಪ್ಪನವರ ಜೊತೆಯಲ್ಲೇ ಇರು, ಇಲ್ಲವಾದರೆ ಹೊಸ ಊರಿನಲ್ಲಿ ಗುಂಪಿನಲ್ಲೆಲ್ಲಾದರೂ ತಪ್ಪಿಸಿಕೊಳ್ಳುವೆ.

ಯಾವ ಊರಿಗೆ ಹೋಗಬೇಕು, ಯಾರನ್ನು ಜೊತೆಯಲ್ಲಿ ಕರೆದು

ಕೊಂಡು ಹೋಗಬೇಕು, ಈ ಎಲ್ಲ ತೀರ್ಮಾನದ ಹೊರೆಯನ್ನೂ ಕಮಲೆಯೊಬ್ಬಳೇ ವಹಿಸಿಕೊಂಡಳು. ರಮೇಶನ ಸಮ್ಮತಿ-ಅಸಮ್ಮತಿಗಳ ಬಂಧನವನ್ನು ಮೊದಲು ಕಮಲ ವಿನಯದಿಂದ ಒಪ್ಪಿಕೊಳ್ಳುತಿದ್ದಳು. ಇದ್ದಕ್ಕಿದ್ದಂತೆ ಈ ಕೆಲವು ದಿನಗಳಲ್ಲಿ ಅದು ಹೇಗೋ ಮಾರಿಹೋಗಿರುವುದು.

ಅದರಿಂದ ಉಮೇಶನೂ ತನ್ನ ಪುಟ್ಟ ಬಟ್ಟೆಯ ಗಂಟೊಂದನ್ನು ಕಂಕುಳಲ್ಲಿಟ್ಟುಕೊಂಡು ಹೊರಟ. ಈ ವಿಷಯದಲ್ಲಿ ಹೆಚ್ಚು ಚರ್ಚೆ ನಡೆಯಲಿಲ್ಲ.

ಪಟ್ಟಣ ಮತ್ತು ಸಾಹೇಬ ಜನರ ವಾಸಸ್ಥಾನದ ನಡುವೆ ಒಂದು ಸ್ಥಳದಲ್ಲಿ ಚಿಕ್ಕಪ್ಪನವರದೊಂದು ಪುಟ್ಟ ಬಂಗಲೆ. ಅದರ ಹಿಂದುಗಡೆ ಮಾವಿನ ತೋಪು, ಎದುರಿಗೆ ರಾಟೆಯ ಭಾವಿ—ಮುಂದುಗಡೆ ಎತ್ತರವಲ್ಲದ ಪೌಳೀಗೋಡೆ ಕಟ್ಟಿದೆ—ಭಾವಿಯ ನೀರು ಹಾಯಿಸಿ ಬೆಳೆಸಿದ ಕೋಸುಗೆಡ್ಡೆ, ಬಟಾಣೀಕಾಯಿಗಳ ತೋಟ ಚೆನ್ನಾಗಿ ಬೆಳೆದಿತ್ತು.

ಮೊದಲನೆಯ ದಿನ ಕಮಲ ಮತ್ತು ರಮೇಶ ಈ ಬಂಗಲೆಗೇ ಹೋದರು.

ಚಕ್ರವರ್ತಿ—ಚಿಕ್ಕಪ್ಪನ ಹೆಂಡತಿ ಹರಿಭಾವಿನಿ ರೋಗಿಷ್ಠೆ ಎಂದು ಚಿಕ್ಕಪ್ಪ ಜನ ಸಾಧಾರಣರಲ್ಲಿ ಹೇಳಿದ್ದರು, ಆದರೆ ಅವಳ ದೌರ್ಬಲ್ಯದ ಬಾಹ್ಯಲಕ್ಷಣ ಸ್ವಲ್ಪವೂ ಕಂಡುಬರುತ್ತಿರಲಿಲ್ಲ ಅವಳಿಗೆ ಅಷ್ಟೇನೂ ಕಡಿಮೆ ವಯಸ್ಸಲ್ಲ, ಆದರೆ ಬಲ-ಶಕ್ತಿಯುಳ್ಳ ಮುಖ. ಮುಂಭಾಗದ ಅಲ್ಪಸ್ವಲ್ಪ ಕೂದಲು ನರೆತಿರುವುದು, ಆದರೂ ಕಪ್ಪುಭಾಗವೇ ಹೆಚ್ಚು, ಅವಳ ವಿಷಯದಲ್ಲಿ ಮುಪ್ಪು ಕೇವಲ ' ಡಿಕ್ರಿ ' (ಕೋರ್ಟಿನ ಅಪ್ಪಣೆ) ಪಡೆದಿರುವುದಾದರೂ ಅನುಭವದ ಹಕ್ಕು ಗಳಿಸಿರಲಿಲ್ಲ.

ನಿಜವಾದ ಸಂಗತಿಯೇನೆಂದರೆ, ಈ ದಂಪತಿಗಳು ತರುಣರಾಗಿದ್ದಾಗ ಹರಿಭಾವಿನಿಯನ್ನು ಮಲೇರಿಯಾ ಬಹಳವಾಗಿ ಕಾಡಿತ್ತು. ವಾಯುಪರಿವರ್ತನೆ ಹೊರತು ಬೇರೆ ಯಾವ ಉಪಾಯವೂ ಇಲ್ಲದೆ ಚಕ್ರವರ್ತಿಗಳು ಗಾಜೀಪುರದಲ್ಲಿ ಮೇಷ್ಟರ ಕೆಲಸ ದೊರಕಿಸಿಕೊಂಡು ಅಲ್ಲೇ ವಾಸವಾಗಿದ್ದರು. ಹೆಂಡತಿಗೆ ಸಂಪೂರ್ಣ ಗುಣವಾದರೂ ಅವಳ ಆರೋಗ್ಯದ ವಿಷಯದಲ್ಲಿ ಚಕ್ರವರ್ತಿಗಳಿಗೆ ಸ್ವಲ್ಪವೂ ನಂಬಿಕೆಯಿರಲಿಲ್ಲ. ಅತಿಥಿಗಳನ್ನು ಹೊರಗಿನ ಕೊಠಡಿಯಲ್ಲೇ ಕುಳ್ಳಿರಿಸಿ ಚಕ್ರವರ್ತಿಗಳು ಒಳಮನೆಯನ್ನು ಸೇರಿ " ಸೇಜಬಉ " (ಮನೆಯ ಮೂರನೆಯ ಸೊಸೆ) ಎಂದು ಕೂಗಿದರು.

ಸೇಜಬಬು ಆಗ ಪೌಳೀಗೋಡೆಯೊಳಗಿನ ಅಂಗಳದಲ್ಲಿ ಹಕ್ಕಿಗಳಿಗೆ ಕಾಳು ಎರಚುತಿದ್ದಳು ಮತ್ತು ಸಣ್ಣ ಪುಟ್ಟ ಮಡಕೆಗಳಲ್ಲಿ ಹಾಕಿದ್ದ ಬಗೆಬಗೆಯ ಉಪ್ಪಿನಕಾಯಿ, ಚಟ್ನಿಗಳನ್ನು ಬಿಸಿಲಲ್ಲಿ ಇಡುತ್ತಿದ್ದಳು.

ಚಕ್ರವರ್ತಿ ಬಂದು, "ಇಲ್ಲಿ ನೋಡು! ಮಂಜು ಸುರಿಯುತ್ತಿದೆ. ಮೈಗೆ ಏನನ್ನಾದರೂ ಹೊದ್ದು ಕೊಳ್ಳಬಾರದೆ? ಎಂದರು".

ಹರಿಭಾವಿನಿ—ನಿನ್ನದೆಲ್ಲಾ ವಿಚಿತ್ರ. ಮಂಜು ಎಲ್ಲಿ—ಬಿಸಿಲು ಬೆನ್ನಿಗೆ ಬೀಳುತ್ತಿದೆ.

ಚಕ್ರವರ್ತಿ—ಅದೇನು ಒಳ್ಳೆಯದೆ. ನೆರೆಳೆನ್ನುವುದು ಅಷ್ಟೇನೂ ಹೆಚ್ಚು ಬೆಲೆಯದಲ್ಲವಲ್ಲ.

ಹರಿಭಾವಿನಿ—ಅದು ಸರಿ–ನೀನು ಬರಲು ಇಷ್ಟು ಸಾವಕಾಶವಾಗಲು ಕಾರಣ?

ಚಕ್ರವರ್ತಿ—ಅದು ದೊಡ್ಡ ವಿಷಯ. ಒಟ್ಟಿನಲ್ಲಿ ಮನೆಗೆ ಅತಿಥಿಗಳು ಬಂದಿರುವರು. ಸೇವೆಯ ಸಿದ್ಧತೆ ಮಾಡಬೇಕು.

ಹೀಗೆ ಹೇಳಿ ಚಕ್ರವರ್ತಿಗಳು ಅತಿಥಿಗಳ ಪರಿಚಯ ಹೇಳಿದರು. ಚಕ್ರವರ್ತಿಗಳ ಮನೆಗೆ ಬೇರೆ ಊರಿನ ಇಂಥ ಆಕಸ್ಮಿಕ ಅತಿಥಿಗಳ ಆಗಮನ ಹೊಸದೇನೂ ಅಲ್ಲ, ಆದರೆ ಪತ್ನೀ ಸಮೇತನಾದ ಅತಿಥಿಯ ಬರುವಿಕೆಗೆ ಹರಿಭಾವಿನಿ ಸಿದ್ಧಳಿರಲಿಲ್ಲ—ಅವಳು, "ಅಮ್ಮಾ, ನಿಮ್ಮ ಈ ಮನೆಯಲ್ಲಿ ಕೊಠಡಿಯೆಲ್ಲಿ?" ಎಂದಳು.

"ಮೊದಲು ಪರಿಚಯ ಆಗಲಿ, ಆಮೇಲೆ ಕೊಠಡಿಯ ಮಾತು ನಡೆಯಲಿ. ನಮ್ಮ ಶೈಲ ಎಲ್ಲಿ?" ಎಂದರು ಚಕ್ರವರ್ತಿ.

ಹರಿಭಾವಿನಿ—ಅವಳು ಮಗುವಿಗೆ ಸ್ನಾನಮಾಡಿಸುತ್ತಿರುವಳು.

ಕೂಡಲೇ ಚಕ್ರವರ್ತಿಗಳು ಕಮಲೆಯನ್ನು ಅಂತಃಪುರಕ್ಕೆ ಕರೆತಂದರು. ಕಮಲ ಹರಿಭಾವಿನಿಗೆ ನಮಸ್ಕರಿಸಿ ನಿಲ್ಲುತ್ತಲೇ ಅವಳು ಬಲಗೈಯಿಂದ ಕಮಲೆಯ ಗಲ್ಲ ಮುಟ್ಟಿ ತನ್ನ ಬೆರಳಿಗೆ ಮುತ್ತಿಟ್ಟುಕೊಂಡಳು. ಮತ್ತು ಗಂಡನನ್ನು ಕುರಿತು, "ನೋಡಿದೆಯಾ, ಮುಖ ಹೆಚ್ಚುಕಡಿಮೆ ನಮ್ಮ ವಿಧುವಿನಂತೆ" ಎಂದಳು.

ವಿಧು ಇವರ ಹಿರಿಯ ಮಗಳು—ಕಾನ್‌ಪುರದಲ್ಲಿ ಗಂಡನ ಮನೆಯಲ್ಲಿರು ವಳು. ಚಕ್ರವರ್ತಿ ಮನದಲ್ಲೇ ನಕ್ಕರು, ಕಮಲೆಯೊಡನೆ ವಿಧುವಿನ ಯಾವ

ಹೋಲಿಕೆಯೂ ಇಲ್ಲ, ಎಂದು ಅವರು ಬಲ್ಲರು, ಆದರೆ ಗುಣ-ರೂಪದಲ್ಲಿ ಬೇರೆ ಹುಡುಗಿಯರು ಮೇಲಾಗುವುದನ್ನು ಹರಿಭಾವಿನಿ ಒಪ್ಪಿಕೊಳ್ಳಲಾರಳು, ಶೈಲಜಾ ಅವರ ಮನೆಯಲ್ಲೇ ಇರುವಳು, ಅದರಿಂದ ಅವಳೊಡನೆ ಪ್ರತ್ಯಕ್ಷ ಹೋಲಿಕೆ ನಡೆಸಿದರೆ ಸೋಲಾಗುವುದು, ಈ ಕಾರಣದಿಂದ ಎದುರಿಗಿಲ್ಲದವರನ್ನು ಹೋಲಿಕೆಯ ಸ್ಥಳದಲ್ಲಿ ನಿಲ್ಲಿಸಿ ಗೃಹಿಣಿ ಜಯಪತಾಕೆಯನ್ನು ತನ್ನ ಮನೆಯಲ್ಲಿ ಅಚಲಗೊಳಿಸಿದಳು.

ಹರಿಭಾವಿನಿ—ಇವರು ಬಂದುದು ಒಳ್ಳೆಯದೇ ಆಯಿತು, ಆದರೆ ನಮ್ಮ ಹೊಸ ಮನೆಯ ಕಾಮಗಾರಿ ಇನ್ನೂ ಪೂರ್ತಿಯಾಗಿಲ್ಲ—ಇಲ್ಲಿ ನಾವು ಹೇಗೋ ತಲೆದೂರಿಸಿಕೊಂಡಿರುವೆವು—ಇವರಿಗೆ ತೊಂದರೆ ಆಗಬಹುದು.

ಅಂಗಡಿ ಬೀದಿಯಲ್ಲಿ ಚಕ್ರವರ್ತಿಗಳ ಒಂದು ಸಣ್ಣ ಮನೆಯ ಕಾಮಗಾರಿ ನಡೆಯುತ್ತಿದ್ದುದೇನೋ ನಿಜ, ಆದರೆ ಅದು ಒಂದು ಅಂಗಡಿ—ಅಲ್ಲಿ ವಾಸಮಾಡಲು ಯಾವ ಅನುಕೂಲವೂ ಇಲ್ಲ, ಸಂಕಲ್ಪವೂ ಇಲ್ಲ.

ಚಕ್ರವರ್ತಿ ಈ ಸುಳ್ಳಿಗೆ ಯಾವ ಪ್ರತಿವಾದವನ್ನೂ ಮಾಡದೆ ತುಸು ನಕ್ಕು, "ತಾಯಿ ಕಷ್ಟವನ್ನು ಕಷ್ಟವೆಂದು ತಿಳಿಯುವುದಾದರೆ ಅವರನ್ನು ಈ ಮನೆಗೆ ಕರೆತರುತಿದ್ದೆನೆ. (ಹೆಂಡತಿಯನ್ನು ಕುರಿತು) ಏನೇ ಆಗಲಿ, ನೀನು ಇನ್ನು ಹೊರಗಡೆ ನಿಂತಿರಬೇಡ—ವಾಗಿಯ ಬಿಸಿಲು ಅತಿಕೆಟ್ಟದ್ದು" ಎಂದರು.

ಹೀಗೆಹೇಳಿ ಚಕ್ರವರ್ತಿಗಳು ಹೊರಗಡೆ ರಮೇಶನ ಹತ್ತಿರಕ್ಕೆ ಹೋದರು.

ಹರಿಭಾವಿನಿ ವಿಸ್ತಾರವಾಗಿ ಕಮಲೆಯ ಪರಿಚಯ ಮಾಡಿಕೊಳ್ಳ ತೊಡಗಿದಳು. "ನಿನ್ನ ಗಂಡ ವಕೀಲನೇನೋ? ಅವನು ಎಷ್ಟು ದಿನದಿಂದ ಕೆಲಸಮಾಡುತಿರುವುದು? ಅವನ ವರಮಾನವೆಷ್ಟು? ಇಲ್ಲಿ ಇನ್ನೂ ಕೆಲಸ ಆರಂಭಿಸಿಲ್ಲವೇನೋ? ಹಾಗಾದರೆ ಜೀವನ ಹೇಗೆ? ಬಹುಶಃ ನಿಮ್ಮ ಮಾವನ ಆಸ್ತಿ ಇದೆಯೇನೋ? ತಿಳಿಯದೆ? ಅವ್ವಾ, ನೀನೆಂಥ ಹುಡುಗಿಯೇ! ಮಾವನ ಮನೆಯ ವಿಷಯ ತಿಳಿದುಕೊಳ್ಳಬೇಡವೆ? ಮನೆಯ ವೆಚ್ಚಕ್ಕೆ ನಿನ್ನ ಗಂಡ ತಿಂಗಳಿಗೆ ಕೊಡುವುದೆಷ್ಟು? ಅತ್ತೆ ಇಲ್ಲ, ಎಂದಮೇಲೆ ಸಂಸಾರದ ಹೊರೆ ನೀನೇ ಹೊತ್ತುಕೊಳ್ಳಬೇಕು ನೀನು ಏನೂ ಅರಿಯದ ಪುಟ್ಟ ಹುಡುಗಿಯೇನೂ ಅಲ್ಲ—ನಮ್ಮ ದೊಡ್ಡ ಅಳಿಯ ಏನು ಸಂಪಾದನೆ ಮಾಡುವನೋ,

ಎಲ್ಲವನ್ನೂ ವಿಧು ಕೈಗೆ ಎಣಿಸಿಕೊಡುವನು" ಇತ್ಯಾದಿ ಪ್ರಶ್ನೆ ಮತ್ತು ವಿಚಾರಣೆಯ ಮೂಲಕ ಅತಿ ಅಲ್ಪಕಾಲದಲ್ಲೇ ಕಮಲೆಯನ್ನು ಹಳಬಳನ್ನಾಗಿ ಮಾಡಿಕೊಂಡಳು. ಕಮಲೆ ರಮೇಶನ ಸ್ಥಿತಿಗತಿಯ ವಿಷಯವಾಗಿ ತಿಳಿದಿದ್ದ ಪರಿಚಯ ಅಲ್ಪ. ಅವನ ವಿಷಯವಾಗಿ ಪ್ರಶ್ನಿಸಿದಾಗ ಆ ಅಲ್ಪ ಪರಿಚಯ ಎಷ್ಟು ಅಸಂಗತ ಹಾಗೂ ಜನರೆದುರಿಗೆ ನಾಚಿಕೆಗೇಡು, ಎಂದು ಹರಿಭಾವಿನಿಯ ಪ್ರಶ್ನಪರಂಪರೆಯಿಂದ ಅವಳ ಮನಸಿಗೆ ಸ್ಪಷ್ಟವಾಗಿ ತೋರಿತು. ಅವಳು ಯೋಚಿಸಿ ನೋಡಿದಳು, ಇಂದಿನವರೆಗೆ ರಮೇಶನೊಡನೆ ಸರಿಯಾಗಿ ಮಾತ ನಾಡುವ ಅವಕಾಶವೂ ಅವಳಿಗೆ ದೊರೆತಿಲ್ಲ—ಅವಳು ರಮೇಶನ ಹೆಂಡತಿ ಯಾಗಿಯೂ ರಮೇಶನ ವಿಷಯವಾಗಿ ಏನೂ ಅರಿಯಳು. ಇಂದು ಇದು ಅವಳಿಗೆ ವಿಚಿತ್ರ ಸಂಗತಿಯಾಗಿ ತೋರಿತು ಮತ್ತು ತನ್ನ ಈ ಮೂಢತನದ ನಾಚಿಕೆ ಅವಳನ್ನು ಪೀಡಿಸತೊಡಗಿತು.

ಹರಿಭಾವಿನಿ ಪುನಃ ಪ್ರಾರಂಭಿಸಿದಳು, "ಓ ಸೊಸೆ, ಎಲ್ಲಿ ನಿನ್ನ ಬಳೆ? ಇದು ಅಷ್ಟು ಒಳ್ಳೆಯ ಚಿನ್ನವಲ್ಲ! ಅಪ್ಪನ ಮನೆಯ ಒಡವೆ ಏನೂ ಇಲ್ಲವೆ? ತಂದೆ ಇಲ್ಲವೆ? ಹೀಗೆಂದು ಈ ರೀತಿ ಬರಿಯ ಮೈ ಮಾಡುವುದೆ? ನಿನ್ನ ಗಂಡನೂ ಏನೂ ಕೊಡಲಿಲ್ಲವೇನೋ? ನನ್ನ ದೊಡ್ಡ ಅಳಿಯ ಎರಡು ತಿಂಗಳಿಗೊಮ್ಮೆ ನಮ್ಮ ವಿಧುವಿಗೆ ಒಂದೊಂದು ಒಡವೆ ಮಾಡಿಸಿ ಕೊಡುವ".

ಈ ಎಲ್ಲ ಪ್ರಶ್ನೆ-ಉತ್ತರದ ನಡುವೆ ಶೈಲಜ ತನ್ನೆರಡು ವರ್ಷದ ಮಗಳ ಕೈ ಹಿಡಿದುಕೊಂಡು ಬಂದಳು. ಶೈಲಜೆಯ ಬಣ್ಣ ಕಪ್ಪು, ಅವಳ ಮುಖ ಕಿರಿದು. ಹಿಡಿಯಷ್ಟು, ಎರಡು ಹೊಳೆಯುವ ಕಣ್ಣು, ಅಗಲವಾದ ಹಣೆ— ಮುಖ ನೋಡಿದ ಕೂಡಲೇ ಸ್ಥಿರಬುದ್ಧಿ ಹಾಗೂ ಒಂದು ಶಾಂತ ಸಂತುಷ್ಟಿಯ ಭಾವ ಕಾಣಬರುವುದು-

ಶೈಲಜೆಯ ಕಿರಿಯ ಮಗಳು ಕಮಲೆಯ ಎದುರಿಗೆ ನಿಂತು ಕ್ಷಣಕಾಲ ನಿರೀಕ್ಷಿಸಿದ ಬಳಿಕ "ಚಿಕ್ಕಮ್ಮ" ಎಂದಳು. ವಿಧುವಿನೊಡನೆ ಹೋಲಿಕೆ ಮಾಡಿಕೊಂಡು ಹೇಳಿದಳು, ಎಂದಲ್ಲ—ಸ್ವಲ್ಪ ಹೆಚ್ಚು ವಯಸಿನ ಯಾವ ಹುಡುಗಿಯರನ್ನಾಗಲಿ ತನಗೆ ಇಷ್ಟವಾಗದವರೆಂದು ತೋರದೆ ಹೋದಾಗ ಅವರನ್ನು ಹಿಂದು ಮುಂದು ಯೋಚಿಸದೆ "ಚಿಕ್ಕಮ್ಮ" ಎಂದು ಸಂಬೋಧಿಸು ವಳು. ಕೂಡಲೇ ಕಮಲ ಅವಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು.

ಹರಿಭಾವಿನಿ ಶೈಲಜೆಗೆ ಕಮಲೆಯ ಪರಿಚಯ ಮಾಡಿಕೊಡುತ್ತ

ಹೇಳಿದಳು, "ಇವಳ ಗಂಡ ವಕೀಲ, ಹೊಸದಾಗಿ ಉದ್ಯೋಗ ನಡೆಸಲು ಹೊರಟಿರುವನು, ಮಾರ್ಗದಲ್ಲಿ ಯಜಮಾನರೊಡನೆ ಭೇಟಿಯಾಯಿತು. ಅವರು ಇವರನ್ನು ಗಾಜೀಪುರಕ್ಕೆ ಕರೆತಂದರು".

ಶೈಲಜ ಕಮಲೆಯ ಮುಖ ನೋಡಿದಳು, ಕಮಲೆಯೂ ಶೈಲಜಳ ಮುಖ ನೋಡಿದಳು ಮತ್ತು ಆ ನೋಟದಿಂದಲೇ ಒಂದು ಮುಹೂರ್ತದಲ್ಲಿ ಇಬ್ಬರ ಸಖ್ಯಬಂಧನವುಂಟಾಯಿತು. ಹರಿಭಾವಿನಿ ಆತಿಥ್ಯದ ಏರ್ಪಾಡಿಗಾಗಿ ಹೊರಟು ಹೋದಳು—ಶೈಲಜ ಕಮಲೆಯ ಕೈಹಿಡಿದುಕೊಂಡು, "ಬಾ ತಂಗಿ, ನಮ್ಮ ಕೊಠಡಿಗೆ ಬಾ" ಎಂದಳು.

ಕ್ಷಣಕಾಲದಲ್ಲೇ ಇಬ್ಬರ ನಡುವೆ ಅತಿಪರಿಚಯದಿಂದ ಮಾತಿಗೆ ಪ್ರಾರಂಭವಾಯಿತು. ಶೈಲಜೆಯೊಡನೆ ಕಮಲೆಯ ವಯಸ್ಸಿನ ವ್ಯತ್ಯಾಸ ವಿತ್ತಾದರೂ, ಅದು ನೋಡಿದೊಡನೆಯೇ ಹೇಳುವಂತಿರಲಿಲ್ಲ. ಮೊದಲಿನಿಂದ ಕಡೆಯವರೆಗೆ ಶೈಲಜೆಯದು ಒಂದು ಸಂಕ್ಷಿಪ್ತ ಬಗೆಯ ಭಾವ—ಕಮಲೆಯದು ಇದಕ್ಕೆ ತೀರ ವ್ಯತಿರಿಕ್ತ. ಆಕೃತಿಯಲ್ಲಿ ಭಾವದಲ್ಲಿ ಭಂಗಿಯಲ್ಲಿ ಅವಳು ತನ್ನ ವಯಸ್ಸನ್ನು ಅತಿಯಾಗಿ ಮೀರಿದ್ದಳು. ಮದುವೆಯಾದ ಬಳಿಕ ಅವಳ ತಲೆಯ ಮೇಲೆ ಮಾವನ ಮನೆಯ ಯಾವ ಬಗೆಯ ಗುರುತೂ ಬೀಳದುದ ರಿಂದಲೋ ಅಥವಾ ಬೇರೆ ಕಾರಣದಿಂದಲೋ ಏನೋ ಕಣ್ಣಿಗೆ ಕಾಣುವಂತೆ ಅವಳು ಅಸಂಕೋಚದಲ್ಲಿ ಅಭಿವೃದ್ಧಿ ಪಡೆದಿದ್ದಳು. ಅವಳ ಮುಖಭಾವದಲ್ಲಿ ಒಂದು ಸ್ವಾಧೀನತೆಯ ಕಳೆ ಇತ್ತು. ಅವಳ ಎದುರಿಗೆ ಏನೇ ನಡೆಯಲಿ, ಕಡೆಗೆ ಅದರ ವಿಷಯವಾಗಿ ಮನಸಿನಲ್ಲೇ ಪ್ರಶ್ನಿಸದೆ ನೆಮ್ಮದಿಯಿಂದಿರಲಾರಳು. "ಸುಮ್ಮನಿರು", "ಹೇಳಿದುದನ್ನು ಮಾಡು", ಸೊಸೆಯರು ಹೀಗೆ "ಸಾಧ್ಯ ವಿಲ್ಲ" ಎಂದರೆ ಚೆನ್ನಾಗಿರದು—ಈ ಮಾತುಗಳು ಇಂದಿನವರೆಗೆ ಅವಳ ಕಿವಿಗೆ ಬಿದ್ದಿಲ್ಲ. ಅದರಿಂದಲೇ ಅವಳು ತಲೆಯೆತ್ತಿಕೊಂಡು ಸರಳಭಾವದಿಂದಿರು ವಳು—ಅವಳ ಸರಳತೆಯಲ್ಲಿ ಸಬಲತೆಯೂ ಇತ್ತು.

ಶೈಲಜೆಯ ಮಗಳು ಉಮಿ ಇಬ್ಬರ ಮನಸ್ಸನ್ನೂ ತನ್ನ ಕಡೆಗೆ ಸಂಪೂರ್ಣವಾಗಿ ಆಕರ್ಷಿಸಲು ಬೇಕಾದ ಪ್ರಯತ್ನ ಮಾಡಿದರೂ, ಈರ್ವರು ಹೊಸ ಗೆಳತಿಯರಲ್ಲೂ ಮಾತುಕತೆ ನಡೆಯುತ್ತಲೇ ಇತ್ತು. ಈ ಮಾತುಕತೆ ಯಲ್ಲಿ ಕಮಲ ತನ್ನ ಪಾಲಿನ ದೈನ್ಯತೆಯನ್ನು ಸುಲಭವಾಗಿ ಅರಿತುಕೊಂಡಳು. ಶೈಲಜೆಗೆ ಮಾತನಾಡಲು ಬೇಕಾದಷ್ಟಿತ್ತು, ಆದರೆ ಕಮಲೆಗೆ ಹೇಳುವುದಕ್ಕೆ

ಏನೂ ಇಲ್ಲ. ಕಮಲೆಯ ಜೀವನ ಚಿತ್ರ ಪಟದಲ್ಲಿ ಅವಳ ದಾಂಪತ್ಯದ ಒಂದು ಚಿತ್ರವಿತ್ತಲ್ಲ, ಅದು ಒಂದು ಸೀಸದ ಕಡ್ಡಿಯ ಕ್ಷೀಣಗೆರೆ ಮಾತ್ರ—ಅದರ ಎಲ್ಲ ಸ್ಥಳವು ಸರಿಯಾಗಿ ಕೂಡಿಕೊಂಡಿಲ್ಲ, ಇಂದಿನವರೆಗೆ ಅದರಲ್ಲಿ ಯಾವ ಬಣ್ಣವನ್ನೂ ತುಂಬಿಲ್ಲ. ಇಷ್ಟು ದಿನ ಕಮಲೆಗೆ ಈ ಶೂನ್ಯತೆಯನ್ನು ಸ್ಪಷ್ಟವಾಗಿ ಅರಿಯಲು ಅವಕಾಶವಿರಲಿಲ್ಲ—ಹೃದಯದಲ್ಲಿ ಅಭಾವ ಅನುಭವಿಸಿದ್ದಳು, ಆಗಾಗ್ಗೆ ಹೋರಾಟದ ಭಾವವೂ ತೋರಿದ್ದಿತು. ಆದರೆ ಇದರ ಮುಖವೂ ಅವಳ ಕಣ್ಣಿಗೆ ಸರಿಯಾಗಿ ಕಂಡಿರಲಿಲ್ಲ. ಗೆಳೆತನದ ಪ್ರಾರಂಭದಲ್ಲೇ ಶೈಲಜ ತನ್ನ ಗಂಡನ ವಿಷಯ ಹೇಳತೊಡಗಿದಳು—ಆ ಸ್ವರದಲ್ಲಿ ಶೈಲಜೆಯ ಹೃದಯದ ಎಲ್ಲ ತಂತಿಗಳೂ ಒಟ್ಟುಗೂಡಿತ್ತು, ಬೆರಳು ಸೋಕಿದ ಕೂಡಲೇ ಆ ಸ್ವರ ಹಾಡಿತು. ಕಮಲೆಯ ಹೃದಯದಲ್ಲಿ ಈ ಸ್ವರ ಝೇಂಕರಿಸುವಂತೆ ಏನೂ ಇಲ್ಲವೆಂಬುದು ಕಮಲೆಗೆ ಆಗ ಅರಿವಾಯಿತು—ಗಂಡನ ವಿಷಯ ಅವಳು ಏನು ಹೇಳುವಳು, ಹೇಳುವ ವಿಷಯವಾದರೂ ಏನಿರುವುದು. ಹೇಳುವ ಮನವಾದರೂ ಎಲ್ಲಿ. ಸುಖದ ಹೊರೆ ಹೊತ್ತು ಶೈಲಜೆಯ ಇತಿಹಾಸ ಕಲಕಲ ಎಂದು ಪ್ರವಾಹದಲ್ಲಿ ತೇಲಿಕೊಂಡು ಹೋಗುತಿರುವಲ್ಲಿ, ಕಮಲೆಯ ಶೂನ್ಯ ನೌಕೆ ಕೆಸರಿನಲ್ಲಿ ಹೂತು ಚಲಿಸದೆ ನಿಂತಿರುವುದು.

ಶೈಲಜೆಯ ಗಂಡ ವಿಪಿನ ಗಾಜೀಪುರದಲ್ಲಿ ಅಫೀಮು ಕೋಠಿಯಲ್ಲಿ ಕೆಲಸಮಾಡುತಿದ್ದ. ಚಕ್ರವರ್ತಿಗೆ ಇಬ್ಬರೇ ಹೆಣ್ಣುಮಕ್ಕಳು. ಹಿರಿಯ ಮಗಳು ಅತ್ತೆಯ ಮನೆಗೆ ಹೊರಟುಹೋದಳು. ಕಿರಿಯವಳನ್ನು ಮನಃಪೂರ್ವಕವಾಗಿ ಕಳುಹಿಸಿ ಕೊಡಲಾರದೆ ಚಕ್ರವರ್ತಿಗಳು ಒಬ್ಬ ದಿಕ್ಕಿಲ್ಲದ ಅಳಿಯನನ್ನು ಹುಡುಕಿ ತಂದರು ಮತ್ತು ದೊಡ್ಡ ಮನುಷ್ಯರನ್ನು ಹಿಡಿದು ಅಲ್ಲೇ ಅವನಿಗೆ ಒಂದು ಕೆಲಸ ಕೊಡಿಸಿದರು. ವಿಪಿನ ಇವರ ಮನೆಯಲ್ಲೇ ಇದ್ದ.

ಮಾತು ಹೇಳುತ್ತ ಹೇಳುತ್ತ ಇದ್ದಕ್ಕಿದ್ದಂತೆ ಒಮ್ಮೆ ಶೈಲ ಹೇಳಿದಳು, "ನೀನು ಸ್ವಲ್ಪ ಇರು ತಂಗಿ, ನಾನು ಈಗಲೇ ಬರುವೆ" ಕೂಡಲೇ ನಸುನಕ್ಕು ಕಾರಣ ಹೇಳಿದಳು, "ಅವರು ಸ್ನಾನಮಾಡಿ ಒಳಕ್ಕೆ ಬಂದಿರುವರು—ಊಟ ಮಾಡಿ ಆಫೀಸಿಗೆ ಹೋಗುವರು".

ಕಮಲ ಸರಳ ಆಶ್ಚರ್ಯದೊಡನೆ ಪ್ರಶ್ನಿಸಿದಳು, "ಅವರು ಬಂದಿರುವರೆ, ನಿನಗೆ ಹೇಗೆ ತಿಳಿಯಿತು".

ಶೈಲಜ " ಹಾಸ್ಯಮಾಡಬೇಡ. ಎಲ್ಲರೂ ಹೇಗೆ ತಿಳಿಯುವರೋ ನಾನೂ ಹಾಗೆಯೇ ತಿಳಿದುಕೊಂಡೆ. ನಿನಗೆ ನಿನ್ನ ಗಂಡನ ಕಾಲಸಪ್ಪುಳದ ಪರಿಚಯ ಇಲ್ಲವೆ ".

ಹೀಗೆಂದು ನಕ್ಕು ಕಮಲೆಯ ಗಲ್ಲ ಹಿಡಿದು ಒಮ್ಮೆ ಅಲುಗಾಡಿಸಿ ಸೆರಗಿಗೆ ಕಟ್ಟಿದ್ದ ಬೀಗದಕೈ ಗೊಂಚಲನ್ನು ಝಣ್ ಎನಿಸಿ ಬೆನ್ನಿನ ಮೇಲೆ ಹಾಕಿ ಕೊಂಡು ಮಗಳನ್ನು ಎತ್ತಿಕೊಂಡು ಶೈಲಜ ಹೊರಟು ಹೋದಳು. ಹೆಜ್ಜೆ ಸದ್ದಿನ ಭಾಷೆ ಇಷ್ಟು ಸುಲಭವೇ, ಅದು ಕಮಲೆಗೆ ಇಂದಿಗೂ ತಿಳಿಯದು, ಅವಳು ತೆಪ್ಪನೆ ಕುಳಿತು ಕಿಟಕಿಯ ಹೊರಗೆ ದೃಷ್ಟಿ ನೆಟ್ಟು ಅದನ್ನೇ ಯೋಚಿಸ ತೊಡಗಿದಳು. ಕಿಟಕಿಯ ಹೊರಗೆ ಒಂದು ಸೀಬೆಯ-ಮರದ ಕೊಂಬೆಯ ತುಂಬ ಸೀಬೆಯ ಹೂ ಬಿಟ್ಟಿತ್ತು, ಆ ಎಲ್ಲ ಹೂವಿನ ಕುಸುಮದಲ್ಲೂ ಜೇನು ನೊಣಗಳ ಗುಂಪು ಆಗ ಜೇನುಕುಡಿಯುತಿತ್ತು.

೩೨

ಗಂಗಾತೀರದ ಬಯಲು ಪ್ರದೇಶದಲ್ಲಿ ಒಂದು ಪ್ರತ್ಯೇಕ ಮನೆ ಮಾಡುವ ಪ್ರಯತ್ನ ನಡೆಯುತಿತ್ತು. ರಮೇಶ ಗಾಜೀಪುರದ ನ್ಯಾಯಾಸ್ಥಾನದಲ್ಲಿ ವಿಧಿ ಪ್ರಕಾರ ಪ್ರವೇಶ ದೊರೆಕಿಸಿಕೊಳ್ಳಲು ಮತ್ತು ಕಾಗದ ಪತ್ರ ತರಲು ಒಮ್ಮೆ ಕಲ್ಕತ್ತೆಗೆ ಹೋಗಲು ಅವನಿಗೆ ಧೈರ್ಯವಾಗುತಿರಲಿಲ್ಲ. ಕಲ್ಕತ್ತೆಯ ಒಂದು ಮುಖ್ಯ ಬೀದಿಯ ಚಿತ್ರ ನೆನಪಾದೊಡನೆಯೇ ರಮೇಶನ ಹೃದಯದೊಳಗೆ ಯಾವುದೋ ಒಂದು ಏನನ್ನೋ ಅದುಮಿ ಹಿಡಿಯಿತು. ಇನ್ನೂ ಬಲಿ ಹರಿದಿರಲಿಲ್ಲ—ಆದರೆ ಕಮಲೆಯೊಡನೆ ಪತಿ-ಪತ್ನೀ ಸಂಬಂಧವನ್ನು ಸಂಪೂರ್ಣ ಭಾವದಿಂದ ಒಪ್ಪಿಕೊಳ್ಳಲು ಸಾವಕಾಶ ಮಾಡಿದರೆ ಸಾಧ್ಯವಿಲ್ಲ. ಈ ಎಲ್ಲ ಹೋರಾಟದಲ್ಲಿ ಕಲ್ಕತ್ತೆಯ ಪ್ರಯಾಣದ ದಿನ ಮುಂದುವರಿಯುತ್ತಲೇ ಇತ್ತು.

ಕಮಲ ಚಕ್ರವರ್ತಿಗಳ ಅಂತಃಪುರದಲ್ಲೇ ಇದ್ದಳು. ಈ ಬಂಗಲೆಯಲ್ಲಿ ಕೊಠಡಿಗಳು ಬಹಳ ಕಡಿಮೆಯೆಂದು ರಮೇಶ ಹೊರಗಿನ ಕೊಠಡಿಯಲ್ಲೇ ಇದ್ದ. ಕಮಲೆಯನ್ನು ನೋಡಲು ಅವನಿಗೆ ಅವಕಾಶವೇ ಆಗಲಿಲ್ಲ.

ಈ ಅನಿವಾರ್ಯ ವಿಚ್ಛೇದಕ್ಕಾಗಿ ಶೈಲಜ ಕಮಲೆಯ ಬಳಿ ದುಃಖ ವ್ಯಕ್ತಪಡಿಸತೊಡಗಿದಳು. " ಏನಕ್ಕಾ, ನೀನು ಇಷ್ಟು ಕಾತುರಗೊಳ್ಳುವೆ. ಅಂತಹ ಭಯಂಕರ ಸಂಗತಿಯೇನು ನಡೆದಿದೆ " ಎಂದಳು ಕಮಲ.

ಶೈಲಜ ನಕ್ಕು ಹೇಳಿಗಿಳು, " ಅಬ್ಬ, ಅದೇ ಅಲ್ಲವೆ ಸಂಪೂರ್ಣವಾಗಿ ಕಲ್ಲಿನಂಥ ಮನಸ್ಸು. ಈ ಎಲ್ಲ ನಟನೆಯಿಂದ ನನ್ನನ್ನು ಮೋಸಗೊಳಿಸಲಾರೆ. ನಿನ್ನ ಮನಸ್ಸಿನಲ್ಲೇನು ನಡೆಯುತ್ತಿದೆಯೋ ಅದು ನನಗೆ ತಿಳಿಯದೇನು ".

ಕಮಲ, " ಇರಲಿ ಅಕ್ಕ, ಸತ್ಯವಾಗಿ ಹೇಳು, ಒಂದು ವೇಳೆ ಎರಡು ದಿನ ವಿಪಿನಬಾಬು ನಿನ್ನನ್ನು ನೋಡದಿದ್ದರೆ, ಆಗ ನೀನು ಹೀಗೆ . . . " ಎಂದು ಕೇಳಿದಳು.

ಶೈಲಜ ಹೆಮ್ಮೆಯಿಂದ ಹೇಳಿದಳು, " ಅಬ್ಬ, ಎರಡು ದಿನ ನೋಡದೆ ಇರುವಷ್ಟು ಎದೆಗಾರಿಕೆಯೇ ಅವರಿಗಿಲ್ಲ ".

ಹೀಗೆ ಹೇಳಿ ವಿಪಿನಬಾಬುಗಳ ಅಧೈರ್ಯದ ವಿಷಯವಾಗಿ ಶೈಲಜ ಕತೆ ಹೇಳಲಾರಂಭಿಸಿದಳು. ಮದುವೆಯಾದ ಮೊದಮೊದಲು ತರುಣ ವಿಪಿನ ಹಿರಿಯರ ವ್ಯೂಹ ಭೇದಿಸಿಕೊಂಡು ತನ್ನ ತರುಣಿ–ಹೆಂಡತಿಯನ್ನು ಸೇರಲು ಯಾವಾಗ ಎಷ್ಟು ಬಗೆಯ ಕೌಶಲ ಹೂಡಿದ, ಯಾವಾಗ ವಂಚಿತನಾದ, ಯಾವ ದಿನ ಸಿಕ್ಕಿ ಬಿದ್ದ, ಹಗಲಿನ ಭೇಟಿಯ ಅಡ್ಡಿಯ ದುಃಖ ಹೋಗಲಾಡಿಸಿಕೊಳ್ಳಲು ವಿಪಿನನ ಮಧ್ಯಾಹ್ನದ ಊಟದ ವೇಳೆಯಲ್ಲಿ ಒಂದು ಕನ್ನಡಿಯ ನಡುವೆ ಹಿರಿಯರಿಗೆ ತಿಳಿಯದೆ ಇಬ್ಬರ ದೃಷ್ಟಿವಿನಿಮಯ ಹೇಗೆ ನಡೆಯಿತೆಂದು ಹೇಳುತ್ತ ಹೇಳುತ್ತ ಹಿಂದಿನ ಸ್ಮೃತಿಯ ಆನಂದ–ಕುತೂಹಲದಿಂದ ಶೈಲಜೆಯ ಮುಖ ಸಂತೋಷದಿಂದ ಪ್ರಕಾಶಿಸಿತು. ಆಮೇಲೆ ವಿಪಿನ ಆಫೀಸಿಗೆ ಹೋಗತೊಡಗಿದಾಗ, ಇಬ್ಬರ ವೇದನೆ ಮತ್ತು ವಿಪಿನ ಆಗಾಗ ಆಫೀಸಿಗೆ ತಪ್ಪಿಸಿಕೊಳ್ಳುತಿದ್ದುದು, ಅದೆಲ್ಲ ದೊಡ್ಡ ಕತೆ ಅನಂತರ ಒಮ್ಮೆ ಮಾವನ ಕೆಲಸದ ಪರವಾಗಿ ವಿಪಿನ ಕೆಲವು ದಿನ ಪಾಟ್ನಾಕ್ಕೆ ಹೋಗುವ ಮಾತು ನಡೆಯಿತು. ಆಗ ಶೈಲಜ ತನ್ನ ಗಂಡನನ್ನು " ನೀವು ಪಾಟ್ನಾಕ್ಕೆ ಹೋಗಿರಬಲ್ಲಿರಾ " ಎಂದು ಕೇಳಿವಳು, ಆತ " ಏಕೆ ಇರಲಾರೆ, ಸಂತೋಷವಾಗಿ " ಎಂದು ಉತ್ತರ ಕೊಟ್ಟ. ಈ ಹೆಮ್ಮೆಯ ಮಾತಿನಿಂದ ಶೈಲಜೆಯ ಮನಸ್ಸು ಮತ್ತಷ್ಟು ಕಾತುರಗೊಂಡಿತು—ಅವಳು ತನ್ನ ಮೇಲೆ ಆಣೆಯಿಟ್ಟುಕೊಂಡು ಪ್ರತಿಜ್ಞೆ ಮಾಡಿದ್ದಳು. ಹೊರಡುವ ಹಿಂದಿನ ರಾತ್ರಿ ಅವಳು ಯಾವ ರೀತಿಯಲ್ಲೂ ಸ್ವಲ್ಪವಾದರೂ ದುಃಖವ್ಯಕ್ತಪಡಿಸುವುದಿಲ್ಲ ಎಂದು ; ಯಾವುದೋ ಬಗೆಯಲ್ಲಿ ಆ ಪ್ರತಿಜ್ಞೆ ಹಠಾತ್ತನೆ ಕಣ್ಣೀರಿನಲ್ಲಿ ನೆನೆದು ತೇಲಿಹೋಯಿತು ಮತ್ತು ಮಾರನೆಯ ದಿನ ಪ್ರಯಾಣದ ಏರ್ಪಾಡೆಲ್ಲ ನಡೆದಾಗ, ವಿಪಿನ ಅಕಸ್ಮಾತ್ತಾಗಿ

ತಲೆ ಹಿಡಿದುಕೊಂಡು ಯಾವುದೋ ರೀತಿಯ ನೋವು ವ್ಯಕ್ತಪಡಿಸತೊಡಗಿದ. ಅದರಿಂದ ಪ್ರಯಾಣ ನಿಲ್ಲಿಸಬೇಕಾಯಿತು. ಆ ಬಳಿಕ ಡಾಕ್ಟರು ಔಷಧ ಕೊಟ್ಟು ಹೋದರು, ಆ ಔಷಧದ ಸೀಸೆಯನ್ನು ಗುಟ್ಟಾಗಿ ಬಚ್ಚಲಲ್ಲಿ ಬಗ್ಗಿಸಿ ಅಪೂರ್ವ ಉಪಾಯದಿಂದ ಹೇಗೋ ರೋಗ ಕೊನೆಗೊಂಡಿತು—ಈ ಎಲ್ಲ ಕತೆಯನ್ನೂ ಹೇಳುತ್ತ ಹೇಳುತ್ತ ಹೊತ್ತು ಬಹಳವಾಗಿದ್ದರೂ, ಶೈಲಜೆಗೆ ಅತ್ತ ಗಮನವೇ ಇಲ್ಲ—ಅದರೆ ಆ ವೇಳೆಯಲ್ಲಿ ಇದ್ದಕ್ಕಿದ್ದಂತೆ ದೂರ ಹೊರ ಬಾಗಿಲಲ್ಲಿ ಯಾವುದೋ ಸದ್ದು; ಅದೂ—ಆಗದ ಹಾಗೂ ಆಯಿತೋ ಇಲ್ಲವೋ ಆ ಕ್ಷಣ ಶೈಲಜ ಗಾಬರಿಗೊಂಡಳು. ವಿಪಿನಬಾಬು ಆಫೀಸಿನಿಂದ ಹಿಂದಿರುಗಿ ಬಂದಿದ್ದ. ಎಲ್ಲ ಹಾಸ್ಯಾಲಾಪದ ಅಂತರಾಳದಲ್ಲಿ ಒಂದು ಉತ್ಕಂಠಿತ ಹೃದಯ ಅದೇ ದಾರಿಯಲ್ಲಿ ಹೊರಗೆ—ಬಾಗಿಲು ಕಡೆಗೇ ಕಿವಿಗೊಟ್ಟು ಕುಳಿತಿತ್ತು.

ಕಮಲೆಗೆ ಈ ಎಲ್ಲ ಸಂಗತಿಯೂ ಕೇವಲ ಆಕಾಶ ಕುಸುಮದಂತೆ, ಎನ್ನುವಂತಿಲ್ಲ—ಇದರ ಅಸ್ಪಷ್ಟ ಬೆಳಕನ್ನು ಅಲ್ಪಸ್ವಲ್ಪ ಪಡೆದಿರುವಳು. ಪ್ರಾರಂಭದ ಕೆಲವು ತಿಂಗಳು ರಮೇಶನೊಡನೆ ಪ್ರಥಮ ಪರಿಚಯದ ರಹಸ್ಯದ ಮಧ್ಯೆ ಇದೇ ರೀತಿಯ ಒಂದು ರಾಗಿಣೀ ರಾಗಾಲಾಪನೆ ಮಾಡಿರುವುದು. ಅನಂತರ ಶಾಲೆಯಿಂದ ಓದು ಬರಹ ಕಲಿತು ಕಮಲ ರಮೇಶನ ಬಳಿಗೆ ಹಿಂದಿರುಗಿ ಬಂದಳು, ಆಗಲೂ ಆಗಾಗ್ಗೆ ಈ ಅನುಭವ ಅಪೂರ್ವ ಸಂಗೀತ ಮತ್ತು ಅಪರೂಪ ನೃತ್ಯರೂಪದಲ್ಲಿ ಅವಳ ಹೃದಯವನ್ನು ನೋಯಿಸಿರುವುದು—ಅದರ ಸರಿಯಾದ ಅರ್ಥವನ್ನು ಅವಳು ಇಂದು ಶೈಲಜೆಯ ಈ ಎಲ್ಲ ಮಾತಿನ ಮೂಲಕ ತಿಳಿದುಕೊಂಡಳು. ಆದರೆ ಅವೆಲ್ಲಾ ಒಡೆದು ಚೂರು ಚೂರು, ಅದರ ಪ್ರವಾಹ ಸ್ವಲ್ಪವೂ ಇಲ್ಲ. ಅದನ್ನು ಯಾವುದಾದರೂ ಒಂದು ನೆಲೆಯವರೆಗೆ ತಲಪಿಸಲಾಗಲಿಲ್ಲ. ಶೈಲಜ ಮತ್ತು ವಿಪಿನನ ನಡುವೆ ಇದು ಒಂದು ಬಲವಂತ ಆಕರ್ಷಣೆ, ಅದರಲ್ಲೂ ಅವರ ಮಧ್ಯೆ ರಮೇಶ ಎಲ್ಲಿ ! ಈ ಕೆಲವು ದಿನಗಳಿಂದ ಅವರ ಭೇಟಿಯೇ ನಿಂತುಹೋಗಿರುವುದು,—ಇದರಿಂದ ಅವಳ ಹೃದಯದಲ್ಲಿ ಒಂದು ಬಗೆಯ ಕಾತುರತೆಯುಂಟಾಗಿರುವುದು—ಮತ್ತು ರಮೇಶನೂ ಅವಳನ್ನು ನೋಡಲು ಹೊರಗಡೆ ಕುಳಿತು ಕುಳಿತು ಯಾವುದೋ ರೀತಿಯಲ್ಲಿ ಉಪಾಯ ಹುಡುಕುತ್ತಿರುವ. ಎನ್ನುವುದು ಅಷ್ಟಾಗಿ ನಂಬಲು ಸಾಧ್ಯವಿಲ್ಲ.

ಈ ಮಧ್ಯೆ ಭಾನುವಾರ ಬಂತು. ಅಂದು ಶೈಲಜ ಸ್ವಲ್ಪ ಪೇಚಾಟಕ್ಕೆ

ಸಿಕ್ಕಿಕೊಂಡಳು. ತನ್ನ ಹೊಸ ಗೆಳತಿಯನ್ನು ಹೆಚ್ಚು ಕಾಲ ಒಂಟಿಯಾಗಿ ಬಿಟ್ಟು ಹೋಗುವುದು ಅವಳಿಗೆ ನಾಚಿಕೆಯೆನಿಸಿತು—ಹಾಗೆಂದು ಆ ಬಿಡುವಿನ ದಿನವನ್ನು ಸಂಪೂರ್ಣವಾಗಿ ವ್ಯರ್ಥಮಾಡುವುದೆ? ಅಷ್ಟು ತ್ಯಾಗಶೀಲತೆಯೂ ಅವಳಿಗಿಲ್ಲ. ಇತ್ತ ರಮೇಶಬಾಬು ಬಳಿಯಲ್ಲೇ ಇದ್ದರೂ ಕಮಲ ಮಿಲನ ದಿಂದ ವಂಚಿತಳಾಗಿರುವಳು, ಬಿಡುವಿನ ಆನಂದದಲ್ಲಿ ತನ್ನ ಪದ್ಧತಿಯ ಸ್ಥಿತಿಯನ್ನು ಪೂರ್ಣವಾಗಿ ಅನುಭವಿಸಲು ಅವಳಿಗೆ ವ್ಯಥೆಯುಂಟಾಯಿತು. ಆಹಾ, ಯಾವ ಬಗೆಯಲ್ಲಿ ರಮೇಶನೊಡನೆ ಕಮಲೆಯ ಮಿಲನವುಂಟಾಗು ವುದು.

ಈ ಎಲ್ಲ ವಿಷಯವನ್ನೂ ಹಿರಿಯರ ಬಳಿ ಚರ್ಚಿಸುವಂತಿಲ್ಲ—ಆದರೆ ಚಕ್ರವರ್ತಿಗಳು ಹೇಳಿಕೆಗಾಗಿ ಕಾಯುವ ವ್ಯಕ್ತಿಯಲ್ಲ. ಅಂದು ತಾವು ಯಾವುದೋ ಕೆಲಸದ ಮೇಲೆ ಊರು ಬಿಟ್ಟು ಹೋಗುವುದಾಗಿ ಮನೆಯಲ್ಲಿ ಹೇಳಿದರು. ಇಂದು ಬೇರೆ ಯಾರೂ ತಮ್ಮ ಮನೆಗೆ ಬರುವುದಿಲ್ಲ—ಹೊರಗಡೆ-ಬಾಗಿಲು ಹಾಕಿಕೊಂಡು ತಾನು ಹೋಗುವುದಾಗಿ ರಮೇಶನಿಗೂ ಹೇಳಿದರು. ಈ ವಿಷಯವನ್ನು ಮುಖ್ಯವಾಗಿ ತಮ್ಮ ಮಗಳಿಗೂ ತಿಳಿಸಿದರು—ಯಾವ ಇಂಗಿತಕ್ಕೆ ಯಾವ ಅರ್ಥ ಎಂದು ತಿಳಿಯಲು ಶೈಲಜೆಗೆ ಕಾಲವಿಳಂಬವಾಗ ದೆಂದು ಖಂಡಿತ ಬಲ್ಲರು.

ಸ್ನಾನವಾದ ಬಳಿಕ ಶೈಲಜ ಕಮಲೆಗೆ ಹೇಳಿದಳು, "ಬಾ ತಂಗಿ, ನಿನ್ನ ಕೂದಲು ಒಣಗಿಸುವೆ".

"ಏಕೆ, ಇಂದು ಇಷ್ಟು ಅವಸರವೇಕೆ" ಎಂದಳು ಕಮಲ.

ಶೈಲಜ—ಆ ಮಾತು ಆಮೇಲೆ—ಮೊದಲು ನಿನ್ನ ತಲೆ ಬಾಚುವೆ—ಹೀಗೆ ಹೇಳಿ ಕಮಲೆಯ ತಲೆಗೆ ಕೈಹಾಕಿದಳು—ಇಂದು ಜಡೆ ಹಾಕುವುದೇ ದೊಡ್ಡ ಕೆಲಸ—ತುರುಬು ಹಾಕುವುದು ಒಂದು ಅದ್ಭುತ ಕೆಲಸವಾಯಿತು.

ಆ ಬಳಿಕ ಬಟ್ಟೆಯ ವಿಷಯದಲ್ಲಿ ಇಬ್ಬರಲ್ಲೂ ಒಂದು ಕಠಿಣ ತರ್ಕ ವೆದ್ದಿತು. ಶೈಲಜ ಅವಳಿಗೆ ಯಾವ ಬಣ್ಣದ ಸೀರೆ ಉಡಿಸಲು ಆಶಿಸಿದಳೋ, ಅದನ್ನು ಉಡಲು ಕಾರಣವೇನೆಂದು ಕಮಲೆಗೆ ತಿಳಿಯಲಿಲ್ಲ. ಕಡೆಗೆ ಶೈಲಜೆಗೆ ಸಂತೋಷಪಡಿಸುವುದಕ್ಕಾಗಿ ಉಟ್ಟುಕೊಳ್ಳಬೇಕಾಯಿತು.

ಮಧ್ಯಾಹ್ನ ಊಟವಾದ ಬಳಿಕ ಶೈಲಜ ತನ್ನ ಗಂಡನ ಕಿವಿಯಲ್ಲಿ ಏನೋ ಪಿಸುಮಾತು ಹೇಳಿ ಕ್ಷಣಕಾಲ ಅವಕಾಶ ಕೇಳಿಕೊಂಡು ಬಂದಳು.

ಆ ಬಳಿಕ ಕಮಲೆಯನ್ನು ಹೊರಗಿನ ಕೊಠಡಿಗೆ ಕಳುಹಿಸಲು ಬಲಾತ್ಕಾರ ನಡೆಯಿತು.

ರಮೇಶನ ಬಳಿಗೆ ಕಮಲ ಈ ಮೊದಲು ಅನೇಕ ಬಾರಿ ಸಂಕೋಚ ವಿಲ್ಲದೆ ಹೋಗಿರುವಳು. ಈ ವಿಷಯವಾಗಿ ಜನರೆದುರಿಗೆ ನಾಚಿಕೆತೋರಿಸುವ ಯಾವುದೋ ಬಗೆ ಇರುವುದೆಂದು ತಿಳಿಯಲು ಅವಳಿಗೆ ಯಾವ ಅವಕಾಶವೂ ದೊರೆತಿರಲಿಲ್ಲ. ಪರಿಚಯದ ಪ್ರಾರಂಭದಲ್ಲೇ ರಮೇಶ ಸಂಕೋಚ ದೂರ ಮಾಡಿದ್ದ. ನಿರ್ಲಜ್ಜೆಯ ಅಪವಾದ ಹೊರಿಸಿ ತಿರಸ್ಕರಿಸುವಂಥ ಗೆಳತಿಯರೂ ಬಳಿಯಲ್ಲಿರಲಿಲ್ಲ.

ಆದರೆ ಅಂದು ಶೈಲಜೆಯ ಕೋರಿಕೆ ನೆರವೇರಿಸಲು ಅವಳಿಗೆ ಕಷ್ಟ ವೆನಿಸಿತು. ಗಂಡನ ಬಳಿಗೆ ಶೈಲಜ ಯಾವ ಅಧಿಕಾರದಿಂದ ಹೋಗುವಳು, ಎಂಬುದನ್ನು ಅವಳು ತಿಳಿದುಕೊಂಡಳು—ಕಮಲ ಆ ಅಧಿಕಾರದ ಗೌರವ ಅನುಭವಿಸದಿರುವಾಗ, ಅಂದು ದೈನ್ಯತೆಯಿಂದ ಅವಳು ಹೇಗೆ ಹೋಗುವಳು.

ಕಮಲೆಯನ್ನು ಯಾವ ಬಗೆಯಲ್ಲೂ ಒಪ್ಪಿಸಲಾಗಲಿಲ್ಲ. ಆಗ ಶೈಲ ಯೋಚಿಸಿದಳು, ರಮೇಶನ ಮೇಲೆ ಅವಳು ಕೋಪಗೊಂಡಿರುವಳು-ಕೋಪಿಸಿ ಕೊಂಡಿರುವುದಾದರೂ ಸರಿಯೆ ! ಎಷ್ಟು ದಿನವಾಯಿ ತು. ಆದರೂ ರಮೇಶ ಬಾಬು ಯಾವ ನೆಪದಿಂದಾಗಲಿ ಒಮ್ಮೆಯೂ ನೋಡಲು ಪ್ರಯತ್ನಿಸಲಿಲ್ಲ.

ಮನೆಯ ಒಡತಿ ಊಟ ಮುಗಿಸಿಕೊಂಡು ಕೊಠದಿಯಲ್ಲಿ ಚಾಪೆ ಹಾಸಿ ಮಲಗಿದ್ದಳು. ಶೈಲಜ ವಿಪಿನನ ಬಳಿ ಹೇಳಿದಳು, " ರಮೇಶ ಬಾಬುಗಳನ್ನು ನೀವು ಇಂದು ಕಮಲ ಕರೆಯುತಿರುವುದಾಗಿ ಹೇಳಿ ಒಳಕ್ಕೆ ಕರೆದುಕೊಂಡು ಬನ್ನಿ. ಅಪ್ಪ ಏನೂ ಹೇಳುವುದಿಲ್ಲ, ಅಮ್ಮನಿಗೆ ಯಾವುದೂ ತಿಳಿಯುವುದಿಲ್ಲ ". ವಿಪಿನನಂತೆ ಮೌನವಾಗಿ ಬಾಯಿ ಮುಚ್ಚಿಕೊಂಡಿರುವ ವ್ಯಕ್ತಿಗೆ ಇಂಥ ರಾಯ ಭಾರ ಯಾವ ಬಗೆಯಲ್ಲೂ ಸರಿಬೀಳದು. ಆದರೂ ಬಿಡುವಿನ ದಿನದಲ್ಲಿ ಅವನು ಈ ಕೋರಿಕೆ ಮೀರಲು ಸಾಹಸಪಡಲಿಲ್ಲ.

ರಮೇಶ ಆಗ ಹೊರಗಿನ ಕೊಠಡಿಯಲ್ಲಿ ರತ್ನಗಂಬಳಿಹಾಸಿದ ನೆಲದಮೇಲೆ ಮುಖ ಮೇಲಾಗಿ ಮಲಗಿಕೊಂಡು ಎತ್ತಿದ ಮೊಣಕಾಲ ಮೇಲೆ ಮತ್ತೊಂದು ಕಾಲು ಎತ್ತಿಟ್ಟುಕೊಂಡು ' ಪಯೋನಿಯರ್ ' ಓದುತಿದ್ದ. ಓದಬೇಕಾದುದ ನ್ನೆಲ್ಲ ಓದಿ ಮುಗಿಸಿ ಕೆಲಸವಿಲ್ಲದೆ ಪ್ರಕಟನೆಗಳ ಕಡೆ ಗಮನ ಕೊಡಲು ತೊಡಗುತಿದ್ದಾಗ, ವಿಪಿನ ಕೊಠಿಡಿಯೊಳಕ್ಕೆ ಬರುವುದನ್ನು ನೋಡಿ ಸಂತೋಷ

ಗೊಂಡ. ಗೆಳೆತನದ ವಿಷಯದಲ್ಲಿ ವಿಪಿನ ಉತ್ತಮ ದರ್ಜೆಯ ಪದಾರ್ಥ, ಎನ್ನುವಂತಿಲ್ಲದಿದ್ದರೂ ಹೊರ ಊರಿನಲ್ಲಿ ಮಧ್ಯಾಹ್ನದ ಹೊತ್ತು ಕಳೆಯಲು ರಮೇಶ ಅವನನ್ನು ಪರಮ ಲಾಭವೆಂದು ಲೆಕ್ಕಿಸಿದ ಮತ್ತು "ಬನ್ನಿ ವಿಪಿನ ಬಾಬು, ಬನ್ನಿ ಕುಳಿತುಕೊಳ್ಳಿ" ಎಂದು ಕರೆದ.

ವಿಪಿನ ಕುಳಿತುಕೊಳ್ಳದೆಯೇ ಸ್ವಲ್ಪ ತಲೆ ಕೆರೆದುಕೊಳ್ಳುತ್ತ ಹೇಳಿದ, "ನಿಮ್ಮನ್ನು ಒಮ್ಮೆ ಬರಹೇಳಿದರು".

"ಯಾರು, ಕಮಲೆಯೇ ?" ಎಂದು ರಮೇಶ ಪ್ರಶ್ನಿಸಿದ.

ವಿಪಿನ "ಹೌದು" ಎಂದ.

ರಮೇಶನಿಗೆ ಆಶ್ಚರ್ಯವಾಯಿತು. ಕಮಲೆಯನ್ನು ಹೆಂಡತಿಯೆಂದೇ ಪರಿಗ್ರಹಿಸುವೆ, ಎಂದು ಮೊದಲೇ ರಮೇಶ ತೀರ್ಮಾನಿಸಿದ್ದ, ಆದರೆ ಅವನ ಸ್ವಾಭಾವಿಕ-ಚಂಚಲ ಮನ ಆ ಮೊದಲು ಈ ಕೆಲವುದಿನಗಳ ಅವಕಾಶದಿಂದ ವಿಶ್ರಾಂತಿ ಪಡೆಯುತಿತ್ತು. ಕಲ್ಪನೆಯಿಂದ ಕಮಲೆಯನ್ನು ಗೃಹಿಣೀಸ್ಥಾನ ದಲ್ಲಿ ಅಭಿಷೇಕ ಮಾಡಿ ಅವನು ಮನಸ್ಸನ್ನು ನಾನಾಬಗೆಯ ಭಾವೀ ಸುಖದ ನಂಬಿಕೆಯಿಂದ ಉದ್ರೇಕಗೊಳಿಸಿದ್ದ—ಆದರೆ ಮೊದಲು ಪ್ರಾರಂಭಿಸುವುದೇ ಕಷ್ಟ. ಕೆಲವು ದಿನಗಳಿಂದ ಕಮಲೆಯ ವಿಷಯದಲ್ಲಿ ದೂರತ್ವ ಉಳಿಸಿಕೊಂಡು ಅವನಿಗೆ ಅಭ್ಯಾಸವಾಗಿತ್ತು, ಇದ್ದಕ್ಕಿದ್ದಂತೆ ಒಂದು ದಿನ ಅದನ್ನು ಹೇಗೆ ಒಡೆದು ಹಾಕುವುದೆಂದು ಯೋಚಿಸಿಯೂ ತಿಳಿಯಲಾಗಲಿಲ್ಲ, ಈ ಕಾರಣ ದಿಂದಲೇ ಬಾಡಿಗೆ ಮನೆ ಗೊತ್ತುಮಾಡುವುದರಲ್ಲಿ ಅವನಿಗೆ ಅಷ್ಟು ಆಸಕ್ತಿ ಇರಲಿಲ್ಲ.

ಕಮಲೆ ಕರೆಯುವಳು ಎಂದು ಕೇಳಿ ರಮೇಶ, ಖಂಡಿತ ಯಾವುದೋ ಮುಖ್ಯ ಸಂಗತಿ ಇರಬಹುದೆಂದು ತಿಳಿದ. ಆದರೂ ಅಗತ್ಯದ ಕರೆ ಬಂದರೂ ಅವನ ಮನಸ್ಸಿನಲ್ಲಿ ಒಂದು ಗೊಂದಲವುಂಟಾಯಿತು. ವಿಪಿನನನ್ನು ಹಿಂಬಾಲಿ ಸುತ್ತ ಪಯೋನಿಯರ್ ಕೆಳಕ್ಕೆ ಹಾಕಿ ಅವನು ಅಂತಃಪುರಕ್ಕೆ ಹೊರಟ, ಆಗ ಆ ದುಂಬಿಗಳು ಝೇಂಕರಿಸುವ ಕಾರ್ತಿಕದ ಅತಿ ಆಯಾಸವುಳ್ಳ ಜನಹೀನ ಮಧ್ಯಾಹ್ನದಲ್ಲಿ ಒಂದು ಅಭಿಸಾರದ ಅಸ್ಪಷ್ಟ ಕಾಂತಿ ಅವನ ಮನಸ್ಸನ್ನು ಸ್ವಲ್ಪ ಚಂಚಲಗೊಳಿಸಿತು.

ವಿಪಿನ ಸ್ವಲ್ಪ ದೂರದಿಂದಲೇ ಕೊಠಡಿ ತೋರಿಸಿ ಹೊರಟು ಹೋದ. ಶೈಲಜ ತನ್ನ ವಿಷಯದಲ್ಲಿ ಗೊಂದಲ ಎಬ್ಬಿಸಿ ವಿಪಿನನ ಬಳಿಗೆ ಹೊರಟು

ಹೋಗಿರುವಳು, ಎಂದು ಕಮಲ ಭಾವಿಸಿದ್ದಳು. ಅವರಿಂದಲೇ ಅವಳು ತೆರೆದ ಬಾಗಿಲ ಹೊಸ್ತಿಲ ಮೇಲೆ ಕುಳಿತು ಎದುರು ಭಾಗದ ತೋಟದ ಕಡೆ ನೋಡುತಿದ್ದಳು. ಶೈಲ ಯಾವುದೋ ಬಗೆಯಲ್ಲಿ ಕಮಲೆಯು ಒಳಗೆ-ಹೊರಗೆ ಒಂದು ಪ್ರೀತಿಯ ಸ್ವರ ನುಡಿಸಿರುವಳು. ಸ್ವಲ್ಪ ಕಾವ ಗಾಳಿಯಲ್ಲಿ ಹೊರಗೆ ಮರದ ಎಲೆಗಳು ಮರ್ಮರ ಶಬ್ದದಿಂದ ಅಲುಗಾಡುತಿದ್ದುವು. ಕಮಲೆಯ ಹೃದಯದಲ್ಲೂ ಆಗಾಗ್ಗೆ ಅದೇ ಬಗೆಯ ಒಂದು ನಿಟ್ಟುಸಿರಿನ ಗಾಳಿ ಎದ್ದು ಹೇಳಲಾರದ ವೇದನೆಯಲ್ಲಿ ಒಂದು ವಿಚಿತ್ರ ಸ್ಪಂದನದ ಸಂಚಾರ ಮಾಡು ತಿತ್ತು.

ಇಂಥ ಹೊತ್ತಿನಲ್ಲಿ ರಮೇಶ ಕೊಠಡಿಯೊಳಕ್ಕೆ ಬಂದು ಅವಳ ಹಿಂದುಗಡೆ ಯಿಂದ " ಕಮಲ," ಎಂದು ಕರೆದ — ಆಗ ಅವಳು ಬೆಚ್ಚಿಬಿದ್ದವಳಂತೆ ಎದ್ದು ನಿಂತಳು—ಅವಳ ಹೃದಯದೊಳಗೆ ರಕ್ತ ಅಲ್ಲೋಲಕಲ್ಲೋಲವಾಗತೊಡ ಗಿತು; ಕಮಲ ಇದಕ್ಕೆ ಮೊದಲು ಎಂದೂ ರಮೇಶನ ಹತ್ತಿರ ಅಷ್ಟಾಗಿ ನಾಚಿಕೆಪಟ್ಟಿರಲಿಲ್ಲ, ಅವಳು ಇಂದು ಸರಿಯಾಗಿ ನೋಡಲಾರದಾದಳು. ಆವಳ ಕಿವಿಯ ಬುಡ ಅತಿ ಕೆಂಪಾಯಿತು.

ಇಂದಿನ ವೇಷ-ಭೂಷಣ ಭಾವ-ಭಂಗಿಯಿಂದ ರಮೇಶ ಕಮಲೆಯನ್ನು ನೂತನ ಮೂರ್ತಿಯಂತೆ ನೋಡಿದ. ಇದ್ದಕ್ಕಿದ್ದಂತೆ ಕಮಲೆಯ ಈ ವಿಕಾಸ ಅವನನ್ನು ಆಶ್ಚರ್ಯ ಹಾಗೂ ವಿಹ್ವಲಗೊಳಿಸಿತು. ಅವನು ಮೆಲ್ಲಮೆಲ್ಲನೆ ಕಮಲೆಯ ಹತ್ತಿರ ಬಂದು ಕ್ಷಣಕಾಲ ಸುಮ್ಮನೆ ನಿಂತಿದ್ದು ಮೃದುಸ್ವರದಲ್ಲಿ, " ಕಮಲಾ, ನೀನು ನನ್ನನ್ನು ಬರಹೇಳಿದೆಯಾ ? ".

ಕಮಲ ಚಕಿತಳಾಗಿ ಅನಾವಶ್ಯಕ ಉದ್ರೇಕದಿಂದ " ಇಲ್ಲ ಇಲ್ಲ ಇಲ್ಲ, ನಾನು ಬರಹೇಳಲಿಲ್ಲ—ನಾನೇಕೆ ಬರಹೇಳಲಿ " ಎಂದಳು.

ರಮೇಶ, " ಕರೆದರೆ ತಪ್ಪೇನು ಕಮಲ " ಎಂದ.

ಕಮಲ ದ್ವಿಗುಣ ಉದ್ರೇಕದೊಡನೆ, " ಇಲ್ಲ, ನಾನು ಕರೆಯಲಿಲ್ಲ " ಎಂದಳು.

ರಮೇಶ, " ಅದು ಸರಿ, ನೀನು ಕರೆಯದೆಯೇ ನಾನು ಬಂದಿರುವೆ. ಹೀಗೆಂದು ಅವಮಾನದಿಂದ ಹಿಂದಿರುಗಿ ಹೋಗಬೇಕೆ ? " ಎಂದು ಕೇಳಿದ.

ಕಮಲ—ನೀನಿಲ್ಲಿಗೆ ಬಂದಿರುವುದು ಎಲ್ಲರಿಗೂ ತಿಳಿದರೆ ಕೋಪಗೊಳ್ಳು ವರು—ನೀನು ಹೋಗು ! ನಾನು ನಿನ್ನನ್ನು ಕರೆಯಲಿಲ್ಲ.

ರಮೇಶ ಕಮಲೆಯ ಕೈ ಒತ್ತಿ ಹಿಡಿದು ಹೇಳಿದ, "ಒಳ್ಳೆಯದು, ನೀನು ನನ್ನ ಕೊಠಡಿಗೆ ಬಾ—ಅಲ್ಲಿ ಬೇರೆ ಯಾರೂ ಇಲ್ಲ".

ಕಮಲ ನಡುಗುವ ದೇಹದಿಂದ ಕೂಡಲೇ ರಮೇಶನ ಕೈ ಬಿಡಿಸಿಕೊಂಡು ಪಕ್ಕದ ಕೊಠಡಿಗೆ ಹೋಗಿ ಬಾಗಿಲು ಮುಚ್ಚಿಕೊಂಡಳು.

ಇದೆಲ್ಲ ಮನೆಯ ಯಾವಳೋ ಹೆಣ್ಣುಮಗಳ ಹಂಚಿಕೆಯೆಂದು ರಮೇಶ ಅರಿತ—ಹೀಗೆ ತಿಳಿದು ಪುಳಕಿತ ದೇಹದೊಡನೆ ಹೊರಗಿನ ಕೊಠಡಿಗೆ ತೆರಳಿದ. ಮೇಲ್ಮುಖನಾಗಿ ಮಲಗಿ ಮತ್ತೊಮ್ಮೆ ಪಯೋನಿಯರ್ ಎಳೆದುಕೊಂಡು ಅದರ 'ಕೆಲಸ ಖಾಲಿಯಿದೆ' ಎಂಬ ವಿಭಾಗದ ಮೇಲೆ ಕಣ್ಣು ಹೊರಳಿಸ ತೊಡಗಿದ, ಆದರೆ ಏನೂ ಅರ್ಥವಾಗಲಿಲ್ಲ. ಅವನ ಹೃದಯಾಕಾಶದಲ್ಲಿ ಬಣ್ಣಬಣ್ಣದ ಭಾವನೆಯ ಮೋಡ ಹಾರಿ ಗಾಳಿಯಲ್ಲಿ ತೇಲಿಹೋಗುತಿತ್ತು.

ಶೈಲ ಕೊಠಡಿಯ ಬಾಗಿಲು ತಟ್ಟಿದಳು—ಯಾರೂ ಕದ ತೆರೆಯಲಿಲ್ಲ. ಆಗ ಅವಳು ಬಾಗಿಲ ಪಟ್ಟಿ ತೆರೆದು ಹೊರಗಿನಿಂದ ಕೈಹಾಕಿ ಚಿಲಕ ತೆಗೆದಳು. ಕೊಠಡಿಗೆ ಬಂದು ನೋಡಿದರೆ, ಕಮಲ ನೆಲದ ಮೇಲೆ ಬೋರಲಾಗಿ ಬಿದ್ದುಕೊಂಡು ಎರಡು ಕೈಗಳ ಮಧ್ಯೆ ಮುಖ ಮುಚ್ಚಿಕೊಂಡು ಅಳುತಿದ್ದಳು.

ಶೈಲ ಆಶ್ಚರ್ಯಗೊಂಡಳು. ಕಮಲ ಇಷ್ಟು ನೊಂದುಕೊಳ್ಳುವಂಥ ಸಂಗತಿಯೇನು ನಡೆದಿರಬಹುದು! ಕೂಡಲೇ ಅವಳ ಪಕ್ಕದಲ್ಲಿ ಕುಳಿತು ಅವಳ ಕಿವಿಯ ಬಳಿ ಮುಖ ಇಟ್ಟು ಸ್ನೇಹಸ್ವರದಲ್ಲಿ ಕೇಳತೊಡಗಿದಳು, "ಏನು ತಂಗಿ, ನಿನಗೆ ಏನಾಗಿದೆ—ನೀನೇಕೆ ಅಳುತ್ತಿರುವೆ?".

ಕಮಲ, "ನೀನೇಕೆ ಅವರನ್ನು ಬರಹೇಳಿದೆ, ನಿನ್ನದು ಬಹಳ ಅನ್ಯಾಯ" ಎಂದಳು.

ಕಮಲೆಯ ಈ ಎಲ್ಲ ಆಕಸ್ಮಿಕ ಉದ್ರೇಕದ ವೇಗವನ್ನು ಸ್ವತಃ ಅವಳಾಗಲಿ ಬೇರೆಯವರಾಗಲಿ ಅರ್ಥಮಾಡಿಕೊಳ್ಳುವುದು ಕಠಿಣ. ಇದರ ನಡುವೆ ಅವಳ ಎಷ್ಟೋ ದಿನಗಳ ಗುಪ್ತವೇದನೆ ಸಂಚಯವಾಗಿರುವುದು, ಎಂದು ಯಾರೂ ಅರಿಯರು.

ಕಮಲ ಇಂದು ಒಂದು ಕಲ್ಪನಾಲೋಕ ಆಕ್ರಮಿಸಿ ದೃಢವಾಗಿ ನೆಲೆಗೊಂಡಿದ್ದಳು. ರಮೇಶ ಸಹಜವಾಗಿ ಅದರ ನಡುವೆ ಪ್ರವೇಶಿಸಿದ್ದರೆ, ಆಗ ಸಂತೋಷವೇ ಆಗುತಿತ್ತು. ಆದರೆ ಅವನನ್ನು ಕರೆದುಕೊಂಡು ಬಂದು ಎಲ್ಲವನ್ನೂ ಹಾಳುಮಾಡಲಾಯಿತು. ಬಿಡುವಿನಲ್ಲಿ ಕಮಲೆಯನ್ನು ಶಾಲೆಯಲ್ಲೇ

ಬಂದಿಯಂತೆ ಇಡುವ ಪ್ರಯತ್ನ, ಸ್ಟೀಮರ್‌ನಲ್ಲಿ ರಮೇಶನ ಉದಾಸೀನತೆ, ಇವೆಲ್ಲ ಹೃದಯದ ತಳಭಾಗವನ್ನು ಕಲಕಿಬಿಟ್ಟಂತಾಯಿತು. ಬಳಿಯಲ್ಲಿ ಹೊಂದಿದಾಗಲೇ ಹೊಂದುವುದು, ಕರೆತಂದರೇ ಬರುವುದು, ಇಷ್ಟೇ ಅಲ್ಲ—ನಿಜವಾದ ಸಂಗತಿ ಏನು ಎಂಬುದನ್ನು ಗಾಜೀಪುರಕ್ಕೆ ಬಂದ ಕೆಲವು ದಿನಗಳಲ್ಲೇ ಸ್ಪಷ್ಟವಾಗಿ ಅರಿತಳು.

ಆದರೆ ಈ ಎಲ್ಲ ಸಂಗತಿ ಶೈಲಳಿಗೆ ಅರ್ಥವಾಗುವುದು ಸುಲಭವಲ್ಲ. ಕಮಲ ಮತ್ತು ರಮೇಶನ ನಡುವೆ ಯಾವುದಾದರೊಂದು ಬಗೆಯ ವಾಸ್ತವವಾದ ಅಡ್ಡಗೋಡೆ ಇರಬಹುದು, ಎಂದು ಅವಳಿಂದ ಊಹಿಸಲೂ ಸಾಧ್ಯವಾಗಲಿಲ್ಲ. ಅವಳು ಬಹಳ ಯತ್ನದಿಂದ ಕಮಲೆಯ ತಲೆಯನ್ನು ತನ್ನ ತೊಡೆಯ ಮೇಲೆ ಎತ್ತಿಟ್ಟುಕೊಂಡು, "ಇರಲಿ ತಂಗಿ, ರಮೇಶ ಬಾಬು ನಿನಗೆ ನಿಷ್ಠುರವಾದ ಮಾತು ಹೇಳಿದರೇನು. ಬಹುಶಃ ಇವರು ಅವರನ್ನು ಕರೆಯಲು ಹೋಗಿದ್ದರೆಂದು ಅವರು ಕೋಪಿಸಿಕೊಂಡಿರುವರು. ಇದೆಲ್ಲ ನನ್ನ ಕೆಲಸವೆಂದು ಏಕೆ ಹೇಳಲಿಲ್ಲ" ಎಂದು ಕೇಳಿದಳು.

"ಇಲ್ಲ ಇಲ್ಲ, ಅವರು ಏನೂ ಹೇಳಲಿಲ್ಲ. ಆದರೆ ನೀನೇಕೆ ಅವರನ್ನು ಬರಹೇಳಿದೆ?" ಎಂದಳು ಕಮಲ.

ಶೈಲ ಖಿನ್ನಳಾಗಿ ಹೇಳಿದಳು, "ಒಳ್ಳೆಯದು ತಂಗಿ, ತಪ್ಪಾಯಿತು. ಕ್ಷಮಿಸು".

ಕಮಲ ಕೂಡಲೇ ಎದ್ದು ಕುಳಿತು ಶೈಲಳ ಗಲ್ಲ ಎತ್ತಿ ಹಿಡಿದು ಕೇಳಿದಳು, "ಹೋಗಕ್ಕಾ, ಹೋಗು ನೀನು, ವಿಪಿನ ಬಾಬು ಕೋಪಿಸಿಕೊಳ್ಳುವರು".

ಹೊರಗೆ ನಿರ್ಜನ ಕೊಠಡಿಯಲ್ಲಿ ರಮೇಶ ಪಯೋನಿಯರ್ ಮೇಲೆ ಸುಮ್ಮನೆ ಬಹಳ ಹೊತ್ತು ಕಣ್ಣು ಹೊರಳಿಸಿ ಒಮ್ಮೆ ಬಲವನ್ನೆಲ್ಲ ಉಪಯೋಗಿಸಿ ಅದನ್ನು ಹರಿದುಹಾಕಿದ. ಆ ಬಳಿಕ ಎದ್ದು ಕುಳಿತು, "ಇಲ್ಲ, ಇನ್ನು ಸಾಧ್ಯವಿಲ್ಲ. ನಾಳೆಯೇ ಕಲ್ಕತ್ತೆಗೆ ಹೋಗಿ ಬರಬೇಕು. ಕಮಲೆಯನ್ನು ನನ್ನ ಹೆಂಡತಿಯೆಂದು ಪರಿಗ್ರಹಿಸಲು ಕಾಲವಿಳಂಬವಾದಷ್ಟೂ ನನ್ನ ಅನ್ಯಾಯ ಹೆಚ್ಚುವುದು" ಎಂದ.

ರಮೇಶನ ಕರ್ತವ್ಯ ಬುದ್ಧಿ ಇದ್ದಕ್ಕಿದ್ದಂತೆ ಇಂದು ಸಂಪೂರ್ಣವಾಗಿ ಎಚ್ಚೆತ್ತು ಎಲ್ಲ ಅನುಮಾನ-ಸಂಶಯಗಳನ್ನೂ ಒಂದೇ ನೆಗೆತದಲ್ಲಿ ಅತಿಕ್ರಮಿಸಿತು.

೩೩

ಕಲ್ಕತ್ತೆಗೆ ಹೋಗಿ ಕೇವಲ ಕೆಲಸ ಮುಗಿಸಿಕೊಂಡು ಹಿಂದಿರುಗುವೆ, ಕಲೂಟೋಲಾದ ದಾರಿಯ ಕಡೆ ತಿರುಗಿಯೂ ನೋಡುವುದಿಲ್ಲವೆಂದು ರಮೇಶ ನಿಶ್ಚಯಿಸಿದ್ದ.

ರಮೇಶ ದರ್ಜಿಪಾಡಾದ ಮನೆಗೆ ಬಂದ. ಹಗಲಿನಲ್ಲಿ ಸ್ವಲ್ಪಕಾಲವೇ ಕೆಲಸಕಾರ್ಯದಲ್ಲಿ ಕಳೆಯುವುದು, ಉಳಿದ ಕಾಲದಲ್ಲಿ ಹೊತ್ತೇ ಹೋಗುತ್ತಿರಲಿಲ್ಲ. ರಮೇಶ ಕಲ್ಕತ್ತೆಯಲ್ಲಿ ಯಾವ ಸಮೂಹದೊಡನೆ ಕಲೆಯುವನೋ, ಈ ಬಾರಿ ಬಂದು ಅವರನ್ನು ನೋಡಲೇ ಇಲ್ಲ. ಒಂದು ವೇಳೆ ದಾರಿಯಲ್ಲಿ ಅದೃಷ್ಟವಶದಿಂದ ಯಾರಾದರೂ ನೋಡಬಹುದು, ಎಂಬ ಭಯದಿಂದ ಅವನು ಸಾಧ್ಯವಾದಷ್ಟು ಎಚ್ಚರಿಕೆಯಿಂದ ಇರುತಿದ್ದ.

ಆದರೆ ರಮೇಶ ಕಲ್ಕತ್ತೆಗೆ ಬರುತ್ತಲೇ ಒಂದು ಬದಲಾವಣೆಯನ್ನು ಅನುಭವಿಸಿದ. ಯಾವ ನಿರ್ಜನ ಅವಕಾಶದ ನಡುವೆ, ಯಾವ ನಿರ್ಮಲ ಶಾಂತಿಯ ಆವರಣದಲ್ಲಿ ಕಮಲ ತನ್ನ ನವ ಕಿಶೋರದ ಮೊದಲ ಮೂಡುವಿಕೆಯೊಡನೆ ರಮೇಶನ ಬಳಿ ರಮಣೀಯವಾಗಿ ಕಂಡುಬಂದಿದ್ದಳೋ, ಆ ಮೋಹ ಕಲ್ಕತ್ತೆಗೆ ಬಂದು ಬಹಳವಾಗಿ ಬಿಟ್ಟುಹೋಯಿತು. ದರ್ಜಿಪಾಡಾದ ಮನೆಯಲ್ಲಿ ರಮೇಶ ಕಮಲೆಯನ್ನು ಕಲ್ಪನಾ ರಾಜ್ಯಕ್ಕೆ ಕರೆತಂದು ಪ್ರೇಮದ ಮುಗ್ಧನೋಟದಿಂದ ನೋಡಲು ಪ್ರಯತ್ನಿಸಿದ—ಆದರೆ ಇಲ್ಲಿ ಅವನ ಮನಸು ಯಾವ ಬಗೆಯಲ್ಲೂ ನೆಮ್ಮದಿ ಪಡೆಯಲಿಲ್ಲ—ಇಂದು ಕಮಲ ಅವನ ಬಳಿ ಅನುಭವವಿಲ್ಲದ, ವಿದ್ಯೆಯಿಲ್ಲದ ಬಾಲಕಿಯ ರೂಪದಲ್ಲಿ ಕಂಡುಬಂದಳು.

ಶಕ್ತಿಯನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸಿದಷ್ಟೂ, ಶಕ್ತಿ ಕುಂದುತ್ತ ಬರುವುದು. ಯಾವ ಬಗೆಯಲ್ಲೂ ಹೇಮನಳಿನಿಗೆ ಮನಸ್ಸಿನ ನಡುವೆ ಸ್ಥಳ ಕೊಡುವುದಿಲ್ಲ, ಎಂಬ ಸಂಕಲ್ಪ ಮಾಡುತ್ತ ಮಾಡುತ್ತ ಹಗಲೂ ರಾತ್ರಿ ಹೇಮನಳಿನಿಯ ವಿಷಯ ರಮೇಶನ ಹೃದಯದಲ್ಲಿ ಜಾಗೃತವಾಗಿರುವುದು. ಮರೆಯುವ ಕಠಿಣ ಸಂಕಲ್ಪವೇ ನೆನಪಿಟ್ಟುಕೊಳ್ಳಲು ಪ್ರಬಲ ಸಹಾಯವಾಯಿತು.

ರಮೇಶನಿಗೆ ಸ್ವಲ್ಪವಾದರೂ ಅವಸರ ಇದ್ದಿದ್ದರೆ, ಅವನು ಆದಷ್ಟು ಬೇಗ ಕಲ್ಕತ್ತೆಯ ಕೆಲಸ ಮುಗಿಸಿಕೊಂಡು ಹಿಂದಿರುಗಬಹುದಾಗಿತ್ತು. ಆದರೆ

ಸಾಧಾರಣವಾದ ಕೆಲಸ ಮಾಡುತ್ತಮಾಡುತ್ತ ಹೆಚ್ಚಾಯಿತು. ಕಡೆಗೆ ಅದೂ ಮುಗಿಯಿತು

ನಾಳೆ ರಮೇಶ ಮೊದಲು ಕಾರ್ಯವಶದಿಂದ ಅಲಹಾಬಾದಿಗೆ ಹೋಗಿ ಅಲ್ಲಿಂದ ಗಾಜೀಪುರಕ್ಕೆ ಹಿಂದಿರುಗುವನು. ಇಷ್ಟು ದಿನ ಅವನು ಧೈರ್ಯ ಉಳಿಸಿಕೊಂಡು ಬಂದಿರುವನು, ಆದರೆ ಆ ಧೈರ್ಯಕ್ಕೆ ಯಾವ ಬಹುಮಾನವೂ ಇಲ್ಲ. ಹೊರಡುವ ಮುನ್ನ ಗುಟ್ಟಾಗಿ ಒಮ್ಮೆ ಕಲೂಟೋಲಾದ ವಿಷಯ ತಿಳಿದು ಬಂದರೆ ನಷ್ಟವೇನು ?

ಇಂದು ಕಲೂಟೋಲಾದ ಅದೇ ಬೀದಿಗೆ ಹೋಗಲು ತೀರ್ಮಾನಿಸಿ ಅವನು ಒಂದು ಪತ್ರ ಬರೆಯಲು ಕುಳಿತ. ಅದರಲ್ಲಿ ಕಮಲೆಯೊಡನೆ ತನಗಿದ್ದ ಸಂಬಂಧವನ್ನು ಮೊದಲಿನಿಂದ ಕಡೆಯವರೆಗೆ ವಿವರಿಸಿ ಬರೆದ. ಈ ಬಾರಿ ಗಾಜೀಪುರಕ್ಕೆ ಹಿಂದಿರುಗಿ ಹೋಗಿ ತಾನು ಬೇರೆ ಮಾರ್ಗವಿಲ್ಲದ ಹತಭಾಗಿನಿ ಕಮಲೆಯನ್ನು ನನ್ನ ಮದುವೆಯಾದ ಹೆಂಡತಿಯ ರೂಪದಲ್ಲಿ ಪರಿಗ್ರಹಿಸಿಸವೆ, ಎಂದು ಜ್ಞಾಪಕಪಡಿಸಿದ. ಈ ರೀತಿ ಹೇಮನಳಿನಿಯೊಡನೆ ಅವನ ಸಂಪೂರ್ಣ ವಿಚ್ಛೇದ ಉಂಟಾಗುವ ಮೊದಲು ನಿಜವಾದ ಘಟನೆಯನ್ನು ಸಂಪೂರ್ಣವಾಗಿ ತಿಳಿಸಿ ಆ ಪತ್ರದ ಮೂಲಕ ಅವನು ಬೀಳ್ಕೊಡಲು ಅಪ್ಪಣೆ ಬೇಡಿದ.

ಕಾಗದ ಬರೆದು ಲಕೋಟೆಯೊಳಕ್ಕೆ ಹಾಕಿ ಮೇಲೆ ಯಾರ ಹೆಸರನ್ನೂ ಬರೆಯಲಿಲ್ಲ, ಒಳಗೂ ಸಂಬೋಧಿಸಲಿಲ್ಲ. ಅನ್ನದಾಬಾಬುಗಳ ಸೇವಕರು ರಮೇಶನಲ್ಲಿ ಪ್ರೀತಿಯುಳ್ಳವರಾಗಿದ್ದರು—ಕಾರಣ ರಮೇಶ, ಹೇಮನಳಿನಿಯ ಸಂಪರ್ಕವುಳ್ಳ ಸ್ವಜನ-ಪರಿಜನರೆಲ್ಲರನ್ನೂ ಒಂದು ವಿಶೇಷ ಮಮತೆಯೊಡನೆ ಕಾಣುತಿದ್ದ. ಇದರಿಂದಲೇ ಆ ಮನೆಯ ಆಳುಕಾಳುಗಳು ರಮೇಶನ ಬಳಿಯಿಂದ ಬೇರೆಬೇರೆ ಸಂದರ್ಭದಲ್ಲಿ ಬಟ್ಟೆಬರೆ ಬಹುಮಾನದಿಂದ ವಂಚಿತರಾಗುತಿರಲಿಲ್ಲ. ಸಂಜೆಗತ್ತಲಲ್ಲಿ ಕಲೂಟೋಲಾದ ಮನೆಗೆ ಹೋಗಿ ಒಮ್ಮೆ ಅವನು ದೂರದಿಂದ ಹೇಮನಳಿನಿಯನ್ನು ನೋಡಿ ಬರುವುದು ಮತ್ತು ಯಾವನಾದರೊಬ್ಬ ಆಳಿನ ಮೂಲಕ ಈ ಕಾಗದವನ್ನು ಗುಪ್ತವಾಗಿ ಹೇಮನಳಿನಿಯ ಕೈಗೆ ತಲುಪಿಸಿ ಅವನು ಶಾಶ್ವತವಾಗಿ ಪೂರ್ವಬಂಧನ ಕತ್ತರಿಸಿಕೊಂಡು ಹೊರಟುಹೋಗುವುದು ಎಂದು ರಮೇಶ ತೀರ್ಮಾನಿಸಿದ್ದ.

ಸಂಜೆ ರಮೇಶ ಪತ್ರ ಕೈಗೆ ತೆಗೆದುಕೊಂಡು ಆ ಚಿರಪರಿಚಿತ ಬೀದಿ

ಯನ್ನು ಕಂಪಿತ ಹೃದಯದಿಂದ ಕಂಪಿತ ಪಾದದಿಂದ ಪ್ರವೇಶಿಸಿದ. ಬಾಗಿಲ ಬಳಿ ಬಂದು ನೋಡಿದ—ಬಾಗಿಲು ಮುಚ್ಚಿದೆ, ಮೇಲೆ ನೋಡಿದ—ಎಲ್ಲ ಕಿಟಕಿಗಳೂ ಮುಚ್ಚಿದೆ. ಮನೆ ಶೂನ್ಯ. ಅಂಧಕಾರ.

ಆಗ ರಮೇಶ ಬಾಗಿಲು ತಟ್ಟಿದ. ಎರಡು-ಮೂರು ಬಾರಿ ಬಡಿದ ಮೇಲೆ ಒಳಗಿನಿಂದ ಒಬ್ಬ ಸೇವಕ ಬಾಗಿಲು ತೆರೆದು ಹೊರಗೆ ಬಂದ. ರಮೇಶ, "ಯಾರು ಸುಖನ್ ಅಲ್ಲವೆ" ಎಂದು ಕೇಳಿದ.

"ಹೌದು ಬಾಬು, ನಾನು ಸುಖನ್" ಎಂದ ಸೇವಕ.

ರಮೇಶ—ಬಾಬು ಎಲ್ಲಿಗೆ ಹೋದರು?

ಸೇವಕ—ಅಕ್ಕನವರನ್ನು ಕರೆದುಕೊಂಡು ಗಾಳಿ ಬದಲಾಯಿಸಲು ಪಶ್ಚಿಮ ಪ್ರಾಂತ್ಯಕ್ಕೆ ಹೋಗಿರುವರು.

ರಮೇಶ—ಎಲ್ಲಿಗೆ ಹೋಗಿರುವರು.

ಸೇವಕ—ಅದು ಹೇಳಲು ಸಾಧ್ಯವಿಲ್ಲ.

ರಮೇಶ—ಜೊತೆಯಲ್ಲಿ ಬೇರೆ ಯಾರು ಹೋಗಿರುವರು?

ಸೇವಕ—ಜೊತೆಯಲ್ಲಿ ನಳಿನಬಾಬು ಹೋಗಿರುವರು.

ರಮೇಶ—ನಳಿನ ಬಾಬು ಯಾರು?

ಸೇವಕ—ಅದು ಹೇಳಲು ಸಾಧ್ಯವಿಲ್ಲ.

ನಳಿನಬಾಬು ಯುವಕ, ಕೆಲವುಕಾಲದಿಂದ ಈ ಮನೆಗೆ ಬಂದು ಹೋಗುತಿರುವನು ಎಂದು ರಮೇಶ ವಿಚಾರಿಸಿ ತಿಳಿದುಕೊಂಡ. ರಮೇಶ ಹೇಮನಳಿನಿಯ ಆಸೆ ತ್ಯಾಗಮಾಡಿ ಹೋಗಿದ್ದರೂ, ನಳಿನಬಾಬುವಿನ ವಿಷಯದಲ್ಲಿ ಅವನಿಗೆ ಒಳ್ಳೆಯ ಭಾವನೆ ಉಂಟಾಗಲಿಲ್ಲ.

ರಮೇಶ—ನಿನ್ನ ಒಡತಿಯ ಆರೋಗ್ಯ ಹೇಗಿದೆ?

"ಅವರ ಆರೋಗ್ಯ ಚೆನ್ನಾಗಿಯೇ ಇದೆ" ಎಂದ ಸೇವಕ.

ಆಳುಮಗ ಸುಖನ, ಈ ಒಳ್ಳೆಯ ಸುದ್ದಿಯಿಂದ ರಮೇಶಬಾಬುಗಳು ನಿಶ್ಚಿಂತರೂ ಸುಖಿಗಳೂ ಆಗುವರೆಂದು ಭಾವಿಸಿದ್ದ. ಸುಖನ್ ತಪ್ಪು ಎಣಿಸಿರುವ, ಎಂದು ಅಂತರ್ಯಾಮಿ ಬಲ್ಲ.

ರಮೇಶ, "ನಾನೊಂದು ಸಲ ಮೇಲಿನ ಕೊಠಡಿಗೆ ಹೋಗಬೇಕು" ಎಂದ. ಆಳು ತನ್ನ ಹೊಗೆಯುಗುಳುವ ಸೀಮೆಯೆಣ್ಣೆ ದೀಪ ಹಿಡಿದು ರಮೇಶನನ್ನು ಮೇಲಕ್ಕೆ ಕರೆದುಕೊಂಡು ಹೋದ. ರಮೇಶ ಭೂತದಂತೆ ಕೊಠಡಿ

ಯಲ್ಲೆಲ್ಲಾ ಒಮ್ಮೆ ಸುತ್ತಾಡಿದ—ಒಂದೆರಡು ಕುರ್ಚಿ ಮತ್ತು ಸೋಫ ಆಯ್ದುಕೊಂಡು ಅದರಲ್ಲಿ ಕುಳಿತ. ಸಾಮಾನು, ಮನೆ ಇಟ್ಟಿರುವಿಕೆ, ಎಲ್ಲ ಮೊದಲಿನಂತೆಯೇ ಇದೆ, ನಡುವೆ ಬಂದ ನಳಿನಬಾಬು ಯಾರು. ಜಗತ್ತಿನಲ್ಲಿ ಯಾರೊಬ್ಬರ ಅಭಾವದಿಂದ ಬಹಳಕಾಲ ಯಾವುದೂ ಶೂನ್ಯವಾಗಿ ಉಳಿಯದು. ಯಾವ ಕಿಟಕಿಯಲ್ಲಿ ರಮೇಶ ಒಂದು ದಿನ ಹೇಮನಳಿನಿಯ ಬಳಿ ನಿಂತು ಮಳೆ ಸುರಿಯುವ ಶ್ರಾವಣ ದಿನದ ಸೂರ್ಯಾಸ್ತ-ಪ್ರಕಾಶದಲ್ಲಿ ಎರಡು ಹೃದಯಗಳ ನಿಃಶಬ್ದ ಮಿಲನವನ್ನು ಮುದ್ರಿಸಿಕೊಂಡಿದ್ದನಲ್ಲ—ಆ ಕಿಟಕಿಯಲ್ಲಿ ಮತ್ತೆ ಸೂರ್ಯಾಸ್ತದ ಬೆಳಕು ಬೀಳಲಿಲ್ಲ. ಅದೇ ಕಿಟಕಿಯಲ್ಲಿ ಬೇರೆ-ಯಾರೋ ಬಂದು ಬೇರೆ-ಒಂದು ದಿನ ಯುಗಳ-ಮೂರ್ತಿ ರಚಿಸಿ ಕೊಳ್ಳಲು ಇಷ್ಟಪಟ್ಟಾಗ, ಹಿಂದಿನ-ಇತಿಹಾಸ ಬಂದು ಅವರ ಸ್ಥಾನ ಅಡ್ಡಿ ಪಡಿಸಿ ನಿಲ್ಲುವುದೆ? ನಿಃಶಬ್ದವಾಗಿ ಬೆರಳು ಎತ್ತಿ ಅವರನ್ನು ದೂರ ಸರಿಸುವುದೆ? ಒಣ ಹೆಮ್ಮೆಯಿಂದ ರಮೇಶನ ಎದೆ ಉಬ್ಬಿತು.

ಮರುದಿನ ರಮೇಶ ಅಲಹಾಬಾದಿಗೆ ಹೋಗದೆ ನೆಟ್ಟಗೆ ಗಾಜೀಪುರಕ್ಕೆ ಹೊರಟು ಹೋದ.

## ೩೪

ಕಲ್ಕತ್ತೆಯಲ್ಲಿ ರಮೇಶ ಸುಮಾರು ಒಂದು ತಿಂಗಳು ಕಾಲಹರಣ ಮಾಡಿ ಬಂದ ಕಮಲೆಗೆ ಈ ಒಂದು ತಿಂಗಳು ಕಡಿಮೆ ದಿನವಲ್ಲ. ಕಮಲೆಯ ಜೀವನದಲ್ಲಿ ಒಂದು ಬದಲಾವಣೆಯ ಪ್ರವಾಹ ಹಠಾತ್ತನೆ ಅತ್ಯಂತ ವೇಗದಲ್ಲಿ ಹರಿಯುತಿರುವುದು. ಉಷೆಯ ಕಾಂತಿ ನೋಡ ನೋಡುತ್ತ ಬೆಳಗಿನ ಬಿಸಿಲಾಗುವುದು —ಅಂತೆಯೇ ಕಮಲೆಯ ನಾರೀ ಪ್ರಕೃತಿ ಅತಿ ಅಲ್ಪಕಾಲದಲ್ಲಿ ಸುಷುಪ್ತಿಯಿಂದ ಜಾಗರಣದಲ್ಲಿ ಎಚ್ಚೆತ್ತಿತು. ಶೈಲಜೆಯೊಡನೆ ಅವಳ ನಿಕಟ ಸ್ನೇಹವುಂಟಾಗದಿದ್ದರೆ, ಶೈಲಜೆಯ ಜೀವನದಿಂದ ಪ್ರೇಮಾಲಾಪದ ಕಿರಣ ಹಾಗೂ ತಾಪ ಪ್ರತಿಬಿಂಬಿಸಿ ಅವಳ ಹೃದಯದ ಮೇಲೆ ಬೀಳದಿದ್ದರೆ, ಅವನ್ನು ಎಷ್ಟು ಕಾಲ ನಿರೀಕ್ಷಿಸಬೇಕಾಗುತಿತ್ತೋ ಹೇಳಲು ಸಾಧ್ಯವಿಲ್ಲ.

ಈ ಮಧ್ಯೆ ರಮೇಶ ಬರಲು ನಿಧಾನವಾದುದನ್ನು ನೋಡಿ ಶೈಲಜೆಯ ಬಲವಂತದಿಂದ ಚಿಕ್ಕಪ್ಪ ಕಮಲೆ ವಾಸವಾಗಿರಲು ನಗರದ ಹೊರಗೆ

ಗಂಗೆಯ ಬಯಲಲ್ಲಿ ಒಂದು ಬಂಗಲೆ ಗೊತ್ತುಮಾಡಿದರು. ಅಲ್ಪಸ್ವಲ್ಪ ಸಾಮಾನು ಸಂಗ್ರಹಿಸಿ ಮನೆಯನ್ನು ವಾಸಕ್ಕೆ ತಕ್ಕಂತೆ ಮಾಡಲು ಏರ್ಪಡಿಸು ತ್ತಿದ್ದರು ಮತ್ತು ಹೊಸ ಸಂಸಾರದ ಕೆಲಸಕ್ಕೆ ಆವಶ್ಯಕತೆಯಂತೆ ಸೇವಕ ಸೇವಕಿಯರನ್ನೂ ನೇಮಕ ಮಾಡಿರುವರು.

ಬಹಳ ದಿನಗಳ ಬಳಿಕ ರಮೇಶ ಗಾಜೀಪುರಕ್ಕೆ ಹಿಂದಿರುಗಿ ಬಂದಾಗ, ಚಿಕ್ಕಪ್ಪನ ಮನೆಯಲ್ಲಿ ಉಳಿದುಕೊಳ್ಳುವ ಯಾವ ಉಪಾಯವೂ ಇರಲಿಲ್ಲ. ಇಷ್ಟು ದಿನಗಳ ನಂತರ ಕಮಲ ತನ್ನ ಸ್ವಂತ ಮನೆಗೆಲಸಕ್ಕೆ ತೊಡಗಿದಳು.

ಬಂಗಲೆಯ ಸುತ್ತಲೂ ತೋಟ ಮಾಡಲು ಬೇಕಾದಷ್ಟು ಭೂಮಿಯಿತ್ತು. ಎರಡುಕಡೆಯ ಎತ್ತರವಾದ ಹೆಬ್ಬಲಸು ಮರಗಳ ಮಧ್ಯದಿಂದ ಒಂದು ನೆರಳು ಕವಿದ ದಾರಿ ಹೋಗಿರುವುದು. ಶೀತಕಾಲದ ಕುಗ್ಗಿದ ಗಂಗೆ ಬಹಳ ದೂರ ಹಿಂದೆ ಸರಿದುಹೋಗಿ ಮನೆ ಮತ್ತು ಗಂಗೆಯ ನಡುವೆ ಒಂದು ತಗ್ಗಾದ ಕೊರಕಲು ಬಿದ್ದಿರುವುದು - ಆ ಕೊರಕಲಲ್ಲಿ ರೈತರು ಅಲ್ಲಲ್ಲಿ ಗೋಧಿ ಬೆಳೆದಿರು ವರು ಮತ್ತು ಅಲ್ಲಲ್ಲಿ ಮಿಣಿಕೆಯನ್ನೂ ಕಲ್ಲಂಗಡಿಯನ್ನೂ ಹಾಕಿರುವರು. ಮನೆಯ ಬಲಭಾಗದ ಕೊನೆಯಲ್ಲಿ ಗಂಗೆಯ ಕಡೆ ಒಂದು ದೊಡ್ಡ ಮುದಿ ಬೇವಿನ ಮರ ಇರುವುದು, ಜಗಲಿ ಕಟ್ಟಿತ್ತು.

ಬಹಳ ದಿನ ಬಾಡಿಗೆಯವರಿಲ್ಲದೆ ಮನೆಯೂ ತೋಟವೂ ನೋಡಿಕೊಳ್ಳು ವವರಿಲ್ಲದೆ ತೋಟದಲ್ಲಿ ಮರಗಿಡಗಳು ಯಾವುದೂ ಇರಲಿಲ್ಲ ಮತ್ತು ಮನೆ ಯೊಳಗೂ ಕಸ ತುಂಬಿತ್ತು. ಆದರೆ ಕಮಲೆಗೆ ಇವೆಲ್ಲ ಬಹಳ ಚೆನ್ನಾಗಿ ಕಾಣಿಸಿತು. ಗೃಹಿಣೀಸ್ಥಾನಲಾಭದ ಆನಂದದ-ಬೆಳಕಿನಲ್ಲಿ ಅವಳ ಕಣ್ಣಿಗೆ ಎಲ್ಲವೂ ಸುಂದರವಾಗಿ ತೋರಿತು. ಯಾವ ಕೊಠಡಿಯನ್ನು ಯಾವ ಕೆಲಸಕ್ಕೆ ಉಪಯೋಗಿಸಬೇಕು, ತೋಟದಲ್ಲಿ ಯಾವೆಡೆ ಎಂಥ ಮರ ಬೆಳಸಬೇಕು, ಎಂದು ಅವಳು ಮನದಲ್ಲೇ ತೀರ್ಮಾನಿಸಿಕೊಂಡಳು.

ಚಿಕ್ಕಪ್ಪನ ಜೊತೆ ಆಲೋಚನೆ ನಡೆಸಿ ಕಮಲ ನೆಲವನ್ನೆಲ್ಲ ಅಗೆದು ಸರಿಮಾಡಲು ಏರ್ಪಡಿಸಿದಳು. ಸ್ವತಃ ಎದುರಿಗೆ ನಿಂತು ಅಡುಗೆ ಮನೆಯ ಒಲೆ ಕಟ್ಟಿಸಿದಳು ಮತ್ತು ಅದರ ಪಕ್ಕದ ಉಗ್ರಾಣದಲ್ಲಿ ಎಲ್ಲಿ ಯಾವ ಬದಲಾವಣೆ ಆವಶ್ಯಕವೋ, ಅದನ್ನೂ ಮಾಡಿಸಿದಳು. ದಿನವೆಲ್ಲಾ ತೊಳೆದು-ಸಾರಿಸಿ ಸಿಂಗರಿಸುವ ಕೆಲಸಕ್ಕೆ ಕೊನೆಯೇ ಇಲ್ಲ. ಸುತ್ತಲೂ ಕಮಲೆಯ ಆಸಕ್ತಿ ಆಕರ್ಷಿಸತೊಡಗಿತು.

ಮನೆಗೆಲಸದ ನಡುವೆ ರಮಣಿಯರಿಗಿರುವಷ್ಟು ಸೌಂದರ್ಯದ ವಿಚಿತ್ರತೆ, ಮಧುರತೆ, ಮತ್ತೆಲ್ಲಿಯೂ ಇರದು ರಮೇಶ ಇಂದು ಕಮಲೆಯನ್ನು ಅದೇ ಕೆಲಸದ ಮಧ್ಯೆ ನೋಡಿದ—ಅವನಿಗೆ ಹಕ್ಕಿ ಪಂಜರದ ಹೊರಗೆ ಆಕಾಶದಲ್ಲಿ ಹಾರಾಡುವುದನ್ನು ನೋಡಿದಹಾಗಾಯಿತು. ಅವಳ ಪ್ರಫುಲ್ಲ ಮುಖ, ಅವಳ ನಿಪುಣತೆಯ ಚುರುಕು, ರಮೇಶನ ಮನದಲ್ಲಿ ಒಂದು ಹೊಸ ಆಶ್ಚರ್ಯವನ್ನೂ ಆನಂದವನ್ನೂ ಉದ್ರೇಕಗೊಳಿಸಿತು.

ಇಷ್ಟು ದಿನ ಕಮಲೆಯನ್ನು ರಮೇಶ ಅವಳ ಸ್ವಸ್ಥಾನದಲ್ಲಿ ನೋಡಿರಲಿಲ್ಲ- ಇಂದು ಅವಳನ್ನು ತನ್ನ ಹೊಸ ಸಂಸಾರದ ಗೋಪುರದ ಮೇಲೆ ಕಂಡಾಗ, ಅವಳ ಸೌಂದರ್ಯದೊಡನೆ ಒಂದು ಮಹಿಮೆ ಕಾಣಬಂತು.

ಕಮಲೆಯ ಹತ್ತಿರ ಬಂದು ರಮೇಶ, "ಕಮಲಾ, ಏನುಮಾಡುತ್ತಿರುವೆ? ಬಹಳ ಆಯಾಸವಾದರೆ" ಎಂದ.

ಕಮಲ ತನ್ನ ಕೆಲಸವನ್ನು ನಡುವೆ ಸ್ವಲ್ಪ ನಿಲ್ಲಿಸಿ ರಮೇಶನ ಕಡೆ ಮುಖ ಎತ್ತಿ ತನ್ನ ಮಧುರ ಮುಖದ ನಗು ನಕ್ಕಳು—"ಇಲ್ಲ, ನನಗೆ ಏನೂ ಆಗದು" ಎಂದಳು.

ರಮೇಶ ಯಾವ ಸುದ್ದಿ ತಿಳಿಯಲು ಬಂದಿದ್ದನೋ, ಸ್ವಲ್ಪ ಪುರಸ್ಕಾರದೊಡನೆ ಅದನ್ನು ಪಡೆದು ಕೂಡಲೇ ಕೆಲಸದ ಮೇಲೆ ಹಿಂದಿರುಗಿದ.

ಮುಗ್ಧ ರಮೇಶ ನೆಪ ಹೂಡಿ ಮತ್ತೆ ಅವಳ ಬಳಿ ಹೋಗಿ ಹೇಳಿದ, "ನಿನ್ನೂಟ ಮುಗಿಯಿತೆ ಕಮಲ?".

ರಮೇಶನಿಗೆ ಈ ವಿಷಯ ತಿಳಿದಿತ್ತು, ಆದರೂ ಈ ಪ್ರಶ್ನೆಯ ನೆಪದಲ್ಲಿ ಕಮಲೆಗೆ ಸ್ವಲ್ಪ ಆದರ ತೋರಿಸದೆ ಇರಲಾಗಲಿಲ್ಲ—ಕಮಲೆಯೂ ಈ ಅನಾವಶ್ಯಕ ಪ್ರಶ್ನೆಯಿಂದ ಸಂತೋಷಗೊಳ್ಳಲಿಲ್ಲ ಎನ್ನುವಂತಿಲ್ಲ.

ರಮೇಶ ಮತ್ತೊಮ್ಮೆ ಮಾತುಕತೆಗೆ ಮೊದಲುಮಾಡುವುದಕ್ಕಾಗಿ ಹೇಳಿದ, "ಕಮಲ, ನೀನೊಬ್ಬಳೇ ಎಷ್ಟೆಂದು ಮಾಡುವೆ—ನನಗೂ ಸ್ವಲ್ಪ ಉಳಿಸಿಡುವುದಿಲ್ಲವೆ?"

ಕೆಲಸ ಮಾಡುವ ಮನುಷ್ಯರಲ್ಲಿ ಒಂದು ದೋಷವಿದೆ, ಜನರ ಕರ್ಮಪಟುತ್ವದ ಮೇಲೆ ಅವರಿಗೆ ಅಷ್ಟಾಗಿ ನಂಬಿಕೆಯೇ ಇರುವುದಿಲ್ಲ. ಯಾವ ಕೆಲಸವನ್ನು ತಾವು ಮಾಡಲಾರರೋ, ಅದೇ ಕೆಲಸವನ್ನು ಬೇರೆಯವರು ಮಾಡಿದರೂ ಪ್ರಾಯಃ ಸಂಪೂರ್ಣವಾಗಿ ಹಾಳುಮಾಡಿಯಾರೆಂಬ ಹೆದರಿಕೆ

ಅವರಿಗಿದೆ. ಕಮಲ ನಕ್ಕು, "ಇಲ್ಲ, ಇವೆಲ್ಲ ನಿಮ್ಮಗಳ ಕೆಲಸವಲ್ಲ" ಎಂದಳು.

"ಗಂಡಸರು ಬಹಳ ಸಹನೆಯುಳ್ಳವರು, ಎಂದು ಪುರುಷ ಜಾತಿಯ ಮೇಲೆ ನಿಮ್ಮ ಈ ತಿರಸ್ಕಾರವನ್ನು ನಾವು ಸಹಿಸಿಕೊಂಡಿರುವೆವು, ಜಗಳವಾಡುವುದಿಲ್ಲ—ನಿಮ್ಮ ಹಾಗೆ ಹೆಂಗಸಾಗಿದ್ದಿದ್ದರೆ, ದೊಡ್ಡ ಜಗಳವೆಬ್ಬಿಸುತಿದ್ದೆ, ಒಳ್ಳೆಯದು, ಚಿಕ್ಕಪ್ಪನವರಿಗೆ ಮಾತ್ರ ನೀನು ಕೆಲಸ ಮಾಡಬೇಡ ಎಂದು ಹೇಳುವುದೇ ಇಲ್ಲ—ನಾನಷ್ಟು ಕೆಲಸಕ್ಕೆ ಬಾರದವನೆ" ಎಂದು ರಮೇಶ ಕೇಳಿದ.

ಕಮಲ, "ಅದು ಅರಿಯೆ, ಆದರೆ ನೀನು ಅಡುಗೆ ಮನೆಯಲ್ಲಿ ಇಲ್ಲಣ ಹೊಡೆಯುತ್ತಿದ್ದೆಯಲ್ಲ, ಅದನ್ನು ನೆನೆಸಿಕೊಂಡರೇ ನನಗೆ ನಗು ಬರುವುದು. ನೀನು ಇಲ್ಲಿಂದ ಹೊರಡು—ಇಲ್ಲಿ ಬಹಳ ಧೂಳು ಏಳುತ್ತಿದೆ" ಎಂದಳು.

ರಮೇಶ ಕಮಲೆಯೊಡನೆ ಮಾತು ಮುಂದುವರಿಸಲು, "ಧೂಳು ಜನರಲ್ಲಿ-ಭೇದ ಮಾಡುವುದಿಲ್ಲ, ಧೂಳು ನನ್ನನ್ನು ಯಾವ ಕಣ್ಣಿನಿಂದ ನೋಡುವುದೋ, ಅದೇ ಕಣ್ಣಿನಿಂದ ನಿನ್ನನ್ನೂ ನೋಡುವುದು" ಎಂದು ಹೇಳಿದ.

ಕಮಲ - ನನಗೆ ಕೆಲಸವಿದೆಯಾಗಿ ಧೂಳು ಸಹಿಸುತ್ತೇನೆ. ನಿನಗೆ ಕೆಲಸವಿಲ್ಲ ನೀನೇಕೆ ಧೂಳು ಸಹಿಸಬೇಕು.

ರಮೇಶ ಸೇವಕರ ಕಿವಿಗೆ ಬೀಳದಂತೆ ಮೃದುಸ್ವರದಲ್ಲಿ, "ಕೆಲಸ. ಇರಲಿ ಇಲ್ಲದಿರಲಿ, ನೀನು ಯಾವುದನ್ನು ಸಹಿಸಬೇಕೋ ಅದರಲ್ಲಿ ನಾನೂ ಭಾಗಿಯಾಗುವೆ" ಎಂದ.

ಕಮಲೆಯ ಕೆನ್ನೆಗಳು ಸ್ವಲ್ಪ ಕೆಂಪಾದುವು—ರಮೇಶನ ಮಾತಿಗೆ ಯಾವ ಉತ್ತರವನ್ನೂ ಹೇಳದೆ ಸ್ವಲ್ಪ ಹಿಂದಕ್ಕೆ ಹೋಗಿ, "ಉಮೇಶ, ಇಲ್ಲಿಗೆ ಇನ್ನೊಂದು ಕೊಡ ನೀರು ತೆಗೆದುಕೊಂಡು ಬಾ—ಇಷ್ಟೊಂದು ಕೊಳಕು ಸೇರಿರುವುದು ಕಾಣುವುದಿಲ್ಲವೆ. ಪೊರಕೆ ನನ್ನ ಕೈಗೆ ಕೊಡು ನೋಡುವ" ಎಂದು ಹೇಳಿ ಪೊರಕೆ ಹಿಡಿದು ಬೇಗಬೇಗ ಗುಡಿಸತೊಡಗಿದಳು.

ಕಮಲ ಪೊರಕೆ ಹಿಡಿದುದನ್ನು ನೋಡಿದ ಕೂಡಲೇ ಅತಿ ಕಳವಳದಿಂದ ರಮೇಶ, "ಓ ಕಮಲಾ, ಇದೇನು ಮಾಡುವೆ" ಎಂದ.

ಹಿಂದಿನಿಂದ ಕೇಳಿ ಬಂತು, "ಏನು ರಮೇಶ ಬಾಬು, ಅನ್ಯಾಯದ ಕೆಲಸ ಏನು ನಡೆಯುತ್ತಿದೆ. ಇತ್ತ ಇಂಗ್ಲೀಷ್ ಓದಿ ನೀವು ಮಾತಿನಲ್ಲಿ ಸಾಮ್ಯವಾದ ಪ್ರಚಾರ ಮಾಡುವಿರಿ; ಪೊರಕೆ ಹಿಡಿಯುವ ಕೆಲಸ ಇಷ್ಟು ಕೀಳೆಂದು ತಿಳಿಯುವುದಾದರೆ, ಆಳಿನ ಕೈಗೆ ಅದನ್ನು ಕೊಡುವುದು ಹೇಗೆ. ನಾನು ತಿಳುವಳಿಕೆಯಿಲ್ಲದವ, ನನ್ನ ಮಾತು ಕೇಳುವುದಾದರೆ, ಸಾಧ್ವೀಮಣಿ ಯರ ಕೈಯ ಈ ಪೊರಕೆಯ ಒಂದೊಂದು ಕಡ್ಡಿಯೂ ಸೂರ್ಯನ ಬೆಳಕಿನ ಕಿರಣದಂತೆ ನನ್ನೆದುರಿಗೆ ಪ್ರಕಾಶಿಸುವುದು. ಅಮ್ಮಾ, ಒಂದು ರೀತಿಯಲ್ಲಿ ನಿನ್ನ ಕಾಡು ಸರಿಮಾಡಿ ಬಂದಿರುವೆ, ಎಲ್ಲಿ ತರಕಾರಿ ತೋಟ ಮಾಡ ಬೇಕು, ಎಂದು ಒಮ್ಮೆ ನನಗೆ ತೋರಿಸಿಕೊಡಬೇಕು".

"ಚಿಕ್ಕಪ್ಪನವರೇ, ಸ್ವಲ್ಪ ನಿಧಾನಿಸಿ, ನನ್ನ ಈ ಮನೆಗೆಲಸ ಮುಗಿಯಲಿ" ಎಂದಳು ಕಮಲ.

ಹೀಗೆ ಹೇಳಿ ಕಮಲ ಮನೆಗೆಲಸ ಮುಗಿಸಿ ಸೊಂಟಕ್ಕೆ ಸಿಕ್ಕಿದ್ದ ಸೆರಗನ್ನು ತಲೆಯ ಮೇಲೆ ಎಳೆದುಕೊಂಡು ಹೊರಗೆ ಬಂದು ಚಿಕ್ಕಪ್ಪನೊಡನೆ ತರಕಾರಿ ತೋಟದ ವಿಷಯವಾಗಿ ಆಳವಾದ ಆಲೋಚನೆಯಲ್ಲಿ ಮುಳುಗಿದಳು.

ಹೀಗೆ ನೋಡುತ್ತ ನೋಡುತ್ತ ಹಗಲು ಕಳೆಯಿತು. ಆದರೆ ಮನೆ ಸರಿ ಪಡಿಸುವುದು ಇನ್ನೂ ಮುಗಿಯಲಿಲ್ಲ. ಬಂಗಲೆ ಬಹಳ ದಿನ ಉಪಯೋಗಿಸದೆ ಬಾಗಿಲು ಹಾಕಿದ್ದಿತು, ಇನ್ನೂ ನಾಲ್ಕಾರು ದಿನ ಮನೆಯನ್ನು ಗುಡಿಸಿ–ಸಾರಿಸಿ, ಕಿಟಕಿ–ಬಾಗಿಲುಗಳನ್ನು ತೆರೆದಿಡದಿದ್ದರೆ ವಾಸಕ್ಕೆ ಉಪಯೋಗವಾಗುವಂತೆ ಕಾಣಬರಲಿಲ್ಲ. ಆದ್ದರಿಂದಲೇ ಅಂದು ಸಂಜೆಯ ಬಳಿಕ ಚಿಕ್ಕಪ್ಪನ ಮನೆಯಲ್ಲೇ ತಂಗಬೇಕಾಯಿತು. ಅದರಿಂದ ಇಂದು ರಮೇಶನ ಮನಸಿಗೆ ಸ್ವಲ್ಪ ನಿರುತ್ಸಾಹ ವಾಯಿತು. ಇಂದು ತಮ್ಮ ಏಕಾಂತವಾದ ಮನೆಯಲ್ಲಿ ಸಂಜೆಯ ದೀಪ ಹೊತ್ತಿಸುವುದು ಮತ್ತು ಕಮಲೆಯ ಸಲಜ್ಜ ಸ್ಮಿತ–ಹಾಸ್ಯದೆದುರಿಗೆ ರಮೇಶ ತನ್ನ ತುಂಬಿದ ಹೃದಯವನ್ನು ತೋಡಿಕೊಳ್ಳುವುದು, ಎಂದು ಅವನು ಹಗಲೆಲ್ಲಾ ಕಲ್ಪನೆ ಕಟ್ಟಿದ್ದನು. ಮತ್ತೆ ನಾಲ್ಕಾರು ದಿನ ಸಾವಕಾಶವಾಗು ವುದನ್ನು ತಿಳಿದು ರಮೇಶ ತನ್ನ ನ್ಯಾಯಾಲಯ-ಪ್ರವೇಶ ಸಂಬಂಧವಾದ ಕೆಲಸಕ್ಕಾಗಿ ಮರುದಿನ ಅಲಹಾಬಾದಿಗೆ ತೆರಳಿದ.

೩೫

ಮಾರನೆಯ ದಿನ ಕಮಲೆಯ ಹೊಸ ಮನೆಯಲ್ಲಿ ವನಭೋಜನಕ್ಕಾಗಿ ಶೈಲಳಿಗೆ ಆಹ್ವಾನ ಕೊಡಲಾಯಿತು ಊಟ ಮುಗಿಸಿ ವಿಪಿನ ಆಫೀಸಿಗೆ ಹೋದ ಮೇಲೆ ಶೈಲ ಕರೆ ನಡೆಸಿಕೊಡಲು ಹೊರಟಳು. ಕಮಲೆಯ ಕೋರಿಕೆ ಯಂತೆ ಚಿಕ್ಕಪ್ಪ ಆ ದಿನ ಸೋಮವಾರ ಶಾಲೆಗೆ ಹೋಗಲಿಲ್ಲ. ಇಬ್ಬರೂ ಕಲೆತು ಬೇವಿನ ಮರದಡಿಯಲ್ಲಿ ಅಡುಗೆಗೆ ಪ್ರಾರಂಭಿಸಿದರು. ಉಮೇಶ ಸುತ್ತುಗೆಲಸ ಮಾಡುತಿದ್ದ.

ಅಡುಗೆಯೂ ಊಟವೂ ಮುಗಿದ ಮೇಲೆ ಚಿಕ್ಕಪ್ಪ ಮನೆಯೊಳಕ್ಕೆ ಹೋಗಿ ಮಧ್ಯಾಹ್ನ-ನಿದ್ದೆಯಲ್ಲಿ ಮುಳುಗಿದರು ಮತ್ತು ಈರ್ವರು ಗೆಳತಿಯರೂ ಬೇವಿನ ಮರದ ನೆರಳಲ್ಲಿ ಕುಳಿತು ತಮ್ಮ ಆ ಹಳೆಯ ಮಾತುಗಳನ್ನೇ ಆಡ ತೊಡಗಿದರು. ಈ ಮಾತುಗಳಲ್ಲಿ ಕಲೆತು ಕಮಲೆಗೆ ಆ ನದಿಯ ತೀರ, ಆ ಮಾಗಿಯ ಬಿಸಿಲು, ಆ ಮರದ ನೆರಳು ಅತಿ ವಿಚಿತ್ರವಾಗಿ ತೋರಿತು,— ಆ ಮೋಡವಿಲ್ಲದ ನೀಲಾಕಾಶದಲ್ಲಿ ಬಹಳ ದೂರ ಎತ್ತರದಲ್ಲಿ ಗೆರೆಯಂತೆ ಗಿಡಗ ಹಾರಾಡುತಿತ್ತು, ಕಮಲೆಯ ಹೃದಯದಲ್ಲಿದ್ದ ಒಂದು ಗುರಿಯಿಲ್ಲದ ಆಕಾಂಕ್ಷೆ ಅಷ್ಟೇ ಮೇಲೇರಿ ಹಾರಾಡಿತು.

ಹೊತ್ತು ಮುಳ ಗುವ ಮೊದಲೇ ಶೈಲ ಕಾತುರದಿಂದ ಎದ್ದು ನಿಂತಳು. ಅವಳ ಗಂಡ ಆಫೀಸಿನಿಂದ ಹಿಂದಿರುಗುವನು. ಕಮಲ, "ಅಕ್ಕ ನಿನಗೆ ಒಂದು ದಿನವಾದರೂ ನಿಯಮ ಮೀರುವ ಧೈರ್ಯ ಇಲ್ಲವೆ" ಎಂದಳು.

ಶೈಲ ಅದಕ್ಕೆ ಯಾವ ಉತ್ತರವನ್ನೂ ಹೇಳದೆ ಒಮ್ಮೆ ನಕ್ಕು ಕಮಲೆಯ ಗಲ್ಲ ಹಿಡಿದು ಅಲ್ಲಾಡಿಸಿದಳು—ಮತ್ತು ಬಂಗಲೆಯೊಳಕ್ಕೆ ಹೋಗಿ ತನ್ನ ತಂದೆಯ ನಿದ್ದೆ ಕೆಡಿಸಿ ಹೇಳಿದಳು, "ಅಪ್ಪಾ, ನಾನು ಮನೆಗೆ ಹೋಗುವೆ".

ಚಿಕ್ಕಪ್ಪ ಕಮಲೆಯನ್ನು ಕುರಿತು, "ಅಮ್ಮಾ, ನೀನೂ ಹೊರಡು" ಎಂದರು.

"ಇಲ್ಲ, ನನಗೆ ಇನ್ನೂ ಕೆಲಸವಿದೆ. ನಾನು ಸಂಜೆಯ ಬಳಿಕ ಹೋಗುವೆ" ಎಂದಳು ಕಮಲ.

ಚಿಕ್ಕಪ್ಪ ತಮ್ಮ ಮುದಿ ಆಳನ್ನೂ ಉಮೇಶನನ್ನೂ ಕಮಲೆಯ ಬಳಿ ಬಿಟ್ಟು ಶೈಲಳನ್ನು ಮನೆಗೆ ತಲುಪಿಸಲು ಹೊರಟರು, ಅಲ್ಲಿ ಅವರಿಗೆ

ಸ್ವಲ್ಪ ಕೆಲಸವಿತ್ತು—" ನಾನು ಹಿಂದಿರುಗಲು ಹೆಚ್ಚು ಹೊತ್ತಾಗದು" ಎಂದರು.

ಕಮಲ ತನ್ನ ಮನೆಗೆಲಸ ಮಾಡಿ ಮುಗಿಸಿದಾಗ ಸೂರ್ಯ ಇನ್ನೂ ಮುಳುಗಿರಲಿಲ್ಲ. ಅವಳು ಮೈತುಂಬ ಒಂದು ಹೊದಿಕೆ ಹೊದ್ದು ಕೊಂಡು ಬೇವಿನ ಮರದಡಿಯಲ್ಲಿ ಬಂದು ಕುಳಿತಳು. ದೂರ ಆಚೇ ತೀರದಲ್ಲಿ ದೊಡ್ಡ ದೊಡ್ಡ ಒಂದೆರಡು ನೌಕೆಯ ಪಟದ ಕಂಬಗಳು ಅಗ್ನಿವರ್ಣ ಆಕಾಶದಲ್ಲಿ ಕರಿಯ ಗೆರೆಯೆಳೆದಂತೆ ನಿಂತಿದ್ದುವು. ಅವುಗಳ ಹಿಂಬದಿಯ ಉನ್ನತ ಬೆಟ್ಟಗಳ ಮರೆಯಲ್ಲಿ ಸೂರ್ಯ ಮುಳುಗಿದ.

ಆ ಹೊತ್ತಿನಲ್ಲಿ ಉಮೇಶ ಯಾವುದೋ ನೆಪ ಹೂಡಿಕೊಂಡು ಅವಳ ಹತ್ತಿರ ಬಂದು ನಿಂತ. "ಅಮ್ಮಾ, ಇಷ್ಟು ಹೊತ್ತಾದರೂ ನೀವು ಎಲೆ ಯಡಿಕೆ ಹಾಕಿಕೊಂಡಿಲ್ಲ—ಆ ಮನೆಯಿಂದ ಬರುವಾಗ ನಾನು ಎಲೆಯಡಿಕೆ ಸಿದ್ಧಪಡಿಸಿ ತಂದಿರುವೆ" ಎಂದ. ಹೀಗೆ ಹೇಳಿ ಒಂದು ಕಾಗದದ ಪೊಟ್ಟಣದ ಎಲೆಯಡಿಕೆ ಕಮಲೆಯ ಕೈಗೆ ಕೊಟ್ಟ.

ಕಮಲೆಗೆ ಸಂಜೆ ಹೊತ್ತಾಗಿರುವುದು ಆಗ ಅರಿವಾಯಿತು—ಕೂಡಲೇ ಎದ್ದು ಹೊರಟಳು. "ಚಕ್ರವರ್ತಿ ಮಹಾಶಯರು ಗಾಡಿ ಕಳುಹಿಸಿ ಕೊಟ್ಟಿರುವರು" ಎಂದ ಉಮೇಶ.

ಕಮಲ ಗಾಡಿ ಹತ್ತುವ ಮೊದಲು ಬಂಗಲೆಯೊಳಗೆ ಕೊಠಡಿಗಳನ್ನು ಮತ್ತೊಮ್ಮೆ ನೋಡಿ ಬರಲು ಹೋದಳು.

ದೊಡ್ಡ ಕೊಠಡಿಯಲ್ಲಿ ಚಳಿ ಹೊತ್ತಿನಲ್ಲಿ ಬೆಂಕಿ ಹೊತ್ತಿಸಲು ವಿಲಾಯತಿ ತಯಾರಿಕೆಯ ಒಂದು ಅಗ್ಗಿಷ್ಟಿಕೆಯಿತ್ತು. ಅದಕ್ಕೆ ಸೇರಿದಂತಿದ್ದ ಕಟ್ಟೆಯ ಮೇಲೆ ಸೀಮೆಯೆಣ್ಣೆ ದೀಪ ಉರಿಯುತ್ತಿತ್ತು. ಅದೇ ಕಟ್ಟೆಯ ಮೇಲೆ ಕಮಲ ಎಲೆಯಡಿಕೆ ಪೊಟ್ಟಣ ಇಟ್ಟು ಹಾಗೆಯೇ ಒಮ್ಮೆ ನೋಡಿ ಬರಲು ಹೊರಡು ವುದರಲ್ಲಿದ್ದಳು. ಆ ಸಮಯದಲ್ಲಿ ಕಾಗದದ ಪೊಟ್ಟಣದ ಮೇಲೆ ರಮೇಶನ ಕೈ ಬರಹದಲ್ಲಿದ್ದ ತನ್ನ ಹೆಸರು ಕಮಲೆಯ ಕಣ್ಣಿಗೆ ಬಿತ್ತು.

ಉಮೇಶನನ್ನು ಕಮಲ ಪ್ರಶ್ನಿಸಿದಳ, "ಈ ಕಾಗದ ನಿನಗೆ ಎಲ್ಲಿತ್ತು?".

ಉಮೇಶ, "ಬಾಬುಗಳ ಕೊಠಡಿಯ ಮೂಲೆಯಲ್ಲಿ ಬಿದ್ದಿತ್ತು, ಗುಡಿಸುವಾಗ ಎತ್ತಿಟ್ಟೆ" ಎಂದ.

ಕಮಲ ಆ ಕಾಗದವನ್ನು ಬಿಚ್ಚಿ ಹಿಡಿದು ಓದತೊಡಗಿದಳು. ಹೇಮ ನಳಿನಿಗೆ ರಮೇಶ ಆ ದಿನ ವಿವರವಾಗಿ ಬರೆದಿದ್ದನಲ್ಲ, ಅದೇ ಈ ಕಾಗದ. ಮರವೆ ಸ್ವಭಾವವುಳ್ಳ ರಮೇಶನ ಕೈಯಿಂದ ಅದು ಯಾವಾಗ ಎಲ್ಲಿ ಬಿದ್ದು ಹೋಯಿತೋ ಅದರ ಸುಳಿವೇ ಅವನಿಗಿಲ್ಲ.

ಕಮಲೆಯ ಓದು ಮುಗಿಯಿತು. ಉಮೇಶ, "ಅಮ್ಮಾ, ಹೀಗೆ ತೆಪ್ಪನೆ ನಿಂತಿರುವುದೇಕೆ? ಕತ್ತಲಾಗುತ್ತ ಬಂತು" ಎಂದ.

ಕೊಠಡಿಯಲ್ಲಿ ಸದ್ದಿಲ್ಲದೆ ಇತ್ತು. ಕಮಲೆಯ ಮುಖದಕಡೆ ನೋಡಿ ಉಮೇಶ ಹೆದರಿದ. "ಅಮ್ಮಾ, ನನ್ನ ಮಾತು ಕೇಳಿಸಿತೇನಮ್ಮಾ, ಮನೆಗೆ ಹೊರಡಿ, ಕತ್ತಲಾಯಿತು" ಎಂದು ಹೇಳಿದ.

ಕ್ಷಣಕಾಲದ ಬಳಿಕ ಚಿಕ್ಕಪ್ಪನ ಆಳು ಬಂದು, "ಅಮ್ಮನವರೆ, ಗಾಡಿ ಬಹಳ ಹೊತ್ತಿನಿಂದ ನಿಂತಿರುವುದು, ನಡೆಯಿರಿ ಹೋಗೋಣ" ಎಂದ.

## ೩೬

"ತಂಗಿ, ಇಂದು ನಿನ್ನ ಆರೋಗ್ಯ ನೆಟ್ಟಗಿಲ್ಲವೆ, ತಲೆ ನೋಯುವುದೆ?" ಎಂದು ಶೈಲಜ ಕೇಳಿದಳು.

"ಇಲ್ಲ. ಚಿಕ್ಕಪ್ಪನನ್ನು ಕಾಣಲೇ ಇಲ್ಲವಲ್ಲ ಏಕೆ" ಎಂದಳು.

ಶೈಲ ಹೇಳಿದಳು, "ಶಾಲೆಗೆ ಬೇಸಿಗೆಯ ಬಿಡುವು ಬಂದಿರುವುದು— ಅಕ್ಕನನ್ನು ನೋಡಿ ಬರಲು ಅಮ್ಮ ಅವರನ್ನು ಅಲಹಾಬಾದಿಗೆ ಕಳು ಹಿಸಿರುವಳು—ಕೆಲವು ದಿನಗಳಿಂದ ಅಕ್ಕನ ಆರೋಗ್ಯ ಚೆನ್ನಾಗಿಲ್ಲ".

ಕಮಲ, "ಅವರು ಯಾವಾಗ ಬರುವರು?" ಎಂದು ಕೇಳಿದಳು.

ಶೈಲ—ಅವರು ಬರಲು ಸುಮಾರು ಒಂದು ವಾರ ಹಿಡಿದೀತು, ನೀನು ದಿನವೆಲ್ಲ ನಿನ್ನ ಬಂಗಲೆ ಅಣಿಮಾಡುತ್ತ ಬಹಳ ದಣಿದಿರುವೆ, ಇಂದು ನೀನು ಬಹಳ ಆಯಾಸ ಪಟ್ಟವಳಂತೆ ಕಾಣುವೆ. ಇಂದು ಹೊತ್ತಿಗೆ ಮುಂಚೆಯೇ ಊಟಮಾಡಿ ಮಲಗು.

ಶೈಲಳಿಗೆ ಕಮಲ ಎಲ್ಲ ಸಂಗತಿಯನ್ನೂ ಹೇಳಿದರೆ, ಅವಳಿಗೆ ನೆಮ್ಮದಿ ಯಾದೀತು. ಆದರೆ ಹೇಳುವಂತಿಲ್ಲ. "ಯಾರನ್ನು ಇಷ್ಟು ದಿನ ನನ್ನ ಗಂಡ

ಎಂದು ತಿಳಿದಿದ್ದೆನೋ, ಅವನು ನನ್ನ ಗಂಡ ಅಲ್ಲ, " ಈ ವಿಷಯವನ್ನು ಬೇರೆ ಯಾರಿಗೇ ಆಗಲಿ, ಶೈಲಳಿಗೆ ಯಾವ ರೀತಿಯಲ್ಲೂ ತಿಳಿಸುವ ಹಾಗಿಲ್ಲ

ಕಮಲ ಮಲಗುವ ಕೋಣೆಗೆ ಬಂದು ಬಾಗಿಲು ಮುಚ್ಚಿಕೊಂಡು ದೀಪದ ಬೆಳಕಿನಲ್ಲಿ ಮತ್ತೊಮ್ಮೆ ರಮೇಶನ ಅದೇ ಕಾಗದ ಓದಲು ಕುಳಿತಳು. ಯಾರನ್ನು ಉದ್ದೇಶಿಸಿ ಕಾಗದ ಬರೆದಿದೆಯೋ, ಅವರ ಹೆಸರೇ ಇಲ್ಲ—ಆದರೆ ಆಕೆ ಹೆಂಗಸು ರಮೇಶನೊಡನೆ ಅವಳ ಮದುವೆಯ ಒಪ್ಪಂದ ನಡೆದಿತ್ತು, ಮತ್ತು ಕಮಲೆಯಿಂದ ಅವಳ ಜೊತೆ ಸಂಬಂಧ ಬಿಟ್ಟುಹೋಯಿತು, ಎಂದು ಪತ್ರದ ಮೂಲಕ ಸ್ಪಷ್ಟವಾಗಿ ತಿಳಿಯಿತು. ಯಾರಿಗೆ ಪತ್ರ ಬರೆಯಲಾಗಿದೆಯೋ, ರಮೇಶ ಅವಳನ್ನೇ ತನ್ನ ಸಂಪೂರ್ಣ ಹೃದಯದಿಂದ ಪ್ರೀತಿಸುತಿದ್ದ ಮತ್ತು ವಿಧಿವಿಡಂಬನೆಯಿಂದ ಎಲ್ಲಿಂದಲೋ ಕಮಲ ಬಂದು ಅವರ ತಲೆಯ ಮೇಲೆ ಬೀಳುತ್ತಲೇ ಅನಾಥೆಯ ವಿಷಯದಲ್ಲಿ ದಯೆ ತೋರಿ ಈ ಪ್ರೇಮ ಬಂಧನವನ್ನು ಅವನು ಎಂದೆಂದಿಗೂ ಕತ್ತರಿಸಿಹಾಕಲು ಸಿದ್ಧನಾಗಿರುವನು, ಎಂಬ ಸಂಗತಿ ಪತ್ರದಲ್ಲಿ ಇಲ್ಲದೆ ಇರಲಿಲ್ಲ.

ಆ ನದಿಯ ತೀರದಲ್ಲಿ ರಮೇಶನೊಡನೆ ಪ್ರಥಮ ಮಿಲನವಾದಂದಿನಿಂದ ಹಿಡಿದು ಈ ಗಾಜೀಪುರಕ್ಕೆ ಬಂದವರೆಗೆ ಎಲ್ಲ ನೆನಪನ್ನೂ ಕಮಲ ಮನದಲ್ಲೇ ಸಿಂಹಾವಲೋಕನ ಮಾಡಿದಳು—ಯಾವುದು ಅಸ್ಪಷ್ಟವಾಗಿತ್ತೋ, ಅದು ಸ್ಪಷ್ಟವಾಯಿತು.

ರಮೇಶ ಅವಳನ್ನು ಪರಸ್ತ್ರೀ ಎಂದು ತಿಳಿದಿದ್ದಾಗ ಮತ್ತು ಅವಳೊಡನೆ ಹೇಗೆ ನಡೆದುಕೊಳ್ಳುವುದೆಂದು ಯೋಚಿಸುತ್ತ ದುಗುಡದಿಂದ ಇದ್ದಾಗ, ಕಮಲ ನಿಶ್ಚಿಂತ ಮನದಿಂದ ಅವನನ್ನು ಗಂಡನೆಂದು ತಿಳಿದು ಅಸಂಕೋಚದಿಂದ ಅವನೊಡನೆ ಚಿರಸ್ಥಾಯಿಯಾದ ಮನೆಗೆಲಸದ ಸಂಪರ್ಕ ಬೆಳೆಸಿಕೊಳ್ಳುತ್ತಿದ್ದಳು, ಈ ನಾಚಿಕೆ ಕಮಲೆಯನ್ನು ಬಾರಿಬಾರಿಗೂ ಕಾದ ಸಲಾಕೆಯಂತೆ ಇರಿಯುತ್ತಿತ್ತು. ಪ್ರತಿದಿನದ ವಿಚಿತ್ರಘಟನೆ ನೆನಪಾಗಿ ಅವಳು ಭೂಮಿಗೇ ಇಳಿಯತೊಡಗಿದಳು — ಈ ನಾಚಿಕೆ ಅವಳ ಜೀವನದಲ್ಲಿ ಅತಿ ಗುರುತರವಾಯಿತು—ಇದರಿಂದ ಅವಳಿಗೆ ಯಾವ ಬಗೆಯಲ್ಲೂ ಉದ್ಧಾರವಿಲ್ಲ!

ಮುಚ್ಚಿದ ಕೋಣೆಯ ಕದ ತೆರೆದುಹಾಕಿ ಕಮಲ ಮನೆಯ ಹಿಂಭಾಗದ ತೋಟಕ್ಕೆ ಹೋದಳು. ಚಳಿಗಾಲದ ಕತ್ತಲ ರಾತ್ರಿ—ಕರಿಯ ಆಕಾಶ

ಕಪ್ಪುಬಂಡೆಯಂತೆ ಅತಿ ಶೀತಳ. ಎಲ್ಲಿಯೂ ಮೋಡದ ಸುಳಿವಿಲ್ಲ. ನಕ್ಷತ್ರಗಳು ಚೆನ್ನಾಗಿ ಹೊಳೆಯುತಿದ್ದುವು

ಎದುರಿಗೆ ಎತ್ತರವಿಲ್ಲದ ಕಸಿ ಮಾವಿನ ಮರ ಕತ್ತಲು ಹೆಚ್ಚಿಸುತ್ತ ನಿಂತಿತ್ತು. ಕಮಲೆಗೆ ಯಾವುದೂ ಬಗೆಹರಿಯಲಿಲ್ಲ. ಅವಳು ತೋಯ್ದ ಹುಲ್ಲಿನ ಮೇಲೆ ಕುಳಿತಳು, ಕಲ್ಲಿನ ಮೂರ್ತಿಯಂತೆ ಸ್ಥಿರವಾಗಿದ್ದಳು— ಅವಳ ಕಣ್ಣಿಂದ ಒಂದು ಹನಿ ಕಣ್ಣೀರೂ ಹೊರಬೀಳಲಿಲ್ಲ.

ಹೀಗೆ ಅವಳು ಎಷ್ಟು ಕಾಲ ಕುಳಿತಿದ್ದಳೋ ತಿಳಿಯದು—ಆದರೆ ಕೊರೆಯುವ ಚಳಿ ಅವಳ ಹೃದಯದಲ್ಲಿ ನಡುಕ ಹುಟ್ಟಿಸಿತು—ಅವಳ ಶರೀರವೆಲ್ಲ ಗಡಗಡ ನಡುಗತೊಡಗಿತು. ಗಾಢ ರಾತ್ರಿಯಲ್ಲಿ ಕೃಷ್ಣಪಕ್ಷದ ಚಂದ್ರೋದಯ ನಿಸ್ತಬ್ಧ ತಾಳೆಯವನದ ಅಂತರಾಳದಲ್ಲಿ ಅಂಧಕಾರದ ಒಂದು ಭಾಗವನ್ನು ಕತ್ತರಿಸಿ ಹಾಕಿದಾಗ, ಕಮಲ ಎದ್ದು ಮೆಲ್ಲಮೆಲ್ಲನೆ ಕೊಠಡಿಗೆ ಹೋಗಿ ಬಾಗಿಲು ಮುಚ್ಚಿದಳು.

ಬೆಳಗ್ಗೆ ಕಮಲ ಕಣ್ಣುಬಿಟ್ಟು ನೋಡುವಾಗ, ಶೈಲ ಅವಳ ಮಂಚದ ಹತ್ತಿರ ನಿಂತಿದ್ದಳು. ಬಹಳ ಹೊತ್ತಾಗಿರುವುದನ್ನು ತಿಳಿದು ಕಮಲ ನಾಚಿಕೆಯಿಂದ ಕೂಡಲೇ ಹಾಸಿಗೆಯ ಮೇಲೆ ಎದ್ದು ಕುಳಿತಳು.

ಶೈಲ, "ಬೇಡ ತಂಗಿ, ನೀನು ಏಳಬೇಡ, ಇನ್ನೂ ಸ್ವಲ್ಪ ನಿದ್ದೆ ಮಾಡು—ಖಂಡಿತ ನಿನ್ನ ಆರೋಗ್ಯ ನೆಟ್ಟಗಿಲ್ಲ" ಎಂದಳು. "ನಿನ್ನ ಮುಖ ಬಹಳ ಬಾಡಿರುವಂತೆ ಕಾಣುವುದು, ಕಣ್ಣಿನ ಕೆಳಗೆ ಕಪ್ಪು ಮೂಡಿರುವುದು. ಏನಾಗಿರುವುದು ತಂಗಿ, ನನಗೆ ಹೇಳು"—ಎಂದು ಶೈಲ ಕಮಲೆಯ ಹತ್ತಿರ ಕುಳಿತು ಅವಳ ಗಲ್ಲ ಒತ್ತಿ ಹಿಡಿದಳು.

ಕಮಲೆಯ ಹೃದಯ ಉಕ್ಕಿ ಬರತೊಡಗಿತು—ಅವಳ ಕಣ್ಣೀರು ಅಡ್ಡಿಯನ್ನು ಗಮನಿಸಲಿಲ್ಲ. ಶೈಲಜೆಯ ಹೆಗಲ ಮೇಲೆ ಮುಖ ಮುಚ್ಚಿಕೊಂಡು ಅವಳ ಅಳು ಒಮ್ಮೆಗೇ ಚಿಮ್ಮಿ ಹೊರಟಿತು. ಶೈಲ ಯಾವ ಮಾತನ್ನೂ ಆಡದೆ ಅವಳನ್ನು ಬಿಗಿಯಾಗಿ ಅಪ್ಪಿಕೊಂಡಳು.

ಸ್ವಲ್ಪ ಹೊತ್ತಿನ ನಂತರ ಕಮಲ ವೇಗವಾಗಿ ಶೈಲಜೆಯ ಬಾಹುಬಂಧನ ಬಿಡಿಸಿಕೊಂಡು ಎದ್ದಳು—ಕಣ್ಣೊರೆಸಿಕೊಂಡು ಗಟ್ಟಿಯಾಗಿ ನಗತೊಡಗಿದಳು. "ಊಹೂಂ, ಇನ್ನು ನಗಬಾರದು. ಎಷ್ಟೆಷ್ಟೋ ಹುಡುಗಿಯರನ್ನು ನೋಡಿರುವೆ. ನಿನ್ನಂಥ ಚಂಚಲ ಹುಡುಗಿಯನ್ನು ನಾನು ಕಂಡಿಲ್ಲ.

ನನಗೆ ತಿಳಿಸಕೂಡದೆಂದು ನೀನು ಎಣಿಸಿರುವೆ—ನನ್ನನ್ನು ಆ ರೀತಿ ವಂಚಿಸಲು ಸಾಧ್ಯವಿಲ್ಲ. ಈಗಲಾದರೂ ಹೇಳುವೆಯಾ? ರಮೇಶ ಬಾಬು ಅಲಹಾ ಬಾದಿಗೆ ಹೋದ ಬಳಿಕ ನಿನಗೊಂದು ಪತ್ರವನ್ನು ಬರೆಯಲಿಲ್ಲ, ಅದರಿಂದಲೇ ಕೋಪಗೊಂಡಿರುವೆ—ಅಭಿಮಾನಿನಿ! ಅವರು ಕೆಲಸಕ್ಕಾಗಿ ಅಲ್ಲಿಗೆ ಹೋಗಿರು ವರು, ಎರಡು ದಿನಗಳಲ್ಲಿ ಹಿಂದಿರುಗುವರು, ಇದನ್ನು ನೀನು ತಿಳಿದುಕೊಳ್ಳ ಬೇಕು—ಇಷ್ಟೇ ಅಲ್ಲದೆ ಹೊತ್ತು ದೊರೆಯುದಿರಬಹುದು, ಇದಕ್ಕಾಗಿ ಇಷ್ಟು ಕೋಪಿಸಿಕೊಳ್ಳುವುದೆ, ಛೀ, ತಂಗಿ, ನಾನು ಇಂದು ನಿನಗೇನೋ ಉಪದೇಶ ಮಾಡುತ್ತಿರುವೆ—ನಾನಾದರೂ ಹೀಗೆಯೇ ಮಾಡುತ್ತಿದ್ದೆ. ಇಂಥ ಕೆಲಸಕ್ಕೆ ಬಾರದ ಅಳುವನ್ನು ಹೆಂಗಸರು ಎಷ್ಟೋ ಸಲ ಅಳಬೇಕಾಗುವುದು. ಅಳು ಮುಗಿದು ನಗು ಬಂದೊಡನೆಯೇ, ಮನಸಿನಲ್ಲಿ ಏನೂ ಉಳಿಯದು" ಎಂದಳು ಶೈಲ—ಹೀಗೆ ಹೇಳಿ ಕಮಲೆಯನ್ನು ಎದೆಯ ಹತ್ತಿರ ಎಳೆದುಕೊಂಡು, "ಈ ದಿನ ನೀನು ರಮೇಶಬಾಬುವನ್ನು ಎಂದಿಗೂ ಕ್ಷಮಿಸುವುದಿಲ್ಲ ಎಂದು ಅಂದುಕೊಂಡಿರುವೆ—ಅಲ್ಲವೇ? ಸತ್ಯವಾಗಿ ಹೇಳು" ಎಂದಳು.

"ಹೌದು, ಸತ್ಯವಾಗಿ ಹೇಳುವೆ" ಎಂದಳು ಕಮಲ.

ಶೈಲ ಗಲ್ಲದ ಮೇಲೆ ಅಂಗೈಯಿಂದ ಹೊಡೆಯುತ್ತ ಹೇಳಿದಳು, "ಇಸ್, ಹಾಗೆಯೇ ಹೇಳುವೆಯಾ—ನೋಡೋಣವಂತೆ ಪಣಕಟ್ಟು!".

ಕಮಲೆಯ ಮಾತುಕತೆ ಮುಗಿದೊಡನೆಯೇ ಶೈಲ ಅಲಹಾಬಾದಿಗೆ ತನ್ನ ತಂದೆಯವರಿಗೆ ಕಾಗದ ಬರೆದು ಹಾಕಿದಳು. ಅದರಲ್ಲಿ, "ರಮೇಶ ಬಾಬುಗಳಿಂದ ಪತ್ರ ಬರದೆ ಕಮಲ ಬಹಳ ಚಿಂತಿಸುತಿರುವಳು. ಪಾಪ, ಅವಳು ತೀರ ಹೊಸ ಊರಿಗೆ ಬಂದಿರುವಳು, ಅಷ್ಟೇ ಸಾಲದೆ ರಮೇಶ ಬಾಬು ಆಗಾಗ ಅವಳನ್ನು ಬಿಟ್ಟು ಹೊರಟು ಹೋಗುವರು ಹಾಗೂ ಕಾಗದ ಪತ್ರ ಬರೆಯುವುದೇ ಇಲ್ಲ, ಇದರಿಂದ ಅವಳಿಗೆ ಎಷ್ಟು ಕಷ್ಟವಾಗುವುದು, ಎಂದು ಯೋಚಿಸಿ ನೋಡಿ. ಅವರ ಅಲಹಾಬಾದಿನ ಕೆಲಸ ಮುಗಿಯಿತೋ ಇಲ್ಲವೊ? ಕೆಲಸ ಎಲ್ಲರಿಗೂ ಇದ್ದೇ ಇರುವುದು, ಆದರೆ ಒಂದೆರಡು ಕಾಗದ ಬರೆಯು ವುದಕ್ಕೂ ಅವಕಾಶ ದೊರೆಯುವುದಿಲ್ಲವೆ?" ಎಂದು ಬರೆದಳು.

ಚಿಕ್ಕಪ್ಪ ರಮೇಶನನ್ನು ಭೇಟಿ ಮಾಡಿ ತಮ್ಮ ಮಗಳ ಪತ್ರದ ಸಾರಾಂಶ ಹೇಳಿ ಗದರಿಸಿದರು.

ಕಮಲೆಯ ಕಡೆ ರಮೇಶನ ಮನ ಹೆಚ್ಚು ಪರಿಮಾಣದಲ್ಲಿ ಆಕರ್ಷಿತ

ವಾಗಿರುವುದು, ಎಂಬ ಮಾತು ಸತ್ಯವಾದರೂ ಆಕರ್ಷಿತವಾಗಿರುವುದರಿಂದ ಅವನ ಕಳವಳ ಮತ್ತಷ್ಟು ಹೆಚ್ಚಾಯಿತು.

ಈ ಕಳವಳದಲ್ಲಿ ಸಿಕ್ಕಿಕೊಂಡು ರಮೇಶ ಯಾವ ರೀತಿಯಲ್ಲೂ ಅಲಹಾಬಾದಿನಿಂದ ಹಿಂದಿರುಗಲಾರದಾದ—ಈ ವೇಳೆಗೆ ಚಿಕ್ಕಪ್ಪನವರಿಂದ ಶೈಲಳ ಪತ್ರದ ವಿಷಯ ಕೇಳಿದ.

ಕಮಲ ರಮೇಶನಿಗಾಗಿ ಅತಿ ಉದ್ವೇಗ ತೋರ್ಪಡಿಸಿರುವ ಸಂಗತಿ ಪತ್ರದಿಂದ ಸ್ಪಷ್ಟವಾಯಿತು–ಅವನು ಅತಿ ನಾಚಿಕೆಯಿಂದ ಬರೆಯಲಾರದಾದ.

ಇದರಿಂದ ರಮೇಶನ ತುಯ್ದಾಟದ ಎರಡು ಶಾಖೆಗಳೂ ನೋಡುತ್ತ ನೋಡುತ್ತ ಒಂದೆಡೆಯಲ್ಲಿ ಸೇರಿಕೊಂಡವು. ಈಗ ಕೇವಲ ರಮೇಶನೊಬ್ಬನ ಸುಖ–ದುಃಖದ ವಿಚಾರ ಮಾತ್ರವಲ್ಲ, ಕಮಲೆಯೂ ರಮೇಶನನ್ನು ಪ್ರೀತಿಸುತಿರುವಳು. ವಿಧಾತ ನದಿಯ ತೀರದಲ್ಲಿ ಅವರಿಬ್ಬರನ್ನೂ ಒಂದುಗೂಡಿಸಿರುವನು ಎಂದು ಮಾತ್ರವಲ್ಲ, ಅಷ್ಟೇಕೆ ಹೃದಯದೊಳಗೂ ಕೂಡಿಸಿರುವನು.

ಹೀಗೆ ಯೋಚಿಸಿ ರಮೇಶ ಸ್ವಲ್ಪವೂ ತಡಮಾಡದೆ ಕಮಲೆಗೆ ಒಂದು ಪತ್ರ ಬರೆಯಲು ಕುಳಿತ. ಬರೆದ—

"ಪ್ರಿಯತಮೆಗೆ—

ಕಮಲಾ, ನಿನ್ನನ್ನು ಹೀಗೆ ಸಂಬೋಧಿಸಿರುವೆನಲ್ಲ, ಇದನ್ನು ಪತ್ರ ಬರೆಯುವ ಒಂದು ಬಳಕೆಯ ಪದ್ಧತಿಪಾಲನೆ ಎಂದು ತಿಳಿಯಬೇಡ. ಜಗತ್ತಿನಲ್ಲಿ ಎಲ್ಲರಿಗಿಂತ ಹೆಚ್ಚಾಗಿ ನಿನ್ನನ್ನು ಪ್ರಿಯಳೆಂದು ಲೆಕ್ಕಿಸದಿದ್ದರೆ, ಎಂದಿಗೂ "ಪ್ರಿಯತಮೆ" ಎಂದು ಸಂಬೋಧಿಸುತಿರಲಿಲ್ಲ. ನಿನ್ನ ಮನಸಿಗೆ ಎಂದಾದರೂ ಯಾವುದಾದರೂ ಸಂದೇಹ ಬಂದಿರಬಹುದು, ನಿನ್ನ ಕೋಮಲ ಹೃದಯಕ್ಕೆ ಎಂದಾದರೂ ಯಾವುದಾದರೂ ವ್ಯಥೆ ಸಂಭವಿಸಿರಬಹುದು, ಆದರೆ ಇಂದು ನಿನ್ನನ್ನು ಹೃದಯದಿಂದ 'ಪ್ರಿಯತಮೆ' ಎಂದು ಕರೆದಿರುವೆ, ಇದರಿಂದಲೇ ಇಂದು ನಿನ್ನ ಸಮಸ್ತ ಸಂದೇಹವನ್ನೂ ಸಮಸ್ತ ವೇದನೆಯನ್ನೂ ಸಂಪೂರ್ಣವಾಗಿ ತೊಳೆದುಹಾಕು. ಇದಕ್ಕಿಂತ ಹೆಚ್ಚಾಗಿ ನಿನಗೆ ಹೇಗೆ ವಿವರಿಸಿ ಹೇಳಲಿ. ಇಷ್ಟು ದಿನದವರೆಗಿನ ನನ್ನ ಅನೇಕ ನಡವಳಿಕೆ ಖಂಡಿತ ನಿನಗೆ ನೋವು ತಂದಿರುವುದು—ಆದ್ದರಿಂದ ನೀನು ಮನಸಿನಲ್ಲೇ ನನ್ನನ್ನು ಅಪರಾಧಿಯಾಗಿ ಎಣಿಸಿರಬಹುದು, ಆದರೂ ನಾನು ಎದುರಾಳಿಯಾಗಿ ಸ್ವಲ್ಪವೂ ಪ್ರತಿಮಾತು ಹೇಳುವುದಿಲ್ಲ—ನಾನು ಹೇಳುವುದಿಷ್ಟೇ, ಇಂದು ನೀನು ನನ್ನ

ಪ್ರಿಯತಮೆ, ನಿನಗಿಂತ ಪ್ರಿಯರಾದವರು ನನಗೆ ಬೇರೆ ಯಾರೂ ಇಲ್ಲ—ಇದರಿಂದ ನನ್ನ ಎಲ್ಲ ಅಪರಾಧದ, ಎಲ್ಲ ಅನುಚಿತ ಆಚರಣೆಯ ಕಡೆಯ ಮಾತು ಮುಗಿಯದಿದ್ದರೆ, ಬೇರೆ ಯಾವುದರಿಂದಲೂ ಕೊನೆಯಾಗದು.

"ಅಷ್ಟೇ ಅಲ್ಲ ಕಮಲ, ಇಂದು ನಿನ್ನನ್ನು ಹೀಗೆ, "ಪ್ರಿಯತಮೆ" ಎಂದು ಸಂಬೋಧಿಸಿ ನನ್ನ ಸಂಶಯದಿಂದ ಕೂಡಿದ ಹಿಂದಿನ ದಿನಗಳನ್ನು ದೂರಮಾಡಿರುವೆ, ಹೀಗೆ 'ಪ್ರಿಯತಮೆ' ಎಂದು ಸಂಬೋಧಿಸಿ ನನ್ನ ಪ್ರೇಮದ ಭವಿಷ್ಯತ್ತನ್ನು ಆರಂಭಿಸಿರುವೆ. ನಿನ್ನ ಬಳಿ ನನ್ನ ಏಕಾಂತ ಪ್ರಾರ್ಥನೆಯೇನೆಂದರೆ, ನೀನು ಇಂದು ನನ್ನ, 'ಪ್ರಿಯತಮೆ' ಈ ವಿಷಯವನ್ನು ಸಂಪೂರ್ಣವಾಗಿ ನಂಬು. ಇದನ್ನು ನೀನು ಸರಿಯಾಗಿ ಮನಸ್ಸಿಗೆ ತೆಗೆದುಕೊಳ್ಳುವುದಾದರೆ, ನನಗೆ ಬೇರೆ ಸಂಶಯದ ಪ್ರಶ್ನೆಗಳನ್ನು ಕೇಳುವ ಅವಕಾಶವೇ ಉಳಿಯದು.

"ಆಮೇಲೆ, ನಾನು ನಿನ್ನ ಪ್ರೇಮಕ್ಕೆ ಪಾತ್ರನಾದೆನಲ್ಲವೆ, ಎಂಬ ಮಾತನ್ನು ನಿನ್ನೊಡನೆ ಕೇಳುವ ಸಾಹಸವೇ ನನಗೆ ಇರುವುದಿಲ್ಲ. ನಾನು ಕೇಳುವುದೂ ಇಲ್ಲ. ನನ್ನ ಈ ಅನುಚ್ಚರಿತ ಪ್ರಶ್ನೆಗೆ ಸರಿಯಾದ ಉತ್ತರ ಒಂದು ದಿನ ನಿನ್ನ ಹೃದಯದೊಳಗಿಂದ ನನ್ನ ಹೃದಯಕ್ಕೆ ನಿಃಶಬ್ದವಾಗಿ ಬಂದು ಸೇರುವುದು, ಇದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ—ಇದನ್ನು ನಾನು ನನ್ನ ಪ್ರೇಮದ ಬಲದಿಂದ ಹೇಳುತಿರುವೆ;—ನನ್ನ ಅರ್ಹತೆಗಾಗಿ ಹೆಮ್ಮೆಪಡುವುದಿಲ್ಲ, ಆದರೂ ನನ್ನ ಸಾಧನೆ ಸಾರ್ಥಕವಾಗುವುದಲ್ಲವೆ!

"ನಾನು ಬರೆಯುತಿರುವುದು ಯಾವ ಬಗೆಯಲ್ಲೂ ಸಹಜವಾಗಿ ಬರುತ್ತಿಲ್ಲ, ಎಂದು ನನಗೆ ಚೆನ್ನಾಗಿ ಗೊತ್ತು—ಅದು ಕಾವ್ಯದಂತೆ ಕೇಳಿ ಬರುತ್ತಿರುವುದು—ಆಸೆ ಪಡುತಿರುವುದು, ಈ ಕಾಗದ ಹರಿದುಹಾಕಬಹುದು. ಆದರೆ ಮನಸಿಗೊಪ್ಪುವ ಪತ್ರ ಬರೆಯಲು ಈಗ ಸಾಧ್ಯವಿಲ್ಲ. ಏಕೆಂದರೆ ಪತ್ರ ಇಬ್ಬರ ಸಾಮಗ್ರಿ—ಬರಿಯ ಒಂದು ಪಕ್ಷ ಪತ್ರ ಬರೆದರೆ, ಆ ಪತ್ರದಲ್ಲಿ ಎಲ್ಲ ಸಂಗತಿಯನ್ನೂ ಸರಿಯಾಗಿ ಹೇಳಲು ಬರುವುದಿಲ್ಲ—ನನ್ನಲ್ಲೂ ನಿನ್ನಲ್ಲೂ ಎಂದು ಮನ—ಬೇರೆಬೇರೆಯಾಗಿ ಉಳಿಯುವುದಿಲ್ಲವೋ ಅಂದೇ ಪತ್ರದಂತೆ ಪತ್ರ ಬರೆಯಲು ಸಾಧ್ಯ. ಎದುರುಬದುರು ಎರಡು ಬಾಗಿಲುಗಳನ್ನೂ ತೆರೆದಿಟ್ಟಾಗಲೇ ಮನೆಯಲ್ಲಿ ತಡೆಯಿಲ್ಲದೆ ಗಾಳಿ ಬೀಸ್ಟುವುದು, ಕಮಲಾ, ಪ್ರಿಯತಮೆ, ನಿನ್ನ ಹೃದಯವನ್ನು ಎಂದು ಸಂಪೂರ್ಣವಾಗಿ ತೆರೆದಿಡುವೆ?

"ಈ ಎಲ್ಲ ಮಾತಿನ ಮೀಮಾಂಸೆ ಮೆಲ್ಲಮೆಲ್ಲನೆ, ಕ್ರಮಕ್ರಮವಾಗಿ ನಡೆಯುವುದು—ಆತುರ ಪಟ್ಟು ಫಲವಿಲ್ಲ. ನನ್ನ ಪತ್ರ ಪಡೆದ ಮರುದಿನ ಮುಂಜಾನೆಯೇ ನಾನು ಗಾಜೀಪುರದಲ್ಲಿರುವೆ. ಅನೇಕ ದಿನ ಮನೆಯಿಲ್ಲ ದವನಂತೆ ಕಳೆಯಿತು—ಇನ್ನು ನನಗೆ ಧೈರ್ಯವಿಲ್ಲ—ಇನ್ನು ಮನೆಯೊ ಳಕ್ಕೆ ಬರುವೆ—ಹೃದಯ ಲಕ್ಷ್ಮಿಯನ್ನು ಗೃಹಲಕ್ಷ್ಮಿಯಂತೆ ಕಾಣುವೆ. ಆ ಶುಭ ಮುಹೂರ್ತದಲ್ಲಿ ಎರಡನೆಯ ಬಾರಿ ನಮ್ಮ ಶುಭದೃಷ್ಟಿ. ನಿನಗೆ ನೆನಪಿದೆಯೇ? ಆ ಬೆಳುದಿಂಗಳ ರಾತ್ರಿಯಲ್ಲಿ, ಆ ನದಿಯ ತೀರದಲ್ಲಿ ಜನಶೂನ್ಯ ಮರಳು ದಡದಲ್ಲಿ ನಮ್ಮ ಆ ಶುಭದೃಷ್ಟಿ. ಅಲ್ಲಿ ಛಾವಣಿ ಯಿರಲಿಲ್ಲ. ಗೋಡೆಯಿರಲಿಲ್ಲ, ತಂದೆತಾಯಿ ಅಣ್ಣ-ನೆಂಟರಿಷ್ಟರ ಸಂಪರ್ಕ ಇರಲಿಲ್ಲ—ಅದು ಸಂಪೂರ್ಣವಾಗಿ ಮನೆಯ ಹೊರಗೆ. ಅದು ಸ್ವಪ್ನ, ಅದರಲ್ಲಿ ಯಾವುದೂ ಸತ್ಯವಲ್ಲ. ಆ ಕಾರಣದಿಂದಲೇ ಮತ್ತೊಮ್ಮೆ ಸ್ನಿಗ್ಧ-ನಿರ್ಮಲ ಬೆಳಗಿನ ಪ್ರಕಾಶದಲ್ಲಿ ಮನೆಯೊಳಗೆ, ಸತ್ಯದ ನಡುವೆ ಆ ಶುಭದೃಷ್ಟಿಯನ್ನು ಪೂರ್ಣಗೊಳಿಸುವ ಅಪೇಕ್ಷೆಯಿದೆ ಪುಣ್ಯ ಪುಷ್ಯದ ಪ್ರಾತಃಕಾಲದಲ್ಲಿ ನಮ್ಮ ಮನೆ ಬಾಗಿಲಲ್ಲಿ ನಿನ್ನ ಸರಳ ಸಹಾಸ್ಯ ಮೂರ್ತಿಯನ್ನು ಚಿರಜೀವನದಂತೆ ನನ್ನ ಹೃದಯದ ಮಧ್ಯೆ ನೆಲೆಗೊಳಿಸಿಕೊಳ್ಳುವೆ, ಇದಕ್ಕಾಗಿ ನಾನು ಕುತೂ ಹಲದಿಂದ ಕಾದಿರುವೆ. ಪ್ರಿಯತಮೆ, ನಾನು ನಿನ್ನ ಹೃದಯದ ಬಾಗಿಲಲ್ಲಿ ಅತಿಥಿ—ನನ್ನನ್ನು ಹಿಂದಿರುಗಿಸಬೇಡ.

ಪ್ರಸಾದ ಭಿಕ್ಷು ರಮೇಶ".

೩೭

ಈ ಪುಟದ ೩೭ನೇ ಅಧ್ಯಾಯ ನಾಲ್ಕನೆಯ ಸಾಲಿನ [illegible] ಮುಂದಿನ ವಾಕ್ಯಗಳನ್ನು ಸೇರಿಸಿಕೊಂಡು ಓದಬೇಕಾಗಿ ವಿನಂತಿ.

ಕಮಲಿ—ಹೂಂ ಅಕ್ಕ ಮುಗಿಯಿತು.

ಸ್ವಲ್ಪ ಹೊತ್ತಿನ ಮೇಲೆ ಪುನಃ ಶೈಲೆ ಬಂದು "ಒಂದು ಪದಾರ್ಥ ಕೊಟ್ಟರೆ ಏನು ಕೊಡುವೆ ಹೇಳು ಮತ್ತೆ" ಎಂದಳು.

"ನನ್ನ [illegible]ನಿದೆಯಕ್ಕ" ಎಂದಳು ಕಮಲೆ.

ಶೈಲ—ಏನೇನೂ ಇಲ್ಲವೇ ಇಲ್ಲವೆ.

ತೋರುವುದು ? ಇದೇನು ಹೇಳು ನೋಡೋಣ ಎಂದು ಶೈಲ ಮಡಿಲೊಳಗಿಂದ ಒಂದು ಪತ್ರ ಹೊರತೆಗೆದಳು.

ಲಕೋಟೆಯಲ್ಲಿ ರಮೇಶನ ಕೈಬರಹ ನೋಡಿ ಕಮಲೆಯ ಮುಖ ಕೂಡಲೇ ಕೆಂಪೇರಿತು—ಅವಳು ಒಮ್ಮೆ ಮುಖ ತಿರುಗಿಸಿಕೊಂಡಳು.

"ಅಮ್ಮಮ್ಮಾ, ಇನ್ನು ಜಂಭ ತೋರಿಸಬೇಡ, ಎಲ್ಲಾ ತಿಳಿದದ್ದೇ. ಕಾಗದ ಕಿತ್ತುಕೊಳ್ಳಲು ಮನಸಿನಲ್ಲೇ ಒದ್ದಾಟ–ಆದರೆ ಬಾಯಿ ಬಿಟ್ಟು ಕೇಳದೆ ನಾನು ಕೊಡುವುದಿಲ್ಲ—ಎಂದಿಗೂ ಕೊಡುವುದಿಲ್ಲ—ನೀನು ಪಣ ಕಟ್ಟುವವರೆಗೂ ಸರಿ" ಎಂದಳು ಶೈಲ.

ಇಷ್ಟರಲ್ಲಿ ಉಮಾ ಒಂದು ಸಾಬೂನು ಪೆಟ್ಟಿಗೆಗೆ ಕೋಲುಕಟ್ಟಿ ಎಳೆದು ಕೊಂಡು ಬಂದು "ಚಿಕ್ಕಮ್ಮ, ಹಾ–ಹಾ" ಎಂದಳು.

ಕೂಡಲೇ ಕಮಲ ಉಮೆಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಒಂದೇ ಸಮನೆ ಮುತ್ತುಕೊಡುತ್ತ ಮಲಗುವ ಮನೆಗೆ ಕರೆದುಕೊಂಡು ಹೋದಳು. ಉಮಿ ತನ್ನ ಗಾಡಿ ಓಡಿಸುವ ಕೆಲಸಕ್ಕೆ ಆಕಸ್ಮಿಕ ತಡೆ ಯುಂಟಾದುದಕ್ಕಾಗಿ ಕಿರುಚಲಾರಂಭಿಸಿದಳು—ಏನು ಮಾಡಿದರೂ ಕಮಲ ಬಿಡಲಿಲ್ಲ—ಅವಳನ್ನು ಮನೆಯೊಳಕ್ಕೆ ಎತ್ತಿಕೊಂಡು ಹೋಗಿ ಬಗೆಬಗೆಯ ಮಾತುಗಳಿಂದ ಅವಳ ಮನರಂಜನೆಯ ಪ್ರಯತ್ನದಲ್ಲಿ ನಿರತಳಾದಳು

ಶೈಲ ಬಂದು ಹೇಳಿದಳು, "ನೋಡು–ನೀನೇಗೆದ್ದೆ–ನನ್ನಿಂದ ಸಾಧ್ಯ ವಾಗುತ್ತಿರಲಿಲ್ಲ. ಧನ್ಯೆ ಹುಡುಗಿ–ಏನು ತಂಗಿ–ಮನದಲ್ಲೇ ಬೈಯುವೆಯಾ."

ಹೀಗೆ ಹೇಳಿ ಹಾಸಿಗೆಯ ಮೇಲೆ ಕಾಗದ ಹಾಕಿ ಕಮಲೆಯ ಹಿಡಿತದಿಂದ ಉಮಿಯನ್ನು ಬಿಡುಗಡೆಮಾಡಿ ಎತ್ತಿಕೊಂಡು ಹೋದಳು.

ಲಕೋಟೆ ಒಡೆದು ಒಮ್ಮೆ ಹಿಂದು ಮುಂದು ನೋಡಿ ಕಮಲ ಪತ್ರ [illegible] ಪ್ರಾರಂಭದ ಒಂದೆರಡು ಪಂಕ್ತಿಗಳ ಮೇಲೆ ಕಣ್ಣು ಹೊರಳಿಸಿದ ಕೂಡ[illegible] ಕೆಂಪೇರಿತು. ನಾಚಿಕೆಯಿಂದ ಆ ಪತ್ರವನ್ನು ಒಮ್ಮೆ ಹರಿದು ಹಾಕಿದಳು. ಮೊದಲ ಏಟಿನ ಈ ಪ್ರಬಲ ವಿತೃಷ್ಣೆಯ ಆಕ್ಷೇಪಣೆ ಯನ್ನು ಸವರಿಸಿಕೊಂಡು ಮತ್ತೆ ಆ ಪತ್ರವನ್ನು [illegible] ಕೊಂಡು [illegible] ಓದಿದಳು: ಎಲ್ಲವನ್ನೂ ಅವಳು [illegible] ಕೊಂಡ[illegible] ತಿಳಿಯದು, [illegible] ಗೆ, ತನ್ನ ಕೈಯಿಂದ [illegible] ಪುನಃ

ಅವಳು ಪತ್ರವನ್ನು ಬಿಸಾಡಿದಳು. ಯಾವ ವ್ಯಕ್ತಿ ತನ್ನ ಗಂಡನಲ್ಲವೋ, ಅವನಿಗಾಗಿ ಸಂಸಾರ ನಡೆಸಬೇಕು. ಅದಕ್ಕಾಗಿ ಈ ಆಹ್ವಾನ! ರಮೇಶ ತಿಳಿದೂ ತಿಳಿದೂ ಇಷ್ಟು ದಿನದ ಬಳಿಕ ಅವಳನ್ನು ಹೀಗೆ ಅವಮಾನಪಡಿಸಿರುವ! ಗಾಜೀಪುರಕ್ಕೆ ಬಂದು ರಮೇಶನತ್ತ ಕಮಲ ತನ್ನ ಹೃದಯ ತೆರೆದಿಟ್ಟಿದ್ದಳಲ್ಲ, ಕೇವಲ ಅದು ರಮೇಶನಿಗಾಗಿಯೇ, ತನ್ನ ಗಂಡನಿಗಾಗಿ ಅಲ್ಲವೇ? ರಮೇಶ ಅದನ್ನೇ ಗಮನಿಸಿರುವನೆ, ಅದಕ್ಕಾಗಿಯೇ ಅನಾಥೆಯ ಮೇಲೆ ದಯೆತೋರಿ ಅವಳಿಗೆ ಇಂದು ಈ ಪ್ರೇಮಪತ್ರ ಬರೆದಿರುವನೆ! ಭ್ರಾಂತಿವಶದಿಂದ ರಮೇಶನ ಹತ್ತಿರ ಕಮಲ ಎಷ್ಟನ್ನು ಬಹಿರಂಗವಾಗಿ ಪಡೆದಿರುವಳೋ, ಅದನ್ನು ಕಮಲ ಇಂದು ಯಾವ ಬಗೆಯಲ್ಲಿ ಹಿಂದಿರುಗಿಸುವುದು—ಯಾವ ರೀತಿಯಲ್ಲಿ! ಇಂಥ ನಾಚಿಕೆ, ಇಂಥ ತಿರಸ್ಕಾರ, ಕಮಲೆಯ ಅದೃಷ್ಟದಲ್ಲೇಕೆ ಒದಗಿತು. ಅವಳು ಜನ್ಮತಾಳಿ ಯಾರಿಗೆ ಯಾವ ಅಪರಾಧಮಾಡಿರುವಳು. ಮತ್ತೆ 'ಮನೆ' ಎಂಬ ಒಂದು ಭಯಂಕರ ವಸ್ತು ಕಮಲೆಯನ್ನು ಕಬಳಿಸಲು ಬರುತಿರುವುದ – ಕಮಲ ರಕ್ಷಣೆಪಡೆಯುವುದು ಹೇಗೆ! ರಮೇಶ ತನ್ನ ಬಳಿ ಇಷ್ಟು ಭಯಂಕರ ರೂಪನಾಗುವನೆಂದು ಎರಡು ದಿನಗಳ ಮೊದಲೂ ತನ್ನ ಸ್ವಪ್ನದಲ್ಲೂ ಊಹಿಸಿಕೊಂಡಿರಲಿಲ್ಲ.

ಇಷ್ಟರಲ್ಲಿ ಉಮೇಶ ಬಾಗಿಲ ಬಳಿ ಬಂದು ಒಮ್ಮೆ ಕೆಮ್ಮಿದ. ಕಮಲೆಯಿಂದ ಯಾವ ಉತ್ತರವನ್ನೂ ಪಡೆಯದೆ ಅವನು ಮೆಲ್ಲಮೆಲ್ಲನೆ "ಅಮ್ಮಾ" ಎಂದು ಕೂಗಿದ. ಕಮಲ ಬಾಗಿಲ ಹತ್ತಿರ ಬಂದಳು, ಉಮೇಶ ತಲೆ ಕೆರೆಯುತ್ತ, "ಅಮ್ಮಾ, ಈ ದಿನ ಸಿಧಿ ಬಾಬುಗಳ ಮಗಳ ಮದುವೆಗಾಗಿ ಕಲ್ಕತ್ತೆಯಿಂದ ಯಕ್ಷಗಾನದವರ ದಳದವರು ಬಂದಿರುವರು" ಎಂದ.

"ಒಳ್ಳೆಯದೇ ಆಯಿತು ಉಮೇಶ, ನೀನು ಯಕ್ಷಗಾನ ನೋಡಲು ಹೋಗು" ಎಂದಳು ಕಮಲ.

ಉಮೇಶ—ನಾಳೆ ಬೆಳಗ್ಗೆ ಹೂ ತಂದು ಕೊಡಬೇಕೆ?

ಕಮಲ—ಇಲ್ಲ ಇಲ್ಲ, ಹೂ ಬೇಕಾಗಿಲ್ಲ

ಉಮೇಶ ಹೊರಟು ಹೋಗುತಿದ್ದಾಗ ಕೂಡಲೇ ಕಮಲ ಅವನನ್ನು ಹಿಂದಕ್ಕೆ ಕರೆದಳು—"ಏ ಉಮೇಶ, ನೀನು ಯಕ್ಷಗಾನ ಕೇಳಲು ಹೋಗುತಿರುವೆ ಅಲ್ಲವೆ? ಐದು ರೂಪಾಯಿ ಬೇಕಲ್ಲವೆ?" ಎಂದು ಕೇಳಿದಳು.

ಉಮೇಶನಿಗೆ ಆಶ್ಚರ್ಯವಾಯಿತು. ಯಕ್ಷಗಾನ ಕೇಳುವುದರ ಜೊತೆಗೆ

ಐದು ರೂಪಾಯಿ ಬೇರೆ ಸಿಗುವುದು, ಎಂದು ಅವನು ನಿರೀಕ್ಷಿಸಿಯೇ ಇರಲಿಲ್ಲ. "ಅಮ್ಮಾ, ಪಟ್ಟಣದಿಂದ ನಿಮಗೆ ಏನಾದರೂ ತಂದು ಕೊಡಬೇಕೆ?" ಎಂದು ಕೇಳಿದ.

ಕಮಲ—ಇಲ್ಲ ಇಲ್ಲ. ನನಗೇನೂ ಬೇಕಾಗಿಲ್ಲ. ನೀನೇ ಇಟ್ಟುಕೋ. ನಿನಗೇ ಬೇಕಾದೀತು.

ಏನು ಮಾಡಬೇಕೆಂದು ತಿಳಿಯದೆ ಉಮೇಶ ಹೊರಡಲು ಯತ್ನಿಸಿದಾಗ ಕಮಲ ಪುನಃ ಅವನನ್ನು ಕರೆದು ಕೇಳಿದಳು, "ಉಮೇಶ ನೀನು ಈ ಬಟ್ಟೆಗಳನ್ನೇ ಹಾಕಿಕೊಂಡು ಯಕ್ಷಗಾನ ಕೇಳಲು ಹೋಗುವೆಯಲ್ಲವೆ—ಜನ ಏನೆನ್ನುವರು?".

ಜನ ಉಮೇಶನ ಶುಚಿ—ಸಿಂಗಾರಗಳನ್ನು ಅತಿಯಾಗಿ ಎದುರು ನೋಡುವರು, ಹಾಗೂ ಕೊರತೆ ಕಂಡರೆ ಪ್ರಶ್ನಿಸುವರು, ಎಂಬ ಭಾವನೆ ಉಮೇಶನಿಗಿರಲಿಲ್ಲ—ಇದರಿಂದಲೇ ಅವನು ಬಟ್ಟೆಯ ಶುಭ್ರತೆ ಮತ್ತು ಮೇಲು ವಸ್ತ್ರದ ಅಭಾವದ ವಿಷಯದಲ್ಲಿ ಸಂಪೂರ್ಣವಾಗಿ ಉದಾಸೀನನಾಗಿದ್ದ. ಕಮಲೆಯ ಪ್ರಶ್ನೆ ಕೇಳಿ ಉಮೇಶ ಏನನ್ನೂ ಹೇಳದೆ ಒಮ್ಮೆ ನಕ್ಕ.

ಕಮಲ ತನ್ನ ಎರಡು ಜೊತೆ ಸೀರೆ ಹೊರತೆಗೆದು ಉಮೇಶನ ಹತ್ತಿರ ಹಾಕುತ್ತ, "ತೆಗೆದುಕೊ, ಹೋಗು, ಹಾಕಿಕೊ" ಎಂದಳು.

ಸೀರೆಯ ಅಗಲವಾದ ಅಂಚು ನೋಡಿ ಉಮೇಶ ಅತಿ ಹಿಗ್ಗಿದ. ಕಮಲೆಯ ಕಾಲಮೇಲೆ ಬಿದ್ದು ಸುಮ್ಮನೆ ನಮಸ್ಕರಿಸಿದ. ಸಂತೋಷ ಅಡಗಿಸಿಕೊಳ್ಳುವ· ವ್ಯರ್ಥ ಪ್ರಯತ್ನದಿಂದ ಮುಖ ವಿಕಾರಮಾಡಿಕೊಂಡು ಹೊರಟು ಹೋದ. ಉಮೇಶ ಹೋದ ಬಳಿಕ ಕಮಲ ಎರಡು ಹನಿ ಕಣ್ಣೀರು ಒರೆಸಿಕೊಂಡು ಕಿಟಕಿಯ ಬಳಿ ತೆಪ್ಪನೆ ನಿಂತುಕೊಂಡಳು.

ಶೈಲ ಕೊಠಡಿಯೊಳಕ್ಕೆ ಬಂದು, "ತಂಗೀ ಕಮಲಾ, ನನಗೆ ನಿನ್ನ ಪತ್ರ ತೋರಿಸುವುದಿಲ್ಲವೆ?" ಎಂದಳು.

ಕಮಲೆಯ ಬಳಿ ಶೈಲೆಯ ಯಾವ ವಿಷಯವೂ ರಹಸ್ಯವಾಗಿರಲಿಲ್ಲ—ಅದರಿಂದಲೇ ಶೈಲ ಇಷ್ಟು ದಿನದ ಬಳಿಕ ಸುಯೋಗ ಪಡೆದು ಈ ಅಧಿಕಾರ ನಡೆಸಿದಳು.

"ಅದೋ ಅಕ್ಕ, ಕಾಣುವುದಿಲ್ಲವೆ" ಎಂದು ಹೇಳಿ ಕಮಲ ನೆಲದ ಮೇಲಿದ್ದ ಕಾಗದ ತೋರಿಸಿದಳು. ಶೈಲ ಆಶ್ಚರ್ಯದಿಂದ, "ಅಮ್ಮಮ್ಮಾ,

"ಇನ್ನೂ ಕೋಪ ಹೋಗಲಿಲ್ಲ" ಎಂದು ತಿಳಿದುಕೊಂಡಳು. ನೆಲದ ಮೇಲಿಂದ ಶೈಲ ಪತ್ರ ತೆಗೆದುಕೊಂಡು ಎಲ್ಲವನ್ನೂ ಓದಿದಳು. ಅದರಲ್ಲಿ ಯಥೇಷ್ಟವಾದ ಪ್ರೀತಿಯ ಮಾತುಗಳೇನೋ ಇದ್ದವು. ಮನುಷ್ಯ ತನ್ನ ಹೆಂಡತಿಗೆ ಹೀಗೆಯೇ ಪತ್ರ ಬರೆಯುವುದು ! ಇದೂ ಒಂದು ಬಗೆಯೆ ! "ಸರಿ ತಂಗಿ, ನಿನ್ನ ಗಂಡ ಕಾದಂಬರಿ ಬರೆಯುವರೇನು ?" ಎಂದು ಶೈಲ ಕೇಳಿದಳು.

"ಗಂಡ" ಎಂಬ ಶಬ್ದ ಕೇಳಿ ಆಶ್ಚರ್ಯದಿಂದ ಕಮಲೆಯ ದೇಹ, ಮನಸ್ಸು ಸಂಕುಚಿತವಾಯಿತು. ಅವಳು "ಅರಿಯೆ" ಎಂದಳು.

ಶೈಲ, "ಹಾಗಾದರೆ ಇಂದು ನೀನು ಬಂಗಲೆಗೆ ಹೋಗುವೆಯಾ ?" ಎಂದು ಕೇಳಿದಳು.

ಕಮಲ ತಲೆಯಲ್ಲಾಡಿಸಿ ಹೋಗುವುದಾಗಿ ಸೂಚಿಸಿದಳು.

"ನಾನೂ ಇಂದು ಸಂಜೆಯವರೆಗೆ ನಿನ್ನ ಸಂಗಡ ಇರಬಲ್ಲೆ, ಆದರೆ ನೋಡು ತಂಗಿ, ಈ ದಿನ ನರಸಿಂಹಬಾಬುಗಳ ಸೊಸೆ ಬರುವಳು. ಅದರಿಂದ ಅಮ್ಮ ನಿನ್ನಕೂಡ ಬರುವಳು" ಎಂದಳು ಶೈಲ.

ಕಮಲ ಕಳವಳದಿಂದ "ಬೇಡ ಬೇಡ, ಅಮ್ಮ ಬಂದು ಏನುಮಾಡ ಬೇಕು ? ಅಲ್ಲಿ ಆಳುಗಳಿರುವರಲ್ಲ" ಎಂದಳು.

ಶೈಲ ನಗುತ್ತ "ಅಷ್ಟೇ ಅಲ್ಲದೆ ನಿನ್ನ ವಾಹನ ಉಮೇಶ ಇರುವ, ಇನ್ನೇನು ಹೆದರಿಕೆ ನಿನಗೆ" ಎಂದು ಹೇಳಿದಳು.

ಉಮಾ ಆಗ ಯಾರದೋ ಒಂದು ಸೀಸದ ಕಡ್ಡಿ ಎತ್ತಿಕೊಂಡು ಅಲ್ಲಲ್ಲಿ ಗೆರೆಯೆಳೆಯುತ್ತಿದ್ದಳು. ಮತ್ತು ಕೂಗಾಡುತ್ತ ಅಸ್ಪಷ್ಟ ಭಾಷೆ ಉಚ್ಚರಿಸುತ್ತಿದ್ದಳು. "ಓದುತ್ತಿರುವೆ" ಎಂದು ಮನಸ್ಸಿನಲ್ಲಿ ಭಾವಿಸಿದ್ದಳು. ಶೈಲ ಅವಳ ಈ ಸಾಹಿತ್ಯರಚನೆಯಿಂದ ಅವಳನ್ನು ಬಲವಂತವಾಗಿ ಎಳೆದು ಕೊಂಡಳು—ಅವಳು ಗಟ್ಟಿಯಾಗಿ ತಾರಸ್ವರದಲ್ಲಿ ತಡೆ ವ್ಯಕ್ತಪಡಿಸಿದಳು, ಆಗ ಕಮಲ, "ಒಂದು ತಮಾಷೆ ಸಾಮಾನು ಕೊಡುವೆ ಬಾ" ಎಂದಳು. ಹೀಗೆ ಹೇಳಿ ಕೊಠಡಿಗೆ ಕರೆದುಕೊಂಡು ಹೋಗಿ ಅವಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸಿ ಆದರದೊಡನೆ ಆಡಿಸಿ ಅವಳನ್ನು ಅತಿ ಸಂತೋಷಗೊಳಿಸಿದಳು. ಅವಳು ಮೊದಲು ಹೇಳಿದ್ದ ಬಹುಮಾನ ಕೇಳಿದಾಗ, ಕಮಲ ತನ್ನ ಪೆಟ್ಟಿಗೆ ತೆರೆದು ಒಂದು ಜೊತೆ ಚಿನ್ನದ ಬಳೆ ಹೊರತೆಗೆದಳು. ಈ ಅಮೂಲ್ಯ ಆಟದ ಸಾಮಾನು ಹೊಂದಿ ಉಮಿ ಬಹಳ ಆನಂದಪಟ್ಟಳು. ಚಿಕ್ಕಮ್ಮ ಅವಳ ಕೈಗೆ

ಕೊಡಿಸುತ್ತಲೇ ಅವಳು ಆ ಟಣ್‌ಟಣ್ ಎನ್ನುವ ಜೋಡಿ ಬಳೆಯೊಡನೆ ಎರಡು ಕೈಗಳನ್ನೂ ಮೇಲಕ್ಕೆ ಎತ್ತಿ ಹಿಡಿದುಕೊಂಡು ಜಂಭದಿಂದ ತನ್ನ ತಾಯಿಗೆ ತೋರಿಸಲು ಹೋದಳು ತಾಯಿ ಕಾತುರದಿಂದ ಕೊಟ್ಟವರಿಗೇ ಹಿಂದಿರುಗಿಸಿ ಕೊಡಲು ಬಳೆಯನ್ನು ಕಳೆದುಕೊಂಡಳು—" ಕಮಲ, ಇದೇನು ನಿನ್ನ ಬುದ್ಧಿ ! ಈ ಪದಾರ್ಥವನ್ನೆಲ್ಲ ಅವಳ ಕೈಗೆ ಏಕೆ ಕೊಟ್ಟೆ ? " ಎಂದಳು.

ಈ ಕೆಟ್ಟ ನಡವಳಿಕೆಯಿಂದ ಉಮಿಯ ಆರ್ತನಾದದ ದೂರು ಗಗನ ವನ್ನು ಭೇದಿಸತೊಡಗಿತು. ಕಮಲ ಸಮೀಪಕ್ಕೆ ಬಂದು, " ಅಕ್ಕ, ಈ ಜೋಡಿ ಬಳೆಯನ್ನು ನಾನು ಉಮಿಗಾಗಿಯೇ ಕೊಟ್ಟಿರುವೆ " ಎಂದಳು.

ಶೈಲ ಆಶ್ಚರ್ಯದಿಂದ ಕೇಳಿದಳು, " ಹುಚ್ಚೇನು ? ".

ಈ ಬಳೆಗಳನ್ನು ನೀನು ನನಗೆ ಹಿಂದಿರುಗಿಸುವುದಿಲ್ಲ ಎಂದು ನನ್ನ ಮೇಲೆ ಆಣೆಯಿಡು ಅಕ್ಕ. ಇವನ್ನು ಕರಗಿಸಿ ಉಮಿಗೆ ಸರ ಮಾಡಿಸು" ಎಂದು ಕಮಲ ಹೇಳಿದಳು.

ಶೈಲ, " ಇಲ್ಲ, ಸತ್ಯವಾಗಿ ಹೇಳುವೆ, ನಿನ್ನಂಥ ದಡ್ಡ ಹುಡುಗಿಯನ್ನು ನಾನು ಕಂಡೇ ಇಲ್ಲ" ಎಂದು ಹೇಳಿದಳು.

ಹೀಗೆ ಹೇಳಿ ಕಮಲೆಯ ಕೊರಳು ಬಿಗಿದಪ್ಪಿದಳು. " ಇಂದು ನಾನು ನಿಮ್ಮ ಬಳಿಯಿಂದ ಹೊರಟು ಹೋಗುವೆ ಅಕ್ಕ—ಸುಖವಾಗಿದ್ದೆ—ಇಂಥ ಸುಖ ನನ್ನ ಜೀವನದಲ್ಲಿ ಎಂದೂ ದೊರೆತಿರಲಿಲ್ಲ" ಎಂದಳು. ಕಮಲ ಹೇಳುತ್ತ ಹೇಳುತ್ತ ಜರಜರನೆ ಅವಳ ಕಣ್ಣೀರು ಚಿಮ್ಮತೊಡಗಿತು.

ಶೈಲೆಯೂ ಉಕ್ಕಿ ಬರುವ ಕಣ್ಣೀರು ತಡೆದುಕೊಳ್ಳುತ್ತ ಹೇಳಿದಳು, " ನಿನ್ನ ಅಭಿಪ್ರಾಯವೇನು ಹೇಳು ಕಮಲ, ಬಹಳ ದೂರ ಹೋಗುತ್ತಿರುವೆಯಾ ನೀನಿದ್ದ ಸುಖ ನಾನು ಅರಿಯದುದಲ್ಲ—ಈಗ ನಿನ್ನ ಎಲ್ಲ ಅಡ್ಡಿಯೂ ದೂರ ವಾಯಿತು, ಸುಖವಾಗಿ ನಿನ್ನ ಮನೆಯಲ್ಲಿ ಒಬ್ಬಳೇ ಅಧಿಕಾರ ನಡೆಸುವೆ—ನಾವು ಎಂದಾದರೂ ಬಂದು ಹೋದರೆ ವಿಪತ್ತಿನಿಂದ ಬಿಡುಗಡೆ ಹೊಂದಿ ಬದುಕಿದೆ ಎಂದು ಯೋಚಿಸಿಕೊಳ್ಳುವೆ ".

ಬೀಳ್ಕೊಡುವಾಗ ಕಮಲ ಶೈಲೆಗೆ ನಮಸ್ಕಾರ ಮಾಡಿದಳು, ಬಳಿಕ ಶೈಲ, " ನಾಳೆ ಮಧ್ಯಾಹ್ನ ನಾನು ನಿಮ್ಮ ಮನೆಗೆ ಬರುವೆ " ಎಂದಳು.

ಕಮಲ ಅದಕ್ಕೆ ಉತ್ತರವಾಗಿ ಬೇಕು-ಬೇಡ ಎಂದೂ ಹೇಳಲಿಲ್ಲ.

ಕಮಲ ಬಂಗಲೆಗೆ ಹೋಗಿ ನೋಡಿದಾಗ, ಉಮೇಶ ಬಂದಿದ್ದ. "ಏನೋ, ನೀನು ಯಕ್ಷಗಾನ ಕೇಳಲು ಹೋಗಲಿಲ್ಲವೆ"? ಎಂದು ಕಮಲ ಕೇಳಿದಳು.

" ಈ ದಿನ ನೀವು ಇಲ್ಲಿಗೆ ಬರುವಾಗ, ನಾನು . . ." ಎಂದ ಉಮೇಶ.

ಕಮಲ—ಸರಿಸರಿ, ಅದಕ್ಕಾಗಿ ನೀನು ಚಿಂತಿಸಬೇಡ, ನೀನು ಯಕ್ಷಗಾನಕ್ಕೆ ಹೋಗು—ಇಲ್ಲಿ ವಿಷ್ಣು ಇರುವನು. ಹೋಗು, ಹೊತ್ತುಮಾಡಬೇಡ.

ಉಮೇಶ—ಇನ್ನೂ ಯಕ್ಷಗಾನಕ್ಕೆ ಬಹಳ ಹೊತ್ತಿದೆ.

ಕಮಲ—ಏನೇ ಆಗಲಿ, ಮದುವೆ ಮನೆಯಲ್ಲಿ ಬಹಳ ಗದ್ದಲವಾಗಿರುವುದು, ಚೆನ್ನಾಗಿ ನೋಡಿಕೊಂಡು ಬಾ ಹೋಗು.

ಈ ವಿಷಯದಲ್ಲಿ ಉಮೇಶನನ್ನು ಹೆಚ್ಚು ಉತ್ಸಾಹಗೊಳಿಸಬೇಕಾದ ಅಗತ್ಯವಿರಲಿಲ್ಲ. ಅವನು ಹೊರಡಲು ಸಿದ್ಧನಾದಾಗ ಕಮಲ ಅವನನ್ನು ಕೂಗಿ ಹೇಳಿದಳು, "ನೋಡು, ಚಿಕ್ಕಪ್ಪ ಬಂದರೆ ನೀನು . . ."

ಇಷ್ಟು ಹೇಳಿ ಮಾತು ಮುಗಿಸುವುದು ಹೇಗೆಂದು ತಿಳಿಯಲಾರದಾದಳು. ಉಮೇಶ ಬಾಯಿಬಿಟ್ಟುಕೊಂಡು ನಿಂತಿದ್ದ. ಕಮಲ ಸ್ವಲ್ಪ ಹೊತ್ತು ಯೋಚಿಸಿ ಹೇಳಿದಳು, "ನೆನೆಪಿರಲಿ. ಚಿಕ್ಕಪ್ಪ ನಿನ್ನನ್ನು ಪ್ರೀತಿಸುವರು—ನಿನಗೇನಾದರೂ ಬೇಕಾದರೆ, ನನ್ನ ನಮಸ್ಕಾರ ತಿಳಿಸಿ ನೀನು ಅವರ ಬಳಿ ಕೇಳು, ಅವರು ಕೊಡುವರು—ಅವರಿಗೆ ನನ್ನ ನಮಸ್ಕಾರ ತಿಳಿಸಲು ಖಂಡಿತ ಮರೆಯಬೇಡ—ತಿಳಿಯಿತೆ".

ಉಮೇಶ ಈ ಉಪದೇಶದ ಅರ್ಥವನ್ನು ತಿಳಿಯದೆ "ಅಪ್ಪಣೆ" ಎಂದು ಹೊರಟು ಹೋದ.

ಮಧ್ಯಾಹ್ನ ವಿಷ್ಣು ಕೇಳಿದ, "ತಾಯಿಯವರೇ ಎಲ್ಲಿಗೆ ಹೋಗುವಿರಿ?".

ಕಮಲ, "ಗಂಗಾಸ್ನಾನ ಮಾಡಲು ಹೋಗುತಿರುವೆ" ಎಂದಳು.

"ಜೊತೆಗೆ ಬರಲೇ" ಎಂದ ವಿಷ್ಣು.

ಕಮಲ, "ಬೇಡ ನೀನು ಮನೆ ನೋಡಿಕೊ" ಎಂದು ಹೇಳಿ ಅವನ ಕೈಗೆ ಅನಾವಶ್ಯಕವಾಗಿ ಒಂದು ರೂಪಾಯಿ ಕೊಟ್ಟು ಗಂಗೆಯ ಕಡೆ ಹೊರಟಳು.

೩೮

ಒಂದು ದಿನ ಮಧ್ಯಾಹ್ನ, ಹೇಮನಳಿನಿಯೊಡನೆ ಒಂದೆಡೆ ಕುಳಿತು ಚಹ ಕುಡಿಯುವ ಆಸೆಯಿಂದ ಅನ್ನದಾಬಾಬು ಅವಳನ್ನು ಹುಡುಕಲು ಮಹಡಿಗೆ ಬಂದರು—ಮಹಡಿಯಲ್ಲಿ ಕುಳಿತುಕೊಳ್ಳುವ ಕೊಠಡಿಯಲ್ಲಿ ನೋಡಿದರು, ಅವಳು ಅಲ್ಲಿಲ್ಲ, ಮಲಗುವ ಕೋಣೆಯಲ್ಲೂ ಅವಳಿಲ್ಲ. ಹೇಮನಳಿನಿ ಹೊರಗೆ ಎಲ್ಲಿಗೂ ಹೋಗಿಲ್ಲವೆಂದು ಸೇವಕರನ್ನು ಪ್ರಶ್ನಿಸಿ ತಿಳಿದುಕೊಂಡರು. ಆಗ ಅತಿ ಕಳವಳದಿಂದ ಅನ್ನದಾ ಮಾಳಿಗೆ ಏರಿ ಬಂದರು.

ಆಗ ಕಲ್ಕತ್ತಾ ಪಟ್ಟಣದ ನಾನಾ ಆಕಾರದ ಮತ್ತು ಆಕೃತಿಯ ಬಹಳ ದೂರ ಹರಡಿಕೊಂಡಿದ್ದ ಮಾಳಿಗೆಗಳ ಮೇಲೆ ಹೇಮಂತದ ವಿಷಣ್ಣ ಬಿಸಿಲು ಕಾಂತಿಹೀನವಾಗುತ್ತ ಬಂದಿತ್ತು—ದಿನದ ಕೊನೆಯ ಹಗುರವಾದ ವಾಯು ನಿಂತುನಿಂತು ಇಷ್ಟಬಂದಾಗ ಬೀಸಿಬರುತಿತ್ತು. ಹೇಮನಳಿನಿ ಮಾಳಿಗೆಯ ಹಂತದ ಮೇಲೆ ಗೋಡೆಯ ನೆರಳಿನಲ್ಲಿ ಸುಮ್ಮನೆ ಕುಳಿತಿದ್ದಳು.

ಅನ್ನದಾಬಾಬುಗಳು ಅವಳ ಹಿಂದುಗಡೆ ಬಂದು ನಿಂತರು, ಅದು ಅವಳಿಗೆ ತಿಳಿಯಲೇ ಇಲ್ಲ. ಕಡೆಗೆ ಅನ್ನದಾಬಾಬು ಮೆಲ್ಲಮೆಲ್ಲನೆ ಅವಳ ಪಕ್ಕಕ್ಕೆ ಬಂದು ಅವಳ ಹೆಗಲ ಮೇಲೆ ಕೈಹಾಕಿದರು, ಆಗ ಅವಳು ಬೆಚ್ಚಿಬಿದ್ದಳು. ಕೂಡಲೇ ಅವಳ ಮುಖ ನಾಚಿಕೆಯಿಂದ ಕೆಂಪಾಯಿತು. ಹೇಮನಳಿನಿ ಅವಸರದಿಂದ ಎದ್ದುನಿಲ್ಲುವ ಮೊದಲೇ ಅನ್ನದಾಬಾಬು ಅವಳ ಪಕ್ಕದಲ್ಲಿ ಕುಳಿತರು. ಸ್ವಲ್ಪ ಹೊತ್ತು ಮೌನವಾಗಿದ್ದು ನಿಟ್ಟುಸಿರು ಬಿಟ್ಟು "ಹೇಮ್ ಈಗ ನಿನ್ನ ತಾಯಿ ಇದ್ದಿದ್ದರೆ! ನಾನು ನಿನ್ನ ಯಾವ ಕೆಲಸಕ್ಕೂ ಬಾರದವನಾದೆ" ಎಂದರು.

ಮುದುಕನ ಬಾಯಿಂದ ಈ ಕರುಣಾಜನಕ ಮಾತು ಕೇಳಿದ ಕೂಡಲೇ ಹೇಮನಳಿನಿ ಒಂದು ಸುಗಭೀರ ಮೂರ್ಛೆಯಿಂದ ಹಠಾತ್ತನೆ ಎಚ್ಚರಗೊಂಡಳು. ತನ್ನ ತಂದೆಯ ಮುಖದ ಕಡೆ ಒಮ್ಮೆ ನಿಟ್ಟಿಸಿ ನೋಡಿದಳು. ಆ ಮುಖದ ಮೇಲೆ ಅದೆಷ್ಟು ಸ್ನೇಹ, ಅದೆಷ್ಟು ಕರುಣೆ, ಅದೆಷ್ಟು ವೇದನೆ, ಈ ಕೆಲವು ದಿನಗಳಲ್ಲಿ ಆ ಮುಖದಲ್ಲಿ ಅದೆಷ್ಟು ಬದಲಾವಣೆಯಾಗಿರುವುದು, ಜಗತ್ತಿನಲ್ಲಿ ಹೇಮನಳಿನಿಯ ವಿಷಯವಾಗಿ ಎದ್ದಿರುವ ಗೊಂದಲದ ಎಲ್ಲ ಕಾರಣವನ್ನೂ ತಾನೇ ಹೊತ್ತು, ಮುದುಕ ಒಂಟಿಯಾಗಿ ಕೊರಗುತ್ತಿರುವರು—ಮಗಳ ನೊಂದ

ಹೃದಯದ ಬಳಿಗೆ ಪುನಃ ಪುನಃ ಬರುತ್ತಿದ್ದರು—ಸಂತೈಸುವ ಎಲ್ಲ ಪ್ರಯತ್ನವೂ ವ್ಯರ್ಥವಾದುದನ್ನು ನೋಡಿ ಇಂದು ಅವರಿಗೆ ಹೇಮನಳಿನಿಯ ತಾಯಿಯ ಜ್ಞಾಪಕ ಬಂದಿರುವುದು ಮತ್ತು ತಮ್ಮ ಎಣೆಯಿಲ್ಲದ ಸ್ನೇಹದ ಅಂತರಾಳದಿಂದ ನಿಟ್ಟುಸಿರು ಬರುತಿರುವುದು—ಹಠಾತ್ತನೆ ಹೇಮನಳಿನಿಯ ಬಳಿ ಈ ದಿನ ಇವೆಲ್ಲ ಸಿಡಿಲಿನ ಬೆಳಕಿನಲ್ಲಿ ಪ್ರಕಾಶಗೊಂಡಿತು, ತಿರಸ್ಕಾರದ ಏಟಿನ ಮೂಲಕ ಅವಳನ್ನು ಅವಳ ಶೋಕದ ಆವರಣದಿಂದ ಒಂದು ಕ್ಷಣದಲ್ಲಿ ಹೊರತರ ಲಾಯಿತು. ಜಗತ್ತು ಅವಳ ಬಳಿ ನೆರಳಿನಂತೆ ವಿಲೀನವಾಗುತ್ತ ಬಂದಿತ್ತಲ್ಲ, ಅದು ಈಗ ಸತ್ಯವಾಗಿ ತೋರ್ಪಟ್ಟಿತು. ಇದ್ದಕ್ಕಿದ್ದಂತೆ ಈ ಕ್ಷಣದಲ್ಲಿ ಹೇಮ ನಳಿನಿಯ ಮನದಲ್ಲಿ ಬಹಳ ನಾಚಿಕೆಯುಂಟಾಯಿತು. ಎಲ್ಲ ಸ್ಮೃತಿಯ ನಡುವೆ ಅವಳು ಒಂದೇ ಸಮ ಮುಳುಗಿ ಕುಳಿತಿದ್ದಳಲ್ಲ, ಅವೆಲ್ಲವನ್ನೂ ಬಲ ಪೂರ್ವಕ ತನ್ನ ನಾಲ್ಕೂ ದಿಕ್ಕಿನಿಂದ ಕಿತ್ತೊಗೆದು ಅವಳು ತನ್ನನ್ನು ಬಿಡುಗಡೆ ಮಾಡಿಕೊಂಡಳು, "ಅಪ್ಪಾ, ನಿಮ್ಮ ಮೈ ಈಗ ಹೇಗಿದೆ" ಎಂದು ವಿಚಾರಿಸಿದಳು.

ಶರೀರ ! ಶರೀರವನ್ನು ಗಮನಿಸಿಕೊಳ್ಳಬೇಕು, ಎಂಬ ವಿಷಯ ಕೆಲವು ದಿನಗಳಿಂದ ಅನ್ನದಾಬಾಬುಗಳಿಗೆ ಸಂಪೂರ್ಣವಾಗಿ ಮರೆತುಹೋಗಿತ್ತು. ಅವರು "ನನ್ನ ಶರೀರ, ನನ್ನ ಶರೀರ ಚೆನ್ನಾಗಿದೆಯಮ್ಮಾ, ನಿನ್ನ ಮುಖ ಹೇಗಾಗುತ್ತ ಬಂದಿದೆ, ನಿನ್ನ ಶರೀರದ ವಿಷಯವಾಗಿಯೇ ನನಗೆ ಯೋಚನೆ. ನನ್ನ ದೇಹ ಬಹಳ ವರ್ಷಗಳಿಂದ ದೃಢವಾಗಿದೆ, ಸಾಧಾರಣವಾಗಿ ನನಗೆ ಏನೂ ಆಗುವುದಿಲ್ಲ—ನಿನ್ನ ಈ ದೇಹ ಅಂದಿನ ನೋವನ್ನು ಸಹಿಸಲಾರದಾಯಿತಲ್ಲ ಎಂದು ಹೆದರಿಕೆಯಾಗಿದೆ"—ಎಂದರು. ಹೀಗೆ ಹೇಳಿ ಮೆಲ್ಲಮೆಲ್ಲನೆ ಅವಳ ಬೆನ್ನ ಮೇಲೆ ಕೈ ಆಡಿಸಲಾರಂಭಿಸಿದರು.

"ಅಪ್ಪಾ, ಅದು ಸರಿ, ಅಮ್ಮ ಸತ್ತಾಗ ನಾನು ಎಷ್ಟು ದೊಡ್ಡವ ಳಾಗಿದ್ದೆ" ಎಂದು ಹೇಮನಳಿನಿ ಕೇಳಿದಳು.

ಅನ್ನದಾ—ಆಗ ನೀನು ಮೂರು ವರ್ಷದ ಹುಡುಗಿ, ಮಾತಾಡಲು ಪ್ರಾರಂಭಿಸಿದ್ದೆ. ನೀನು ನನ್ನನ್ನು "ಅಮ್ಮಾ ಎಲ್ಲಿ ?" ಎಂದು ಕೇಳಿದುದು ನನಗೆ ಚೆನ್ನಾಗಿ ನೆನಪಿದೆ ನಾನು, "ಅಮ್ಮ ತನ್ನ ತಂದೆಯ ಬಳಿಗೆ ಹೋದಳು" ಎಂದೆ. ನೀನು ಹುಟ್ಟುವ ಮೊದಲೇ ನಿನ್ನ ತಾತ ಸತ್ತು ಹೋಗಿದ್ದರು, ನೀನು ಅವರನ್ನು ಅರಿಯೆ. ನನ್ನ ಮಾತು ಕೇಳಿ ಏನೂ

ಅರ್ಥವಾಗದೆ ನನ್ನ ಮುಖದ ಕಡೆ ಗಂಭೀರವಾಗಿ ನೋಡುತಿದ್ದೆ. ಕ್ಷಣ ಕಾಲದ ಬಳಿಕ ನನ್ನ ಕೈ ಹಿಡಿದುಕೊಂಡು ನಿನ್ನ ತಾಯಿಯ ಶೂನ್ಯ ಶಯನಗೃಹದ ಕಡೆಗೆ ಕರೆದುಕೊಂಡು ಹೋಗಲು ಎಳೆಯತೊಡಗಿದೆ. ನಾನು ನಿನಗೆ ಅಲ್ಲಿಯ ಶೂನ್ಯತೆಯೊಳಗಿಂದ ಒಂದು ಸಂಧಾನ ಹೇಳುವೆ ಎಂದು ನೀನು ನಂಬಿದ್ದೆ. ನಿನ್ನ ತಂದೆ ದೊಡ್ಡವರು ಎಂದು ನೀನು ತಿಳಿದಿದ್ದೆ, ಆದರೆ ನಿಜವಾದ ಸಂಗತಿಯ ವಿಷಯದಲ್ಲಿ ನಿನ್ನ ದೊಡ್ಡ ತಂದೆ ಮಗುವಿನಂತೆ ತಿಳುವಳಿಕೆ ಇಲ್ಲದ ವನು, ಸಾಮರ್ಥ್ಯವಿಲ್ಲದವನು ಎಂಬ ಭಾವನೆಯೂ ನಿನ್ನ ಮನಸ್ಸಿನಲ್ಲಿ ಹುಟ್ಟಲಿಲ್ಲ. ಇಂದು ನನಗೆ ನೆನಪಾಗುವುದು, ನಾನೆಷ್ಟು ಅಸಮರ್ಥನೆಂದು— ದೇವರು ತಂದೆಯ ಹೃದಯದಲ್ಲಿ ಸ್ನೇಹ ಕೊಟ್ಟಿರುವನು, ಆದರೆ ಅತಿ ಅಲ್ಪ ಸಾಮರ್ಥ್ಯ ಕೊಟ್ಟಿರುವನು.

ಹೀಗೆ ಹೇಳಿ ಅವರು ಹೇಮನಳಿನಿಯ ತಲೆಯ ಮೇಲೆ ತಮ್ಮ ಬಲಗೈ ಇಟ್ಟರು.

ಹೇಮನಳಿನಿ ತಂದೆಯ ಆ ಆಶೀರ್ವಾದ ಸುರಿಸುವ ನಡುಗುವ ಕೈಯನ್ನು ತನ್ನ ಬಲಗೈಯಲ್ಲಿ ಎಳೆದುಕೊಂಡು ಮತ್ತೊಂದು ಕೈಯಿಂದ ಸವರತೊಡ ಗಿದಳು. “ನನಗೆ ತಾಯಿಯ ಜ್ಞಾಪಕ ಚೆನ್ನಾಗಿದೆ—ನನಗೆ ಜ್ಞಾಪಕವಿದೆ— ಮಧ್ಯಾಹ್ನದ ಹೊತ್ತು ಅವಳು ಹಾಸಿಗೆಯಲ್ಲಿ ಮಲಗಿ ಪುಸ್ತಕ ಓದುವಳು, ನನಗೆ ಅದು ಸ್ವಲ್ಪವೂ ಸರಿಬೀಳುತ್ತಿರಲಿಲ್ಲ, ನಾನು ಪುಸ್ತಕ ಕಿತ್ತುಕೊಳ್ಳಲು ಪ್ರಯತ್ನಿಸುತಿದ್ದೆ” ಎಂದಳು.

ಇದರಿಂದ ಮತ್ತೆ ಹಳೆಯ ಮಾತು ಬಂದಿತು. ಅಮ್ಮಾ ಹೇಗಿದ್ದಳು, ಏನು ಮಾಡುತ್ತಿದ್ದಳು, ಆಗ ಏನು ನಡೆಯುವುದು, ಈ ವಿಚಾರ ನಡೆಯುತ್ತ ನಡೆಯುತ್ತ ಸೂರ್ಯ ಮುಳುಗಿದ ಮತ್ತು ಆಕಾಶ ಮಲಿನ ತಾಮ್ರವರ್ಣದಂತೆ ಆಯಿತು. ನಾಲ್ಕೂ ಕಡೆ ಕಲ್ಕತ್ತೆಯ ಕೆಲಸ, ಕೋಲಾಹಲ. ಅವುಗಳ ನಡುವೆ ಒಂದು ಬೀದಿಯ ಮನೆಯ ಮಾಳಿಗೆಯ ಮೂಲೆಯಲ್ಲಿ ಈ ಮುದುಕ ಮತ್ತು ಎಳೆಯ ಹುಡುಗಿ ಕಲೆತಿರುವರು, ತಂದೆ ಮತ್ತು ಮಗಳ ಚಿರಂತನ ಸ್ನೇಹ ಸಂಬಂಧ ಸಂಧ್ಯಾಕಾಶದ ಮುಳುಗುವ ನೆರಳಲ್ಲಿ ಕಣ್ಣೀರಿನಿಂದ ತೋಯ್ದು ಮಾಧುರ್ಯದಲ್ಲಿ ವಿಕಾಸಗೊಂಡಿತು.

ಈ ವೇಳೆಗೆ ಮೆಟ್ಟಿಲ ಮೇಲೆ ಯೋಗೇಂದ್ರನ ಕಾಲಸದ್ದು ಕೇಳಿ ಇಬ್ಬರ ಕಿವಿಮಾತೂ ಒಮ್ಮೆಗೇ ನಿಂತುಹೋಯಿತು. ಗಾಬರಿಯಿಂದ ಈರ್ವರೂ ಎದ್ದು

ನಿಂತರು. ಯೋಗೇಂದ್ರ ಬಂದು ಇಬ್ಬರ ಮುಖದ ಕಡೆಗೂ ಕಡುನೋಟ ಬೀರಿದ ಮತ್ತು, "ಈ ದಿನ ಹೇಮಳ ಸಭೆ ಈ ಮಾಳಿಗೆಯಲ್ಲೇ ಎಂದು ತೋರುವುದು" ಎಂದ.

ಯೋಗೇಂದ್ರ ಅಸ್ಥಿರಮನಸ್ಕನಾಗಿದ್ದ, ಮನೆಯೊಳಗೆ ಹಗಲೂ ರಾತ್ರಿ ಈ ಒಂದು ಶೋಕದ ಕಪ್ಪುಹೊದಿಕೆ ಕವಿದಿತ್ತು, ಇದರಿಂದ ಅವನು ಆಗಾಗ ಮನೆ ಬಿಟ್ಟು ಹೋಗಬೇಕಾಗುತಿತ್ತು. ಆದರೆ ನೆಂಟರಿಷ್ಟರ ಮನೆಗೆ ಹೋದರೆ ಹೇಮನಳಿನಿಯ ಮದುವೆಯ ವಿಷಯವಾಗಿ ನಾನಾ ಪ್ರಶ್ನೆಗಳಿಗೆ ಸಿಕ್ಕಿಕೊಳ್ಳ ಬೇಕಾಗುವುದು ಎಂದು ಎಲ್ಲಿಗಾದರೂ ಹೋಗುವುದೂ ಕಷ್ಟ. ಅವನು ಒಂದೇ ಉಸಿರಿನಲ್ಲಿ, "ಹೇಮನಳಿನಿ ಅತಿ ದೊಡ್ಡ ಸ್ಥಿತಿಗೆ ಆರಂಭಿಸಿರುವಳು. ಹುಡುಗಿ ಯರು ಇಂಗ್ಲೀಷು ಕಾದಂಬರಿಗಳನ್ನು ಓದಿದರೆ ಹೀಗೆಯೇ ನಡೆಯುವುದು. ರಮೇಶ ನನ್ನನ್ನು ಪರಿತ್ಯಾಗ ಮಾಡಿರುವುದರಿಂದ ನನ್ನ ಹೃದಯ ಒಡೆದು ಹೋಗುವುದು ಉಚಿತ ಎಂದು ಹೇಮ ಯೋಚಿಸಿದ್ದಳು. ಅದರಿಂದಲೇ ಇಂದು ಸಮಾರಂಭದೊಡನೆ ಹೃದಯ ಒಡೆದು ಹಾಕಲು ಕುಳಿತಿರುವಳು. ಕಾದಂಬರಿ ಓದಿದ ಅದೆಷ್ಟು ಹುಡುಗಿಯರ ಭಾಗ್ಯದಲ್ಲಿ ಪ್ರೇಮದ ನಿರಾಶೆ ಸಹಿಸುವ ಇಂಥ ವಿಚಿತ್ರ ಸುಯೋಗ ದೊರೆತಿರುವುದು" ಎಂದು ಹೇಳಿದ.

ಯೋಗೇಂದ್ರನ ಕಠಿಣ ಆಕ್ರಮಣದಿಂದ ಮಗಳನ್ನು ರಕ್ಷಿಸಲು ಅನ್ನದಾ ಬಾಬು ಕೂಡಲೇ ಹೇಳಿದರು, "ನಾನು ಹೇಮಳೊಡನೆ ಹರಟೆ ಹೊಡೆಯು ತಿದ್ದೆ". ಅವರು ಹರಟೆಗಾಗಿ ಹೇಮಳನ್ನು ಮಾಳಿಗೆಗೆ ಕರೆತಂದಿದ್ದರೇ ?

ಯೋಗೇಂದ್ರ, "ಏಕೆ, ಚಹದ ಮೇಜೆಯ ಬಳಿ ಮಾತಿಗೆ ಅವಕಾಶ ವಿಲ್ಲವೇನು ? ಅಪ್ಪಾ, ನೀವು ಹೇಮಳನ್ನು ಹಾಳುಮಾಡುತ್ತಿರುವಿರಿ ಹೀಗೆ ಮಾಡಿದರೆ ಮನೆ . . ." ಎಂದು ಹೇಳಿದ.

ಹೇಮನಳಿನಿ ಗಾಬರಿಯಿಂದ ಕೇಳಿದಳು, "ಅಪ್ಪಾ, ನೀವು ಇನ್ನೂ ಚಹ ಕುಡಿದಿಲ್ಲವೆ ?

ಯೋಗೇಂದ್ರ—ಸಂಧ್ಯಾಕಾಲದ ಆಕಾಶದ ಮುಳುಗುವ ಸೂರ್ಯನ ಪ್ರಭೆಯಿಂದ ಚಹೆ ತಾನಾಗಿಯೇ ಸುರಿದುಬೀಳುವುದೆಂಬ ಕವಿಕಲ್ಪನೆಯಲ್ಲವಲ್ಲ. ಮಾಳಿಗೆಯ ಮೂಲೆಯಲ್ಲಿ ಕುಳಿತಿದ್ದರೆ ಚಹದ ಬಟ್ಟಲು ತುಂಬಿಕೊಳ್ಳದು, ಈ ಮಾತನ್ನು ಹೊಸದಾಗಿ ಹೇಳಬೇಕೇನು ?

ಅನ್ನದಾ ಹೇಮನಳಿನಿಯ ನಾಚಿಕೆ ಹೋಗಲಾಡಿಸಲು ಒಡನೆ, "ನಾನು ಈ ದಿನ ಚಹ ಕುಡಿಯುವುದಿಲ್ಲ ಎಂದು ತೀರ್ಮಾನಿಸಿರುವೆ" ಎಂದರು.

ಯೋಗೇಂದ್ರ "ಏನಪ್ಪಾ, ನೀವೆಲ್ಲರೂ ತಪಸ್ವಿಗಳಾಗುವಿರೇನು?" ಎಂದ.

ಅನ್ನದಾ—ಇಲ್ಲ ಇಲ್ಲ, ತಪಸ್ಸಿನ ಮಾತಲ್ಲ, ನಿನ್ನೆ ರಾತ್ರಿ ನನಗೆ ಚೆನ್ನಾಗಿ ನಿದ್ದೆ ಬರಲಿಲ್ಲ, ಅದರಿಂದಲೇ ಈ ದಿನ ಚಹ ಕುಡಿಯದಿದ್ದರೆ ಸರಿಯಾದೀತೇನೋ ಎಂದು ಯೋಚಿಸುತಿದ್ದೆ.

ವಸ್ತುತಃ ಹೇಮನಳಿನಿಯೊಡನೆ ಮಾತುಕತೆ ನಡೆಸುವಾಗ ತುಂಬಿದ ಚಹದ ಬಟ್ಟಲು ನೆನಪಾಗುತ್ತಲೇ ಹಲವು ಬಾರಿ ಅನ್ನದಾಬಾಬುಗಳು ಆಸೆಗೆ ಒಳಗಾಗಿರುವರು, ಆದರೆ ಈ ದಿನ ಏಳಲೇ ಇಲ್ಲ. ಬಹಳ ದಿನಗಳ ಬಳಿಕ ಇಂದು ಹೇಮ ಅವರೊಡನೆ ಮನಬಿಚ್ಚಿ ಮಾತಾಡುತ್ತಿರುವಳು, ಈ ನಿರ್ಜನ ಮಾಳಿಗೆಯಲ್ಲಿ ಇಬ್ಬರಲ್ಲಿ ಅತಿ ನಿಕಟ ಸಂಭಾಷಣೆ ನಡೆಯುತ್ತಿರುವುದು, ಇಂಥ ಗಭೀರ—ರಹಸ್ಯ-ಭಾವದ ಸಂಭಾಷಣೆ ಹಿಂದೆ ನಡೆದಂತೆ ಅವರಿಗೆ ನೆನಪಿಲ್ಲ. ಈ ಮಾತು ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಹೊತ್ತು ನಡೆಯು ವಂಥದ್ದಲ್ಲ—ಎದ್ದು ಹೋಗುವ ಪ್ರಯತ್ನ ಮಾಡಿದರೆ ಹೆದರಿದ ಜಿಂಕೆಯಂತೆ ಎಲ್ಲವೂ ಓಡಿಹೋಗುವುದು. ಅದರಿಂದಲೇ ಅನ್ನದಾಬಾಬು ಇಂದು ಮೇಲಿಂದ ಮೇಲೆ ಚಹದ ಆಹ್ವಾನವನ್ನು ತಿರಸ್ಕರಿಸುತ್ತಿದ್ದರು.

ಅನ್ನದಾಬಾಬು ಚಹ ಕುಡಿಯುವುದನ್ನು ಬಿಟ್ಟು ನಿದ್ದೆ ಬಾರದ್ದಕ್ಕೆ ಚಿಕಿತ್ಸೆಮಾಡಿಕೊಳ್ಳುತ್ತಿರುವರು ಎಂಬ ಮಾತನ್ನು ಹೇಮನಳಿನಿ ನಂಬಲಿಲ್ಲ— ಅವಳು "ನಡೆಯಪ್ಪಾ, ಚಹ ಕುಡಿಯಲು ಹೋಗೋಣ" ಎಂದಳು.

ಅನ್ನದಾಬಾಬುಗಳು ಆ ಕ್ಷಣದಲ್ಲೇ ನಿದ್ದೆಬಾರದೆಂಬ ಸಂದೇಹ ಮರೆತು ವೇಗವಾಗಿ ಮೇಜೆಯ ಕಡೆಗೆ ನಡೆದರು.

ಚಹ ಕುಡಿಯುವ ಕೊಠಡಿ ಪ್ರವೇಶಿಸಿ ಅನ್ನದಾಬಾಬುಗಳು ಅಕ್ಷಯ ಅಲ್ಲಿ ಕುಳಿತಿರುವುದನ್ನು ನೋಡಿದರು. ಅವರ ಮನ ಉದ್ರೇಕಗೊಂಡಿತು. ಅವರು, 'ಹೇಮಳ ಮನಸ್ಸು ಇಂದು ಸ್ವಲ್ಪ ನೆಮ್ಮದಿಯಿಂದಿರುವುದು, ಅಕ್ಷಯ ನನ್ನು ನೋಡಿದ ಕೂಡಲೆ ಮತ್ತೆ ನೆಲೆ ತಪ್ಪುವುದು,—ಆದರೆ ಈಗ ಬೇರೆ ಮಾರ್ಗವಿಲ್ಲ" ಎಂದು ಯೋಚಿಸಿದರು. ಕ್ಷಣ ಕಾಲದಲ್ಲಿ ಹೇಮ ಕೊಠಡಿಗೆ

ಬಂದಳು. ಅಕ್ಷಯ ಅವಳನ್ನು ನೋಡುತ್ತಲೇ ಎದ್ದುನಿಂತು, " ಯೋಗೇನ, ನಾನಿನ್ನು ಹೊರಡುವೆ " ಎಂದ.

" ಏಕೆ ಅಕ್ಷಯ ಬಾಬು, ನಿಮಗೆ ಏನಾದರೂ ಕೆಲಸವಿದೆಯೆ ? ಒಂದು ಬಟ್ಟಲು ಚಹ ಕುಡಿದು ಹೋಗಿ " ಎಂದಳು ಹೇಮನಳಿನಿ.

ಹೇಮನಳಿನಿಯ ಈ ಬೇಡಿಕೆಯಿಂದ ಕೊಠಡಿಯಲ್ಲಿದ್ದವರೆಲ್ಲ ಆಶ್ಚರ್ಯ ಪಟ್ಟರು. ಅಕ್ಷಯ ಪುನಃ ಕುಳಿತುಕೊಳ್ಳುತ್ತ, " ನೀವು ಬರುವುದಕ್ಕೆ ಮೊದಲೇ ನಾನು ಎರಡು ಬಟ್ಟಲು ಚಹ ಕುಡಿದಿರುವೆ—ಬಲಾತ್ಕರಿಸಿದರೆ ಇನ್ನೂ ಎರಡು ಬಟ್ಟಲು ಸಾಧ್ಯವಿಲ್ಲವೆಂದು ಹೇಳಲಾರೆ " ಎಂದ.

ಹೇಮನಳಿನಿ ನಗುತ್ತ ಹೇಳಿದಳು, " ಚಹದ ಬಟ್ಟಲು ಹಿಡಿದು ಎಂದೂ ನಿಮ್ಮನ್ನು ಬಲಾತ್ಕರಿಸಬೇಕಾಗಿಲ್ಲ ".

" ಇಲ್ಲ, ಒಳ್ಳೆಯ ಪದಾರ್ಥವನ್ನು ನಾನೆಂದಿಗೂ ಉಪಯೋಗವಿಲ್ಲ ವೆಂದು ಹಿಂದಿರುಗಿಸಿಲ್ಲ, ವಿಧಾತ ನನಗೆ ಅಷ್ಟು ಮಾತ್ರ ಬುದ್ಧಿ ಕೊಟ್ಟಿರುವ " ಎಂದು ಅಕ್ಷಯ ಹೇಳಿದ.

" ಆ ಮಾತನ್ನು ನೆನಪಿನಲ್ಲಿಟ್ಟುಕೊಂಡು ಒಳ್ಳೆಯ ಪದಾರ್ಥವೂ ನಿನ್ನನ್ನು ಯಾವ ಬಗೆಯಲ್ಲೂ ಪ್ರಯೋಜನವಿಲ್ಲದವನೆಂದು ಹಿಂದಕ್ಕೆ ಕಳುಹಿಸ ದಿರಲಿ, ನಾನು ನಿನಗೆ ಈ ಆಶೀರ್ವಾದ ಮಾಡುವೆ " ಎಂದ ಯೋಗೇಂದ್ರ.

ಅನೇಕ ದಿನಗಳ ಬಳಿಕ ಅನ್ನದಾಬಾಬುಗಳ ಚಹದ ಮೇಜೆಯ ಬಳಿ ಮಾತುಕತೆ ಅತಿ ಸ್ವಾರಸ್ಯವಾಗಿ ನಡೆಯಿತು. ಪ್ರಾಯಃ ಹೇಮನಳಿನಿಯೂ ಶಾಂತ ಭಾವದಿಂದ ನಗುತ್ತಿದ್ದಳು, ಇಂದು ಅವಳ ನಗುವಿನ ಧ್ವನಿ ಆಗಾಗ್ಗೆ ಮಾತುಗಳ ಮೇಲೆ ಪ್ರಭಾವ ಬೀರುತ್ತಿತ್ತು. ಅನ್ನದಾಬಾಬುಗಳನ್ನು ಅವಳು ಹಾಸ್ಯಮಾಡುತ್ತ ಕೇಳಿದಳು, " ಅಪ್ಪಾ, ಅಕ್ಷಯಬಾಬುಗಳ ಅನ್ಯಾಯ ನೋಡಿ. ಕೆಲವು ದಿನಗಳಿಂದ ನಿಮ್ಮ ಮಾತ್ರೆ ತಿನ್ನದೆಯೇ ಅವರು ಬಹಳ ಆರೋಗ್ಯವಾಗಿರುವರು. ಸ್ವಲ್ಪವಾದರೂ ಕೃತಜ್ಞತೆ ಇದ್ದಿದ್ದರೆ ಕಡೆಗೆ ತಲೆ ಶೂಲೆಯಾದರೂ ಬರುತ್ತಿತ್ತು ".

ಯೋಗೇಂದ್ರ—ಇದನ್ನೇ ಮಾತ್ರೆಯ ಕೃತಘ್ನತೆ ಎನ್ನುವುದು.

ಅನ್ನದಾಬಾಬು ಬಹಳ ಸಂತೋಷಪಟ್ಟು ನಗಲಾರಂಭಿಸಿದರು ಅನೇಕ ದಿನಗಳ ಬಳಿಕ ಮತ್ತೆ ಅವರ ಮಾತ್ರೆ ಪೆಟ್ಟಿಗೆ ವಿಷಯವಾಗಿ ನೆಂಟರಿಷ್ಟರ

ಕಟಾಕ್ಷ ಆರಂಭವಾದುದನ್ನು ಅವರು ಪಾರಿವಾರಿಕ ಆರೋಗ್ಯದ ಲಕ್ಷಣವೆಂದು ಎಣಿಸಿದರು, ಅವರ ಮನದಿಂದ ಒಂದು ಭಾರ ನೀಗಿದಂತಾಯಿತು.

ಅವರು " ಈಗ ತಿಳಿಯಿತು. ಜನರ ವಿಶ್ವಾಸಘಾತುಕರೆ ! ನನ್ನ ಮಾತ್ರೆ ತಿನ್ನುವವರ ಗುಂಪಿನಲ್ಲಿ ಈ ಅಕ್ಷಯನೊಬ್ಬನೇ ಉಳಿದಿರುವುದು—ಅವನನ್ನೂ ಓಡಿಸಲು ಈ ಪ್ರಯತ್ನ" ಎಂದರು.

" ಹಾಗೆ ತಿಳಿಯಬೇಡಿ ಅನ್ನದಾಬಾಬು. ಅಕ್ಷಯನನ್ನು ದೂರೀ ಕರಿಸಲು ಸಾಧ್ಯವೆ ? " ಎಂದ ಅಕ್ಷಯ.

ಯೋಗೇಂದ್ರ—" ಖೋಟಾ ರೂಪಾಯಿಯಂತೆ ಮುರಿಸಲೆತ್ನಿಸಿದರೆ ಪೋಲೀಸ್ ಕೇಸ್ ನಡೆಯುವ ನಿರೀಕ್ಷೆ".

ಈ ರೀತಿ ಹಾಸ್ಯಾಲಾಪದಿಂದ ಅನ್ನದಾಬಾಬುಗಳ ಚಹದ ಮೇಜೆಯ ಮೇಲಿಂದ ಬಹಳ ದಿನಗಳ ಯಾವುದೋ ಭೂತ ಬಿಟ್ಟು ಹೋಯಿತು.

ಈ ದಿನದ ಚಹದ ಸಭೆ ಬೇಗ ಮುಗಿಯುವಂತಿರಲಿಲ್ಲ—ಆದರೆ ಇಂದು ಹೊತ್ತಿಗೆ ಸರಿಯಾಗಿ ಹೇಮನಳಿನಿ ತಲೆ ಬಾಚಿಕೊಂಡಿರಲಿಲ್ಲವಾಗಿ ಅವಳು ಎದ್ದು ಹೋದಳು—ಆಗ ಯಾವುದೋ ಒಂದು ಕೆಲಸದ ನೆನಪಾಗಿ ಅಕ್ಷಯನೂ ಎದ್ದು ಹೊರಟ.

" ಅಪ್ಪಾ, ಇನ್ನು ತಡಮಾಡಬಾರದು—ಈಗಲೇ ಹೇಮಳ ಮದುವೆಗೆ ಸಿದ್ಧಪಡಿಸು" ಎಂದ ಯೋಗೇಂದ್ರ

ಅನ್ನದಾಬಾಬುಗಳು ಆಶ್ಚರ್ಯದಿಂದ ನೋಡಿದರು ಯೋಗೇಂದ್ರ, " ರಮೇಶನೊಡನೆ ಮದುವೆ ನಿಂತುಹೋದುದಕ್ಕಾಗಿ ಜನ ಬಹಳವಾಗಿ ಹೇಳಿ ಕೊಳ್ಳುತ್ತಿರುವರು—ಇದಕ್ಕಾಗಿ ನಾನೊಬ್ಬನೇ ಎಲ್ಲಿಯವರೆಗೆ ಎಲ್ಲರೊಡನೆ ಜಗಳವಾಡುತ್ತ ತಿರುಗಲಿ. ಎಲ್ಲ ಸಂಗತಿಯನ್ನೂ ಬಹಿರಂಗವಾಗಿ ಹೇಳುವ ಹಾಗಿದ್ದಿದ್ದರೆ ಜಗಳವಾಡಲು ಹಿಂಜರಿಯುತ್ತಿರಲಿಲ್ಲ. ಆದರೆ ಹೇಮಳಿಗಾಗಿ ಬಾಯಿಬಿಟ್ಟು ಏನೂ ಹೇಳುವಂತಿಲ್ಲ—ಅದರಿಂದಲೇ ಕೈ ಕೈ ಬೆಳೆಯುವುದು. ಆದಿನ ಅಖಿಲನನ್ನು ಎಚ್ಚರಗೊಳಿಸಿ ಬರಬೇಕಾಯಿತು—ಅವನು ಬಾಯಿಗೆ ಬಂದುದನ್ನು ಹೇಳುತ್ತಿದ್ದನೆಂದು ಕೇಳಿದೆ. ಹೇಮಳ ಮದುವೆ ಆದಷ್ಟು ಬೇಗ ಮುಗಿದರೆ ಈ ಎಲ್ಲ ಮಾತೂ ಮರೆತುಹೋಗುವುದು ಮತ್ತು ನನಗೂ ಸೀಮೆ ರಾಜ್ಯದ ಜನರನ್ನೆಲ್ಲ ಹಗಲೂ ರಾತ್ರಿ ಮುಷ್ಟಿಯೆತ್ತಿ ಹೆದರಿಸುತ್ತ ತಿರುಗಾಡ ಬೇಕಾಗುವುದಿಲ್ಲ. ನನ್ನ ಮಾತು ಕೇಳಿ, ಇನ್ನು ನಿಧಾನಿಸಬೇಡಿ.

ಅನ್ನದಾ—ಯಾರೊಡನೆ ಮದುವೆ ಮಾಡುವುದು ಯೋಗೇನ್ ?

ಯೋಗೇಂದ್ರ—ಒಬ್ಬನೇ ಒಬ್ಬ ಇರುವನು. ಇಷ್ಟೆಲ್ಲ ಗದ್ದಲ ನಡೆದು ಇಷ್ಟೆಲ್ಲಾ ಮಾತುಕತೆ ಬೆಳೆದ ಬಳಿಕ ವರ ಸಿಗುವುದು ಕಷ್ಟ. ನಿರ್ಭಾಗ್ಯ ಅಕ್ಷಯ ಮಾತ್ರ ಇರುವ—ಅವನನ್ನು ಹೇಗೂ ನಿರುತ್ಸಾಹ ಪಡಿಸಲಾರೆ. ಅವನಿಗೆ ಮಾತ್ರೆ ತಿನ್ನ ಹೇಳಿದರೆ ಮಾತ್ರೆ ತಿನ್ನುವ, ಮದುವೆಯಾಗು ಎಂದರೆ ಮದುವೆ ಯಾಗುವ.

ಅನ್ನದಾ—ಹುಚ್ಚನಾಗಿರುವೆಯಾ ಯೋಗೇನ ? ಅಕ್ಷಯನನ್ನು ಹೇಮ್ ಮದುವೆಯಾಗುವಳೆ ?

ಯೋಗೇಂದ್ರ—ನೀವು ಗದ್ದಲ ಮಾಡದಿದ್ದರೆ ನಾನು ಅವಳನ್ನು ಒಪ್ಪಿಸುವೆ.

ಅನ್ನದಾಬಾಬುಗಳು ಕಳವಳದಿಂದ ಹೇಳಿದರು, “ ಬೇಡ ಯೋಗೇನ್ ಬೇಡ, ನೀನು ಹೇಮಳನ್ನು ಅರ್ಥಮಾಡಿಕೊಂಡಿಲ್ಲ. ನೀನು ಅವಳಿಗೆ ಭಯ ತೋರಿಸಿ, ಕಷ್ಟಪಡಿಸಿ, ಅಧೈರ್ಯಗೊಳಿಸುವೆ. ಈಗ ಅವಳು ಕೆಲವು ದಿನ ನೆಮ್ಮದಿಯಿಂದಿರಲು ಬಿಟ್ಟು ಬಿಡು—ಆ ನಿರ್ಭಾಗ್ಯೆ ಅತಿ ಕಷ್ಟ ಅನುಭವಿ ಸಿರುವಳು, ಮದುವೆಗೆ ಬೇಕಾದಷ್ಟು ಅವಕಾಶವಿದೆ ”.

ಯೋಗೇಂದ್ರ, “ ನಾನವಳನ್ನು ಸ್ವಲ್ಪವೂ ಕಾಡುವುದಿಲ್ಲ, ಸಾಧ್ಯ ವಾದಷ್ಟು ಸಾವಧಾನದಿಂದಲೂ ಮೃದುಭಾವದಿಂದಲೂ ಕೆಲಸ ನಡೆಸುವೆ. ಇದಕ್ಕೆ ತಪ್ಪುವುದಿಲ್ಲ. ನೀವು ಏನೇ ಹೇಳಿ ಜಗಳವಾಡದೆ ಮಾತಾಡಲು ನನ್ನಿಂದ ಸಾಧ್ಯವಿಲ್ಲ” ಎಂದು ಹೇಳಿದ.

ಯೋಗೇಂದ್ರ ದುಡುಕು ಸ್ವಭಾವವುಳ್ಳವನು—ಆದಿನ ಸಂಜೆ ತಲೆ ಬಾಚಿಕೊಂಡು ಹೇಮನಳಿನಿ ಹೊರಬರುತ್ತಲೇ ಅವನು ಅವಳನ್ನು ಕೂಗಿ, “ ಹೇಮ್, ಒಂದು ಮಾತು ” ಎಂದ.

ಒಂದು ಮಾತು ಎಂದುದನ್ನು ಕೇಳಿ ಹೇಮಳ ಎದೆ ನಡುಗಿತು ಯೋಗೇಂದ್ರನನ್ನು ಹಿಂಬಾಲಿಸ ತ್ತ ಮೆಲ್ಲಮೆಲ್ಲನೆ ಕುಳಿತುಕೊಳ್ಳುವ ಕೋಣೆ ಯಲ್ಲಿ ಬಂದು ಕುಳಿತಳು “ ಹೇಮ್, ತಂದೆಯ ದೇಹಸ್ಥಿತಿ ಎಷ್ಟು ಕೆಟ್ಟಿದೆ ನೋಡಿದೆಯಾ ? ” ಎಂದ ಯೋಗೇಂದ್ರ.

ಹೇಮನಳಿನಿಯ ಮುಖದಲ್ಲಿ ಒಂದು ಉದ್ವೇಗ ಹೊಳೆಯಿತು, ಅವಳು ಯಾವ ಮಾತೂ ಹೇಳಲಿಲ್ಲ.

ಯೋಗೇಂದ್ರ—ನಾನು ಹೇಳುವುದಿಷ್ಟೇ, ಇದಕ್ಕೆ ಒಂದು ಪ್ರತೀಕಾರ ಮಾಡದಿದ್ದರೆ ಅವರು ಕಠಿಣ ರೋಗಕ್ಕೆ ತುತ್ತಾಗುವರು.

ತಂದೆಯ ಈ ಅನಾರೋಗ್ಯದ ಅಪರಾಧ ತನ್ನ ಮೇಲೆ ಬಿದ್ದಿರುವುದೆಂದು ಹೇಮನಳಿನಿ ಅರಿತಳು. ಅವಳು ತಲೆ ತಗ್ಗಿಸಿಕೊಂಡು ಬಾಡಿದ ಮುಖದೊಡನೆ ಸೀರೆಯ ಅಂಚು ಸರಿಪಡಿಸತೊಡಗಿದಳು.

"ಯಾವುದು ನಡೆಯಿತೋ ಅದು ಕಳೆದು ಹೋಯಿತು, ಅದನ್ನು ಕುರಿತು ಹೇಳುತ್ತ ಹೋದಷ್ಟೂ ನಮಗೆ ನಾಚಿಕೆಯೇ ಆಗುವುದು. ಈಗ ತಂದೆಯ ಮನಸ್ಸನ್ನು ಸಂಪೂರ್ಣವಾಗಿ ಶಾಂತವಾಗಿರಿಸಬೇಕಾದರೆ ಆದಷ್ಟು ಬೇಗ ಈ ಎಲ್ಲ ಅಪ್ರಿಯ ವ್ಯವಹಾರಗಳನ್ನು ಒಟ್ಟಿಗೆ ಬೇರುಸಹಿತ ಕಿತ್ತೆಸೆಯ ಬೇಕು" ಎಂದು ಯೋಗೇಂದ್ರ ನುಡಿದ.

ಹೀಗೆ ಹೇಳಿ ಉತ್ತರ ನಿರೀಕ್ಷಿಸುತ್ತ ಯೋಗೇಂದ್ರ ಹೇಮನಳಿನಿಯ ಮುಖ ನೋಡುತ್ತ ಮೌನವಾಗಿ ಕುಳಿತ.

ಹೇಮ ನಾಚಿಕೆಯ ಭಾವದಿಂದ ಹೇಳಿದಳು, "ಈ ಎಲ್ಲ ವಿಷಯಗಳ ನ್ನೆತ್ತಿಕೊಂಡು ನಾನು ಎಂದಾದರೂ ತಂದೆಯವರಿಗೆ ಬೇಸರ ಪಡಿಸುವೆನೆ, ಅಂಥ ಸಂಭವ ಏನೂ ಇಲ್ಲ".

ಯೋಗೇಂದ್ರ—ನೀನು ಮಾಡುವೆಯೋ ಇಲ್ಲವೋ, ಆದರೆ ಈ ವಿಷಯ ದಲ್ಲಿ ಬೇರೆಯವರ ಬಾಯಿ ಸುಮ್ಮನಿದ್ದೀತೇ?

"ಹಾಗಾದರೆ ನಾನೇನು ಮಾಡಬಲ್ಲೆ ಹೇಳು" ಎಂದಳು ಹೇಮ.

ಯೋಗೇಂದ್ರ—ಸುತ್ತಮುತ್ತಲೂ ನಾನಾ ಮಾತುಕತೆ ನಡೆಯುತ್ತಿದೆ ಯಲ್ಲ, ಅದನ್ನು ನಿಲ್ಲಿಸಲು ಒಂದೇ ಒಂದು ಉಪಾಯ ಇದೆ.

ಯೋಗೇಂದ್ರನ ಮನದಲ್ಲಿದ್ದ ಉಪಾಯವನ್ನು ಕೂಡಲೇ ಹೇಮನಳಿನಿ ತಿಳಿದುಕೊಂಡಳು. "ಹಾಗಾದರೆ ಕೆಲವು ಕಾಲ ತಂದೆಯವರನ್ನು ಕರೆದು ಕೊಂಡು ಪಶ್ಚಿಮಕ್ಕೆ ತಿರುಗಾಡಲು ಹೋದರೆ ಒಳ್ಳೆಯದಾಗುವುದಲ್ಲವೆ? ಮೂರು-ನಾಲ್ಕು ತಿಂಗಳು ಕಳೆದು ಬಂದರೆ ಅಷ್ಟರಲ್ಲಿ ಎಲ್ಲ ಗದ್ದಲವೂ ಅಡಗಿ ಹೋಗುವುದು" ಎಂದಳು.

"ಅದರಿಂದಲೇ ಸಂಪೂರ್ಣ ಫಲ ದೊರೆಯದು. ನಿನ್ನ ಹೃದಯದಲ್ಲಿ ಯಾವ ವೇದನೆಯೂ ಇಲ್ಲವೆಂದು ತಂದೆಯವರಿಗೆ ನಿಶ್ಚಯವಾಗಿ ತಿಳಿಯುವ

ವರೆಗೂ ಅವರ ಎದೆಯಲ್ಲಿ ಬಾಣ ನೆಟ್ಟೇ ಇರುವುದು—ಅಲ್ಲಿಯವರೆಗೆ ಅವರಿಗೆ ಯಾವ ರೀತಿಯಲ್ಲೂ ನೆಮ್ಮದಿಯಿಲ್ಲ.

ನೋಡುತ್ತ ನೋಡುತ್ತ ಹೇಮನಳಿನಿಯ ಎರಡು ಕಣ್ಣುಗಳಲ್ಲೂ ನೀರೂರಿತು. ಅವಳು ಕೂಡಲೇ ನೀರು ಒರೆಸಿಕೊಂಡಳು—"ನಾನು ಏನು ಮಾಡಬೇಕೆಂದು ಹೇಳುವೆ" ಎಂದಳು.

ಯೋಗೇಂದ್ರ ಹೇಳಿದ, "ಮಾತು ನಿನ್ನ ಕಿವಿಗೆ ಕಠೋರವೆನಿಸುವುದೆಂದು ನಾನು ಬಲ್ಲೆ, ಆದರೆ ಎಲ್ಲ ಬಗೆಯಲ್ಲೂ ಮಂಗಳ ಬಯಸುವೆಯಾದರೆ, ನೀನು ಕಾಲವಿಳಂಬ ಮಾಡದೆ ಮದುವೆಯಾಗ ಬೇಕು".

ಹೇಮನಳಿನಿ ಮಾತಿಲ್ಲದೆ ಕುಳಿತಿದ್ದಳು. ಯೋಗೇಂದ್ರ ತನ್ನ ಆತುರ ಅಡಗಿಸಿಕೊಳ್ಳಲಾರದೆ ಹೇಳಿದ, "ಹೇಮ್, ನಿನ್ನ ಕಲ್ಪನೆಯ ಮೂಲಕ ಅಲ್ಪ ಸಂಗತಿಯನ್ನು ದೊಡ್ಡದು ಮಾಡಿ ಪ್ರೇಮವೆಂದು ಭಾವಿಸಿದೆ. ನಿನ್ನ ಮದುವೆ ವಿಷಯದಲ್ಲಿ ಎದ್ದಿರುವಷ್ಟು ಗೊಂದಲ. ಅದೆಷ್ಟು ಹುಡುಗಿಯರ ವಿಷಯದಲ್ಲಿ ನಡೆದಿದೆ—ಈಗ ಅದನ್ನು ಕೊನೆಗಾಣಿಸಬೇಕು—ಇಲ್ಲವಾದರೆ ಮನೆಮನೆಯ ಮಾತುಕತೆಯಲ್ಲಿ ಒಂದೊಂದು ಕಾದಂಬರಿ ರಚನೆಯಾಗದಿದ್ದರೆ ಜನರಿಗೆ ನೆಮ್ಮದಿ ಇಲ್ಲ. ಎಂದೆಂದಿಗೂ ಸಂನ್ಯಾಸಿನಿಯಾಗಿಯೇ ಮಾಳಿಗೆಯಲ್ಲಿ ಕುಳಿತು ಆಕಾಶದ ಕಡೆ ನೋಡುತ್ತ ಕುಳಿತಿರುವೆಯಾ, ಆ ಅಯೋಗ್ಯ ಮಿಥ್ಯಾಚಾರಿಯ ನೆನಪನ್ನು ಹೃದಯ–ಮಂದಿರದಲ್ಲಿ ಸ್ಥಾಪಿಸಿ ಪೂಜಿಸುವೆಯಾ—ಸೀಮೆ ರಾಜ್ಯದ ಜನರೆದುರಿಗೆ ಈ ಎಲ್ಲ ಕಾವ್ಯ ರಚಿಸಲು ನಿನಗೆ ನಾಚಿಕೆಯಾಗುವುದಿಲ್ಲವೆ,—ಆದರೆ ನಾಚಿಕೆಯಿಂದ ನನ್ನ ಜೀವವೇ ಹಾರಿಹೋಗುವುದು. ಗೌರವ ಕುಟುಂಬದಲ್ಲಿ ಮದುವೆಯಾಗಿ ಈ ಎಲ್ಲ ದುರ್ಭಾಗ್ಯ ಕಾವ್ಯವನ್ನು ಆದಷ್ಟು ಬೇಗ ಅಳಿಸಿಹಾಕು".

ಜನರ ಕಣ್ಣೆದುರಿಗೆ ಕಾವ್ಯವಾಗಬೇಕಾದ ನಾಚಿಕೆಯನ್ನು ಹೇಮನಳಿನಿ ಅತಿ ವಿಲಕ್ಷಣವೆಂದು ಬಲ್ಲಳು, ಅದರಿಂದಲೇ ಯೋಗೇಂದ್ರನ ಕೊಂಕು ನುಡಿ ಅವಳಿಗೆ ಬಾಣದಂತೆ ಇರಿಯಿತು. ಅವಳು, "ಅಣ್ಣಾ, ನಾನು ಸಂನ್ಯಾಸಿನಿಯಾಗಿಯೇ ಉಳಿಯುವೆ, ಮದುವೆ ಮಾಡಿಕೊಳ್ಳುವುದಿಲ್ಲವೆಂದು ಹೇಳಿದೆನೆ?" ಎಂದಳು.

"ಹಾಗೆ ಹೇಳುವುದಾದರೆ ಮದುವೆಯಾಗು, ಖಂಡಿತವಾಗಿ ನೀನು ಏನೇ ಹೇಳು, ಸ್ವರ್ಗ ರಾಜ್ಯದ ಇಂದ್ರದೇವನಾದರೂ ನಿನಗೆ ಒಪ್ಪಿಗೆಯಾಗದು,

ಹೀಗಾದರೆ ಆ ಸಂನ್ಯಾಸಿನೀ ವ್ರತ ಗ್ರಹಿಸಲೇ ಬೇಕಾಗುವುದು. ಜಗತ್ತಿನಲ್ಲಿ ಮನಸ್ಸಿಗೊಪ್ಪುವಂತೆ ಆದೆಷ್ಟು ವಸ್ತುಗಳು ದೊರೆಯುವುವು—ಯಾವುದು ದೊರೆಯುವುದೋ, ಮನಸ್ಸನ್ನು ಅದಕ್ಕೆ ಹೊಂದುವಂತೆ ಮಾಡಿಕೊಳ್ಳ ಬೇಕು. ನಾನು ಹೇಳುವುದಿಷ್ಟೇ, ಇದರಲ್ಲೇ ಮಾನವನ ಯಥಾರ್ಥ ಮಹತ" ಎಂದು ಯೋಗೇಂದ್ರ ನುಡಿದ.

ಹೇಮನಳಿನಿ ಮರ್ಮಾಹತಳಾಗಿ ಹೇಳಿದಳು, "ಅಣ್ಣಾ, ನೀನು ನನ್ನನ್ನು ಹೀಗೆ ಚುಚ್ಚುತ್ತ ನುಡಿಯುವುದೇಕೆ. ನಾನು ಒಪ್ಪಿಗೆ ವಿಷಯದಲ್ಲಿ ನಿನಗೆ ಏನಾದರೂ ಹೇಳಿರುವೆನೆ ?".

ಯೋಗೇಂದ್ರ—ನೀನು ಹೇಳದಿದ್ದರೂ ನಾನು ನೋಡಿರುವೆನಲ್ಲ—ಕಾರಣವಿಲ್ಲದೆಯೂ ಅನ್ಯಾಯವಾಗಿಯೂ ನಿನ್ನ ಒಬ್ಬಿಬ್ಬರು ಹಿತೈಷೀ ಸ್ನೇಹಿತರ ಮೇಲೆ ನೀನು ಬಹಿರಂಗವಾಗಿ ದ್ವೇಷ ಹೊರಗೆಡಹಲು ಹಿಂಜರಿದಿಲ್ಲ. ಆಪರಿಂದಲೇ ಈ ಮಾತನ್ನು ನೀನು ಒಪ್ಪಿಕೊಳ್ಳಲೇ ಬೇಕು, ಈ ಜೀವನದಲ್ಲಿ ಎಷ್ಟು ಜನರೊಡನೆ ನೀನು ಮಾತುಕತೆ ನಡೆಸಿರುವೆಯೋ, ಅವರಲ್ಲಿ ಒಂದೇ ಒಂದು ವ್ಯಕ್ತಿಯನ್ನು ನೋಡಿರುವೆ—ಆ ವ್ಯಕ್ತಿ ಸುಖ-ದುಃಖ, ಮಾನ-ಅಪಮಾನದಲ್ಲಿ ನಿನ್ನ ವಿಷಯದಲ್ಲಿ ಒಂದೇ ಸಮನಾದ ಮನಸಿಟ್ಟಿರುವನು. ಈ ಕಾರಣದಿಂದ ನಾನು ಅವನನ್ನು ಒಳಗೊಳಗೇ ಬಹಳ ಶ್ರದ್ಧೆಯಿಂದ ನೋಡುವೆ. ನಿನ್ನನ್ನು ಸುಖಿಯನ್ನಾಗಿ ಮಾಡಲು ಪ್ರಾಣಬಿಡುವನು, ಇಂಥ ಪತಿ ಬೇಕಾದರೆ, ಅಂಥ ವ್ಯಕ್ತಿಯನ್ನು ಹುಡುಕಲೇ ಬೇಕಾಗಿಲ್ಲ. ಹೀಗಿಲ್ಲದೆ ಕಾವ್ಯ ರಚನೆಗೆ ಇಷ್ಟಪಡುವುದಾದರೆ . . .

ಹೇಮನಳಿನಿ ಎದ್ದು ನಿಂತು, "ಈ ರೀತಿ ನೀನು ನನಗೆ ಹೇಳಬೇಡ, ತಂದೆಯವರು ನನಗೆ ಹೇಗೆ ಹೇಳುವರೋ, ಅದರಂತೆ ನಾನು ನಡೆಯುವೆ. ಹಾಗೆ ನಡೆಸದಿದ್ದರೆ, ಆಗ ನನ್ನ ಕಾವ್ಯದ ಮಾತು ಹೇಳು" ಎಂದಳು.

ಯೋಗೇಂದ್ರ ಕೂಡಲೇ ಶಾಂತನಾಗಿ, "ಹೇಮ್, ಕೋಪಗೊಳ್ಳಬೇಡ ತಂಗಿ, ನನ್ನ ಮನ ಕೆಟ್ಟಿರುವುದು, ಬುದ್ಧಿ ಸರಿಯಾಗಿದೆಯೋ ಇಲ್ಲವೋ ತಿಳಿಯದು—ಆದುದರಿಂದಲೇ ಬಾಯಿಗೆ ಬಂದುದನ್ನು ಹೇಳಿ ಮುಗಿಸುವೆ. ನಾನು ನಿನ್ನನ್ನು ಬಾಲ್ಯದಿಂದಲೂ ನೋಡಿಲ್ಲವೆ—ನಿನ್ನ ಸ್ವಭಾವಸಿದ್ಧವಾದ ನಾಚಿಕೆ, ತಂದೆಯವರಲ್ಲಿ ನಿನಗಿರುವ ಪ್ರೀತಿ ನಾನರಿಯದುದೇನು" ಎಂದು ಹೇಳಿದ.

ಹೀಗೆ ಹೇಳಿ ಯೋಗೇಂದ್ರ ಅನ್ನದಾಬಾಬುಗಳ ಕೊಠಡಿಯೊಳಕ್ಕೆ ಹೋದ. ಯೋಗೇಂದ್ರ ತನ್ನ ತಂಗಿಯ ಮೇಲೆ ಯಾವ ರೀತಿ ಆಕ್ರಮಣ ನಡೆಸಿರುವನೋ, ಎಂದು ಭಾವಿಸುತ್ತ ಅನ್ನದಾಬುಗಳು ಉದ್ವಿಗ್ನರಾಗಿ ತಮ್ಮ ಕೊಠಡಿಯಲ್ಲಿ ಕುಳಿತಿದ್ದರು—ಅಣ್ಣ-ತಂಗಿಯ ಮಾತುಕತೆಯ ನಡುವೆ ಹೋಗಿ ನಿಲ್ಲಬೇಕು ಎಂದು ತಳಮಳಿಸುತಿದ್ದರು, ಅಷ್ಟು ಹೊತ್ತಿಗೆ ಯೋಗೇಂದ್ರ ಬಂದು ಸೇರಿದ—ಅನ್ನದಾ ಅವನ ಮುಖದ ಕಡೆ ನೋಡುತ್ತ ನಿಂತರು.

ಯೋಗೇಂದ್ರ, "ಅಪ್ಪಾ, ಹೇಮ್ ಮದುವೆಯಾಗಲು ಸಮ್ಮತಿಸಿರುವಳು. ನಾನು ಬಹಳ ಬಲವಂತಪಡಿಸಿ ಅವಳನ್ನು ಒಪ್ಪಿಸಿರುವೆ ಎಂದು ನೀವು ಮನಸಿನಲ್ಲಿ ಅಂದುಕೊಂಡಿರುವಿರಿ—ಖಂಡಿತ ಹಾಗೇನೂ ಇಲ್ಲ. ಈಗ ಒಮ್ಮೆ ನೀವು ಬಾಯಿ ತೆರೆದು ಹೇಳಿದರೆ ಅವಳು ಅಕ್ಷಯನನ್ನು ಮದುವೆಯಾಗಲು ಒಪ್ಪದಿರಳು" ಎಂದು ಹೇಳಿದ.

"ನಾನು ಹೇಳಬೇಕೆ ?" ಎಂದರು ಅನ್ನದಾಬಾಬುಗಳು.

ಯೋಗೇಂದ್ರ—ನೀವು ಹೇಳದಿದ್ದರೆ ಅವಳೇ ಬಂದು "ನಾನು ಅಕ್ಷಯನನ್ನು ಮದುವೆಯಾಗುವೆ". ಎಂದು ಹೇಳುವಳೇನು ಹಾಗಾದರೆ, ನಿಮಗೆ ಹೇಳಲು ಸಾಧ್ಯವಾಗದಿದ್ದರೆ, ನನಗೆ ಅನುಮತಿ ಕೊಡಿ, ನಾನು ನಿಮ್ಮ ಆಜ್ಞೆಯನ್ನು ಅವಳಿಗೆ ತಿಳಿಸಿಬರುವೆ.

ಅನ್ನದಾ ಕಳವಳದಿಂದ ಹೇಳಿದರು, "ಬೇಡ ಬೇಡ, ನಾನು ಹೇಳಬೇಕಾದುದನ್ನು ನಾನೇ ಹೇಳುವೆ. ಆದರೆ ಹೀಗೆ ಅವಸರಪಟ್ಟು ಪ್ರಯೋಜನವೇನು ? ಇನ್ನೂ ಕೆಲವು ದಿನ ಕಳೆಯಲಿ ಎಂದು ನನ್ನಿಷ್ಟ".

"ಇಲ್ಲ ಅಪ್ಪಾ, ತಡವಾದರೆ ನಾನಾ ವಿಘ್ನಗಳು ಒದಗಬಹುದು—ಈ ರೀತಿಯಲ್ಲಿ ಹೆಚ್ಚು ದಿನ ಇರುವುದು ಒಳ್ಳೆಯದಲ್ಲ" ಎಂದ ಯೋಗೇಂದ್ರ.

ಯೋಗೇಂದ್ರನ ಮಾತಿನಮುಂದೆ ಮನೆಯವರಾರ ಮಾತೂ ನಡೆಯದು-ಅವನ ಮನಸಿಗೆ ತೋರಿದಂತೆ ಮಾಡಿ ಮುಗಿಸದಿರುವುದಿಲ್ಲ—ಅನ್ನದಾ ಒಳಗೊಳಗೇ ಅವನಿಗೆ ಹೆದರುತಿದ್ದರು. ಅವರು ತಮ್ಮ ಮಾತು ಉಳಿಸಿಕೊಳ್ಳಲು "ಸರಿ, ನಾನು ಹೇಳುವೆ" ಎಂದರು.

"ಅಪ್ಪಾ, ಇಂದೇ ಹೇಳುವುದಕ್ಕೆ ತಕ್ಕ ಸಮಯ. ಅವಳು ನಿಮ್ಮ ಅಪ್ಪಣೆಗಾಗಿ ಕಾದು ಕುಳಿತಿರುವಳು. ಏನೇ ಆಗಲಿ ಈ ದಿನ ತೀರ್ಮಾನವಾಗಲೇ ಬೇಕು" ಎಂದು ಯೋಗೇಂದ್ರ ಹೇಳಿದ.

ಅನ್ನದಾಬಾಬುಗಳು ಕುಳಿತು ಯೋಚಿಸತೊಡಗಿದರು.

"ಅಪ್ಪಾ, ನೀವು ಯೋಚಿಸುತ್ತ ಕುಳಿತರೆ ನಡೆಯದು—ಒಮ್ಮೆ ಹೇಮಳ ಬಳಿಗೆ ಹೋಗಿ" ಎಂದ ಯೋಗೇಂದ್ರ.

"ಯೋಗೇನ, ನೀನು ಇಲ್ಲೇ ಇರು, ನಾನು ಒಂಟಿಯಾಗಿ ಅವಳ ಹತ್ತಿರಕ್ಕೆ ಹೋಗುವೆ" ಎಂದರು ಅನ್ನದಾಬಾಬುಗಳು

ಯೋಗೇಂದ್ರ ಹೇಳಿದ, "ಒಳ್ಳೆಯದು, ನಾನು ಇಲ್ಲೇ ಕುಳಿತಿರುವೆ".

ಅನ್ನದಾಬಾಬುಗಳು ಕುಳಿತುಕೊಳ್ಳುವ ಕೊಠಡಿಯೊಳಕ್ಕೆ ಬಂದು ನೋಡಿದಾಗ ಕೊಠಡಿಯಲ್ಲಿ ಅಂಧಕಾರ. ಕೂಡಲೇ ಒಂದು ಕುರ್ಚಿಯ ಮೇಲಿಂದ ಯಾರೋ ಒಬ್ಬರು ದಡಗುಟ್ಟುತ್ತ ಎದ್ದು ನಿಂತರು, ಮರು ಕ್ಷಣದಲ್ಲೇ ಕಣ್ಣೀರಿನಿಂದ ತೋಯ್ದ ದನಿ ನುಡಿಯಿತು, "ಅಪ್ಪಾ, ದೀಪ ಆರಿ ಹೋಗಿದೆ. ಕೆಲಸದವನಿಗೆ ಹೊತ್ತಿಸಲು ಹೇಳುವೆ".

ದೀಪ ಆರಿದ ಕಾರಣವನ್ನು ಅನ್ನದಾಬಾಬುಗಳು ಸರಿಯಾಗಿ ತಿಳಿದು ಕೊಂಡರು— ಅವರು "ಇರಲಿ ಬಿಡಮ್ಮ, ಬೆಳಕು ಏತಕ್ಕೆ" ಎಂದರು. ಹೀಗೆ ಹೇಳಿ ಕೈಚಾಚುತ್ತ ಹೇಮನಳಿನಿಯ ಹತ್ತಿರ ಬಂದು ಕುಳಿತರು.

ಹೇಮ್, "ಅಪ್ಪಾ, ನಿಮ್ಮ ಮೈ ನೀವು ನೋಡಿಕೊಳ್ಳುತ್ತಿಲ್ಲ?" ಎಂದಳು.

ಅನ್ನದಾ, "ಅದಕ್ಕೆ ಬೇಕಾದಷ್ಟು ಕಾರಣವಿದೆಯಮ್ಮ—ಮೈ ಚೆನ್ನಾ ಗಿರುವುದೆಂದೇ ನೋಡಿಕೊಳ್ಳಲಿಲ್ಲ. ನಿನ್ನ ಶರೀರದ ಕಡೆ ನೀನು ಸ್ವಲ್ಪ ಗಮನವಿಡು ಹೇಮ್" ಎಂದು ಹೇಳಿದರು.

ಹೇಮನಳಿನಿ ಖಿನ್ನಳಾಗಿ ಹೇಳಿದಳು, "ನೀವೆಲ್ಲರೂ ಅದೇ ಮಾತನ್ನೇ ಹೇಳುತ್ತಿರುವಿರಿ—ಬಹಳ ಅನ್ಯಾಯ ಅಪ್ಪಾ, ನಾನೂ ಮನುಷ್ಯರಂತೆ ಚೆನ್ನಾಗಿಯೇ ಇರುವೆ—ನಾನು ಆರೋಗ್ಯ ಗಮನಿಸಿಕೊಳ್ಳದೆ ಇದ್ದುದು ಯಾವಾಗ ಹೇಳಿ ನೋಡೋಣ. ಶರೀರಕ್ಕಾಗಿ ನಾನು ಏನಾದರೂ ಮಾಡಿ ಕೊಳ್ಳಬೇಕೆಂದು ನಿಮಗೆ ತೋರಿದರೆ ನನಗೇಕೆ ಹೇಳಲಿಲ್ಲ. ಅಪ್ಪಾ, ನಾನು ಎಂದಾದರೂ ನಿಮ್ಮ ಯಾವ ಮಾತಿಗಾದರೂ "ಊಹೂಂ" ಎಂದು ಹೇಳಿರುವೆನೆ?" ಕಡೆಯಲ್ಲಿ ಕಂಠಧ್ವನಿ ಎರಡರಷ್ಟು ತೋಯ್ದಂತೆ ಕೇಳಿಬಂತು.

ಅನ್ನದಾ ದುಗುಡ ಮತ್ತು ವ್ಯಾಕುಲತೆಯಿಂದ "ಎಂದೂ ಇಲ್ಲ ತಾಯಿ. ನಿನಗೆ ಎಂದೂ ಯಾವುದನ್ನೂ ಹೇಳಲೇ ಬೇಕಾಗಿಲ್ಲ—ನೀನು ನನ್ನ ಚಿನ್ನ

ಅಲ್ಲವೆ, ಆದರಿಂದಲೇ ನೀನು ನನ್ನ ಅಂತರ್ಯದ ಮಾತು ತಿಳಿದಿರುವೆ—ನೀನು ನನ್ನ ಇಷ್ಟ ಅರಿತು ಕೆಲಸ ಮಾಡಿರುವೆ. ನನ್ನ ಏಕಾಂತ ಮನದ ಆಶೀರ್ವಾದ ವ್ಯರ್ಥವಾಗದಿದ್ದರೆ, ದೇವರು ನಿನ್ನನ್ನು ಚಿರ ಸುಖಿಯನ್ನಾಗಿ ಮಾಡುವ" ಎಂದರು.

"ಅಪ್ಪಾ, ನನ್ನನ್ನು ನಿಮ್ಮ ಬಳಿ ಇಟ್ಟುಕೊಳ್ಳಲಾರಿರಾ?" ಎಂದು ಹೇಮ್ ಕೇಳಿದಳು.

ಅನ್ನದಾ—ಏಕೆ ಇಟ್ಟುಕೊಳ್ಳಲಾರೆ.

ಹೇಮ—ಕಡೆಯ ಪಕ್ಷ ಅಣ್ಣನ ಹೆಂಡತಿ ಬರುವವರೆಗಾದರೂ ಇರ ಬಹುದಲ್ಲ. ನಾನಿಲ್ಲದಿದ್ದರೆ ನಿಮ್ಮನ್ನು ಯಾರು ನೋಡಿಕೊಳ್ಳುವರು?

ಅನ್ನದಾ—ನನ್ನನ್ನು ನೋಡು! ಆ ಮಾತು ಹೇಳಬೇಡ ತಾಯಿ, ನನ್ನನ್ನು ನೋಡಿಕೊಳ್ಳುವುದಕ್ಕಾಗಿ ನೀನು ಇರಲೇ ಬೇಕಾದುದು, ನನಗೆ ಸರಿದೋರದು.

ಹೇಮ, "ಅಪ್ಪಾ, ಕೋಣೆಯಲ್ಲಿ ಬಹಳ ಕತ್ತಲೆ—ದೀಪ ತರುವೆ" ಎಂದು ಹೇಳಿ ಪಕ್ಕದ ಕೋಣೆಯಿಂದ ಒಂದು ಕೈಲಾಧ್ರ ತಂದು ಕೊಠಡಿ ಯಲ್ಲಿಟ್ಟಳು "ಎಷ್ಟೋ ದಿನ ಗೊಂದಲದಿಂದ ಸಂಜೆ ನಿಮಗೆ ಪತ್ರಿಕೆ ಓದಿ ಹೇಳಲೇ ಇಲ್ಲ. ಇಂದು ಓದಿ ಹೇಳುವೆ ಎಂದಳು.

ಅನ್ನದಾ ಎದ್ದು ನಿಂತು, "ಸರಿ, ಸ್ವಲ್ಪ ಕುಳಿತಿರಮ್ಮ, ನಾನು ಬಂದು ಕೇಳುವೆ" ಎಂದು ಹೇಳಿ ಯೋಗೇಂದ್ರನ ಬಳಿಗೆ ಹೋದರು—ಈ ದಿನ ಮಾತಾಡಲು ಸಾಧ್ಯವಾಗಲಿಲ್ಲ, ಇನ್ನೊಂದಾದರೂ ನೋಡೋಣ—ಎಂದು ತಿಳಿಸಬೇಕೆಂದು ನಿರ್ಧರಿಸಿದ್ದರು. ಆದರೆ ಯೋಗೇಂದ್ರ, "ಏನಾಯಿತಪ್ಪ, ಮದುವೆಯ ಮಾತು ಹೇಳಿದಿರಾ" ಎಂದು ಕೇಳಿದ ಕೂಡಲೇ ಗಾಬರಿಯಿಂದ "ಹೂಂ ಹೇಳಿದೆ" ಎಂದರು. ಪ್ರಾಯಃ ಯೋಗೇಂದ್ರ ಸ್ವತಃ ಹೋಗಿ ಹೇಮನಳಿನಿಯನ್ನು ವ್ಯಥೆಪಡಿಸುವನೆಂದು ಅವರಿಗೆ ಹೆದರಿಕೆಯಿತ್ತು.

"ಖಂಡಿತ ಅವಳು ಒಪ್ಪಿಕೊಂಡಿರುವಳೆ?" ಎಂದು ಯೋಗೇಂದ್ರ ಕೇಳಿದ.

ಅನ್ನದಾ— ಹೌದು, ಒಂದು ರೀತಿಯಲ್ಲಿ ಸಮ್ಮತಿಸಿರುವಳು. ಯೋಗೇಂದ್ರ ಹೇಳಿದ, "ಹಾಗಾದರೆ ನಾನು ಅಕ್ಷಯನಿಗೆ ಹೇಳಿ ಬರುವೆ".

ಅನ್ನದಾ ಕಳವಳದಿಂದ "ಬೇಡ ಬೇಡ, ಈಗಲೇ ಅಕ್ಷಯನಿಗೆ ಏನನ್ನೂ ಹೇಳಬೇಡ. ಯೋಗೇನ, ಇಷ್ಟು ಆತುರ ಪಡಿಸಿದರೆ ಎಲ್ಲವೂ ಕೆಟ್ಟು ಹೋಗುವುದೆಂದು ತಿಳಿದುಕೊ. ಈಗ ಯಾರಿಗೂ ಏನೂ ಹೇಳುವ ಅಗತ್ಯ ವಿಲ್ಲ—ನಾವು ಒಮ್ಮೆ ಪಶ್ಚಿಮ ಸುತ್ತಾಡಿಕೊಂಡು ಬರುವೆವು, ಆಮೇಲೆ ಎಲ್ಲವೂ ತೀರ್ಮಾನವಾಗುವುದು" ಎಂದು ಹೇಳಿದರು.

ಯೋಗೇಂದ್ರ ಈ ಮಾತಿಗೆ ಯಾವ ಉತ್ತರವನ್ನೂ ಹೇಳದೆ ಹೊರಟು ಹೋದ. ಹೆಗಲ ಮೇಲೆ ಒಂದು ವಸ್ತ್ರ ಹಾಕಿಕೊಂಡು ಒಮ್ಮೆಗೇ ಅಕ್ಷಯನ ಮನೆಗೆ ಬಂದ. ಅಕ್ಷಯ ಆಗ ಇಂಗ್ಲೀಷ್ ಗಣಿತಶಾಸ್ತ್ರಜ್ಞನೊಬ್ಬನ ಪುಸ್ತಕ ತೆಗೆದುಕೊಂಡು 'ಬುಕ್ ಕೀಪಿಂಗ್' ಕಲಿಯುತಿದ್ದ. ಯೋಗೇಂದ್ರ ಅವನ ಕಾಗದ ಪುಸ್ತಕ ಎಳೆದು ಹಾಕುತ್ತ, "ಇದೆಲ್ಲಾ ಆಮೇಲಾಗಲಿ, ಈಗ ನಿನ್ನ ಮದುವೆಯ ದಿನ ನಿಷ್ಕರ್ಷಿಸು" ಎಂದ.

"ಏನು ಹೇಳುತ್ತಿರುವೆ" ಎಂದ ಅಕ್ಷಯ.

೩೯

ಮರುದಿನ ಹೇಮನಳಿನಿ ಬೆಳಗ್ಗೆ ಎದ್ದು ಸಿದ್ಧಳಾಗಿ ಹೊರಬಂದಾಗ, ಅನ್ನದಾಬಾಬುಗಳು ತಮ್ಮ ಮಲಗುವ ಕೋಣೆಯ ಕಿಟಕಿಯ ಹತ್ತಿರ ಕ್ಯಾನ್ ವಾಸ್ ಒರಗು ಕುರ್ಚಿ ಎಳೆದುಕೊಂಡು ಕುಳಿತಿರುವುದನ್ನು ಕಂಡಳು. ಕೋಣೆಯಲ್ಲಿ ಅಷ್ಟೇನೂ ಸಾಮುಗ್ರಿಗಳಿಲ್ಲ. ಒಂದು ಮಂಚ, ಒಂದು ಮೂಲೆ ಯಲ್ಲಿ ಒಂದು ಅಲಮಾರಿ—ಒಂದು ಗೋಡೆಯಲ್ಲಿ ಅನ್ನದಾಬಾಬುಗಳ ದಿವಂಗತ ಹೆಂಡತಿಯ ಒಂದು ಕಟ್ಟು ಹಾಕಿದ ನೆರಳಿನಂತೆ ವಿಲೀಯಮಾನವಾದ ಛಾಯಾ ಚಿತ್ರ—ಅದರ ಎದುರುಗಡೆಯಲ್ಲಿ ಅವರ ಹೆಂಡತಿಯ ಕೈಯಿಂದ ಹಾಕಿದ ಒಂದು ಉಲನ್ ದಾರದ ಚಿತ್ರ ಹೆಂಡತಿ ಬದುಕಿದ್ದಾಗ ಅಲಮಾರಿ ಯಲ್ಲಿ ಅಲ್ಪಸ್ವಲ್ಪ ಮೋಜಿನ ಸಾಮುಗ್ರಿಗಳು ಯಾವ ರೀತಿ ಇಡಲಾಗಿತ್ತೋ ಇಂದೂ ಅದೇ ರೀತಿಯಲ್ಲೇ ಇರುವುವು.

ತಂದೆಯ ಹಿಂದುಗಡೆ ನಿಂತು ನರೆಗೂದಲು ಸವರುವ ನೆಪದಿಂದ ತಲೆಯ ಮೇಲೆ ಕೋಮಲವಾದ ಬೆರಳುಗಳನ್ನು ಓಡಾಡಿಸುತ್ತ ಹೇಮ, "ಅಪ್ಪಾ, ನಡೆಯಿರಿ, ಇಂದು ಹೊತ್ತಿಗೆ ಮುಂಚೆ ಚಹ ಕುಡಿಯೋಣ. ಆಮೇಲೆ ನಿಮ್ಮ ಹಿಂದಿನ ಕಾಲದ ಕತೆ ಕೇಳಬೇಕು – ಆ ಎಲ್ಲ ಮಾತುಗಳೂ ನನಗೆ ಎಷ್ಟು ಹಿಡಿಸುವುದೆಂಬುದನ್ನು ಹೇಳಲಾರೆ" ಎಂದಳು.

ಹೇಮನಳಿನಿಯ ಸಂಬಂಧವಾದ ಅರಿವಿನ ಶಕ್ತಿ ಅನ್ನದಾಬಾಬುಗಳಿಗೆ ಇತ್ತೀಚೆಗೆ ಅತಿ ತೀವ್ರವಾಗಿರುವುದು, ಚಹ ಕುಡಿಯಲು ಆತುರ ಪಡಿಸುವ ಕಾರಣವನ್ನು ತಿಳಿಯಲು ಅವರಿಗೆ ಕಾಲವಿಳಂಬವಾಗಲಿಲ್ಲ. ಸ್ವಲ್ಪ ಹೊತ್ತಾ ದರೆ ಅಕ್ಷಯ ಚಹದ ಮೇಜೆಯ ಬಳಿ ಸೇರುವ—ಅವನ ಕಣ್ಣಿಗೆ ಬೀಳದಿರು ವುದಕ್ಕಾಗಿಯೇ ಇಷ್ಟು ಬೇಗ ಚಹ ಕುಡಿದು ಮುಗಿಸಿ ಹೇಮ ತಂದೆಯ ಕೋಣೆಯಲ್ಲಿ ಗುಪ್ತವಾಗಿ ಆಶ್ರಯ ಪಡೆಯಲು ಆಶಿಸುತಿರುವಳು; ಇದನ್ನು ಅವರು ಕ್ಷಣಮಾತ್ರದಲ್ಲಿ ಅರಿತುಕೊಂಡರು. ಬೇಡನ ಭಯದಿಂದ ಹೆದರಿದ ಹೆಣ್ಣು ಜಿಂಕೆಯಂತೆ ತಮ್ಮ ಮಗಳು ಯಾವಾಗಲೂ ಭಯಗ್ರಸ್ತಳಾಗಿರುವುದು ಅವರ ಮನಸಿಗೆ ವ್ಯಥೆಯುಂಟುಮಾಡಿತು.

ಕೆಳಗೆ ಬಂದು ನೋಡಿದರೆ, ಆಳು ಇನ್ನೂ ಚಹಕ್ಕೆ ನೀರೇ ಸಿದ್ಧಪಡಿಸಿಲ್ಲ. ಹಠಾತ್ತನೆ ಅವನ ಮೇಲೆ ಕೋಪಿಸಿಕೊಂಡರು—ಇಂದು ನಿಯಮಿತ ಸಮ ಯಕ್ಕೆ ಮೊದಲೇ ಚಹಕ್ಕೆ ಬಂದಿರುವುದನ್ನು ತಿಳಿಸುವುದಕ್ಕಾಗಿ ಅವನು ವ್ಯರ್ಥವಾಗಿ ಪ್ರಯತ್ನಿಸಿದ. ಆಳುಗಳೆಲ್ಲರೂ ಯಜಮಾನರಾಗಿ ಹೋದರು. ಅವರ ಸೊಕ್ಕು ಇಳಿಸಬೇಕಾದರೆ ಬೇರೆ ಆಳುಗಳನ್ನು ನೇಮಿಸಿಕೊಳ್ಳಬೇಕು— ಈ ರೀತಿಯ ಅಭಿಪ್ರಾಯವನ್ನು ಅವರು ಅತ್ಯಂತ ನಿಃಸಂಶಯದಿಂದ ಹೊರ ಗೆಡಹಿದರು.

ಆಳು ಅವಸರ ಅವಸರವಾಗಿ ಚಹದ ನೀರು ಸಿದ್ಧಪಡಿಸಿ ತಂದ. ಇತರ ದಿನಗಳಲ್ಲಾಗಿದ್ದರೆ ಅನ್ನದಾಬಾಬುಗಳು ಹರಟೆ ಕೊಚ್ಚುತ್ತ ನಿಧಾನವಾಗಿ ಸ್ವಾರಸ್ಯವಾಗಿ—ಆರಾಮವಾಗಿ ಚಹ-ರಸಪಾನ ಮಾಡುತ್ತಿದ್ದರು. ಇಂದು ಆ ರೀತಿ ಮಾಡದೆ ಅನಾವಶ್ಯಕ ಆತುರದೊಡನೆ ಬಟ್ಟಲನ್ನು ಬರಿದುಮಾಡ ಲಾರಂಭಿಸಿದರು. ಹೇಮನಳಿನಿ ಸ್ವಲ್ಪ ಆಶ್ಚರ್ಯದಿಂದ, "ಅಪ್ಪಾ, ಈ ದಿನ ನೀವು ಅವಸರವಾಗಿ ಎಲ್ಲಿಗಾದರೂ ಹೋಗಬೇಕೆ ?" ಎಂದು ಕೇಳಿದಳು

"ಏನೂ ಇಲ್ಲ, ಏನೂ ಇಲ್ಲ. ಚಳಿಯ ದಿನವಲ್ಲಿ ಒಂದೇ ಗುಟುಕಿಗೆ ಬಿಸಿ ಚಹ ಕುಡಿದರೇನೇ ಶಾಖ ಬಂದು ಮೈ ಹಗುರವಾಗುವುದು" ಎಂದರು ಅನ್ನದಾಬಾಬುಗಳು.

ಅನ್ನದಾಬಾಬುಗಳ ಶರೀರದಲ್ಲಿ ಶಾಖ ವ್ಯಾಪಿಸಿರುವ ಮೊದಲೇ ಯೋಗೇಂದ್ರ ಅಕ್ಷಯನೊಡನೆ ಕೊಠಡಿಯೊಳಕ್ಕೆ ಬಂದ. ಇಂದು ಅಕ್ಷಯನ ವೇಷಭೂಷಣದಲ್ಲಿ ಒಂದು ಮುಖ್ಯ ವಿಶಿಷ್ಟತೆಯಿತ್ತು. ಕೈಯಲ್ಲಿ-ಬೆಳ್ಳಿ ಹಿಡಿ

ಹಾಕಿದ ಚಿತ್ತ–ಎದೆಯ ಬಳಿ ನೇತಾಡುವ ಸರಪಣಿ–ಎಡಗೈಯಲ್ಲಿ ಒಂದು ಬೂದು ಬಣ್ಣದ ಕಾಗದ ಸುತ್ತಿದ ಪುಸ್ತಕ. ಇತರ ದಿನಗಳಲ್ಲಿ ಅಕ್ಷಯ ಮೇಜಿನ ಯಾವ ಕಡೆಗೆ ಕೂತಿದ್ದನೋ ಇಂದು ಆ ಸ್ಥಳದಲ್ಲಿ ಕೂಡದೆ ಹೇಮ ನಳಿನಿಗೆ ಸ್ವಲ್ಪ ದೂರದಲ್ಲಿ ಒಂದು ಕುರ್ಚಿ ಎಳೆದುಕೊಂಡ—ನಗುಮುಖ ದೊಡನೆ, "ಇಂದು ನಿಮ್ಮ ಗಡಿಯಾರ ಮುಂದೋಡುತ್ತಿರುವುದು" ಎಂದ.

ಹೇಮನಳಿನಿ ಅಕ್ಷಯನ ಮುಖದ ಕಡೆ ನೋಡಲಿಲ್ಲ, ಅವನ ಮಾತಿಗೆ ಉತ್ತರವನ್ನೂ ಕೊಡಲಿಲ್ಲ. ಅನ್ನದಾಬಾಬುಗಳು "ಹೇಮ್, ಮೇಲಕ್ಕೆ ನಡೆಯಮ್ಮ, ನನ್ನ ಉಣ್ಣೆಯ ಬಟ್ಟೆಗಳನ್ನು ಒಮ್ಮೆ ಬಿಸಿಲಿಗೆ ಹಾಕಬೇಕು" ಎಂದರು. "ಅಪ್ಪಾ, ಬಿಸಿಲು ಓಡಿಹೋಗುವುದಿಲ್ಲವಲ್ಲ—ಇಷ್ಟು ಅವಸರ ವೇಕೆ? ಹೇಮ್, ಅಕ್ಷಯನಿಗೆ ಒಂದು ಬಟ್ಟಲು ಚಹ ಹಾಕಿಕೊಡು. ನನಗೂ ಚಹ ಬೇಕಾಗಿದೆ—ಆದರೆ ಮೊದಲು ಅತಿಥಿ" ಎಂದು ಯೋಗೇಂದ್ರ ಹೇಳಿದ.

ಅಕ್ಷಯ ನಕ್ಕು ಹೇಮನಳಿನಿಗೆ ಹೇಳಿದ, "ಕರ್ತವ್ಯ ಪಾಲನೆಗಾಗಿ ಎಷ್ಟು ಹಿರಿಯ ಆತ್ಮತ್ಯಾಗ ನೋಡಿರುವೆಯಾ? ಎರಡನೆಯ ಸರ್ ಫಿಲಿಪ್ ಸಿಡ್ನಿ"*.

ಹೇಮನಳಿನಿ ಅಕ್ಷಯನ ಮಾತಿಗೆ ಸ್ವಲ್ಪವೂ ಗಮನ ಕೊಡದೆ ಎರಡು ಲೋಟ ಚಹ ಸಿದ್ಧಪಡಿಸಿ ಒಂದು ಲೋಟವನ್ನು ಯೋಗೇಂದ್ರನಿಗೆ ಕೊಟ್ಟಳು. ಮತ್ತೊಂದು ಲೋಟವನ್ನು ಅಕ್ಷಯನ ಎದುರಿಗೆ ಸ್ವಲ್ಪ ತಳ್ಳಿಟ್ಟು ಅನ್ನದಾ ಬಾಬುಗಳ ಮುಖದತ್ತ ನಿಟ್ಟಿಸಿದಳು.

"ಬಿಸಿಲು ಹೆಚ್ಚಾದರೆ ಕಷ್ಟವಾಗುವುದು – ನಡೆ, ಈಗಲೇ ನಡೆ" ಎಂದರು ಅನ್ನದಾಬಾಬುಗಳು.

"ಈ ದಿನ ಬಟ್ಟೆ ಬಿಸಿಲಿಗೆ ಹಾಕುವುದು ಬೇಡ. ಅಕ್ಷಯ ಬಂದಿರುವ—" ಎಂದ ಯೋಗೇಂದ್ರ.

---

*ಸರ್ ಫಿಲಿಪ್‌ಸಿಡ್ನಿ—ಒಬ್ಬ ಇಂಗ್ಲೀಷ್ ಸೇನಾನಾಯಕ. ಮಹಾಸ್ವಾರ್ಥ ತ್ಯಾಗಿ. ಯುದ್ಧವೊಂದರಲ್ಲಿ ಈಗ ಗಾಯಗೊಂಡು ಬಿದ್ದಿರುವನು. ನೀರು ಸಿಕ್ಕು ವುದು ಕಷ್ಟವಾಗಿತ್ತು. ಆಗ ಯಾರೋ ಇವನಿಗೆ ಒಂದು ಲೋಟಾ ನೀರು ತಂದು ಕೊಡುವರು. ಇವನು ಅದನ್ನು ಕುಡಿಯಲೆತ್ನಿಸುವವೇಳೆ ಎದುರಿನಲ್ಲಿ ಹೆಚ್ಚು ಗಾಯಗೊಂಡು ನರಳುತ್ತಲಿದ್ದ ಸೈನಿಕನೊಬ್ಬ ಆ ನೀರನ್ನು ದೃಷ್ಟಿಸಿ ನೋಡುತಿದ್ದು ದನ್ನು ಕಾಣುವನು. ತಕ್ಷಣ ನಿನ್ನ ಆವಶ್ಯಕತೆ ನನ್ನದಕ್ಕಿಂತ ಹೆಚ್ಚು ಎಂದು ಹೇಳಿ ಆ ನೀರನ್ನು ಅವನಿಗೆ ಕುಡಿಯಲು ಕೊಡಿಸಿ ತಾನು ಪ್ರಾಣಬಿಡುವನು.

ಹಠಾತ್ತನೆ ಅನ್ನದಾಬಾಬುಗಳು ಉದ್ರೇಕಗೊಂಡು ನುಡಿದರು, " ಕೇವಲ ನಿನ್ನದೆಲ್ಲವೂ ಬಲಾತ್ಕಾರವೆ. ನೀನು ಸುಮ್ಮನೆ ಹಟ ಹಿಡಿದು ಇತರರ ಮರ್ಮಾಂತಿಕ ವೇದನೆಯ ಮೇಲಿಂದ ಸ್ವಂತ ಇಷ್ಟ ನೆರವೇರಿಸಿಕೊಳ್ಳಲು ಬಯಸುವೆ. ಅನೇಕ ದಿನದಿಂದ ನಾನು ಸುಮ್ಮನೆ ಸಹಿಸಿಕೊಂಡಿರುವೆ, ಇನ್ನು ಆ ರೀತಿ ನಡೆಯಲಾರದು. ತಾಯಿ ಹೇಮ್, ನಾಳೆಯಿಂದ ನಾವಿಬ್ಬರೂ ಮೇಲಿನ ಕೋಣೆಯಲ್ಲೇ ಚಹ ಕುಡಿಯೋಣ ".

ಹೀಗೆ ಹೇಳಿ ಹೇಮಳನ್ನು ಕರೆದುಕೊಂಡು ಅನ್ನದಾಬಾಬುಗಳು ಹೊರಡಲು ಉದ್ಯುಕ್ತರಾದಾಗ ಹೇಮ ಶಾಂತ ಸ್ವರದಲ್ಲಿ, " ಅಪ್ಪಾ, ಸ್ವಲ್ಪ ಕುಳಿತುಕೊಳ್ಳಿ. ಇಂದು ನೀವು ಸರಿಯಾಗಿ ಚಹ ಕುಡಿಯಲಿಲ್ಲ. ಅಕ್ಷಯ ಬಾಬು, ಕಾಗದದಲ್ಲಿ—ಸುತ್ತಿರುವ ಆ ರಹಸ್ಯ ಯಾವುದು, ಏನೆಂದು ಕೇಳ ಬಹುದೆ ? " ಎಂದಳು.

ಅಕ್ಷಯ ಹೇಳಿದ, " ಕೇಳುವುದೇ ಏಕೆ, ಈ ರಹಸ್ಯ ಭೇದವನ್ನೂ ಮಾಡಬಹುದು" ಎಂದು ಹೇಳಿ ಕಟ್ಟನ್ನು ಹೇಮನಳಿನಿಯ ಕಡೆಗೆ ನೀಡಿ ಹಿಡಿದ.

ಹೇಮ್ ಬಿಚ್ಚಿನೋಡಿದಳು, ಒಂದು ಮೊರಕ್ಕೋ ಚರ್ಮದ ಹೊದಿಕೆಯ 'ಟೆನಿಸನ್'. ಕೂಡಲೇ ಚಮಕಿತಳಾಗಿ ಅವಳ ಮುಖ ಕೆಂಪೇರಿತು. ಇದೇ 'ಟೆನಿಸನ್,' ಹೀಗೇ ರಟ್ಟು ಹಾಕಿದ್ದು, ಹಿಂದೆ ಅದು ಬಹುಮಾನವಾಗಿ ಬಂದಿತ್ತು—ಅದೇ ಪುಸ್ತಕ ಇಂದಿಗೂ ಅವಳ ಮಲಗುವ ಮನೆಯ ಅಲ ಮಾರಿಯ ನಡುವೆ ರಹಸ್ಯವಾಗಿ ಆದರದೊಡನೆ ರಕ್ಷಿತವಾಗಿರುವುದು.

ಯೋಗೇಂದ್ರ ತುಸು ನಕ್ಕು ಹೇಳಿದ, " ರಹಸ್ಯ ಇನ್ನೂ ಸಂಪೂರ್ಣ ವಾಗಿ ಬಗೆ ಹರಿದಿಲ್ಲ" ಹೀಗೆಂದು ಪುಸ್ತಕದ ಪ್ರಾರಂಭದ ಬರಿಯ ಹಾಳೆ ತೆರೆದು ಅವಳ ಕೈಗೆ ಎತ್ತಿ ಕೊಟ್ಟ.

ಆ ಹಾಳೆಯಲ್ಲಿ—ಶ್ರೀಮತಿ ಹೇಮನಳಿನಿಗೆ ಅಕ್ಷಯನ ಒಲುಮೆಯ ಕಾಣಿಕೆ ಮಾನ—ಎಂದು ಬರೆಯಲಾಗಿತ್ತು.

ಒಡನೆ ಪುಸ್ತಕ ಹೇಮಳ ಕೈಯಿಂದ ಒಮ್ಮೆಗೇ ನೆಲದ ಮೇಲೆ ಬಿದ್ದಿತು ಮತ್ತು ಅದರ ಕಡೆಗೆ ಅವಳು ಸ್ವಲ್ಪವೂ ಗಮನ ಕೊಡದೆ, " ಅಪ್ಪಾ ನಡೆಯಿರಿ " ಎಂದಳು.

ಇಬ್ಬರೂ ಕೋಣೆಯಿಂದ ಹೊರಹೊರಟರು. ಯೋಗೇಂದ್ರನ ಎರಡು ಕಣ್ಣುಗಳೂ ಅಗ್ನಿಯಂತೆ ಜ್ವಲಿಸಲಾರಂಭಿಸಿದವು. ಅವನು, "ಇಲ್ಲ, ನಾನಿನ್ನು ಇಲ್ಲಿರಲಾರೆ. ನಾನು ಎಲ್ಲಾದರೂ ಒಂದು ಶಾಲಾ ಮಾಸ್ತರ ಕೆಲಸ ನೋಡಿ ಕೊಂಡು ಇಲ್ಲಿಂದ ಹೊರಟು ಹೋಗುವೆ" ಎಂದ.

"ಗೆಳೆಯನೇ, ನೀನು ವ್ಯರ್ಥವಾಗಿ ಕೋಪಿಸಿಕೊಳ್ಳುತಿರುವೆ. ನೀನು ತಪ್ಪು ತಿಳಿದುಕೊಂಡಿರುವೆ ಎಂದು ನಾನು ಆಗಲೇ ಸಂದೇಹ ವ್ಯಕ್ತಪಡಿಸಿದೆ. ನೀನು ನನಗೆ ಒಂದೇ ಸಮ ನಂಬಿಕೆ ಹೇಳುತಿದ್ದುದರಿಂದ ನಾನು ಧೈರ್ಯ ವಾಗಿದ್ದೆ, ಆದರೆ ನನ್ನ ವಿಷಯದಲ್ಲಿ ಹೇಮ್‌ನಳಿನಿಯ ಮನ ಎಂದಿಗೂ ಅನು ಕೂಲವಾಗುವುದಿಲ್ಲ, ಎಂದು ನಾನು ಖಂಡಿತ ಹೇಳುವೆ. ಅದರಿಂದ ಆ ಆಸೆ ಬಿಟ್ಟುಬಿಡು. ಆದರೆ ನಿಜವಾದ ಸಂಗತಿ ಇಷ್ಟು—ಅವಳು ಯಾವುದರಿಂದ ರಮೇಶನನ್ನು ಮರೆಯಬಲ್ಲಳೋ, ಅದನ್ನು ಮಾಡುವುದು ನಿನ್ನ ಕರ್ತವ್ಯ" ಎಂದು ಅಕ್ಷಯ ಹೇಳಿದ.

"ನೀನು ಕರ್ತವ್ಯ ಹೇಳುವೆಯಲ್ಲ—ಉಪಾಯ ಹೇಳು ಎಂದ ಯೋಗೇಂದ್ರ.

ಅಕ್ಷಯ, "ನನ್ನ ಹೊರತು ಜಗತ್ತಿನಲ್ಲಿ ಮದುವೆಯಾಗತಕ್ಕ ಬೇರೆ ತರು ಣರು ಇಲ್ಲವೇ ಇಲ್ಲವೇನು. ನೀನೇ ಒಂದು ವೇಳೆ ನಿನ್ನ ತಂಗಿಯಾಗಿದ್ದಿದ್ದರೆ, ಆಗ ನನ್ನ ಬ್ರಹ್ಮಚಾರಿ ಹೆಸರು ತೊಡೆದುಹಾಕಲು ಹಿರಿಯರುಗಳು ಹತಾಶರಾಗಿ ದಿನ ಎಣಿಸಬೇಕಾಗುತಿರಲಿಲ್ಲ ಎಂಬುದನ್ನು ನಾನು ಬಲ್ಲೆ. ಹೇಗೇ ಆಗಲಿ, ನೋಡಿದ ಕೂಡಲೇ ಬಟ್ಟೆ ಬಿಸಿಲಿಗೆ ಹಾಕಬೇಕೆಂಬ ಆಸೆ ಉದ್ರೇಕಗೊಳ್ಳುವಂಥ ಅನುಕೂಲ ಪಾತ್ರ ಹುಡುಕಬೇಕು" ಎಂದ.

ಯೋಗೇಂದ್ರ—ಸಲಹೆಯಂತೆ ಸರಿಯಾದ ಪಾತ್ರ ದೊರೆಯುವುದಿಲ್ಲ.

ಅಕ್ಷಯ—ನೀನು ಸಂಪೂರ್ಣವಾಗಿ ಇಷ್ಟು ಅಲ್ಪ ಕಾರ್ಯ ಕೈ ಬಿಟ್ಟು ಬಿಟ್ಟು ಕುಳಿತುಕೊಳ್ಳುವೆಯೇಕೆ? ವರನ ಸಂಧಾನ ನಾನು ಹೇಳಬಲ್ಲೆ, ಆದರೆ ಆತುರ ಪಟ್ಟರೆ ಎಲ್ಲವೂ ಮಣ್ಣಾಗಿ ಹೋಗುವುದು. ಮೊದಲೇ ಮದುವೆಯ ಮಾತು ಹೇಳಿ ಇಬ್ಬರನ್ನೂ ಗಾಬರಿಗೊಳಿಸಿದರೆ ನಡೆಯದು. ಮೆಲ್ಲಮೆಲ್ಲಗೆ ಮಾತು ಕತೆ ನಡೆಯಲಿ, ಆ ಬಳಿಕ ಸಮಯ ನೋಡಿ ದಿನ ತೀರ್ಮಾನಿಸಬೇಕು.

ಯೋಗೇಂದ್ರ—ಕ್ರಮ ಅತಿ ಉತ್ತಮವಾಗಿದೆ, ಆದರೆ ವರ ಯಾರೆಂದು ಹೇಳು.

ಅಕ್ಷಯ—ನಿನಗೆ ಅಷ್ಟು ಸರಿಯಾಗಿ ಅವನ ಪರಿಚಯವಿಲ್ಲ, ಆದರೂ ನೋಡಿರುವೆ. ಡಾಕ್ಟರ್ ನಳಿನಾಕ್ಷ.

ಯೊಗೇಂದ್ರ—ನಳಿನಾಕ್ಷ !

ಅಕ್ಷಯ—ಗಾಬರಿಯೇಕೆ. ಅವನ ವಿಷಯದಲ್ಲಿ ಬ್ರಹ್ಮಸಮಾಜದಲ್ಲಿ ಏನೇನೋ ಮಾತು ನಡೆಯುವುದು, ನಡೆದುಕೊಂಡು ಹೋಗಲಿ, ಹೀಗೆಂದು ಇಂಥ ವರನನ್ನು ಕೈ ಬಿಟ್ಟುಬಿಡುವುದೆ ?

ಯೋಕೇಂದ್ರ—ನಾನು ಕೈ ಎತ್ತಿದ ಕೂಡಲೇ ಇಂಥವರ ಕೈ ಬಿಟ್ಟು ಹೋಗುವುದು, ಹಾಗಿದ್ದಿದ್ದರೆ ಯೋಚನೆ ಏನಿತ್ತು. ಆದರೆ ನಳಿನಾಕ್ಷ ಮದುವೆಯಾಗಲು ಸಮ್ಮತಿಸುವನೆ ?

ಅಕ್ಷಯ—ಇಂದೇ ಸಾಧ್ಯವೆಂದು ಹೇಳಲಾರೆ—ಆದರೆ ತಕ್ಕ ಕಾಲದಲ್ಲಿ ಆಗದೆ ಹೋಗುವುದೆ ? ಯೋಗೇನ್, ನನ್ನ ಮಾತು ಕೇಳು. ನಾಳೆ ನಳಿನಾಕ್ಷ ಭಾಷಣ ಮಾಡುವ ದಿನ—ಆ ಭಾಷಣಕ್ಕೆ ಹೇಮನಳಿನಿಯನ್ನು ಕರೆದುಕೊಂಡು ಹೋಗು. ಅವನಿಗೆ ಚೆನ್ನಾಗಿ ಮಾತನಾಡಬಲ್ಲ ಸಾಮರ್ಥ್ಯವಿದೆ. ಹೆಂಗಸರ ಮನ-ಆಕರ್ಷಿಸುವ ವಿಷಯದಲ್ಲಿ ಅವನ ಶಕ್ತಿ ಅಲಕ್ಷಿಸುವಂಥಾದ್ದಲ್ಲ. ಅಯ್ಯೋ, ಬಾಯಿ ಮಾಡುವ ಗಂಡನಿಗಿಂತ ಕಿವಿ ಉಪಯೋಗಿಸುವ ಗಂಡ ಮೇಲು ಎಂದು ಈ ಮೂಢ ಹುಡುಗಿಯರಿಗೆ ತಿಳಿಯುವುದೇ ಇಲ್ಲವಲ್ಲ.

ಯೋಗೇಂದ್ರ—ಹಾಗಾದರೆ ನಳಿನಾಕ್ಷನ ಸಮಾಚಾರವೇನು ? ವಿವರಿಸಿ ಹೇಳು, ಕೇಳುವೆ.

ಅಕ್ಷಯ—ನೋಡು ಯೋಗೇನ, ಸಮಾಚಾರದಲ್ಲಿ ಅಲ್ಪಸ್ವಲ್ಪ ದೋಷ ಇರಬಹುದು ಅದಕ್ಕಾಗಿ ಹೆಚ್ಚು ಕಳವಳಪಡಬಾರದು. ಅಲ್ಪಸ್ವಲ್ಪ ಹುಳುಕಿನಿಂದಲೇ ದುರ್ಲಭವಾದ ವಸ್ತು ಸುಲಭವೇ ಆಗುವುದು—ಅದನ್ನು ನಾನು ಅನುಕೂಲವೆಂದೇ ತಿಳಿಯುವೆ.

ಅಕ್ಷಯ ನಳಿನಾಕ್ಷನ ಜೀವನ ಚರಿತ್ರೆ ಹೇಳಿದನಲ್ಲ, ಅದರ ಸಾರಾಂಶ ಇದು—

ನಳಿನಾಕ್ಷನ ತಂದೆ ರಾಜ ವಲ್ಲಭರು ಫರೀದ್ ಪುರದ ಎಲ್ಲೆಯಲ್ಲಿ ಒಬ್ಬ ಸಾಮಾನ್ಯ ಜಮೀನ್ದಾರರಾಗಿದ್ದರು. ಅವರ ಮೂವತ್ತನೆಯ ವಯಸಿನಲ್ಲಿ ಅವರು ಬ್ರಾಹ್ಮಧರ್ಮದ ದೀಕ್ಷೆ ತೆಗೆದುಕೊಂಡರು. ಆದರೆ ಅವರ ಹೆಂಡತಿ ಯಾವ ಬಗೆಯಲ್ಲೂ ಗಂಡನ ಧರ್ಮ ಅನುಸರಿಸಲಿಲ್ಲ ಮತ್ತು ಆಚಾರ ವಿಚಾರ

ಗಳಲ್ಲಿ ಅವರು ಬಹಳ ವಾದಮಾಡುತ್ತ ಗಂಡನೊಡನೆ ಸ್ವಾತಂತ್ರ್ಯ ಉಳಿಸಿ-ಕೊಂಡು ನಡೆಯಲಾರಂಭಿಸಿದಳು—ಹೆಚ್ಚು ಹೇಳಬೇಕಾಗಿಲ್ಲ, ಇದು ರಾಜ-ವಲ್ಲಭರಿಗೆ ಸುಖಕರವಾಗಿಲ್ಲ. ಅವರ ಮಗ ನಳಿನಾಕ್ಷ ಧರ್ಮಪ್ರಚಾರದ ಉತ್ಸಾಹದಿಂದಲೂ ವಾಚಾಳಿತನದಿಂದಲೂ ತಕ್ಕ ವಯಸಿನಲ್ಲಿ ಬ್ರಹ್ಮಸಮಾಜ-ದಲ್ಲಿ ಗೌರವ ಗಳಿಸಿಕೊಂಡ. ಅವನು ಸರ್ಕಾರಿ ಡಾಕ್ಟರಾಗಿ ಬಂಗಾಳದ ನಾನಾ ಭಾಗಗಳಲ್ಲಿ ತಂಗಿದ್ದು ಪರಿಶುದ್ಧ ನಡವಳಿಕೆ, ಚಿಕಿತ್ಸೆಯ ನೈಪುಣ್ಯ ಹಾಗೂ ಒಳ್ಳೆಯ ಕೆಲಸದ ಮೂಲಕ ಎಲ್ಲೆಡೆಯೂ ಕೀರ್ತಿ ವಿಸ್ತರಿಸುತ್ತ ಬಂದಿರುವ.

ಇಷ್ಟರಲ್ಲಿ ಒಂದು ನಡೆಯಬಾರದ ಸಂಗತಿ ಘಟಿಸಿತು. ಮುದಿ ವಯಸಿ-ನಲ್ಲಿ ರಾಜವಲ್ಲಭ ಓರ್ವ ವಿಧವೆಯನ್ನು ಮದುವೆಯಾಗಲು ಇದ್ದಕ್ಕಿದ್ದಂತೆ ಉನ್ಮತ್ತರಂತಾದರು. ಯಾರಿಂದಲೂ ಅವರನ್ನು ತಡೆಯಲಾಗಲಿಲ್ಲ. ರಾಜ-ವಲ್ಲಭರು ಹೇಳತೊಡಗಿದರು, "ನನ್ನ ಈಗಿನ ಹೆಂಡತಿ ನನ್ನ ಯಥಾರ್ಥ ಸಹಧರ್ಮಿಣಿಯಲ್ಲ—ಯಾರೊಡನೆ ಧರ್ಮದಲ್ಲಿ, ಅಭಿಪ್ರಾಯದಲ್ಲಿ, ವ್ಯವ-ಹಾರದಲ್ಲಿ, ಹೃದಯದಲ್ಲಿ ಐಕ್ಯತೆ ದೊರೆಯುವುದೋ ಅವರನ್ನು ಹೆಂಡತಿ-ಯನ್ನಾಗಿ ಪರಿಗ್ರಹಿಸದಿದ್ದರೆ ಅನ್ಯಾಯವಾಗುವುದು" ಹೀಗೆ ಹೇಳಿ ರಾಜ-ವಲ್ಲಭರು ಜನಸಾಮಾನ್ಯರ ತಿರಸ್ಕಾರದ ನಡುವೆ ಪಟ್ಟು ಹಿಡಿದು ಆ ವಿಧವೆ-ಯನ್ನು ಹಿಂದೂ ಧರ್ಮಶಾಸ್ತ್ರದಂತೆ ಮದುವೆ ಮಾಡಿಕೊಂಡರು.

ಇದಾದ ನಂತರ ನಳಿನಾಕ್ಷನ ತಾಯಿ ಮನೆ ಬಿಟ್ಟು ಕಾಶಿಗೆ ಹೋಗಲು ಸಿದ್ಧಳಾದಳು. ನಳಿನಾಕ್ಷ ರಂಗಪುರದ ಡಾಕ್ಟರ್‌ಗಿರಿ ಬಿಟ್ಟು ಬಂದು, "ಅಮ್ಮಾ, ನಾನೂ ನಿನ್ನ ಸಂಗಡ ಕಾಶಿಗೆ ಬರುವೆ" ಎಂದು ಹೇಳಿದ.

ತಾಯಿ ಅಳುತ್ತ ಹೇಳಿದಳು, "ಮಗೂ, ನನಗೂ ನಿನಗೂ ಸ್ವಲ್ಪವೂ ಹೊಂದದು, ಸುಮ್ಮನೆ ಕಷ್ಟಪಡುವೆಯೇಕೆ?"

"ನಿನ್ನೊಡನೆ ನನಗೆ ಯಾವುದೂ ಹೊಂದಿಕೆಯಾಗದಿರದು" ಎಂದ ನಳಿನಾಕ್ಷ.

ನಳಿನಾಕ್ಷ ತನ್ನ ಈ ಗಂಡಬಿಟ್ಟ ಅವಮಾನಿತಳಾದ ತಾಯಿಯನ್ನು ಸುಖಿಯನ್ನಾಗಿ ಮಾಡಲು ದೃಢಸಂಕಲ್ಪ ಮಾಡಿದ. ಆಕೆಯೊಡನೆ ಕಾಶಿಗೆ ತೆರಳಿದ. ತಾಯಿ, "ಅಪ್ಪಾ, ಮನೆಗೆ ಸೊಸೆ ಬರಬೇಡವೆ?" ಎಂದು ಕೇಳಿದಳು.

ನಳಿನಾಕ್ಷ ಗೊಂದಲಕ್ಕೆ ಸಿಕ್ಕಿಕೊಂಡ. "ಅವಶ್ಯಕತೆಯೇನಮ್ಮಾ? ನೆಮ್ಮದಿಯಿಂದಿರುವೆ" ಎಂದು ಹೇಳಿದ.

ನಳಿನ ಬಹಳವಾಗಿ ತ್ಯಾಗಮಾಡಿರುವ, ಆದರೂ ಬ್ರಹ್ಮಸಮಾಜದ ಹೊರಗೆ ಮದುವೆಯಾಗಲು ಸಿದ್ಧನಿಲ್ಲವೆಂದು ತಾಯಿ ಅರಿತಳು. ದುಗುಡ ದಿಂದ ಆಕೆ ಹೇಳಿದಳು, "ಮಗೂ ನನಗಾಗಿ ನೀನು ಜೀವಮಾನವೆಲ್ಲಾ ಸಂನ್ಯಾಸಿಯಾಗಿಯೇ ಉಳಿಯುವುದೆ, ಇದು ಎಂದಿಗೂ ಸಾಧ್ಯವಿಲ್ಲ. ನಿನಗೆ ಎಲ್ಲಿ ಇಷ್ಟವೋ ಅಲ್ಲಿ ಮದುವೆಯಾಗಪ್ಪಾ ನಾನು ಎಂದಿಗೂ ತಡೆ ಹೇಳುವುದಿಲ್ಲ".

ನಳಿನ ಒಂದೆರಡು ದಿನ ಸ್ವಲ್ಪ ಯೋಚನೆ ಮಾಡಿ, "ನೀನು ಮನಸ್ಸಿ ಗೊಪ್ಪುವಂತಹ ಒಬ್ಬ ಸೊಸೆಯನ್ನು ನಾನು ಕರೆತಂದು ನಿನ್ನ ದಾಸಿ ಯನ್ನಾಗಿ ಮಾಡುವೆ—ನಿನ್ನೊಡನೆ ಯಾವ ವಿಷಯದಲ್ಲೂ ಹೊಂದಿಕೆಯಾಗ ದಿರಬಾರದು, ನಿನಗೆ ದುಃಖವುಂಟುಮಾಡುವಂಥ ಸೊಸೆಯನ್ನು ನಾನೆಂದಿಗೂ ಮನೆಯೊಳಕ್ಕೆ ಕರೆತರಲಾರೆ" ಎಂದು ನುಡಿದನು.

ಹೀಗೆ ಹೇಳಿ ನಳಿನ ಹೆಣ್ಣು ಹುಡುಕತ್ತ ವಂಗದೇಶಕ್ಕೆ ಬಂದಿದ್ದ ಆ ಬಳಿಕ ಚರಿತ್ರೆಯ ನಡುವೆ ಸ್ವಲ್ಪ ವಿಚ್ಛೇದವಿದೆ- ರಹಸ್ಯವಾಗಿ ಅವನು ಒಂದು ಹಳ್ಳಿಗೆ ಹೋಗಿ ಯಾವಳೋ ಅನಾಥಳನ್ನು ಮದುವೆಯಾಗಿದ್ದನೆಂದೂ ಮದುವೆಯಾದ ಕೂಡಲೇ ಅವನಿಗೆ ಸ್ತ್ರೀವಿಯೋಗವಾಯಿತೆಂದೂ ಯಾರೋ ಹೇಳಿದರು. ಕೆಲವರು ಆ ವಿಷಯದಲ್ಲಿ ಸಂದೇಹ ವ್ಯಕ್ತಪಡಿಸಿದರು. ಮದುವೆ ಯಾಗಲು ಬಂದು ಕಡೆಯ ಘಳಿಗೆಯಲ್ಲಿ ಅವನು ಹಿಂದಿರುಗಿ ಹೋಗಿರಬೇಕು, ಎಂದು ಅಕ್ಷಯನ ನಂಬಿಕೆ.

ಏನೇ ಆಗಲಿ, ಈಗ ನಳಿನಾಕ್ಷ ಯಾರನ್ನು ಒಪ್ಪಿ ಮದುವೆಯಾಗು ವನೋ, ಅವನ ತಾಯಿ ಅದಕ್ಕೆ ಅಡ್ಡಿ ಹೇಳದೆ ಸಂತೋಷಗೊಳ್ಳುವಳು. ಹೇಮನಳಿನಿಯಂಥ ಉತ್ತಮ ಹುಡುಗಿ ನಳಿನಾಕ್ಷನಿಗೆ ಎಲ್ಲಿ ದೊರೆಯಬೇಕು. ಬೇರೆ ಏನೇ ಆಗಲಿ, ಹೇಮಳ ಮೃದು ಸ್ವಭಾವ ಇದೆಯಲ್ಲ, ಅದರಿಂದ ಅವಳು ತನ್ನ ಅತ್ತೆಗೆ ಬೇಕಾದಷ್ಟು ಭಕ್ತಿ ಶ್ರದ್ಧೆ ತೋರಿಸಿ ನಡೆದುಕೊಳ್ಳುವಳು, ಯಾವ ಬಗೆಯಲ್ಲೂ ಅವಳಿಗೆ ಕಷ್ಟಕೊಡುವುದಿಲ್ಲ, ಈ ವಿಷಯದಲ್ಲಿ ಸಂದೇಹವೇ ಇಲ್ಲ. ನಳಿನಾಕ್ಷ ಎರಡು ದಿನ ಚೆನ್ನಾಗಿ ಹೇಮಳನ್ನು ನೋಡಿದ್ದಾದರೆ ಅವನ್ನು ಅರಿತು ಕೊಳ್ಳುವನು, ಎಂದು ಅಕ್ಷಯನ ಅಭಿಪ್ರಾಯ. ಅದರಿಂದ ಅಕ್ಷಯನ ಸಲಹೆಯೇನೆಂದರೆ ಹೇಗಾದರೂ ಇಬ್ಬರಿಗೂ ಪರಿಚಯವುಂಟುಮಾಡಬೇಕು ಎಂದು.

೪೦

ಅಕ್ಷಯ ಹೊರಟುಹೋದ ಕೂಡಲೇ ಯೋಗೇಂದ್ರ ಮಹಡಿ ಹತ್ತಿ ಹೋದ. ಮೇಲಿನ ಕುಳಿತುಕೊಳ್ಳುವ ಕೋಣೆಯಲ್ಲಿ ಹೇಮನಳಿನಿಯನ್ನು ಹತ್ತಿರ ಕುಳ್ಳಿರಿಸಿಕೊಂಡು ಅನ್ನದಾಬಾಬುಗಳು ಮಾತಾಡುವುದನ್ನು ನೋಡಿದ. ಯೋಗೇಂದ್ರನನ್ನು ನೋಡಿ ಅನ್ನದಾಬಾಬುಗಳು ಸ್ವಲ್ಪ ನಾಚಿಕೊಂಡರು. ಇಂದು ಚಹದ ಮೇಜೆಯ ಬಳಿ ಅವರ ಸ್ವಾಭಾವಿಕ ಶಾಂತಭಾವ ನಷ್ಟವಾಗಿ ಇದ್ದಕ್ಕಿದ್ದಂತೆ ಅವರ ರೋಷ ಬಹಿರಂಗವಾಯಿತು, ಇದರಿಂದಲೇ ಅವರ ಮನ ಸಿನಲ್ಲಿ ಕಳವಳವಿತ್ತು. ಕೂಡಲೇ ಅತಿ ಉಪಚಾರ ಸ್ವರದಲ್ಲಿ, "ಬಾ ಯೋಗೇಂದ್ರ, ಕುಳಿತುಕೋ" ಎಂದರು.

"ಅಪ್ಪಾ, ನೀವು ಆಗಾಗ ಹೊರಗಡೆ ಹೋಗಿ ಬರುವುದನ್ನು ಸಂಪೂರ್ಣ ವಾಗಿ ಬಿಟ್ಟು ಬಿಟ್ಟಿರುವಿರಿ. ಇಬ್ಬರೂ ರಾತ್ರಿಹಗಲೂ ಕೋಣೆಯಲ್ಲಿ ಕುಳಿತಿರುವುದು ಒಳ್ಳೆಯದೇನು ?" ಎಂದು ಯೋಗೇಂದ್ರ ಕೇಳಿದ.

ಅನ್ನದಾಬಾಬುಗಳು ಹೇಳಿದರು, "ಇಲ್ಲಿ ಕೇಳು ನಾನಾದರೋ ಅನೇಕ ದಿನ ಈ ರೀತಿ ಕೊಠಡಿಯಲ್ಲಿ ಕುಳಿತೇ ಕಳೆದಿರುವೆ. ಆದರೆ ಹೇಮಳನ್ನು ಮನೆಬಿಟ್ಟು ಹೊರಡಿಸಬೇಕಾದರೆ ತಲೆ ಚಚ್ಚಿಕೊಳ್ಳಬೇಕಾಗುವುದು.

ಹೇಮ, "ಅಪ್ಪಾ, ನನ್ನ ಮೇಲೆ ತಪ್ಪು ಹೊರಿಸುವಿರೇಕೆ. ನೀವು ನನ್ನನ್ನು ಕರೆದುಕೊಂಡು ಎಲ್ಲಿಗಾದರೂ ಹೋಗಬೇಕಾದರೆ, ಹೊರಡಿರಿ" ಎಂದಳು.

ಹೇಮನಳಿನಿ ತನ್ನ ಪ್ರಕೃತಿಗೆ ವಿರುದ್ಧವಾಗಿ ಹೋಗಿಯೂ, ತನ್ನ ಮನದಲ್ಲಿ ಒಂದು ಶೋಕ ಅದುಮಿಟ್ಟುಕೊಂಡು ಕೋಣೆಯ ಮಣ್ಣಿನಲ್ಲಿ ಹೊರಳಿಬಿದ್ದಿಲ್ಲ ಎಂದು ಸ್ಪಷ್ಟಪಡಿಸಲು ಆಶಿಸಿದಳು. ಅವಳ ನಾಲ್ಕೂ ಕಡೆಯಲ್ಲಿ ನಡೆಯುವ ಅಲ್ಪಸ್ವಲ್ಪ ಸಂಗತಿಗಳೂ ಅವಳ ಕುತೂಹಲವನ್ನು ಅತ್ಯಂತ ಸಜೀವಗೊಳಿಸುವುದು.

"ಅಪ್ಪಾ, ನಾಳೆ ಒಂದು ಸಭೆ ಇದೆ, ಅಲ್ಲಿಗೆ ಹೇಮಳನ್ನು ಕರೆದುಕೊಂಡು ಬನ್ನಿ ಮತ್ತೆ—" ಎಂದ ಯೋಗೇಂದ್ರ.

ಸಭೆಯ ಜನಜಂಗುಳಿಯ ನಡುವೆ ಬರಲು ಹೇಮನಳಿನಿ ಅನೇಕ ದಿನ ಗಳಿಂದ ಗುಪ್ತ ಅಸಮ್ಮತಿಯನ್ನೂ ಸಂಕೋಚವನ್ನೂ ಅನುಭವಿಸುತ್ತಿರುವಳು

ಎಂದು ಅನ್ನದಾಬಾಬುಗಳು ಬಲ್ಲರು—ಅದರಿಂದಲೇ ಅವರು ಏನೂ ಹೇಳದೆ ಒಮ್ಮೆ ಹೇಮಳ ಮುಖದ ಕಡೆ ನಿಟ್ಟಿಸಿದರು.

ಹೇಮ ಕೂಡಲೇ ಒಂದು ಅಸ್ವಾಭಾವಿಕ ಉತ್ಸಾಹ ವ್ಯಕ್ತಪಡಿಸುತ್ತ ಹೇಳಿದಳು, "ಸಭೆಯೇ? ಅಲ್ಲಿ ಯಾರು ಭಾಷಣಮಾಡುವರಣ್ಣಾ?".

ಯೋಗೇಂದ್ರ—ಡಾಕ್ಟರ್ ನಳಿನಾಕ್ಷ.

ಅನ್ನದಾ—ನಳಿನಾಕ್ಷ!

ಯೋಗೇಂದ್ರ—ಬಹಳ ಚೆನ್ನಾಗಿ ಮಾತನಾಡುವ. ಅಷ್ಟೇ ಅಲ್ಲ, ಅವನ ಜೀವನ ಚರಿತ್ರೆ ಕೇಳಿದರೆ ಆಶ್ಚರ್ಯವಾಗುವುದು. ಇಂಥ ತ್ಯಾಗ ಸ್ವೀಕಾರ. ಇಂಥ ಸ್ಥೈರ್ಯ. ಈ ರೀತಿಯ ಮನುಷ್ಯ ದೊರೆಯುವುದು ದುರ್ಲಭ.

ಆದರೆ ಎರಡು ಗಂಟೆಗಳ ಹಿಂದಿನ ಒಂದು ಅಸ್ಪಷ್ಟ ಜನ ಹೇಳಿಕೆಯನ್ನು ಬಿಟ್ಟರೆ ನಳಿನಾಕ್ಷನ ವಿಷಯದಲ್ಲಿ ಯೋಗೇಂದ್ರನಿಗೆ ಏನೂ ತಿಳಿಯದು.

ಹೇಮ ಅತಿ ಕುತೂಹಲ ವ್ಯಕ್ತಪಡಿಸುತ್ತ ಹೇಳಿದಳು, "ಅಪ್ಪಾ, ಹಾಗಾದರೆ ಸರಿ, ನಡೆಯಿರಿ, ಅವರ ಭಾಷಣ ಕೇಳಲು ಹೋಗೋಣ".

ಹೇಮನಳಿನಿಯ ಈ ಬಗೆಯ ಉತ್ಸಾಹದ ಭಾವವನ್ನು ಅನ್ನದಾಬಾಬು ಗಳು ಸಂಪೂರ್ಣವಾಗಿ ನಂಬಲಿಲ್ಲ—ಆದರೂ ಅವರು ಒಳಗೊಳಗೇ ಸಂತೋಷ ಪಟ್ಟರು. ಹೇಮ ಬಲಾತ್ಕಾರದಿಂದಲಾದರೂ ಈ ರೀತಿ ಸಭೆ ಸಮ್ಮೇಳನ ಗಳಿಗೆ ಹೋಗಿ ಬರುತ್ತಿದ್ದರೆ ಆದಷ್ಟು ಬೇಗ ಅವಳ ಮನ ನೆಮ್ಮದಿ ಪಡೆಯು ವುದು. ಮಾನವರ ಸಹವಾಸವೇ ಮಾನವರ ಮನೋವೈಕಲ್ಯಕ್ಕೆ ಮುಖ್ಯ ಔಷಧ ಎಂದು ಅವರು ಭಾವಿಸಿದರು. ಅವರು, "ಹಾಗಿದ್ದರೆ ಒಳ್ಳೆಯದು ಯೋಗೇಂದ್ರ, ನಾಳೆ ಹೊತ್ತಿಗೆ ಸರಿಯಾಗಿ ನಮ್ಮನ್ನು ಸಭೆಗೆ ಕರೆದುಕೊಂಡು ಹೋಗು. ನಳಿನಾಕ್ಷನ ವಿಷಯ ಏನಾದರೂ ತಿಳಿದಿದ್ದರೆ ಹೇಳು ಕೇಳೋಣ. ಯಾರು ಯಾರೋ ಏನೇನೋ ಹೇಳುವರು" ಎಂದರು

ಬೇಕಾದವರು ಬೇಕಾದ ಹಾಗೆ ಹೇಳುತ್ತಿದ್ದರಲ್ಲ, ಯೋಗೇಂದ್ರ ಮೊದಲು ಅವರುಗಳನ್ನು ಚೆನ್ನಾಗಿ ಬೈದನು. ಧರ್ಮದ ವಿಷಯವಾಗಿ ಬಾಹ್ಯಾಡಂಬರ ತೋರುವವರು, ಮಾತುಮಾತಿನಲ್ಲೂ ಇತರರನ್ನು ಕುರಿತು ಅವಿಚಾರ ಮತ್ತು ನಿಂದೆ ಮಾಡಲು ತಾವು ದೇವದತ್ತ ಹಕ್ಕುಬಾಧ್ಯತೆಯೊಡನೆ ಜನ್ಮವೆತ್ತಿರುವುದಾಗಿ ತಿಳಿದುಕೊಂಡಿರುವರು—ಧರ್ಮವೇ ಕಸಬಾಗಿ ಉಳ್ಳವರ

ಹಾಗೆ ಅತಿ ಹಿರಿಯ ಸಂಕುಚಿತ ಚಿತ್ತದ ವಿಶ್ವನಿಂದಕರು ಜಗತ್ತಿನಲ್ಲಿ ಬೇರೆ ಇಲ್ಲವೇ ಇಲ್ಲ?" ಎಂದ. ಹೇಳುತ್ತ ಹೇಳುತ್ತ ಯೋಗೇಂದ್ರ ಅತ್ಯಂತ ಉದ್ರೇಕಗೊಂಡ.

ಅನ್ನದಾ ಯೋಗೇಂದ್ರನನ್ನು ಪರಿಹಾಸ ಮಾಡುವುದಕ್ಕಾಗಿ ಬಾರಿ ಬಾರಿಗೂ, "ಅದು ಸರಿಯಾದ ಮಾತು, ಅದು ಸರಿಯಾದ ಮಾತು. ಇನ್ನೊಬ್ಬರ ಕುಂದುಕೊರತೆಗಳನ್ನು ಆಲೋಚಿಸುತ್ತಲೇ ಇದ್ದರೆ ಮನಸ್ಸು ಸಂಕುಚಿತವಾಗುವುದು, ಸ್ವಭಾವ ಸಂದಿಗ್ಧವಾಗುವುದು, ಹೃದಯದಲ್ಲಿ ಸರಸತೆಯೇ ಉಳಿಯದು" ಎಂದು ಅನ್ನತೊಡಗಿದರು.

"ಅಪ್ಪಾ, ನೀವು ನನ್ನನ್ನುದ್ದೇಶಿಸಿ ಹೇಳುವಿರೇನು? ಆದರೆ ಧಾರ್ಮಿಕರಂತೆ ಅಲ್ಲ ನನ್ನ ಸ್ವಭಾವ—ನಾನು ಆಕ್ಷೇಪಿಸಲೂ ಬಲ್ಲೆ, ಹೊಗಳಲೂ ಬಲ್ಲೆ. ಹಾಗೂ ಬಾಯಿಯಲ್ಲಿ ಸ್ಪಷ್ಟವಾಗಿ ಹೇಳಿ ಆ ಹೊತ್ತಿನಲ್ಲೇ ಮಾತು ಕೊನೆ ಮುಟ್ಟಿಸುವೆ" ಎಂದ ಯೋಗೇಂದ್ರ.

ಅನ್ನದಾ ಮುಗುಡದಿಂದ ಹೇಳಿದರು, "ಯೋಗೇನ್, ನೀನು ಹುಚ್ಚನಾಗುತ್ತಿರುವೆಯಾ? ನಿನ್ನನ್ನೇಕೆ ಉದ್ದೇಶಿಸಿ ಹೇಳಲಿ. ನಾನು ನಿನ್ನನ್ನು ಅರಿಯೆನೆ".

ಆಗ ದೊಡ್ಡ ದೊಡ್ಡ ಹೊಗಳಿಕೆಯ ಮಾತುಗಳ ಮೂಲಕ ಪರಿಪೂರ್ಣಗೊಳಿಸಿ ಯೋಗೇಂದ್ರ ನಳಿನಾಕ್ಷನ ವೃತ್ತಾಂತ ವಿವರಿಸಿದ.

ತಾಯಿಯನ್ನು ಸುಖಿಯನ್ನಾಗಿ ಮಾಡಲು ನಳಿನಾಕ್ಷ ಆಚಾರ ವಿಚಾರದಲ್ಲಿ ಸಿಕ್ಕಿಕೊಂಡು ಕಾಶಿಯಲ್ಲಿ ವಾಸಮಾಡುತ್ತಿರುವನು, ಇದರಿಂದಲೇ ಅಪ್ಪಾ, ನೀವು ಯಾರನ್ನು ಕೆಲವರೆಂದು ಹೇಳುವಿರೋ, ಅವರು ಕೆಲವು ಮಾತುಗಳನ್ನಾಡುವರು. ನಾನಾದರೊ ಇಂಥ ನಳಿನಾಕ್ಷನನ್ನು ಒಳ್ಳೆಯವನೆಂದೇ ಹೇಳುವೆ. ಹೇಮ್, ನೀನೇನು ಹೇಳುವೆ, ಎಂದು ಕೇಳಿದ.

"ನಾನೂ ಅದನ್ನೇ ಹೇಳುವೆ" ಎಂದಳು ಹೇಮನಳಿನಿ.

"ಹೇಮ್ ಸರಿಯಾಗಿಯೇ ಹೇಳುವಳು, ಎಂದು ನಾನು ಖಂಡಿತವಾಗಿ ಬಲ್ಲೆ. ತಂದೆಯನ್ನು ಸಂತೋಷಗೊಳಿಸುವುದಕ್ಕಾಗಿ ಹೇಮ ಅಲ್ಪಸ್ವಲ್ಪ ತ್ಯಾಗ ಸ್ವೀಕಾರ ಮಾಡುವ ನೆಪ ಸಿಕ್ಕಿದರೆ ಬದುಕಿಕೊಳ್ಳುವಳು—ಇದೂ ನನಗೆ ಚೆನ್ನಾಗಿ ಗೊತ್ತು" ಎಂದ ಯೋಗೇಂದ್ರ.

ಅನ್ನದಾ ಸ್ನೇಹಕೋಮಲ ಹಾಸ್ಯದಿಂದ ಹೇಮುಳ ಮುಖದ ಕಡೆ ನೋಡಿದರು—ಹೇಮನಳಿನಿ ನಾಚಿಕೆಯಿಂದ ಕೆಂಪೇರಿದ ಮುಖ ತಗ್ಗಿಸಿದಳು.

೪೧

ಸಭೆ ಮುಗಿದಮೇಲೆ ಹೇಮನಳಿನಿಯೊಡನೆ ಅನ್ನದಾ ಮನೆಗೆ ಹಿಂದಿರುಗಿದಾಗ, ಇನ್ನೂ ಸಂಜೆಯಾಗಿರಲಿಲ್ಲ. ಚಹ ಕುಡಿಯಲು ಕುಳಿತು ಅನ್ನದಾ ಬಾಬುಗಳು, "ಇಂದು ಅತಿಯಾಗಿ ಆನಂದ ಲಾಭ ಪಡೆದಿರುವೆ" ಎಂದರು. ಇದಕ್ಕಿಂತ ಹೆಚ್ಚಾಗಿ ಅವರು ಏನೂ ಹೇಳಲಿಲ್ಲ; ಅವರ ಮನಸಿನೊಳಗೆ ಒಂದು ಭಾವಪ್ರವಾಹ ಹರಿಯುತ್ತಿತ್ತು.

ಇಂದು ಚಹ ಕುಡಿದಾದ ಕೂಡಲೇ ಹೇಮನಳಿನಿ ಮೆಲ್ಲಮೆಲ್ಲನೆ ಮೇಲಕ್ಕೆ ಹೊರಟು ಹೋದಳು, ಅನ್ನದಾಬಾಬುಗಳು ಅದನ್ನು ಗಮನಿಸಲಿಲ್ಲ.

ಇಂದು ಸಭಾಂಗಣದಲ್ಲಿ ನಳಿನಾಕ್ಷ—ಭಾಷಣ ಮಾಡಿದವನು, ಅವನು ನೋಟಕ್ಕೆ ವಿಚಿತ್ರ ತರುಣ, ಹಾಗೂ ಸುಕುಮಾರ; ಯೌವನ ವಯಸ್ಸಿನಲ್ಲೂ ಶೈಶವದ ಕಳೆಗುಂದದ ಲಾವಣ್ಯ ಅವನ ಮುಖಕಾಂತಿಯನ್ನು ಪರಿತ್ಯಾಗ ಮಾಡಿಲ್ಲ; ಆದರೂ ಅವನ ಅಂತರಾತ್ಮದಿಂದ ಒಂದು ಧ್ಯಾನಪರತೆಯ ಗಾಂಭೀರ್ಯ ಅವನ ನಾಲ್ಕೂ ಕಡೆ ವ್ಯಾಪಿಸಿಕೊಳ್ಳುತ್ತಿತ್ತು.

ಅವನ ಭಾಷಣದ ವಿಷಯ, "ನಷ್ಟ". ಜಗತ್ತಿನಲ್ಲಿ ಯಾವ ವ್ಯಕ್ತಿ ಏನನ್ನೂ ಕಳೆದುಕೊಂಡಿಲ್ಲವೋ, ಅವನು ಏನನ್ನೂ ಪಡೆದಿಲ್ಲ, ಸುಲಭವಾಗಿ ಯಾವುದು ನಮ್ಮ ಕೈಗೆ ಬರುವುದೋ, ಅದನ್ನು ನಾವು ಸಂಪೂರ್ಣವಾಗಿ ಹೊಂದುವುದಿಲ್ಲ; ಅದೃಷ್ಟವಶಾತ್ ತ್ಯಾಗದ ಮೂಲಕ ನಾವು ಅದನ್ನು ಪಡೆದಾಗಲೆ, ಯಥಾರ್ಥವಾಗಿ ಅದು ನಮ್ಮ ಅಂತರಂಗ ಧನ ಆಗುವುದು. ಯಾವಯಾವುದು ನಮ್ಮ ಪ್ರಕೃತ ಸಂಪತ್ತೋ ಅದು ಬೇರೊಬ್ಬರು ಕದಿಯುವುದರ ಮೂಲಕ ಕಣ್ಣೆದುರಿಗೇ ಕಳೆದು ಹೋದರೆ, ಆ ವ್ಯಕ್ತಿ–ನಿರ್ಭಾಗ್ಯ, ಆದರೆ ತ್ಯಾಗ ಮಾಡಿಯೇ ಅದನ್ನು ಹೆಚ್ಚಾಗಿ ಹೊಂದುವ ಸಾಮರ್ಥ್ಯ ಮಾನವ ಚಿತ್ತಕ್ಕಿರುವುದು. ನಮ್ಮದು ಏನೇ ಹೋಗಲಿ, ಅದರ ವಿಷಯವಾಗಿ ನಾನು ತಲೆ ಬಾಗಿಸಿ ಕೈ ಮುಗಿಯುತ್ತ "ನಾನು ಕೊಟ್ಟಿರುವೆ, ನನ್ನ ತ್ಯಾಗದ ದಾನ, ನನ್ನ ದುಃಖದ ದಾನ, ನನ್ನ ಕಣ್ಣೀರ ದಾನ"—ಎಂದು ಹೇಳಬಲ್ಲೆ. ಆಗ

ಕಿರಿದು ಹಿರಿದಾಗುವುದು, ಅನಿತ್ಯ ನಿತ್ಯವಾಗುವುದು, ಯಾವುದು ನಮ್ಮ ವ್ಯವಹಾರದ ಸಾಮಗ್ರಿ ಮಾತ್ರವೋ ಅದು ಪೂಜೆಯ ಉಪಕರಣವಾಗಿ ನಮ್ಮ ಅಂತಃಕರಣದ ದೇವ ಮಂದಿರದ ರತ್ನ ಭಂಡಾರದಲ್ಲಿ ಚಿರಸಂಚಿತವಾಗಿ ನಿಲ್ಲುವುದು, ಎಂದು ಅವನು ಹೇಳಿದ.

ಈ ಮಾತುಗಳೆಲ್ಲ ಇಂದು ಹೇಮನಳಿನಿಯ ಹೃದಯದಲ್ಲೆಲ್ಲಾ ಪ್ರತಿಧ್ವನಿಸುತ್ತಿದ್ದುವು. ಮಾಳಿಗೆಯ ಮೇಲೆ ನಕ್ಷತ್ರ ಕಾಂತಿಯ ಆಕಾಶದ ಅಡಿಯಲ್ಲಿ ಅವಳು ಈ ದಿನ ತೆಪ್ಪನೆ ಕುಳಿತಳು. ಇಂದು ಅವಳ ಸಮಸ್ತ ಮನವೂ ಪೂರ್ಣ–ಸಮಸ್ತ ಆಕಾಶ, ಸಮಸ್ತ ಜಗತ್ತು ಅವಳಿಗೆ ಇಂದು ಪರಿಪೂರ್ಣ.

ಉಪನ್ಯಾಸ ಮಂದಿರದಿಂದ ಹಿಂದಿರುಗಿ ಬರುವಾಗ ಯೋಗೇಂದ್ರ, '' ಅಕ್ಷಯ, ಏನೇ ಆಗಲಿ ನೀನು ತಕ್ಕ ಪಾತ್ರ ಹುಡುಕಿರುವೆ, ಇವನಾದರೋ ಸಂನ್ಯಾಸಿ. ಇವನ ಒಂದು ಮಾತನ್ನೂ ನಾನು ಅರ್ಥಮಾಡಿಕೊಳ್ಳಲಾರದೆ ಹೋದೆ '' ಎಂದ.

'' ರೋಗಿಯ ಸ್ಥಿತಿ ತಿಳಿದು ಔಷಧ ಕೊಡಬೇಕು ಹೇಮನಳಿನಿ ರಮೇಶನ ಧ್ಯಾನದಲ್ಲಿ ಮಗ್ನಳಾಗಿರುವಳು – ಆ ಧ್ಯಾನವನ್ನು ಸಂನ್ಯಾಸಿಯಲ್ಲದಿದ್ದರೆ ನಮ್ಮಂಥ ಸಾಧಾರಣ ಜನರು ಭಂಗಪಡಿಸಲಾರರು. ಭಾಷಣ ನಡೆಯುತ್ತಿದ್ದಾಗ, ನೀನು ಹೇಮಳ ಮುಖ ಗಮನಿಸಿ ನೋಡಿದೆಯೇನು ? ಎಂದು ಅಕ್ಷಯ ಕೇಳಿದ.

ಯೋಗೇಂದ್ರ – ನೋಡಿದೆ, ಅವಳು ಚೆನ್ನಾಗಿ ಅರ್ಥಮಾಡಿಕೊಂಡಳೆಂದು ಸ್ಪಷ್ಟವಾಗುತ್ತಿತ್ತು. ಆದರೆ ಭಾಷಣ ಚೆನ್ನಾಗಿತ್ತೆಂದು ಆ ವ್ಯಕ್ತಿಗೆ ಸಂಬಂಧಮಾಲೆ ಹಾಕುವುದು ಸಹಜವಲ್ಲ. ಅದಕ್ಕೆ ಯಾವ ಕಾರಣವನ್ನೂ ಕಾಣಲಿಲ್ಲ.

ಅಕ್ಷಯ—ಇದೇ ಭಾಷಣವನ್ನು ನಮ್ಮಂಥವರ ಬಾಯಿಂದ ಕೇಳಿದ್ದರೆ ಒಪ್ಪಿಗೆಯಾಗುತ್ತಿತ್ತೇನು ? ತಪಸ್ವಿಗಳ ಮೇಲೆ ಹುಡುಗಿಯರಿಗೆ ಒಂದು ವಿಶೇಷ ಆಕರ್ಷಣೆಯಿದೆಯೆಂದು ನೀನರಿಯೆ. ಸಂನ್ಯಾಸಿಗಾಗಿ ಉಮೆ ತಪಸ್ಸು ಮಾಡಿರುವಳು, ಎಂದು ಕಾಳಿದಾಸ ಕಾವ್ಯದಲ್ಲಿ ಬರೆದಿರುವ. ನಾನು ನಿನಗೆ ಹೇಳುವುದಿಷ್ಟೇ, ಬೇರೆ ಯಾವ ವರನನ್ನೇ ಆಗಲಿ ನೀನು ತಂದು ನಿಲ್ಲಿಸು, ಹೇಮನಳಿನಿ ರಮೇಶನೊಡನೆ ಒಳಗೊಳಗೇ ಅವನ ಹೋಲಿಕೆ ನಡೆಸುವಳು— ಆ ಹೋಲಿಕೆಯಲ್ಲಿ ಯಾರೂ ಉಳಿಯಲಾರರು. ನಳಿನಾಕ್ಷನಾದರೆ ಇತರ

ಜನರಂತೆ ಅಲ್ಲ—ಇವನೊಡನೆ ಹೋಲಿಕೆಯ ಮಾತೇ ಮನಸ್ಸಿನಲ್ಲಿ ಮೂಡುವು ದಿಲ್ಲ. ಬೇರೆ ಯುವಕರನ್ನು ಹೇಮನಳಿನಿಯ ಎದುರಿಗೆ ಕರೆತಂದ ಕೂಡಲೇ ಅವಳು ನಿನ್ನ ಉದ್ದೇಶ ತಿಳಿದ ಕೊಳ್ಳುವಳು ಮತ್ತು ಅವಳ ಅಂತರ್ಯ ದಂಗೆ ಯೇಳುವುದು. ಆದರೂ ಯಾವುದಾದರೊಂದು ಉಪಾಯದಿಂದ ನಳಿನಾಕ್ಷ ನನ್ನು ಕರೆತಂದರೆ ಆಗ ಹೇಮಳ ಮನಸ್ಸಿಗೆ ಯಾವ ಸಂದೇಹವೂ ತೋರುವು ದಿಲ್ಲ—ಆ ಬಳಿಕ ಕ್ರಮವಾಗಿ ಭಕ್ತಿಯಿಂದ ಆರಂಭಿಸಿ ಸಂಬಂಧಮಾಲೆಯ ವರೆಗೆ ಯಾವ ಕೆಲಸವನ್ನಾದರೂ ಸಾಧಿಸಲು ಹೆಚ್ಚು ಶ್ರಮವಾಗದು.

ಯೋಗೇಂದ್ರ—ನನ್ನಿಂದ ಯುಕ್ತಿ ಸರಿಯಾಗಿ ಸಾಗದು— ನನಗೆ ಮಾತನಾಡುವುದು ಸುಲಭ. ಆದರೆ ಏನೇ ಹೇಳು, ಪರ ನನಗೆ ಒಪ್ಪಿಗೆ ಯಾಗುವುದಿಲ್ಲ.

ಅಕ್ಷಯ—ನೋಡು ಯೋಗೇನ್, ನೀನು ಸ್ವಂತ ಹಟದ ಮೇಲೆ ಎಲ್ಲವನ್ನೂ ಮಣ್ಣುಗೂಡಿಸಬೇಡ, ಎಲ್ಲ ಅನುಕೂಲಗಳೂ ಒಂದೆಡೆ ದೊರೆ ಯವು. ಯಾವ ರೀತಿಯಲ್ಲೇ ಆಗಲಿ, ರಮೇಶನ ಚಿಂತೆಯನ್ನು ಹೇಮ ನಳಿನಿಯ ಮನದಿಂದ ಹೊರದೂಡುವುದು ಸಾಧ್ಯವಾಗದಿರುವುದನ್ನು ನಾನು ಒಪ್ಪುವುದಿಲ್ಲ. ನೀನು ಶಾರೀರಕ ಬಲದಿಂದ ಹಾಗೆ ಮಾಡಬಲ್ಲೆಯೆಂದು ಮನಸಿನಲ್ಲಿ ಎಣಿಸಬೇಡ. ನಾನು ಹೇಳಿದಂತೆ ನಡೆದುಕೊಳ್ಳುವೆಯಾದರೆ, ನಿನ್ನ ಈ ತೊಡಕು ಸರಿಹೋದೀತು.

ಯೋಗೇಂದ್ರ—ನಿಜವಾದ ಸಂಗತಿಯೆಂದರೆ, ನಳಿನಾಕ್ಷ ನನಗೊಂದು ಅರ್ಥವಾಗದ ಸಮಸ್ಯೆ: ಇಂಥ ಜನರನ್ನು ಕಟ್ಟಿಕೊಂಡು ಕೆಲಸ ನಡೆಸಲು ನಾನು ಹೆದರುವೆ. ಒಂದು ವಿಪತ್ತು ತಪ್ಪಿಸಿಕೊಳ್ಳಲು ಹೋಗಿ ಮತ್ತೊಂದು ವಿಪತ್ತಿನೊಳಗೆ ಸಿಕ್ಕಿ ಬೀಳಬೇಕಾದೀತು.

ಅಕ್ಷಯ—ಗೆಳೆಯನೇ, ನೀವುಗಳು ಸ್ವಂತದೋಷದಿಂದ ಬೆಂದಿರಿ. ಇಂದಿನ ಸೂರ್ಯಾಸ್ತದ ಮೋಡ ನೋಡಿ ಹೆದರಿಕೆಯಾಗುತ್ತಿರಬಹುದು. ರಮೇಶನ ವಿಷಯದಲ್ಲಿ ನೀವುಗಳು ತಿಳಿದುಕೊಂಡಿದ್ದುದೆಲ್ಲ ಸಂಪೂರ್ಣ ಮೂಢ ನಂಬಿಕೆ. ಇಂಥ ಹುಡುಗ ಬೇರೆ ಇಲ್ಲವೇ ಇಲ್ಲ—ಮೋಸ ಎಂದು ಯಾವುದನ್ನು ಹೇಳು ವೆವೋ, ಅದು ರಮೇಶನಿಗೆ ತಿಳಿಯದು—ದರ್ಶನ ಶಾಸ್ತ್ರದಲ್ಲಿ ರಮೇಶನನ್ನು ಎರಡನೆಯ ಶಂಕರಾಚಾರ್ಯ ಎನ್ನಬೇಕು ; ಸಾಹಿತ್ಯದಲ್ಲಿ ಸ್ವತಃ ಸರಸ್ವತಿಯ ಹತ್ತೊಂಬತ್ತನೆಯ ಶತಮಾನದ ಪುರುಷ-ಅವತಾರ. ಮೊದಲಿನಿಂದಲೂ

ರಮೇಶ ನನಗೆ ಸರಿಬೀಳಲಿಲ್ಲ—ಆ ಬಗೆಯ ಶ್ರೇಷ್ಠ ಆದರ್ಶ ವ್ಯಕ್ತಿಗಳನ್ನು ನನ್ನ ವಯಸ್ಸಿನಲ್ಲಿ ನಾನು ಎಷ್ಟೆಷ್ಟೋ ಕಂಡಿರುವೆ. ಆದರೆ ನನಗೆ ಮಾತ ನಾಡಲು ಅವಕಾಶವಿರಲಿಲ್ಲ- ನನ್ನಂಥ ಅಯೋಗ್ಯ ಅಪಾತ್ರ ವ್ಯಕ್ತಿಗಳು ಕೇವಲ ಮಹಾತ್ಮರಾದವರನ್ನು ದ್ವೇಷ ಮಾಡಬಲ್ಲರು, ನಮಗೆ ಬೇರೆ ಯಾವ ಯೋಗ್ಯತೆಯೂ ಇಲ್ಲವೆಂದು ನೀನು ತಿಳಿದಿದ್ದೆ. ಏನೇ ಆಗಲಿ, ಇಷ್ಟು ದಿನಗಳ ಬಳಿಕಾದರೂ, ಮಹಾ ಪುರುಷರಿಗೆ ದೂರದಿಂದ ಭಕ್ತಿ ತೋರಿಸ ಬೇಕು, ಅವರೊಡನೆ ಒಡಹುಟ್ಟಿದ ತಂಗಿಯ ಮದುವೆ ನಿಶ್ಚಯಿಸುವುದು ಒಳ್ಳೆಯದಲ್ಲ ಎಂದು ತಿಳಿಯಿತಲ್ಲ ಆದರೆ 'ಕಂಟಕೇನೈವ ಕಂಟಕಂ' (ಮುಳ್ಳಿನಿಂದಲೇ ಮುಳ್ಳು ತೆಗೆಯಬೇಕು). ಇದೊಂದೇ ಮಾರ್ಗವಿರುವಾಗ ಈ ವಿಷಯವಾಗಿ ಯೋಚಿಸುತ್ತ ಕುಳಿತರೆ ನಡೆಯದು.

ಯೋಗೇಂದ್ರ—ನೋಡು ಅಕ್ಷಯ, ನೀನು ನಮ್ಮೆಲ್ಲರಿಗಿಂತ ಮೊದಲೇ ರಮೇಶನ ವಿಷಯ ತಿಳಿದುಕೊಂಡಿರುವೆಯೆಂದು ಸಾವಿರ ಬಾರಿ ಹೇಳಿದರೂ ನಾನು ನಂಬಲಾರೆ. ಆಗ ಕೇವಲ ಹೊಟ್ಟೆಯುರಿಯಿಂದ ನೀನು ಎರಡು ಕಣ್ಣೂ ಬಿಟ್ಟು ರಮೇಶನನ್ನು ನೋಡಲಾರದಾದೆ—ಅದೂ ನಿನ್ನ ಅಸಾಧಾರಣ ಬುದ್ಧಿಯ ಪರಿಚಯ, ಎಂದು ನಾನು ತಿಳಿಯಲಾರೆ. ಏನೇ ಆಗಲಿ, ಕುಟಿಲ ಉಪಾಯಗಳಿಂದ ಪ್ರಯೋಜನವಿರುವುದಾದರೆ, ನೀನು ಮಾಡು, ನನ್ನಿಂದ ಸಾಧ್ಯವಿಲ್ಲ, ಒಟ್ಟಿನಲ್ಲಿ ನಳಿನಾಕ್ಷ ನನಗೆ ಅಷ್ಟಾಗಿ ಒಪ್ಪಿಗೆಯಿಲ್ಲ.

ಯೋಗೇಂದ್ರ ಅಕ್ಷಯ ಇಬ್ಬರೂ ಅನ್ನದಾಬಾಬುಗಳ ಚಹದ ಕೋಣೆಗೆ ಬಂದು ತಲುಪುತ್ತಲೇ ಹೇಮನಳಿನಿ ಕೊಠಡಿಯ ಬೇರೆ ಬಾಗಿಲಿಂದ ಹೊರ ಹೋಗುತ್ತಿರುವುದನ್ನು ಕಂಡರು. ಹೇಮನಳಿನಿ ತಮ್ಮನ್ನು ಕಿಟಕಿಯಿಂದ ಹಾದಿಯಲ್ಲೇ ನೋಡಿರಬೇಕು ಎಂದು ಅಕ್ಷಯ ತಿಳಿದುಕೊಂಡ. ಒಮ್ಮೆ ತುಸು ನಕ್ಕು ಅವನು ಅನ್ನದಾಬಾಬುಗಳ ಹತ್ತಿರ ಬಂದು ಕುಳಿತ. ಚಹದ ಬಟ್ಟಲು ತುಂಬಿಕೊಂಡು, "ನಳಿನಾಕ್ಷಬಾಬು ಏನು ಹೇಳುವನೋ, ಸಂಪೂರ್ಣವಾಗಿ ಹೃದಯಾಂತರಾಳದಿಂದ ಹೇಳುವನು; ಅದರಿಂದಲೇ ಅವನ ಮಾತುಗಳು ಇಷ್ಟು ಸುಲಭವಾಗಿ ಹೃದಯವನ್ನು ಸೇರುವವು" ಎಂದು ಹೇಳಿದ.

ಅನ್ನದಾಬಾಬುಗಳು, "ಮನುಷ್ಯನಿಗೆ ಸಾಮರ್ಥ್ಯವಿದೆ" ಎಂದರು.

" ಬರಿಯ ಸಾಮರ್ಥ್ಯವೆ ! ಇಂಥ ನಡವಳಿಕೆಯ ಮನುಷ್ಯನನ್ನು ಕಾಣುವುದು ಅಪೂರ್ವ " ಎಂದ ಅಕ್ಷಯ.

ಆಗಲೂ ಯೋಗೇಂದ್ರ ತಳಮಳದಲ್ಲೇ ಇದ್ದ. ಅದರಿಂದ ಅವನು ಸುಮ್ಮನಿರಲಾರದೆ ಹೇಳಿದ, " ಆಃ, ಸಾಧು ನಡವಳಿಕೆಯ ಮಾತು ಇನ್ನು ಹೇಳಬೇಡ. ಸಾಧು ಸಂಗದಿಂದ ದೇವರು ನಮ್ಮನ್ನು ಕಾಪಾಡಲಿ " ಎಂದ.

ಯೋಗೇಂದ್ರ ನಿನ್ನೆ ಇದೇ ನಳಿನಾಕ್ಷನ ಸದ್ವರ್ತನೆಯನ್ನು ಒಂದೇ ಸಮ ಹೊಗಳಿದ್ದ—ಮತ್ತು ನಳಿನಾಕ್ಷನ ವಿರುದ್ಧ ಮಾತನಾಡುವವರನ್ನು ನಿಂದಕರು ಎಂದು ಬೈದಿದ್ದ.

" ಛೀ ಯೋಗೇಂದ್ರ, ಈ ಮಾತು ಹೇಳಬೇಡ. ನೋಟಕ್ಕೆ ಯಾರು ಒಳ್ಳೆಯವರೆಂದು ಮನಸ್ಸಿಗೆ ತೋರುವುದೋ ಅವರ ಅಂತರ್ಯವೂ ಉತ್ತಮ ವಾಗಿಯೇ ಇರುವುದು, ಎಂಬ ಮಾತನ್ನು ಒಪ್ಪಿಕೊಳ್ಳಲು ನಾನು ಹಿಂಜರಿಯುವೆ ನಾದರೂ ನನ್ನ ಅಲ್ಪ ಬುದ್ಧಿಯ ಗೌರವ ರಕ್ಷಣೆಗಾಗಿ ಸಾಧುತ್ವವನ್ನು ಸಂದೇಹಿಸಲು ನಾನು ಸಿದ್ಧನಿಲ್ಲ. ನಳಿನಾಕ್ಷ ಹೇಳಿರುವ ಮಾತುಗಳೆಲ್ಲಾ ಬೇರೊಬ್ಬರ ಬಾಯಿಯವಾತಲ್ಲ—ತನ್ನ ಸ್ವಂತ ಆಧ್ಯಾತ್ಮಿಕ ಅನುಭವದಿಂದ ಅವನು ಹೊರಗೆಡಹಿರುವುದೆಲ್ಲ ನನಗೆ ಇಂದು ಹೊಸ ಲಾಭದಂತೆ ಮನಸ್ಸಿಗೆ ತೋರುವುದು ಯಾವನು ಮೋಸಗಾರನೋ ಅವನು ಸತ್ಯ ವಸ್ತುವನ್ನು ಕೊಡುವುದಾದರೂ ಎಲ್ಲಿಂದ ? ಚಿನ್ನ ಹೇಗೆ ತಯಾರಿಸಲು ಸಾಧ್ಯವಿಲ್ಲವೋ ಅಂತೆಯೇ ಈ ಮಾತುಗಳನ್ನೂ ಸಿದ್ಧಗೊಳಿಸಲು ಸಾಧ್ಯವಿಲ್ಲ. ನಾನು ಸ್ವತಃ ಹೋಗಿ ನಳಿನಾಕ್ಷಬಾಬುಗಳಿಗೆ ಅಭಿನಂದನೆ ಹೇಳಿ ಬರಬೇಕೆಂದು ಆಸೆಯಾಗು ತಿರುವುದು " ಎಂದರು ಅನ್ನದಾಬಾಬುಗಳು

ಅಕ್ಷಯ ಹೇಳಿದ, " ಅವನ ದೇಹ ಬಹಳ ಕಾಲ ಇರುವುದೋ ಇಲ್ಲವೋ ಎಂಬ ಹೆದರಿಕೆ ನನಗೆ ".

ಅನ್ನದಾಬಾಬು ಗುಗುಡದಿಂದ, " ಏಕೆ, ಅವನ ಆರೋಗ್ಯ ಸರಿ ಯಾಗಿಲ್ಲವೆ ? " ಎಂದು ಕೇಳಿದರು.

ಅಕ್ಷಯ—ನೆಟ್ಟಗಿರುವ ಮಾತೇ ಇಲ್ಲವಲ್ಲ—ಹಗಲೂ ರಾತ್ರಿ ತನ್ನ ಸಾಧನೆ ಮತ್ತು ಶಾಸ್ತ್ರಾಲೋಚನೆಯಲ್ಲೇ ಮುಳುಗಿರುವನು; ಇನ್ನು ಶರೀರದ ಕಡೆ ಗಮನವೇ ಇಲ್ಲ.

" ಇದು ದೊಡ್ಡ ತಪ್ಪು. ಆರೋಗ್ಯ ಹಾಳುಮಾಡಿಕೊಳ್ಳುವ

ಅಧಿಕಾರ ನಮಗಿಲ್ಲ—ನಾವು ನಮ್ಮ ಶರೀರ ಸೃಷ್ಟಿಸಿಕೊಂಡಿಲ್ಲ. ಅವನು ನನ್ನ ಬಳಿಯಲ್ಲಿ ಇದ್ದಿದ್ದರೆ, ಖಂಡಿತ ನಾನು ಕೆಲವು ದಿನಗಳಲ್ಲೇ ಅವನ ಆರೋಗ್ಯ ಉತ್ತಮಗೊಳಿಸಿಕೊಡಬಲ್ಲೆ. ವಸ್ತುತಃ ಆರೋಗ್ಯ ರಕ್ಷಣೆಯ ಕೆಲವು ಸ್ವಾಭಾವಿಕ ನಿಯಮಗಳಿವೆ, ಅವುಗಳಲ್ಲಿ ಮೊದಲನೆಯದು . . " ಎಂದರು ಅನ್ನದಾಬಾಬುಗಳು.

ಯೋಗೇಂದ್ರ ಅಧೈರ್ಯದಿಂದ ಹೇಳಿದ, "ಅಪ್ಪಾ, ನೀವೇಕೆ ವ್ಯರ್ಥ ವಾಗಿ ಯೋಚಿಸಿ ಆಯಾಸಪಡುವಿರಿ. ನಳಿನಾಕ್ಷಬಾಬುವಿನ ಆರೋಗ್ಯ ನೆಟ್ಟಗೇ ಇದೆ,—ಅವನನ್ನು ನೋಡಿ ಇಂದು ನನಗೆ, ಸಾಧುತ್ವವೆನ್ನುವುದೇ ಆರೋಗ್ಯಕರವೆಂದು ಚೆನ್ನಾಗಿ ಅರಿವಾಯಿತು. ಅದನ್ನು ಪ್ರಯತ್ನಿಸಿ ನೋಡ ಬೇಕು ಎಂದು ನನ್ನ ಮನಸ್ಸಿಗೂ ತೋರುವುದು".

"ಇಲ್ಲ ಯೋಗೇಂದ್ರ, ಅಕ್ಷಯ ಹೇಳುವಂತೆ ಇದ್ದರೂ ಇರಬಹುದು. ನಮ್ಮ ದೇಶದಲ್ಲಿ ದೊಡ್ಡ ದೊಡ್ಡ ವ್ಯಕ್ತಿಗಳೆಲ್ಲ ಪ್ರಾಯಃ ಅಲ್ಪ ವಯಸ್ಸಿನಲ್ಲೇ ಸಾಯುವರು—ಇವರು ತಮ್ಮ ಶರೀರವನ್ನು ಕಡೆಗಣಿಸಿ ದೇಶಕ್ಕೆ ನಷ್ಟವುಂಟು ಮಾಡುವರು. ಸ್ವಲ್ಪದರಲ್ಲಿ ಹೀಗೆ ಆಗಗೊಡುವುದು ಒಳ್ಳೆಯದಲ್ಲ— ಯೋಗೇಂದ್ರ, ನೀನು ತಿಳಿದುಕೊಂಡಿರುವಂತೆ ಇಲ್ಲ ನಳಿನಾಕ್ಷಬಾಬು, ಆತನಲ್ಲಿ ಸತ್ಯಾಂಶವೂ ಇದೆ, ಆತನನ್ನು ಈಗಿನಿಂದಲೇ ಎಚ್ಚರಿಸಬೇಕು" ಎಂದು ಅನ್ನದಾಬಾಬುಗಳು ಹೇಳಿದರು.

ಅಕ್ಷಯ—ಅವನನ್ನು ನಾನು ನಿಮ್ಮ ಬಳಿಗೆ ಕರೆದುಕೊಂಡು ಬರುವೆ, ನೀವು ಅವನಿಗೆ ಸರಿಯಾಗಿ ತಿಳಿಯಹೇಳಿದರೆ ಒಳ್ಳೆಯದೇ ಆಗುವುದು, ಪರೀಕ್ಷೆಯ ಸಮಯದಲ್ಲಿ ನೀವು ನನಗೆ ಆ ಮೂಲಿಕೆಯ ರಸ ಕೊಟ್ಟಿರಲ್ಲ, ಅದು ನನಗೆ ಈಗ ನೆನಪಾಗುವುದು, ಅದು ಆಶ್ಚರ್ಯರೀತಿಯಲ್ಲಿ ಶಕ್ತಿವರ್ಧಕ. ಯಾರು ಯಾವಾಗಲೂ ಮನಸ್ಸನ್ನು ದುಡಿಸುತ್ತಿರುವರೋ ಅವರಿಗೆ ಇಂಥ ಮಹದೌಷಧ ಬೇರೆಯಿಲ್ಲ. ನೀವು ಒಮ್ಮೆ ನಳಿನಾಕ್ಷಬಾಬುವಿಗೆ . . .

ಕೂಡಲೇ ಯೋಗೇಂದ್ರ ಕುರ್ಚಿಬಿಟ್ಟೆದ್ದು, "ಅಃ, ಅಕ್ಷಯ ನೀನು ಹೊಟ್ಟೆಯುರಿಸುವೆ, ಅತಿ ಹುಡುಗಾಟ ಮಾಡುವೆ, ನಾನು ಹೊರಟೆ" ಎಂದ.

## ೪೨

ಮೊದಲು ತಮ್ಮ ಆರೋಗ್ಯ ನೆಟ್ಟಗಿದ್ದಾಗ, ಅನ್ನದಾಬಾಬುಗಳು ಡಾಕ್ಟರು ಮತ್ತು ಕವಿರಾಜರ ನಾನಾ ಬಗೆಯ ಮಾತ್ರೆಗಳನ್ನು ಯಾವಾಗಲೂ ಉಪಯೋಗಿಸುವರು—ಈಗ ಔಷಧ ಕುಡಿಯುವ ಆ ಉತ್ಸಾಹವಿಲ್ಲ ಮತ್ತು ತಮ್ಮ ಅನಾರೋಗ್ಯದ ವಿಷಯವನ್ನು ಇತ್ತೀಚೆಗೆ ಅವರು ಆಲೋಚಿಸುವುದೂ ಇಲ್ಲ; ಅಷ್ಟೇ ಅಲ್ಲದೆ ಅದನ್ನು ರಹಸ್ಯವಾಗಿಡುವುದಕ್ಕೂ ಪ್ರಯತ್ನಪಡುವರು.

ಹೊತ್ತಲ್ಲದ ಹೊತ್ತಿನಲ್ಲಿ ಇಂದು ಅವರು ಆರಾಮ ಕುರ್ಚಿಯಲ್ಲಿ ನಿದ್ದೆ ಮಾಡುತ್ತಿದ್ದಾಗ, ಮೆಟ್ಟಿಲ ಮೇಲೆ ಕಾಲಸಪ್ಪಳ ಕೇಳಿ ಹೇಮನಳಿನಿ ತೊಡೆಯಿಂದ ಕಸೂತಿ ಸಾಮಗ್ರಿಗಳನ್ನು ಕೆಳಗಿಟ್ಟು ತನ್ನ ಅಣ್ಣನಿಗೆ ಎಚ್ಚರಿಕೆ ಕೊಡಲು ಬಾಗಿಲ ಬಳಿಗೆ ಹೋದಳು. ಹೋಗಿ, ತನ್ನ ಅಣ್ಣನ ಜೊತೆಯಲ್ಲಿ ನಳಿನಾಕ್ಷನೂ ಬಂದು ನಿಂತಿರುವುದನ್ನು ಕಂಡಳು. ಕೂಡಲೇ ಬೇರೆ ಕೊಠಡಿಗೆ ಓಡಿ ಹೋಗುವ ಪ್ರಯತ್ನ ನಡೆಸುತ್ತಿದ್ದಾಗ ಯೋಗೇಂದ್ರ ಅವಳನ್ನು ಕರೆದು, "ಹೇಮ್, ನಳಿನಾಕ್ಷಬಾಬು ಬಂದಿರುವರು, ಇವರೊಡನೆ ನಿನ್ನ ಪರಿಚಯ, ಮಾಡಿಸಬೇಕು" ಎಂದ.

ಹೇಮ ಹಿಂದಿರುಗಿ ನಿಂತಳು ಮತ್ತು ನಳಿನಾಕ್ಷ ಅವಳೆದುರಿಗೆ ಬರುತ್ತಲೇ ಅವನ ಮುಖದ ಕಡೆ ನೋಡದೆ ನಮಸ್ಕರಿಸಿದಳು. ಅನ್ನದಾಬಾಬುಗಳು ಎಚ್ಚರಗೊಂಡು, "ಹೇಮ್" ಎಂದು ಕೂಗಿದರು. ಹೇಮ್ ಅವರ ಸಮೀಪಕ್ಕೆ ಬಂದು ಮೃದು ಸ್ವರದಲ್ಲಿ, "ನಳಿನಾಕ್ಷಬಾಬು ಬಂದಿರುವರು" ಎಂದಳು.

ಯೋಗೇಂದ್ರನೊಡನೆ ನಳಿನಾಕ್ಷ ಕೊಠಡಿಯೊಳಕ್ಕೆ ಪ್ರವೇಶಿಸುತ್ತಲೇ ಅನ್ನದಾಬಾಬುಗಳು ಆತುರದಿಂದ ಮುಂದೆ ಬಂದು ನಳಿನಾಕ್ಷನನ್ನು ಸ್ವಾಗತಿಸುತ್ತ ಬರಮಾಡಿಕೊಂಡರು

"ನೀವು ನಮ್ಮ ಮನೆಗೆ ಬಂದಿರುವುದು ಇಂದು ನಮ್ಮ ಪರಮ ಸೌಭಾಗ್ಯ. ಹೇಮ್, ಎಲ್ಲಿ ಹೋಗುವೆ ತಾಯಿ, ಇಲ್ಲೇ ಕುಳಿತುಕೊ. ನಳಿನಾಕ್ಷಬಾಬು—ಇವಳೇ ನನ್ನ ಮಗಳು ಹೇಮ್, ನಾವಿಬ್ಬರೂ ಆ ದಿನ ನಿಮ್ಮ ಭಾಷಣ ಕೇಳಲು ಬಂದು ಅತಿ ಆನಂದ ಲಾಭದೊಡನೆ ಹಿಂದಿರುಗಿದೆವು. ನೀವು ಆ ಒಂದು ಮಾತು ಹೇಳಿದಿರಲ್ಲ—ನಾವು ಯಾವುದನ್ನು ಪಡೆಯುವೆವೋ ಅದು ಎಂದಿಗೂ ಕಳೆದು ಹೋಗುವುದಿಲ್ಲ, ಯಾವುದನ್ನು ಯಥಾರ್ಥವಾಗಿ ಹೊಂದಿಲ್ಲವೋ ಅದು

ನಷ್ಟವಾಗುವುದು—ಈ ಮಾತಿನ ಅರ್ಥ ಅತಿ ಆಳ—ಏನು ಹೇಳು ಹೇಮ್.
ನಿಜವಾಗಿಯೂ ಯಾವ ವಸ್ತುವನ್ನು ನಮ್ಮದಾಗಿ ಮಾಡಿಕೊಂಡಿರುವೆವೋ,
ಯಾವುದನ್ನು ಮಾಡಿಕೊಂಡಿಲ್ಲವೋ ಅದರ ಪರೀಕ್ಷೆ ನಡೆಯುವುದು ಅದು
ನಮ್ಮ ಕೈ ಪತ್ತಿರದಿಂದಲೇ ಕಣ್ಮರೆಯಾದಾಗ. ನಳಿನಾಕ್ಷಬಾಬು, ನಿಮ್ಮಹತ್ತಿರ
ನನ್ನದೊಂದು ಪ್ರಾರ್ಥನೆ. ಆಗಾಗ ನೀವು ಬಂದು ನಮ್ಮೊಡನೆ ಸಂಭಾಷಣೆ
ನಡೆಸಿ ಹೋದರೆ ನಮಗೆ ಅತಿ ಉಪಕಾರ ಆಗುವುದು. ನಾವು ಹೆಚ್ಚಾಗಿ
ಎಲ್ಲೂ ಹೊರಗೆ ಹೋಗುವುದಿಲ್ಲ—ನೀವು ಯಾವಾಗ ಬಂದರೂ, ನನ್ನನ್ನೂ
ನನ್ನ ಮಗಳನ್ನೂ ಈ ಕೊಠಡಿಯಲ್ಲೇ ಕಾಣಬಹುದು" ಎಂದರು.

ನಳಿನಾಕ್ಷ ನಾಚಿಕೊಂಡಿದ್ದ ಹೇಮನಳಿನಿಯ ಮುಖದಕಡೆ ಒಮ್ಮೆ
ದೃಷ್ಟಿಸಿ, "ನಾನು ಉಪನ್ಯಾಸ ಮಂದಿರದಲ್ಲಿ ದೊಡ್ಡ ಮಾತು ಹೇಳಿ
ಬಂದಿರುವೆ ಎಂದು ನೀವುಗಳು ನನ್ನನ್ನು ಅತಿ ದೊಡ್ಡ ಗಂಭೀರ ಪುರುಷನೆಂದು
ತಿಳಿಯಬೇಡಿ. ಆ ದಿನ ವಿದ್ಯಾರ್ಥಿಗಳು ಬಹಳ ಬಲಾತ್ಕಾರ ಮಾಡಿದರು,
ಎಂದು ಭಾಷಣ ಮಾಡಲು ಹೋಗಿದ್ದೆ. ಪ್ರಾರ್ಥನೆ ತಿರಸ್ಕರಿಸುವ ಸಾಮರ್ಥ್ಯ
ನನಗೆ ಎಂದೂ ಇಲ್ಲ—ಆಗರೆ ಎರಡನೆಯ ಸಲ ಕೋರಿಕೆ ನಡೆಯುವ ಸಂದೇಹ
ನನಗಿಲ್ಲನಂತೆ ಮಾತನಾಡಿ ಬಂದಿರುವೆ. ನಮಗೆ ಭಾಷಣ ಹನ್ನೆರಡಾಣೆಯಷ್ಟೂ
ಅರ್ಥವಾಗಲಿಲ್ಲ ಎಂದು ವಿದ್ಯಾರ್ಥಿಗಳು ಸ್ಪಷ್ಟವಾಗಿ ಹೇಳುತ್ತಿರುವರು.
ಯೋಗೇನ್‌ಬಾಬು, ನೀವೂ ಸಹ ಆ ದಿನ ಇದ್ದಿರಲ್ಲವೆ, ನೀವು ಆತುರ
ದೃಷ್ಟಿಯಿಂದ ಗಡಿಯಾರದಕಡೆ ನೋಡಿದುದನ್ನು ಕಂಡು ನನ್ನ ಹೃದಯ
ವಿಚಲಿತವಾಗಲಿಲ್ಲ ಎಂದು ತಿಳಿದುಕೊಳ್ಳಬೇಡಿ" ಎಂದು . ಹೇಳಿದ.

ಯೋಗೇಂದ್ರ ಹೇಳಿದ, "ನನಗೆ ಸರಿಯಾಗಿ ಅರ್ಥವಾಗಲಿಲ್ಲ, ಅದೂ
ನನ್ನ ಬುದ್ಧಿಯ ದೋಷವೇ ಆಗಿರಬಹುದು, ಅದಕ್ಕಾಗಿ ನೀವು ಸ್ವಲ್ಪವೂ
ಕೋಪಿಸಿಕೊಳ್ಳಕೂಡದು".

ಅನ್ನದಾ— ಯೋಗೇನ್, ಎಲ್ಲ ವಯಸ್ಸೂ ಎಲ್ಲ ಮಾತನ್ನೂ ತಿಳಿದು
ಕೊಳ್ಳುವುದಕ್ಕಾಗಿಯ ಲ್ಲ.

ನಳಿನಾಕ್ಷ – ಎಲ್ಲ ವೇಳೆಯಲ್ಲೂ ಎಲ್ಲ ಸಂಗತಿಯನ್ನೂ ತಿಳಿದು
ಕೊಳ್ಳಬೇಕಾದ ಅಗತ್ಯವೂ ಇಲ್ಲ.

ಅನ್ನದಾ—ಆದರೆ ನಳಿನ್‌ಬಾಬು, ನಿಮಗೆ ನಾನು ಒಂದು ಮಾತು
ಹೇಳಬೇಕಾಗಿದೆ. ದೇವರು ನಿಮ್ಮಗಳನ್ನು ಕೆಲಸ ಮಾಡಿ ಮುಗಿಸಲು

ಜಗತ್ತಿಗೆ ಕಳುಹಿಸಿರುವ, ಹೀಗೆಂದು ಶರೀರವನ್ನು ಕಡೆಗಣಿಸಬಾರದು. ಯಾರು ದಾತರೋ ಅವರು ಮೂಲಧನ ನಷ್ಟಪಡಿಸಿಕೊಳ್ಳಕೂಡದು, ಹಾಗಾದರೆ ದಾನ ಮಾಡುವ ಶಕ್ತಿಯೇ ಹೊರಟು ಹೋಗುವುದು. ಈ ಮಾತನ್ನು ಸದಾ ನೆನಪು ಮಾಡಿ ಕೊಡಲೇ ಬೇಕು.

ನಳಿನಾಕ್ಷ—ನಿಮಗೆ ನನ್ನನ್ನು ಸರಿಯಾಗಿ ತಿಳಿದುಕೊಳ್ಳುವ ಸಮಯ ದೊರೆತರೆ, ನಾನು ಜಗತ್ತಿನಲ್ಲಿ ಎಂದೂ-ಯಾವುದನ್ನೂ ತಿರಸ್ಕರಿಸುವುದಿಲ್ಲವೆಂದು ಅರಿತುಕೊಳ್ಳುವಿರಿ. ಜಗತ್ತಿನಲ್ಲಿ ಕೇವಲ ಭಿಕ್ಷುಕನಂತೆ ಬಂದಿದ್ದೆ, ಬಹಳ ಕಷ್ಟದಿಂದಲೂ ಬಹಳ ಜನರ ಸಹಾಯದಿಂದಲೂ ಶರೀರ-ಮನಸ್ಸು ಸ್ವಲ್ಪಸ್ವಲ್ಪವಾಗಿ ಅರಳಿರುವುದು. ನನಗೆ ಈ ದೊಡ್ಡಸ್ತಿಕೆ ಸರಿಬೀಳದು, ನಾನು ಯಾವುದನ್ನೂ ಕಡೆಗಣಿಸಿ ಹಾಳುಮಾಡೆ. ಯಾವ ವ್ಯಕ್ತಿಗೆ ಕಟ್ಟುವ ಶಕ್ತಿ ಇಲ್ಲವೋ ಅವನಿಗೆ ಹಾಳುಮಾಡುವ ಅಧಿಕಾರವೂ ಇಲ್ಲ.

ಅನ್ನದಾ—ಅತಿಸಮರ್ಪಕವಾದ ಮಾತು ಹೇಳಿದಿರಿ. ನೀವು ಬಹಳವಾಗಿ ಈ ಭಾವದ ಮಾತನ್ನೇ ಅಂದಿನ ಭಾಷಣದಲ್ಲಿ ಹೇಳಿದ್ದಿರಿ.

ಯೋಗೇಂದ್ರ—ಸ್ವಲ್ಪ ಕೆಲಸ ಇದೆ, ನಾನು ಹೋಗುವೆ, ನೀವು ಇಲ್ಲೇ ಇರಿ.

ನಳಿನಾಕ್ಷ—ಯೋಗೇನ್‌ಬಾಬು, ನೀವು ನನ್ನನ್ನು ಕ್ಷಮಿಸಬೇಕು. ಜನರನ್ನು ಬೇಸರಗೊಳಿಸುವುದು ನನ್ನ ಸ್ವಭಾವ ಅಲ್ಲವೆಂದು ತಿಳಿಸುವೆ. ಇಂದಲ್ಲದಿದ್ದರೆ ಆಯಿತು, ನಾನು ಹೊರಟೆ, ನಡೆಯಿರಿ, ಸ್ವಲ್ಪ ದೂರದ ಹಾದಿಯನ್ನು ನಿಮ್ಮೊಡನೆ ನಡೆಯುವೆ.

ಯೋಗೇಂದ್ರ—ಬೇಡಬೇಡ, ನೀವು ಕುಳಿತುಕೊಳ್ಳಿ, ನನ್ನ ವಿಷಯ ಗಮನಿಸಬೇಡಿ. ನಾನು ಹೆಚ್ಚು ಹೊತ್ತು ಕೆಲಸವಿಲ್ಲದೆ ಸುಮ್ಮನೆ ಕುಳಿತಿರಲಾರೆ.

ಅನ್ನದಾ—ನಳಿನಾಕ್ಷಬಾಬು, ಯೋಗೇನನ ವಿಷಯದಲ್ಲಿ ನೀವು ಕಳವಳ ಪಡಬೇಡಿ. ಯೋಗೇನ ಹೀಗೆಯೇ, ಎಲ್ಲಿ ಮನಸ್ಸಾಗುವುದೋ, ಇಚ್ಛೆಯಾದಾಗ ಅಲ್ಲಿ ಹೋಗುವ, ಅವನನ್ನು ಹಿಡಿದು ನಿಲ್ಲಿಸುವುದು ಕಷ್ಟ.

ಯೋಗೇಂದ್ರ ಹೊರಟುಹೋದ. ಅನ್ನದಾಬಾಬುಗಳು, "ನಳಿನ್ ಬಾಬು, ನೀವು ಎಲ್ಲಿ ವಾಸಿಸುವಿರಿ" ಎಂದು ಕೇಳಿದರು.

ನಳಿನಾಕ್ಷ ನಕ್ಕು ಹೇಳಿದ, "ನಾನು ಅಷ್ಟಾಗಿ ಎಲ್ಲಿರುವೆ ಎಂದು

ಹೇಳಲಾರೆ. ನನ್ನ ಪರಿಚಿತ ಜನ ಕೆಲವರು ಇರುವರು, ಅವರು ನನ್ನನ್ನು ಬಲವಂತವಾಗಿ ಸುತ್ತಾಡಿಸುವರು. ನನಗೂ ಅದು ಒಪ್ಪಿಗೆಯಾಗದಿಲ್ಲ—ಆದರೆ ಮನುಷ್ಯ ತೆಪ್ಪನೆ ಕುಳಿತಿರುವುದಕ್ಕೂ ಆವಶ್ಯಕತೆಯಿದೆ. ಅದರಿಂದಲೇ ಯೋಗೇನಬಾಬು ನನಗಾಗಿ ನಿಮ್ಮ ಮನೆಯ ಪಕ್ಕದ ಮನೆಯಲ್ಲೇ ಸ್ಥಳ ಗೊತ್ತುಮಾಡಿರುವರು. ಈ ಬೀದಿ ಅತಿ ಏಕಾಂತವಾಗಿರಬಹುದು" ಎಂದ.

ಈ ಸುದ್ದಿಯಿಂದ ಅನ್ನದಾಬಾಬುಗಳು ಅತಿ ಆನಂದ ವ್ಯಕ್ತಗೊಳಿಸಿದರು. ಆದರೆ ಅವರು ಗಮನಿಸಿ ನೋಡಿದ್ದಿದ್ದರೆ ಆ ಮಾತು ಕೇಳಿದೊಡನೆ ಹೇಮನಳಿನಿಯ ಮುಖ ಕ್ಷಣಕಾಲ ವೇದನೆಯಿಂದ ವಿವರ್ಣವಾಯಿತೆಂದು ಕಾಣಬಹುದಾಗಿತ್ತು. ಆ ಪಕ್ಕದ ಮನೆಯಲ್ಲೇ ರಮೇಶ ಇದ್ದುದು.

ಇಷ್ಟರಲ್ಲಿ ಚಹ ಸಿದ್ಧವಾಗಿದೆಯೆಂದು ಕೇಳಿ ಎಲ್ಲರೂ ಕಲೆತು ಕೆಳಗೆ ಚಹ ಕುಡಿಯುವ ಕೊಠಡಿಗೆ ಬಂದರು. "ಅಮ್ಮ, ಹೇಮ್, ನಳಿನಬಾಬುವಿಗೆ ಒಂದು ಬಟ್ಟಲು ಚಹ ಕೊಡು" ಎಂದರು ಅನ್ನದಾಬಾಬುಗಳು.

ನಳಿನಾಕ್ಷ ಹೇಳಿದ, "ಬೇಡ, ಅನ್ನದಾಬಾಬು, ನಾನು ಚಹ ಕುಡಿಯುವುದಿಲ್ಲ".

ಅನ್ನದಾ—ಇದೇನು ಮಾತು ನಳಿನಬಾಬು, ಒಂದು ಬಟ್ಟಲು ಚಹ, ಅದೂ ಬೇಡವಾದರೆ ಏನಾದರೂ ಮಿಠಾಯಿ ತಿನ್ನಿ.

ನಳಿನಾಕ್ಷ—ನನ್ನನ್ನು ಕ್ಷಮಿಸಬೇಕು.

ಅನ್ನದಾ—ನೀವು ಡಾಕ್ಟರ್, ನಿಮಗೆ ಏನು ಹೇಳೋಣ. ಮಧ್ಯಾಹ್ನ ಭೋಜನದ ಎರಡು ಮೂರು ಗಂಟೆಗಳ ಬಳಿಕ ಚಹದ ನೆಪದಲ್ಲಿ ಸ್ವಲ್ಪ ಬಿಸಿ ನೀರು ಕುಡಿಯುವುದು ಜೀರ್ಣ ಶಕ್ತಿಗೆ ಅತಿ ಉಪಕಾರಿ ಅಭ್ಯಾಸವಿಲ್ಲದಿದ್ದರೆ ನಿಮಗೆ ಬೇಕಾದರೆ ಅತಿ ನೀರಾಗಿ ಚಹ ತಯಾರಿಸಿಕೊಡುವೆ.

ನಳಿನಾಕ್ಷ ಆಶ್ಚರ್ಯದ ನಡುವೆ ಹೇಮನಳಿನಿಯ ಮುಖದ ಕಡೆ ನೋಡಿ, ಹೇಮನಳಿನಿ ನಳಿನಾಕ್ಷನ ಚಹ ಕುಡಿಯುವ ಸಂಕೋಚದ ವಿಷಯವಾಗಿ ಏನನ್ನೋ ಊಹಿಸಿಕೊಂಡಿರುವಳೆಂದೂ ಅದನ್ನೇ ಕುರಿತು ಮನದಲ್ಲೇ ತರ್ಕ ಮಾಡುತ್ತಿದ್ದಳೆಂದೂ ಅರಿತುಕೊಂಡ. ಕೂಡಲೇ ಹೇಮನಳಿನಿಯ ಕಡೆ ನೋಡಿ ನಳಿನಾಕ್ಷ ಹೇಳಿದ, "ನೀವು ಮನಸ್ಸಿನಲ್ಲೆಣಿಸಿಕೊಂಡಿರುವಿರಲ್ಲ ಅದು ಸಂಪೂರ್ಣವಾಗಿ ಸರಿಯಲ್ಲ. ನಿಮ್ಮ ಈ ಚಹದ ಮೇಜೆಯನ್ನು ನಾನು ಕಡೆಗಣಿಸುವೆ ಎಂದು ಮನಸಲ್ಲೂ ನೆನೆಯದಿರಿ. ಹಿಂದೆ ನಾನು ಬೇಕಾದಷ್ಟು

ಚಹ ಕುಡಿದಿರುವೆ—ಚಹದ ಸುವಾಸನೆಯಿಂದ ಈಗಲೂ ನನ್ನ ಮನಸ್ಸು ಉತ್ಸಾಹಗೊಳ್ಳುವುದು. ನೀವು ಚಹ ಕುಡಿಯುವುದನ್ನು ನೋಡಿ ನಾನು ಬಹಳ ಸಂತೋಷಗೊಂಡಿರುವೆ ಆದರೆ ಪ್ರಾಯಶಃ ನಿಮ್ಮಗಳಿಗೆ ತಿಳಿದಿರದು. ನಮ್ಮ ತಾಯಿ ಅತ್ಯಂತ ಆಚಾರಪರಾಯಣೆ—ನನ್ನನ್ನು ಬಿಟ್ಟರೆ ತನ್ನವ ರೆನ್ನುವರು ಆಕೆಗೆ ಬೇರೆಯಾರೂ ಇಲ್ಲ—ಆ ತಾಯಿಯ ಬಳಿಯಲ್ಲಿ ನಾನು ಸಂಕೋಚದಿಂದ ಹೋಗಲಾರೆ, ಇದರಿಂದ ನಾನು ಚಹ ಕುಡಿಯಲಾರೆ. ಆದರೆ ನೀವುಗಳು ಚಹ ಕುಡಿದು ಪಡೆಯುವ ಆನಂದದಲ್ಲಿ ನಾನೂ ಪಾಲು ತೆಗೆದುಕೊಳ್ಳುವೆ. ನಿಮ್ಮಗಳ ಆತಿಥ್ಯದಿಂದ ನಾನು ವಂಚಿತನಾಗುವುದಿಲ್ಲ".

ಇದಕ್ಕೆ ಮೊದಲು ನಳಿನಾಕ್ಷನ ಮಾತುಕತೆಯಿಂದ ಹೇಮನಳಿನಿ ಮನಸ್ಸಿನಲ್ಲೇ ಸ್ವಲ್ಪ ವೇದನೆ ಅನುಭವಿಸುತ್ತಿದ್ದಳು. ನಳಿನಾಕ್ಷ ಸ್ವಭಾವತಃ ತಮ್ಮ ಬಳಿ ಸರಿಯಾಗಿ ವ್ಯಕ್ತಪಡಿಸಿಕೊಳ್ಳುತ್ತಿಲ್ಲ ಎಂದು ಅವಳು ಭಾವಿಸಿದ್ದಳು. ಅವನು ಕೇವಲ ಬಹಳವಾಗಿ ಮಾತನಾಡಿ ತನ್ನನ್ನು ಮುಚ್ಚಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದ. ಪ್ರಥಮ ಪರಿಚಯದಲ್ಲೇ ನಳಿನಾಕ್ಷ ಒಂದು ಸಂಕೋಚ ಭಾವವನ್ನು ಸರ್ವ ಪ್ರಯತ್ನದಿಂದಲೂ ತೊಲಗಿಸಲಾರತಿದ್ದನೆಂಬುದನ್ನು ಹೇಮನಳಿನಿ ಅರಿಯಳು. ಈ ಕಾರಣದಿಂದಲೇ ಹೊಸಬರ ಬಳಿ ಅನೇಕ ಸ್ಥಳಗಳಲ್ಲಿ ಅವನು ತನ್ನ ಸ್ವಭಾವ ವಿರುದ್ಧವಾಗಿ ಬಲವಂತದಿಂದ ಮಾತುಗಾರ ನಾಗುವನು. ತನ್ನ ಅಕೃತ್ರಿಮ ಮನದ ಮಾತು ಹೇಳಹೋದರೂ ಅದರ ನಡುವೆ ಒಂದು ಅಪಸ್ವರ ಕೂಡಿಸಿ ಬಿಡುವ. ಅದು ಅವನ ಕಿವಿಯನ್ನೂ ಮುಟ್ಟುವುದು. ಈ ಕಾರಣದಿಂದಲೇ ಇಂದು ಯೋಗೇಂದ್ರ ಅಸ್ಥಿರನಾಗಿ ಎದ್ದು ನಿಂತಾಗ ನಳಿನಾಕ್ಷ ಮನದಲ್ಲೇ ಒಂದು ತಿರಸ್ಕಾರ ಅನುಭವಿಸಿ ಅವನೊಡನೆ ಹೊರಡಲು ಪ್ರಯತ್ನಿಸಿದ.

ಆದರೆ ನಳಿನಾಕ್ಷ ತಾಯಿಯ ವಿಷಯ ಹೇಳಿದಾಗ, ಹೇಮನಳಿನಿ ಶ್ರದ್ಧೆಯದೃಷ್ಟಿಯಿಂದ ಅವನ ಮುಖದ ಕಡೆ ನೋಡದೆ ಇರಲಾರದಾದಳು, ಮತ್ತು ತಾಯಿಯ ವಿಚಾರಮಾತ್ರದಿಂದ ಆ ಕ್ಷಣದಲ್ಲಿ ನಳಿನಾಕ್ಷನ ಮುಖದಲ್ಲಿ ಒಂದು ಸರಸಭಕ್ತಿಯ ಗಾಂಭೀರ್ಯ ತೋರಿತಲ್ಲ, ಅದನ್ನು ನೋಡಿ ಹೇಮನಳಿನಿಯ ಮನಸ್ಸುಕರಗಿತು. ನಳಿನಾಕ್ಷನ ತಾಯಿಯ ವಿಷಯವಾಗಿ ಅವನೊಡನೆ ಸಂಭಾಷಣೆ ನಡೆಸಬೇಕೆಂದು ಅವಳು ಆಶಿಸಿದಳು, ಆದರೆ ಸಂಕೋಚದಿಂದ ಹಾಗೆ ಮಾಡಲಿಲ್ಲ.

ಅನ್ನದಾಬಾಬುಗಳು ಕಳವಳದೊಡನೆ, "ಆಶ್ಚರ್ಯ! ಈ ಸಂಗತಿ ಮೊದಲೇ ತಿಳಿದಿದ್ದರೆ ನಾನು ಎಂದಿಗೂ ನಿಮ್ಮನ್ನು ಚಹ ಕುಡಿಯಲು ಬೇಡಿಕೊಳ್ಳುತ್ತಿರಲಿಲ್ಲ. ಕ್ಷಮಿಸಬೇಕು" ಎಂದರು.

ನಳಿನಾಕ್ಷ ತುಸು ನಕ್ಕು ಹೇಳಿದ, "ಚಹ ಕುಡಿಯಲಾರೆ ಎಂದು ಹೇಳಿ ನಿಮ್ಮಗಳ ಪ್ರೀತಿಯ ಕೋರಿಕೆಯಿಂದ ಏಕೆ ವಂಚಿತನಾಗಬೇಕು".

ನಳಿನಾಕ್ಷ ಹೊರಟುಹೋದ. ಹೇಮನಳಿನಿ ತನ್ನ ತಂದೆಯೊಡನೆ ಮಹಡಿಯಕೋಣೆಗೆ ಹೋಗಿ ಕುಳಿತಳು ಮತ್ತು ಬಂಗಾಳಿ ಮಾಸ ಪತ್ರಿಕೆ ತೆಗೆದುಕೊಂಡು ಪ್ರಬಂಧ ಆಯ್ದು ಅವರಿಗೆ ಓದಿ ಹೇಳತೊಡಗಿದಳು. ಕೇಳುತ್ತ ಕೇಳುತ್ತ ಅನ್ನದಾಬಾಬುಗಳು ಕಾಲವಿಳಂಬವಿಲ್ಲದೆ ನಿದ್ದೆಹೋದರು. ಕೆಲವು ದಿನಗಳಿಂದಲೂ ಅನ್ನದಾಬಾಬುಗಳ ಶರೀರದಲ್ಲಿ ಈ ರೀತಿಯ ಅಶಕ್ತತೆಯ ಲಕ್ಷಣ ತಪ್ಪದೆ ಕಾಣಬರುತಿತ್ತು.

## ೪೩

ಕೆಲವು ದಿನಗಳಲ್ಲೇ ನಳಿನಾಕ್ಷನೊಡನೆ ಅನ್ನದಾಬಾಬುಗಳ ಹೆಚ್ಚು ಪರಿಚಯವುಂಟಾಯಿತು. ಮೊದ ಮೊದಲು ಹೇಮನಳಿನಿ, ನಳಿನಾಕ್ಷನಂಥ ವ್ಯಕ್ತಿಯ ಬಳಿ ಕೇವಲ ದೊಡ್ಡ ದೊಡ್ಡ ಆಧ್ಯಾತ್ಮಿಕ ವಿಷಯದ ಉಪದೇಶ ಮಾತ್ರ ಪಡೆಯಬಹುದೆಂದು ತಿಳಿದಿದ್ದಳು—ಇಂಥ ಮನುಷ್ಯರೊಡನೆ ಸಹಜ ವಿಷಯಗಳನ್ನು ಕುರಿತು ಸಾಧಾರಣ ಜನರಂತೆ ಸಂಭಾಷಿಸಲು ಸಾಧ್ಯ, ಎಂದು ಮನದಲ್ಲೂ ಎಣಿಸಿರಲಿಲ್ಲ. ಅಲ್ಲದೆ ಎಲ್ಲ ಹಾಸ್ಯಾಲಾಪಗಳಲ್ಲೂ ನಳಿನಾಕ್ಷ ಸ್ವಲ್ಪ ದೂರವಾಗಿಯೇ ಇರುತಿದ್ದ.

ಒಂದು ದಿನ ಅನ್ನದಾಬಾಬು ಮತ್ತು ಹೇಮನಳಿನಿಯ ಸಂಗಡ ನಳಿನಾಕ್ಷ ಮಾತುಕತೆ ನಡೆಸುತಿದ್ದ, ಆ ವೇಳೆಗೆ ಯೋಗೇಂದ್ರ ಸ್ವಲ್ಪ ಉದ್ರೇಕಗೊಂಡು ಬಂದು, "ಕೇಳಿ ಅಪ್ಪಾ, ಇತ್ತೀಚೆಗೆ ನಮ್ಮನ್ನು ಸಮಾಜದ ಜನರು ನಳಿನಾಕ್ಷ ಬಾಬುಗಳ ಶಿಷ್ಯರೆಂದು ಹೇಳತೊಡಗಿರುವರು. ಇದಕ್ಕಾಗಿ ಆ ಪರೇಶನೊಡನೆ ನಾನು ಚೆನ್ನಾಗಿ ಜಗಳವಾಡಿದೆ" ಎಂದ.

ಅನ್ನದಾಬಾಬು ತುಸು ನಕ್ಕು ಹೇಳಿದರು, "ಇದರಲ್ಲಿ ಯಾವುದೂ ನಾಚಿಕೆಯ ವಿಷಯವಾಗಿ ಕಂಡುಬರಲಿಲ್ಲ. ಎಲ್ಲಿ ಎಲ್ಲರೂ ಗುರುಗಳೋ,

ಯಾರೂ ಶಿಷ್ಯರಿಲ್ಲವೋ ಆ ಗುಂಪಿನವರೊಡನೆ ಸೇರಲು ನನಗೆ ನಾಚಿಕೆಯೆನಿಸು ವುದು. ಶಿಕ್ಷಣ ಕೊಡಲು ಆತುರತೆಯಿರುವಲ್ಲಿ ಶಿಕ್ಷಣ ಪಡೆಯುವ ಅವಕಾಶವೇ ಇರದು.

ನಳಿನಾಕ್ಷ—ಅನ್ನದಾಬಾಬು, ನಾನೂ ಸಹ ನಿಮ್ಮ ಪಂಗಡದವನೇ— ನಾನು ಶಿಷ್ಯರ ಗುಂಪಿನವ. ನನಗೆ ಕಲಿಯಲು ಸ್ವಲ್ಪ ಅವಕಾಶವಿದ್ದರೂ ಅಲ್ಲಿಗೆ ನನ್ನ ದೋಣಿ ನಡೆಸಿಕೊಂಡು ಹೋಗುವೆ.

ಯೋಗೇಂದ್ರ ಧೈರ್ಯಗೆಟ್ಟವನಾಗಿ, "ಇಲ್ಲ ಇಲ್ಲ, ಸಂಗತಿ ಚೆನ್ನಾಗಿಲ್ಲ. ನಳಿನಬಾಬು, ಯಾರೂ ನಿಮ್ಮ ಗೆಳೆಯರಾಗಲಿ ನೆಂಟರಾಗಲಿ ಆಗಲಾರರು– ಯಾರು ನಿಮ್ಮ ಬಳಿಗೆ ಬರುವರೋ ಅವರುಗಳು ನಿಮ್ಮ ಶಿಷ್ಯರೆಂದು ಪ್ರಸಿದ್ಧ ರಾಗುವರು, ಇಂಥ ಕೆಟ್ಟ ಹೆಸರು ನಕ್ಕು ಹಾರಿಸುವಂಥದಲ್ಲ; ನೀವು ಏನೇನು ಮಾಡುವಿರೋ ಅವನ್ನೆಲ್ಲಾ ಬಿಟ್ಟುಬಿಡಿ" ಎಂದ.

ನಳಿನಾಕ್ಷ—ಏನು ಮಾಡುತ್ತಿರುವೆ ಹೇಳಿ.

ಯೋಗೇಂದ್ರ— ಪ್ರಾಣಾಯಾಮ ಮಾಡುವಿರಿ, ಬೆಳಗಿನ ಹೊತ್ತು ಸೂರ್ಯನ ಕಡೆ ನೋಡುತ್ತ ನಿಲ್ಲುವಿರಿ, ಊಟ ತಿಂಡಿಗಳಲ್ಲಿ ನಾನಾರೀತಿಯ ಆಚಾರ ವಿಚಾರಗಳನ್ನು ಬಿಡದೆ ಇರುವಿರಿ, ಎಂದು ನಾನು ಕೇಳಿರುವೆನಲ್ಲ, ಇವುಗಳಿಂದ ಹತ್ತು ಜನರ ನಡುವೆ ನೀವು ಅವಹೇಳನಕ್ಕೆ ಗುರಿಯಾಗುವಿರಿ".

ಯೋಗೇಂದ್ರನ ಈ ನಿಷ್ಠೂರ ಮಾತುಗಳಿಂದ ನೊಂದು ಹೇಮನಳಿನಿ ತಲೆ ತಗ್ಗಿಸಿದಳು. ನಳಿನಾಕ್ಷ ನಗುತ್ತ, "ಯೋಗೇನ್‌ಬಾಬು ಹತ್ತು ಜನರಲ್ಲಿ ಅವಮಾನಕ್ಕೆ ಗುರಿಯಾಗುವುದು ಅಪರಾಧ. ಆದರೆ ಕತ್ತಿಯೇನು, ಮನುಷ್ಯನೇನು, ಅವುಗಳ ಎಲ್ಲಾ ಭಾಗವೂ ಒರೆಯೊಳಗೆ ಇರಬಲ್ಲದೇನು. ಒರೆಯೊಳಗೆ ಕತ್ತಿಯ ಯಾವ ಭಾಗ ಇರಲು ಸಾಧ್ಯವೋ ಅದರಲ್ಲಿ ಎಲ್ಲಾ ಕತ್ತಿಗಳೂ ಒಂದೇ ಮಾದರಿ—ಹೊರಗಿನ ಹಿಡಿಯಲ್ಲಿ ಶಿಲ್ಪಿಯ ಇಷ್ಟ ಮತ್ತು ನೈಪುಣ್ಯಕ್ಕೆ ಅನುಸಾರವಾಗಿ ನಾನಾಬಗೆಯ ಕೆತ್ತನೆ ಕೆಲಸ ಮಾಡಲಾಗುವುದು: ಮನುಷ್ಯರಿಗೂ ಹತ್ತುಜನರ ಒರೆಯ ಹೊರಗೆ ಸ್ವತಃ ವಿಶೇಷ ಕೆತ್ತನೆಯ ಸ್ಥಳ ಬಂದಿದೆ, ಅದನ್ನು ನೀವು ಉಪಯೋಗವಿಲ್ಲದುದನ್ನಾಗಿ ಮಾಡಬಯಸು ವಿರೇನು! ನಾನು ಯಾರ ಕಣ್ಣಿಗೂ ಬೀಳದೆ ಕೋಣೆಯಲ್ಲಿ ಗುಟ್ಟಾಗಿರುತ್ತ ಎಲ್ಲವನ್ನೂ ಮೌನವಾಗಿ ಅನುಷ್ಠಾನಮಾಡುವೆ, ಅದು ಜನರ ಕಣ್ಣಿಗೆ

ಬಿದ್ದುದಾದರೂ ಹೇಗೆ, ಆ ವಿಷಯಗಳನ್ನು ಕುರಿತು ಆಲೋಚನೆ ನಡೆಸುವು ದಾದರೂ ಏಕೆ" ಎಂದು ನನಗೆ ಆಶ್ಚರ್ಯವಾಗುವುದು.

ಯೋಗೇಂದ್ರ—ನಿಮಗೆ ತಿಳಿದಿದೆಯೋ ಇಲ್ಲವೋ ಅರಿಯೆ, ಯಾರು ಜಗತ್ತಿನ ಉದ್ಧಾರದ ಭಾರವನ್ನು ಸಂಪೂರ್ಣವಾಗಿ ತಮ್ಮ ಹೆಗಲ ಮೇಲೆ ಹೊತ್ತುಕೊಂಡಿರುವರೋ ಅವರುಗಳು ಇತರರಮನೆಯಲ್ಲಿ ಎಲ್ಲಿ ಏನು ನಡೆಯುವುದು, ಎಂಬುದನ್ನು ಹುಡುಕಿ ಹೊರಗೆಡಹುವುದನ್ನು ಕರ್ತವ್ಯವೆಂದು ಪರಿಗಣಿಸಿರುವರು. ತಿಳಿಯದ ವಿಚಾರಗಳನ್ನೂ ಪೂರ್ಣಗೊಳಿಸಿಕೊಳ್ಳುವ ಶಕ್ತಿ ಅವರಿಗಿದೆ, ಹೀಗಿಲ್ಲವಾದರೆ ಜಗತ್ತನ್ನು ತಿದ್ದುವ ಕೆಲಸ ನಡೆಯುವುದಾದರೂ ಎಂತು ! ಅಷ್ಟೇಅಲ್ಲ ನಳಿನ್‌ಬಾಬು, ನಾಲ್ಕುಜನ ಯಾವುದನ್ನು ಮಾಡರೋ, ಅದನ್ನು ಕಣ್ಮರೆಯಾಗಿ ಮಾಡಿದರೂ ಕಣ್ಣಿಗೆ ಬೀಳುವುದು—ಯಾವುದನ್ನು ಎಲ್ಲರೂ ಮಾಡುವರೋ ಅದರತ್ತ ಜನ ಕಣ್ಣು ಹೊರಳಿಸುವುದೂ ಇಲ್ಲ. ಇಲ್ಲೇ ನೋಡಿದಿರಲ್ಲ, ನೀವು ಮಾಳಿಗೆಯಲ್ಲಿ ಕುಳಿತು ಏನೇನು ಮಾಡುವಿರೋ ಎಲ್ಲವೂ ನಮ್ಮ ಹೇಮಳ ಕಣ್ಣಿಗೆ ಬಿದ್ದಿರುವುದು—ಹೇಮ್ ಆ ವಿಷಯಗಳನ್ನು ಅಪ್ಪನಿಗೆ ಹೇಳಿರುವಳು—ಆದರೆ ಹೇಮ ನಿಮ್ಮನ್ನು ತಿದ್ದುವ ಹೊಣೆ ಹೊತ್ತಿಲ್ಲ.

ಹೇಮನಳಿನಿಯ ಮುಖ ಕೆಂಪೇರಿತು, ಅವಳು ವ್ಯತಿಥಳಾಗಿ ಏನನ್ನೋ ಹೇಳಬೇಕೆಂದು ನೋಡಿದಾಗ ನಳಿನಾಕ್ಷ ಹೇಳಿದ, "ನೀವು ಸ್ವಲ್ಪವೂ ನಾಚಿಕೆಪಡಬೇಡಿ; ಮಾಳಿಗೆಯಲ್ಲಿ ತಿರುಗಾಡಲು ಬಂಗು ಬೆಳಗ್ಗೆ-ಸಂಜೆ, ನನ್ನ ಆಹ್ನೀಕಕಾರ್ಯವನ್ನು ನೀವು ನೋಡಿದುದಾದರೆ, ಅಸಕ್ಕಾಗಿ ನಿಮ್ಮನ್ನು ಯಾರು ತಪ್ಪಿತಸ್ಥರೆನ್ನುವರು. ನಿಮಗೆ ಎರಡು ಕಣ್ಣುಗಳಿವೆಯೆಂದು ನೀವು ನಾಚಿಕೆಗೊಳ್ಳಬೇಡಿ; ಆ ತಪ್ಪು ನನ್ನದು.

ಅನ್ನದಾ—ಇಷ್ಟಲ್ಲದೆ ಹೇಮ್ ನಿಮ್ಮ ಆಹ್ನೀಕವಿಷಯದಲ್ಲಿ ನನ್ನ ಹತ್ತಿರ ಯಾವ ಆಕ್ಷೇಪಣೆಯನ್ನೂ ವ್ಯಕ್ತಪಡಿಸಿಲ್ಲ. ಅವಳು ಶ್ರದ್ಧಾಪೂರ್ವಕವಾಗಿ ನಿಮ್ಮ ಸಾಧನೆಯ ಪದ್ಧತಿಯನ್ನು ಕುರಿತು ನನ್ನನ್ನು ಪ್ರಶ್ನಿಸುತಿದ್ದಳು.

ಯೋಗೇಂದ್ರ—ನನಗೆ ಅವೆಲ್ಲಾ ತಿಳಿಯದು. ನಾನು ಸಾಧಾರಣವಾಗಿ ಜಗತ್ತಿನಲ್ಲಿ ಸಹಜರೀತಿಯಲ್ಲಿ, ಯಾವ ಬಗೆಯಲ್ಲಿ ಮುಂದುವರಿಯುತಿರುವೆನೋ ಅದಕ್ಕೆ ಯಾವ ವಿಶೇಷ ತೊಂದರೆಯನ್ನೂ ಕಂಡಿಲ್ಲ-ಗುಟ್ಟಾಗಿ ಅದ್ಭುತವಾದ ಕೆಲಸ ನಡೆಸಿದರೆ ಅತಿ ಲಾಭವುಂಟಾಗುವುದು ಎಂದು ನನ್ನ ಮನಸಿಗೆ ತೋರದು. ಅದಕ್ಕೆ ಪ್ರತಿಯಾಗಿ ಮನಸಿನ ಸಾಮಂಜಸ್ಯ ನಷ್ಟವಾಗಿ

ಮನುಷ್ಯನನ್ನು ಒಂದೇದಾರಿಯಲ್ಲಿ ಕೊಂಡೊಯ್ಯುವುದು. ಆದರೆ ನೀವು ನನ್ನ ಮಾತಿನಿಂದ ಕೋಪಿಸಿಕೊಳ್ಳಬೇಡಿ. ನಾನು ಸಂಪೂರ್ಣವಾಗಿ ಸಾಧಾರಣ ಮನುಷ್ಯ. ಪೃಥ್ವಿಯಲ್ಲಿ ನಾನು ಅತ್ಯಂತ ಮಧ್ಯದ ಶ್ರೇಣಿಯ ಸ್ಥಳದಲ್ಲೇ ಇರುವುದು ; ಯಾರು ಯಾವ ಬಗೆಯಲ್ಲಾದರೂ ಎತ್ತರವಾದ ಸ್ಥಳ ಹತ್ತಿ ಕುಳಿತುಕೊಳ್ಳುವರೋ ಅವರುಗಳ ಮೇಲೆ ಕಲ್ಲೆಸೆಯದಿರಲು ನನ್ನಿಂದ ಸಾಧ್ಯವಿಲ್ಲ. ಈ ರೀತಿ ನನ್ನಂತೆ ಲೆಕ್ಕವಿಲ್ಲದಷ್ಟು ಜನರಿರುವರು, ಆದುದರಿಂದ ಒಂದು ವೇಳೆ ನೀವು ಎಲ್ಲರನ್ನೂ ಬಿಟ್ಟು ಯಾವುದೋ ಅದ್ಭುತ ಲೋಕಕ್ಕೆ ಅದೃಶ್ಯರಾಗಿ ಹೋಗುವುದಾದರೆ, ಆಗ ಹೇರಳವಾದ ಕಲ್ಲಿನೇಟಿಗೆ ಗುರಿಯಾಗಬೇಕಾಗುವುದು.

ನಳಿನಾಕ್ಷ—ಕಲ್ಲಿನೇಟು ನಾನಾರೀತಿಯಲ್ಲಿರುವುವು. ಕೆಲವು ಸ್ಪರ್ಶಿಸುವವು, ಕೆಲವು ಗುರುತುಮಾಡಿ ಹೋಗುವವು. ಈತ ಹುಚ್ಚಾಟ ಆಡುತ್ತಿರುವ, ಹುಡುಗಾಟ ಆಡುತ್ತಿರುವ ಎಂದು ಯಾರಾದರೂ ಹೇಳಿದರೆ ಅದರಿಂದ ಯಾವ ನಷ್ಟವೂ ಆಗುವುದಿಲ್ಲ—ಆದರೆ ಈತ ಸಾಧುತ್ವ–ಸಾಧುತನ ಮಾಡುತ್ತಿರುವನು, ಗುರುವಾಗಿ ಶಿಷ್ಯಸಂಗ್ರಹಕ್ಕೆ ಪ್ರಯತ್ನಿಸುತಿರುವ ಎಂದು ಹೇಳಿದಾಗ ಆ ಮಾತನ್ನು ನಗುವಿನಲ್ಲಿ ತೇಲಿಸಿಬಿಡಲು ತೊಡಗಿದರೆ ಎಷ್ಟು ಪ್ರಮಾಣದಲ್ಲಿ ನಗಬೇಕಾಗುವುದೋ ಅಷ್ಟು ಪ್ರಮಾಣಕ್ಕೆ ತಕ್ಕಂತೆ ನಗು ಒಟ್ಟುಗೂಡಲಾರದು.

ಯೋಗೆಂದ್ರ—ಆದರೆ ನಾನು ಹೇಳುವುದಿಷ್ಟೇ ; ನನ್ನ ಮೇಲೆ ಕೋಪಿಸಿಕೊಳ್ಳಬೇಡಿ ನಳಿನ್‌ಬಾಬು. ನೀವು ಮಾಳಿಗೆಯಲ್ಲಿ ಕುಳಿತು ಇಷ್ಟ ಬಂದತೆ ಮಾಡಿ, ಅದಕ್ಕೆ ಅಡ್ಡಿಪಡಿಸಲು ನಾನು ಯಾರು ! ನಾನು ಹೇಳುವುದು ಏನೆಂದರೆ, ಸಾಧಾರಣ ಎಲ್ಲೆಯಲ್ಲಿ ನಿಮ್ಮನ್ನು ಉಳಿಸಿಟ್ಟುಕೊಂಡರೆ ಯಾವ ಮಾತೂ ಬರುವುದಿಲ್ಲ. ಎಲ್ಲರೂ ನಡೆದುಕೊಳ್ಳುವಂತೆ ನಾವೂ ನಡೆದುಕೊಂಡರೆ ಸಾಕು ;–ಅದಕ್ಕೆ ವಿರುದ್ಧವಾಗಿ ಹೋಗುವುದಾದರೆ ಜನರ ಗುಂಪು ಕೂಡುವುದು. ಅವರು ಬೈದರೂ ಬೈಯಲಿ ಅಥವಾ ಭಕ್ತಿತೋರಲಿ, ಅದರಿಂದ ಯಾವಲಾಭ–ನಷ್ಟವೂ ಇಲ್ಲ–ಆದರೆ ಈ ರೀತಿಯ ಗುಂಪಿನ ಮಧ್ಯೆ ಜೀವನ ನಡೆಸುವುದು ನಮ್ಮಂದಿಯ ಬದುಕೇನು ?

ನಳಿನಾಕ್ಷ—ಯೋಗೇನ್‌ಬಾಬು ಎಲ್ಲಿ ಹೋಗುವಿರಿ. ನನ್ನನ್ನು ನನ್ನ ಮಾಳಿಗೆಯ ಮೇಲಿಂದ ಒಮ್ಮೆಗೇ ಸರ್ವಸಾಧಾರಣರ ನಯಗಾರೆ ಮಾಡಿದ

ಕೆಳ ಅಂತಸ್ತಿಗೆ ಬಲವಂತವಾಗಿ ಹಠಾತ್ತನೆ ಎಳೆದಿಟ್ಟು ಓಡಿಹೋದರೆ ಹೇಗೆ?

ಯೋಗೇಂದ್ರ—ಇವತ್ತಿನ ಮಟ್ಟಿಗೆ ನನಗೆ ಸಾಕಾಗಿದೆ. ಇನ್ನು ಈ ದಿನ ಸಾಕು ಸ್ವಲ್ಪತಿರುಗಾಡಿಬರಲು.ಹೋಗುವೆ.

ಯೋಗೇಂದ್ರ ಹೊರಟು ಹೋದ ಬಳಿಕ ಹೇಮನಳಿನಿ ಮುಖತಗ್ಗಿಸಿಕೊಂಡು ಮೇಜಿನಮೇಲೆ ಹಾಕಿದ್ದ ವಸ್ತ್ರಕ್ಕೆ ಅಕಾರಣವಾಗಿ ತೊಂದರೆ ಕೊಡಲಾರಂಭಿಸಿದಳು. ಆಗ ಅವಳ ಕಣ್ಣೆವೆಗಳ ಕೆಳಭಾಗ ತೋಯ್ದಿರುವ ಚಿಹ್ನೆಯೂ ಕಂಡುಬಂತು.

ದಿನದಿನಕ್ಕೂ ಹೇಮನಳಿನಿ ನಳಿನಾಕ್ಷನೊಡನೆ ಮಾತುಕತೆ ನಡೆಸುತ್ತ ನಡೆಸುತ್ತ ತನ್ನ ಅಂತರಂಗದ ದೈನ್ಯತೆ ಕಂಡುಕೊಂಡಳು. ಮತ್ತು ನಳಿನಾಕ್ಷನ ದಾರಿ ಅನುಸರಿಸಲು ಕಳವಳದಿಂದ ಕಾತರಿಸುತಿದ್ದಳು. ಅತ್ಯಂತ ದುಃಖದ ವೇಳೆಯಲ್ಲಿ ಅವಳು ಒಳಗೂ–ಹೊರಗೂ ಯಾವುದೋ ಅವಲಂಬನೆಯನ್ನು ಹುಡುಕಿಯೂ ಪಡೆಯಲಾರದೆ ಇದ್ದಳು, ಆಗ ನಳಿನಾಕ್ಷ ವಿಶ್ವವನ್ನು ಅವಳ ಎದುರಿಗೆ ಹೊಸದು ಮಾಡಿ ತೆರೆದಿಟ್ಟ. ಬ್ರಹ್ಮಚಾರಿಣಿಯರಂತೆ ಒಂದು ನಿಯಮಪಾಲನೆಗಾಗಿ ಅವಳ ಮನ ಕೆಲವು ದಿನಗಳಿಂದಲೂ ಉತ್ಸಾಹ ಪಡುತ್ತಿತ್ತು–ಕಾರಣ, ನಿಯಮ ಮನಸ್ಸಿಗೆ ಒಂದು ದೃಢ ಅವಲಂಬನೆ;— ಕೇವಲ ಅಷ್ಟೇ ಅಲ್ಲ; ಶೋಕ ಸುಮ್ಮನೆ ಮನಸ್ಸಿನ ಭಾವದ–ಆಕಾರದಲ್ಲಿ ನೆಲಸಿರಲಾರದು, ಅದು ಹೊರಗೂ ಒಂದು ಕಷ್ಟ ಸಾಧನೆಯ ಮೂಲಕ ತನ್ನನ್ನು ಶಾಶ್ವತಗೊಳಿಸಿಕೊಳ್ಳಲು ಪ್ರಯತ್ನಿಸುವುದು. ಇಷ್ಟು ಕಾಲದ ವರೆಗೂ ಹೇಮನಳಿನಿ ಆ ರೀತಿ ಏನನ್ನೂ ಮಾಡಲಿಲ್ಲ—ಜನ ಕಂಡಾರು ಎಂಬ ಸಂದೇಹದಿಂದ ವೇದನೆಯನ್ನು ಅವಳು ಅತ್ಯಂತ ರಹಸ್ಯವಾಗಿ ತನ್ನ ಹೃದಯಲ್ಲಿ ಕಾಪಾಡಿಕೊಂಡು ಬಂದಿರುವಳು. ನಳಿನಾಕ್ಷನ ಸಾಧನೆಯ ಪದ್ಧತಿಯನ್ನು ಅನುಸರಿಸಿ ಈ ದಿನ ಅವಳು ಶುಚಿಕರವೂ ಸಾತ್ವಿಕವೂ ಆದ ಆಹಾರವನ್ನು ಸ್ವೀಕರಿಸಿದಳು, ಆಗ ಅವಳ ಮನಸ್ಸು ಅತಿ ತೃಪ್ತಿಗೊಂಡಿತು. ತನ್ನ ಮಲಗುವ ಮನೆಯ ನೆಲದಮೇಲಿಂದ ಚಾಪೆಯನ್ನೂ ಜಮಖಾನವನ್ನೂ ತೆಗೆದುಹಾಕಿ ಹಾಸಿಗೆಯನ್ನು ಒಂದು ಕಡೆ ತೆರೆಯಿಂದ ಮರೆಮಾಡಿದಳು—ಆ ಕೊಠಡಿಯಲ್ಲಿ ಬೇರೆ ಯಾವ ಸಾಮಾನನ್ನೂ ಇರಿಸಲಿಲ್ಲ. ಆ ನೆಲವನ್ನು ಪ್ರತಿದಿನವೂ ಹೇಮನಳಿನಿ ಸ್ವಹಸ್ತದಿಂದ ನೀರು ಹಾಕಿ ತೊಳೆದು ಶುದ್ಧ ಪಡಿಸುವಳು–ಒಂದು ಪರಾತದಲ್ಲಿ ಪಲವಾರು ಹೂ ಇರುವುದು.

ಸ್ನಾನವಾದ ಬಳಿಕ ಶುಭ್ರ ವಸ್ತ್ರ ಧರಿಸಿ ಅಲ್ಲೇ ನೆಲದ ಮೇಲೆ ಹೇಮ ನಳಿನಿ ಕುಳಿತುಕೊಳ್ಳುವಳು-ಎಲ್ಲ ತೆರದ ಕಿಟಕಿಗಳ ಮೂಲಕ ಕೊಠಡಿಯೊಳಕ್ಕೆ ತಡೆಯಿಲ್ಲದೆ ಬೆಳಕು ಪ್ರವೇಶಿಸುವುದು, ಆ ಬೆಳಕಿನ ಮೂಲಕ, ಆಕಾಶದ ಮೂಲಕ, ವಾಯುವಿನ ಮೂಲಕ ಅವಳು ತನ್ನ ಅಂತಃಕರಣವನ್ನು ಅಭಿಷೇಕಿಸಿ ಕೊಳ್ಳುವಳು. ಅನ್ನದಾಬಾಬು ಸಂಪೂರ್ಣವಾಗಿ ಹೇಮನಳಿನಿಯೊಡನೆ ಭಾಗವಹಿಸದಾದರು-ಆದರೆ ನಿಯಮ ಪಾಲನೆಯ ಮೂಲಕ ಹೇಮನಳಿನಿಯ ಮುಖದಲ್ಲಿ ಪ್ರಕಾಶಿಸುತಿದ್ದ ಒಂದು ಅತಿ ತೃಪ್ತಿಯ ಕಾಂತಿಯನ್ನು ಕಂಡು ಮುದುಕರ ಮನಸ್ಸು ಸಮಾಧಾನ ಹೊಂದುತಿತ್ತು. ಈಗೀಗ ನಳಿನಾಕ್ಷ ಬಂದರೆ ಹೇಮನಳಿನಿಯ ಕೋಠಡಿಯಲ್ಲೇ ನೆಲದ ಮೇಲೆ ಕುಳಿತು ಆ ಮೂವರಲ್ಲೂ ಮಾತು ಕತೆ ನಡೆಯುವುದು.

ಇದ್ದಕ್ಕಿದ್ದಂತೆ ಯೋಗೇಂದ್ರ ಎದುರಾಳಿಯಾದ—"ಇದೆಲ್ಲಾ ಏನು, ನೀವೆಲ್ಲರೂ ಕಲೆತು ಮನೆಯನ್ನು ಅತಿ ಪವಿತ್ರವನ್ನಾಗಿ ಮಾಡುವಿರಿ— ನನ್ನಂಥ ವ್ಯಕ್ತಿಗೆ ಇಲ್ಲಿ ಕಾಲೂರುವುದಕ್ಕೂ ಸ್ಥಳವಿಲ್ಲ" ಎಂದ.

ಹಿಂದಿನಂತಾಗಿದ್ದರೆ ಯೋಗೇಂದ್ರನ ಕೊಂಕು ನುಡಿಯಿಂದ ಹೇಮ ನಳಿನಿ ಬಹಳ ನೊಂದುಕೊಳ್ಳಬೇಕಾಗುತ್ತಿತ್ತು ;—ಈಗ ಅನ್ನದಾಬಾಬುಗಳು ಯೋಗೇಂದ್ರನ ಮಾತುಮಾತಿಗೂ ಕೋಪಿಸಿಕೊಳ್ಳುವರು. ಆದರೆ ಹೇಮನಳಿನಿ ನಳಿನಾಕ್ಷನ ಪಕ್ಷ ವಹಿಸಿ ಶಾಂತಸ್ನಿಗ್ಧ ಭಾವದಿಂದ ಹಾಸ್ಯಮಾಡುವಳು. ಈಗೀಗ ಅವಳು ಒಂದು ತುಯ್ದಾಟವಿಲ್ಲದ ನಿಶ್ಚಿಂತ ಆಶ್ರಯವನ್ನವಲಂಬಿ ಸಿರುವಳು—ಈ ವಿಷಯದಲ್ಲಿ ನಾಚಿಕೆ ಪಡುವುದು ಕೂಡ ದೌರ್ಬಲ್ಯವೆಂದು ಅರಿತಿರುವಳು. ಜನ ಅವಳ ಈಗಿನ ಎಲ್ಲ ಆಚರಣೆಯನ್ನೂ ವಿಚಿತ್ರವೆಂದು ತಿಳಿದು ಹಾಸ್ಯಮಾಡುವುದು ಅವಳಿಗೆ ತಿಳಿದಿತ್ತು—ಆದರೆ ನಳಿನಾಕ್ಷನ ವಿಷಯದಲ್ಲಿದ್ದ ಅವಳ ಭಕ್ತಿ ಮತ್ತು ನಂಬಿಕೆ ಎಲ್ಲ ಜನರನ್ನೂ ಮೀರಿ ನಿಂತಿರುವುದು-ಇದರಿಂದಲೇ ಜನರೆದುರಿಗೆ ಅವಳು ಈಗ ಸಂಕೋಚಗೊಳ್ಳಳು.

ಒಂದು ದಿನ ಹೇಮನಳಿನಿ ಬೆಳಗಿನ ಸ್ನಾನದ ಬಳಿಕ ಉಪಾಸನೆ ಮುಗಿಸಿಕೊಂಡು ಅವಳ ಏಕಾಂತ ಕೊಠಡಿಯಲ್ಲಿ ಕಿಟಕಿಯ ಎದುರಿಗೆ ಸ್ತಬ್ಧಳಾಗಿ ಕುಳಿತಿದ್ದಳು, ಹಠಾತ್ತನೆ ಆ ವೇಳೆಗೆ ಅನ್ನದಾಬಾಬು ನಳಿನಾಕ್ಷ ನನ್ನು ಕರೆದುಕೊಂಡು ಅಲ್ಲಿಗೆ ಬಂದರು. ಹೇಮನಳಿನಿಯ ಹೃದಯ ಆಗ ಪರಿಪೂರ್ಣವಾಗಿತ್ತು. ಕೂಡಲೇ ಅವಳು ನೆಲ ಮುಟ್ಟಿ ಮೊದಲು ನಳಿನಾಕ್ಷ

ನಿಗೂ ಆ ಬಳಿಕ ತನ್ನ ತಂದೆಗೂ ನಮಸ್ಕರಿಸಿ ಪಾದಧೂಳಿಯನ್ನು ಪರಿಗ್ರಹಿಸಿದಳು. ನಳಿನಾಕ್ಷ ಸಂಕೋಚಗೊಂಡ. ಅನ್ನದಾಬಾಬುಗಳು "ಕಳವಳಗೊಳ್ಳಬೇಡಿ ನಳಿನ್‌ಬಾಬು, ಹೇಮ ತನ್ನ ಕರ್ತವ್ಯ ನೆರವೇರಿಸಿರುವಳು" ಎಂದರು.

ನಳಿನಾಕ್ಷ ಅಲ್ಲಿಗೆ ಅಷ್ಟು ಮುಂಜಾನೆಯಲ್ಲಿ ಎಂದೂ ಬಂದಿರಲಿಲ್ಲ. ಅದರಿಂದಲೇ ಅತಿ ಕುತೂಹಲದಿಂದ ಹೇಮನಳಿನಿ ಅವನ ಮುಖದ ಕಡೆ ನೋಡಿದಳು. ನಳಿನಾಕ್ಷ, "ಕಾಶಿಯಿಂದ ತಾಯಿಯವರು ಹೇಳಿ ಕಳುಹಿಸಿರುವರು, ಅವರ ಆರೋಗ್ಯ ಅಷ್ಟು ಉತ್ತಮವಾಗಿಲ್ಲ, ಆದ್ದರಿಂದ ಇಂದು ಸಂಜೆಯ ಗಾಡಿಯಲ್ಲಿ ಕಾಶಿಗೆ ಹೋಗಲು ನಿಶ್ಚಯಿಸಿರುವೆ. ಮಧ್ಯಾಹ್ನ ಸಾಧ್ಯವಾದಷ್ಟು ನನ್ನ ಎಲ್ಲ ಕೆಲಸಗಳನ್ನೂ ಮುಗಿಸಿಕೊಳ್ಳಬೇಕು. ಅದರಿಂದಲೇ ಈಗ ನಿಮ್ಮ ಬಳಿ ಹೊರಡಲು ಅನುಮತಿ ಕೇಳಲು ಬಂದಿರುವೆ" ಎಂದು ಹೇಳಿದ.

"ಏನು ಹೇಳಿದಿರಿ, ತಾಯಿಗೆ ಮೈ ಚೆನ್ನಾಗಿಲ್ಲವೆ, ಭಗವಂತ ಆದಷ್ಟು ಬೇಗ ಅವರು ಆರೋಗ್ಯ ಪಡೆದು ಏಳುವಂತೆ ಮಾಡಲಿ. ಈ ಕೆಲವು ದಿನಗಳಿಂದ ನಾವು ನಿಮ್ಮಿಂದ ಪಡೆದಿರುವ ಉಪಕಾರದ ಋಣವನ್ನು ಎಂದೆಂದೂ ತೀರಿಸಲಾರೆವು" ಎಂದರು ಅನ್ನದಾಬಾಬುಗಳು.

ನಳಿನಾಕ್ಷ, "ಖಂಡಿತವಾಗಿ ಹೇಳುವೆ, ನಿಮ್ಮಗಳ ಹತ್ತಿರ ನಾನು ಅತಿ ಉಪಕಾರ ಹೊಂದಿರುವೆ. ನೆರೆಮನೆಯವನಿಗೆ ಎಷ್ಟು ಸಹಾಯ ಮಾಡಬೇಕೋ ಅಷ್ಟನ್ನೂ ಮಾಡಿರುವಿರಿ—ಅಷ್ಟೇ ಅಲ್ಲದೆ ನಾನು ಇಷ್ಟು ದಿನಗಳಿಂದ ಮನಸ್ಸಿನಲ್ಲೇ ಆಲೋಚಿಸಿಕೊಳ್ಳುತ್ತಿದ್ದ ಆಳವಾದ ವಿಷಯಗಳಿಗೆ ನಿಮ್ಮ ಶ್ರದ್ಧೆಯ ಮೂಲಕ ಹೊಸ ಹೊಳಪು ಕೊಟ್ಟಿರುವೆ—ನನ್ನ ಭಾವನೆ ಮತ್ತು ಸಾಧನೆ ನಿಮ್ಮ ಜೀವನ ಅವಲಂಬಿಸಿ ನನಗೆ ಇನ್ನೂ ಎರಡರಷ್ಟು ಆಶ್ರಯಸ್ಥಳವಾಯಿತು. ಇತರ ಮನುಷ್ಯರ ಮನಃಪೂರ್ವಕವಾದ ಸಹಕಾರದಿಂದ ಗುರಿ ಮುಟ್ಟುವುದು ಅದೆಷ್ಟು ಸುಲಭವಾಗುವುದೆಂಬುದನ್ನು ನಾನು ಚೆನ್ನಾಗಿ ತಿಳಿದಿರುವೆ" ಎಂದು ಹೇಳಿದ.

"ನನಗೆ ಇದೇ ಆಶ್ಚರ್ಯ, ನಮಗೆ ಯಾವುದೋ ಒಂದರ ಅತಿ ಅಗತ್ಯ ಒದಗಿತ್ತು, ಆದರೆ ಅದೇನೆಂದು ನಾವರಿಯೆವು—ಇಂಥ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ನಿಮ್ಮನ್ನು ಪಡೆದೆವು ಮತ್ತು ನೀವಿಲ್ಲದೆ ನಮಗೆ ನಡೆಯದೆಂದೂ ಕಂಡುಕೊಂಡೆವು. ನಾವು ಅಷ್ಟಾಗಿ ಮನೆ ಬಿಟ್ಟು ಹೊರಗೆ ಹೋಗುವವರಲ್ಲ,

ನಾಲ್ಕು ಜನರ ನಡುವೆ ಹೋಗಿ ಬರುವುದು ನಮಗೆ ಸರಿಬೀಳದು—ಯಾವ್ರು ದಾವರೂ ಸಭೆಗೆ ಹೋಗಿ ಭಾಷಣ ಕೇಳುವ ಪದ್ಧತಿಯೇ ನಮಗೆ ಇಲ್ಲ,—ನಾನು ಒಂದು ವೇಳೆ ಹೋದರೂ ಹೇಮುಳನ್ನು ಹೊರಡಿಸುವುದು ಬಹಳ ಕಷ್ಟ. ಆದರೆ ಆ ದಿನ ಅದೇನು ಆಶ್ಚರ್ಯವೋ ನೋಡಿ— ನೀವು ಭಾಷಣ ಮಾಡುವಿರಿ ಎಂದು ಯೋಗೇಂದ್ರ ಹೇಳಿದ ಕೂಡಲೇ ನಾವಿಬ್ಬರೂ ಯಾವ ಅಡ್ಡಿಯನ್ನೂ ತೋರ್ಪಡಿಸದೆ ಅಲ್ಲಿಗೆ ಬಂದೆವು—ಇಂಥ ಘಟನೆ ಎಂದೂ ಘಟಿಸಿರಲಿಲ್ಲ. ಈ ಎಲ್ಲ ಸಂಗತಿಯನ್ನೂ ನೆನಪಿಟ್ಟಿರಿ, ನಳಿನ್‌ಬಾಬು. ಇದರಿಂದಲೇ ನಮಗೆ ನಿಮ್ಮ ನಿಃಸಂದಿಗ್ಧ ಪ್ರಯೋಜನ ಇಲ್ಲದಿದ್ದರೆ ಹೀಗೆ ನಡೆಯುತ್ತಿರಲಿಲ್ಲ ಎಂದು ತಿಳಿಯುವಿರಿ. ನಾವು ನಿಮಗೆ ಚಿರಋಣಿ" ಎಂದರು ಅನ್ನದಾಬಾಬುಗಳು.

ನಳಿನಾಕ್ಷ—ನೀವುಗಳೂ ಈ ಸಂಗತಿಯನ್ನು ಜ್ಞಾಪಕದಲ್ಲಿಟ್ಟಿರಬೇಕು, ನಿಮ್ಮಲ್ಲಲ್ಲದೆ ಬೇರೆ ಯಾರ ಬಳಿಯಲ್ಲೂ ನಾನು ನನ್ನ ಜೀವನದ ರಹಸ್ಯ ವಿಷಯಗಳನ್ನು ಹೇಳಿಲ್ಲ. ಸತ್ಯವನ್ನು ಪ್ರಕಾಶಗೊಳಿಸಲು ಸಾಧ್ಯವೆನಿಸುವುದೇ ಸತ್ಯ ಸಂಬಂಧದಲ್ಲಿ ಚರಮ ಶಿಕ್ಷಣ. ಅದನ್ನು ಪ್ರಕಟಮಾಡುವ ಗೂಢ ಪ್ರಯೋಜನ ನಿಮ್ಮಗಳ ಮೂಲಕ ನೆರವೇರಿತು. ಮತ್ತು ನೀವುಗಳು ನನಗೆ ಅತಿ ಉಪಕಾರಿಗಳಾಗಿದ್ದಿರಿ ಎಂಬ ಸಂಗತಿಯನ್ನು ನೀವು ಎಂದೂ ಮರೆಯಬಾರದು.

ಹೇಮನಳಿನಿ ಯಾವ ಮಾತೂ ಆಡಲಿಲ್ಲ; ಕಿಟಕಿಯೊಳಗಿಂದ ಬಿಸಿಲು ಬಂದು ನೆಲದ ಮೇಲೆ ಬಿದ್ದಿತ್ತು; ಅದರ ಕಡೆಗೇ ನೋಡುತ್ತ ಅವಳು ತೆಪ್ಪನೆ ಕುಳಿತಿದ್ದಳು. ನಳಿನಾಕ್ಷ ಏಳುವ ವೇಳೆಯಾಗಲು ಅವಳು, "ನಿಮ್ಮ ತಾಯಿ ಹೇಗಿರುವರು ಎಂಬುದನ್ನು ಹೇಗಾದರೂ ನಮಗೆ ತಿಳಿಸಲೇ ಬೇಕು" ಎಂದಳು.

ನಳಿನಾಕ್ಷ ಎದ್ದು ನಿಲ್ಲುತ್ತಲೇ ಹೇಮನಳಿ ಪುನಃ ಅವನಿಗೆ ನೆಲ ಮುಟ್ಟಿ ನಮಸ್ಕರಿಸಿದಳು.

## ೪೪

ಈಚೆಗೆ ಕೆಲವು ದಿನಗಳಿಂದ ಅಕ್ಷಯ ಕಣ್ಣಿಗೆ ಬಿದ್ದಿರಲಿಲ್ಲ. ನಳಿನಾಕ್ಷ ಕಾಶಿಗೆ ಹೊರಟುಹೋಗಲು. ಈ ದಿನ ಅವನು ಯೋಗೇಂದ್ರನ ಜೊತೆಯಲ್ಲಿ

ಅನ್ನದಾಬಾಬುಗಳ ಚಹದ ಮೇಜಿನ ಬಳಿ ಕಾಣಬಂದ. ರಮೇಶನ ನೆನಪು ಹೇಮನಳಿನಿಯ ಮನದಲ್ಲಿ ಸ್ವಲ್ಪವಾದರೂ ಇದ್ದೇ ಇರುವುದು ಎಂದು ಅಕ್ಷಯ ಒಳಗೊಳಗೇ ನಿಶ್ಚಯಿಸಿದ್ದ. ಅದನ್ನು ಅಳೆಯುವ ಸಹಜ ಉಪಾಯವೆಂದರೆ ಅಕ್ಷಯನ ವಿಷಯದಲ್ಲಿ ಅವಳು ಬೇಸರ ತೋರಿಸುವುದು. ಈ ದಿನ ಹೇಮ ನಳಿನಿಯ ಮುಖ ಪ್ರಶಾಂತವಾಗಿರುವುದನ್ನು ನೋಡಿದ—ಅಕ್ಷಯನನ್ನು ನೋಡಿ ಅವಳ ಮುಖ ಭಾವ ಸ್ವಲ್ಪವೂ ಬದಲಾಯಿಸಲಿಲ್ಲ, ಸ್ವಾಭಾವಿಕ ಪ್ರಸನ್ನತೆಯೊಡನೆ ಹೇಮನಳಿನಿ, "ಇಷ್ಟು ದಿನಗಳಿಂದ ನೀವು ಕಾಣಲೇ ಇಲ್ಲವಲ್ಲ" ಎಂದಳು.

"ನಾನು ಪ್ರತಿದಿನ ನೋಡಲು ಅರ್ಹನೇನು?" ಎಂದ ಅಕ್ಷಯ. ಹೇಮನಳಿನಿ ನಗುತ್ತ ಹೇಳಿದಳು, "ಆ ಅರ್ಹತೆ ಇಲ್ಲದಿದ್ದರೆ ಬಂದು ಹೋಗು ವುದನ್ನು ನಿಲ್ಲಿಸುವುದು ಒಳ್ಳೆಯದೆಂದು ತಿಳಿದಿರುವಿರಾ, ಹಾಗಾದರೆ ನಾವೆಲ್ಲರೂ ನಿರ್ಜನವಾಸ ಅವಲಂಬಿಸಬೇಕಾದೀತು".

ಯೋಗೇಂದ್ರ—ವಿನಯದ ಮೂಲಕ ಶೌರ್ಯ ತೋರಿಸುವೆನೆಂದು ಅಕ್ಷಯ ಎಣಿಸಿದ್ದ, ಹೇಮ ಅದಕ್ಕೂ ಪೆಟ್ಟುಕೊಟ್ಟು ಎಲ್ಲ ಮನುಷ್ಯ ಜಾತಿ ಯವರ ಪರವಾಗಿ ವಿನಯ ತೋರಿಸಿದಳು, ಆದರೆ ಈ ವಿಷಯದಲ್ಲಿ ನಾನೂ ಒಂದು ಮಾತು ಹೇಳುವುದಿದೆ. ನನ್ನಂಥ ಸಾಧಾರಣ ಜನ ಪ್ರತಿನಿತ್ಯ ಕಂಡು ಕೇಳಲು ಅರ್ಹರು—ಅಲ್ಲದೆ ಯಾರು ಅಸಾಧಾರಣರೋ ಅವರನ್ನು ಯಾವಾಗಲೋ–ಎಂದೋ ಕಾಣುವುದು ಒಳ್ಳೆಯದು, ಅವರನ್ನು ಹೆಚ್ಚು ಸಹಿಸುವುದು ಕಠಿಣ, ಇದರಿಂದಲೇ ಅವರು ಅರಣ್ಯದ–ಪರ್ವತದ–ಗುಹೆಗಳಲ್ಲೇ ಸುತ್ತಾಡುವರು—ಜನರ ನಡುವೆ ಅವರು ಶಾಶ್ವತವಾಗಿ ವಾಸಿಸಲು ಆರಂಭಿಸಿ ದರೆ ಅಕ್ಷಯ–ಯೋಗೇಂದ್ರ ಮೊದಲಾದ ಕೇವಲ ಸಾಮಾನ್ಯ ಜನ ಕಾಡು ಗುಡ್ಡದತ್ತ ಓಡಿಹೋಗಬೇಕಾದೀತು.

ಯೋಗೇಂದ್ರನ ಮಾತಿನಲ್ಲಿದ್ದ ಚುಚ್ಚುವಿಕೆ ಹೇಮನಳಿನಿಯನ್ನು ಇರಿಯಿತು, ಯಾವ ಉತ್ತರವನ್ನೂ ಹೇಳದೆ ಮೂರು ಬಟ್ಟಲು ಚಹ ಸಿದ್ಧಪಡಿಸಿ ಅವಳು ಅನ್ನದಾ, ಅಕ್ಷಯ ಮತ್ತು ಯೋಗೇಂದ್ರರ ಎದುರಿಗೆ ಇಟ್ಟಳು. "ನೀನು ಚಹ ಕುಡಿಯುವುದಿಲ್ಲವೇ? ಎಂದು ಯೋಗೇಂದ್ರ ಕೇಳಿದ.

ಇನ್ನು ಯೋಗೇಂದ್ರನ ಬಾಯಿಂದ ಕಠಿಣವಾದ ಮಾತು ಕೇಳಬೇಕಾದೀ ತೆಂದು ಹೇಮನಳಿನಿ ಬಲ್ಲಳು, ಅದರಿಂದ ಅವಳು ಶಾಂತ ದೃಢತೆಯೊಡನೆ, "ಇಲ್ಲ, ನಾನು ಚಹ ಬಿಟ್ಟಿರುವೆ" ಎಂದಳು.

ಯೋಗೇಂದ್ರ—ಈಗಲೀಗ ನಿಯಮದಂತೆ ತಪಸ್ಸು ಆರಂಭಿಸಿತೆಂದು ತಿಳಿಯುವೆ. ಚಹದ ಪಾತ್ರೆಯಲ್ಲಿ ಆಧ್ಯಾತ್ಮಿಕ ತೇಜಸ್ಸು ಸಾಕಾದಷ್ಟಿಲ್ಲ, ಏನಿರಬೇಕೋ, ಅವೆಲ್ಲ ಅಳಲೇಕಾಯಿ ಕಷಾಯದಲ್ಲಿದೆಯಲ್ಲವೆ? ಎಂಥ ಕಷ್ಟ ಒದಗಿತು! ಹೇಮ್, ಇವೆಲ್ಲಾ ಹಾಗೆ ಇರಲಿ. ಒಂದು ಬಟ್ಟಲು ಚಹ ಕುಡಿದು ನಿನ್ನ ತಪಸ್ಸೋ-ಧ್ಯಾನವೋ ಕೆಟ್ಟುಹೋಗುವುದಾದರೆ, ಹೋಗಲಿ ಬಿಡು—ಈ ಜಗತ್ತಿನಲ್ಲಿ ಅತಿ ದೃಢವಾದ ವಸ್ತುವೂ ಶಾಶ್ವತವಾಗಿ ನಿಲ್ಲದು, ಅಂತಹ ಅಸಾಧಾರಣ ವಿಷಯಗಳನ್ನು ಕಟ್ಟಿಕೊಂಡು ನಾಲ್ಕುಜನರೊಡನೆ ಬಾಳುವುದು ಅಸಾಧ್ಯ.

ಹೀಗೆ ಹೇಳಿ ಯೋಗೇಂದ್ರ ಎದ್ದು ಸ್ವಹಸ್ತದಿಂದ ಒಂದು ಬಟ್ಟಲು ಚಹ ಸಿದ್ಧಪಡಿಸಿ ಹೇಮನಳಿನಿಯ ಎದುರು ಇಟ್ಟನು. ಅವಳು ಅದನ್ನು ಕೈಯಿಂದಲೂ ಮುಟ್ಟದೆ ಅನ್ನದಾಬಾಬುಗಳಿಗೆ ಹೇಳಿದಳು, "ಅಪ್ಪಾ, ಇಂದು ನೀವು ಬರಿಯ ಚಹ ಕುಡಿದಿರುವಿರಿ. ಬೇರೇನೂ ತಿನ್ನುವುದಿಲ್ಲವೆ?".

ಅನ್ನದಾಬಾಬುಗಳ ಕಂಠಸ್ವರ ಮತ್ತು ಕೈ ನಡುಗತೊಡಗಿತು, "ಅಮ್ಮ, ನಾನು ಸತ್ಯವಾಗಿ ಹೇಳುತಿರುವೆ. ಈ ಮೇಜೆಯ ಮುಂದೆ ಏನು ತಿಂದರೂ ನನಗೆ ರುಚಿಸುವುದೇ ಇಲ್ಲ. ಯೋಗೇನನ ಮಾತುಕತೆಯನ್ನು ನಾನು ಬಹಳ ಹೊತ್ತಿನಿಂದ ಸುಮ್ಮನೆ ಸಹಿಸಲು ಪ್ರಯತ್ನಿಸಿದೆ. ನೋಡು, ನನ್ನ ಮೈ-ಮನಸ್ಸಿನ ಈ ಸ್ಥಿತಿಯಲ್ಲಿ ಮಾತನಾಡಹೋದರೆ ನಾನು ಏನೋ ಹೇಳುವುದಕ್ಕೆ ಏನನ್ನೋ ಹೇಳಿಬಿಡುವೆ –ಕಡೆಗೆ ಪಶ್ಚಾತ್ತಾಪ ಪಡಬೇಕಾಗುವುದು.

ಹೇಮನಳಿನಿ ತನ್ನ ತಂದೆಯ ಕುರ್ಚಿಯ ಪಕ್ಕಕ್ಕೆ ಬಂದು ನಿಂತು, "ಅಪ್ಪಾ, ನೀವು ಕೋಪಿಸಿಕೊಳ್ಳಬೇಡಿ—ಅಣ್ಣ ನನಗೆ ಚಹ ಕುಡಿಸಲು ಆಶಿಸುವ, ಅದೂ ಒಳ್ಳೆಯದೇ—ಅದರಿಂದ ನನಗೆ ಸ್ವಲ್ಪವೂ ದುಃಖವಿಲ್ಲ. ಇಲ್ಲಪ್ಪಾ, ನೀವು ತಿನ್ನಲೇ ಬೇಕು—ಬರಿಯ ಹೊಟ್ಟೆಯಲ್ಲಿ ಚಹ ಕುಡಿದರೆ ನಿಮಗೆ ತೊಂದರೆಯಾಗುವುದೆಂದು ನಾನು ಬಲ್ಲೆ" ಎಂದಳು.

ಹೀಗೆ ಹೇಳಿ ಹೇಮ ತಿಂಡಿಯ ಪಾತ್ರೆಯನ್ನು ತನ್ನ ತಂದೆಯ ಎದುರಿಗೆ ಎಳೆದಿಟ್ಟಳು. ಅನ್ನದಾ ಮೆಲ್ಲಮೆಲ್ಲನೆ ತಿನ್ನತೊಡಗಿದರು.

ಹೇಮನಳಿನಿ ತನ್ನ ಕುರ್ಚಿಗೆ ತಿರುಗಿ ಬಂದು ಯೋಗೇಂದ್ರ ಇಟ್ಟಿದ್ದ ಚಹದ ಬಟ್ಟಲಿಂದ ಚಹ ಕುಡಿಯಲು ಸಿದ್ಧಳಾದಳು. ಅಕ್ಷಯ ಕೂಡಲೇ ಎದ್ದು, ಕ್ಷಮಿಸಬೇಕು, ಆ ಬಟ್ಟಲನ್ನು ನನಗೆ ಕೊಡಬೇಕು, ನನ್ನ ಬಟ್ಟಲು ಬರಿದಾಗಿದೆ" ಎಂದ.

ಯೋಗೇಂದ್ರ ಎದ್ದುಬಂದು ಹೇಮನಳಿನಿಯ ಕೈಯಿಂದ ಬಟ್ಟಲು ಕಿತ್ತುಕೊಂಡು ಅನ್ನದಾಬಾಬುಗಳಿಗೆ, "ನಾನು ತಪ್ಪು ಮಾಡಿರುವೆ, ನನ್ನನ್ನು ಕ್ಷಮಿಸಬೇಕು" ಎಂದು ಹೇಳಿದ.

ಅನ್ನದಾ ಅದಕ್ಕೆ ಯಾವ ಉತ್ತರವನ್ನೂ ಹೇಳಲಿಲ್ಲ. ನೋಡುತ್ತ ನೋಡುತ್ತ ಅವರ ಎರಡು ಕಣ್ಣುಗಳಿಂದಲೂ ನೀರು ಜಾರಲಾರಂಭಿಸಿತು.

ಯೋಗೇಂದ್ರ ಅಕ್ಷಯನೊಡನೆ ಮೆಲ್ಲಮೆಲ್ಲನೆ ಕೋಣೆಯಿಂದ ಹೊರಟು ಹೋದ. ಅನ್ನದಾಬಾಬು ತಿಂಡಿತಿಂದೆದ್ದು ಹೇಮನಳಿನಿಯ ಕೈಹಿಡಿದುಕೊಂಡು ನಡುಗುವ ಹೆಜ್ಜೆಯೊಡನೆ ಮೇಲಿನ ಕೊಠಡಿಗೆ ಹೋದರು.

ಅಂದೇ ರಾತ್ರಿ ಅನ್ನದಾಬಾಬುಗಳಿಗೆ ಹೊಟ್ಟೆನೋವಿನಂತೆ ಬಂತು. ಡಾಕ್ಟರು ಬಂದು ಪರೀಕ್ಷಿಸಿ, "ಅವರ ಯಕೃತ್ತಿನ ವಿಕಾರ ತಲೆದೋರಿರುವುದು– ಇನ್ನೂ ರೋಗ ಹೆಚ್ಚಾಗಿಲ್ಲ, ಈಗಲೇ ಪಶ್ಚಿಮದ ಯಾವುದಾದರೂ ಆರೋಗ್ಯ ಸ್ಥಳಕ್ಕೆ ಹೋಗಿ ವರುಷವೋ ಆರುತಿಂಗಳೋ ಇದ್ದು ಬಂದರೆ ಶರೀರ ನೆಟ್ಟಗಾದೀತು" ಎಂದು ಹೇಳಿದರು.

ನೋವು ಕಡಿಮೆಯಾಯಿತು, ಡಾಕ್ಟರ್ ಹೊರಟು ಹೋದರು, ಅನ್ನದಾಬಾಬುಗಳು, "ಹೇಮ್, ನಡೆ ತಾಯಿ, ನಾವು ಕೆಲವು ದಿನ ಕಾಶಿಯಲ್ಲಿ ಹೋಗಿ ಇರೋಣ" ಎಂದರು.

ಅದೇ ಸಮಯದಲ್ಲಿ ಹೇಮನಳಿನಿಯ ಮನಸ್ಸಿನಲ್ಲೂ ಈ ಮಾತು ತಲೆದೋರಿತು. ನಳಿನಾಕ್ಷ ತೆರಳಿದ ಬಳಿಕ ಹೇಮ ತನ್ನ ಸಾಧನೆಯಲ್ಲಿ ಒಂದು ದೌರ್ಬಲ್ಯವನ್ನು ಅನುಭವಿಸಲು ಆರಂಭಿಸಿದ್ದಳು. ನಳಿನಾಕ್ಷನ ಇರುವಿಕೆ ಹೇಮನಳಿನಿಯ ಸಮಸ್ತ ಆಹ್ನಿಕ ಕ್ರಿಯೆಗೂ ದೃಢ ಅವಲಂಬನದಂತೆ ಇತ್ತು. ನಳಿನಾಕ್ಷನ ಮುಖದಲ್ಲಿ ಒಂದು ಸ್ಥಿರ ನಿಷ್ಠೆ ಮತ್ತು ಪ್ರಶಾಂತ ಪ್ರಸನ್ನತೆಯು ಜ್ಯೋತಿಯಿತ್ತು. ಅದೇ ಹೇಮನಳಿನಿಯ ನಂಬಿಕೆಯನ್ನು ಯಾವಾಗಲೂ ಅರಳಿಸಿಟ್ಟಿತ್ತು. ನಳಿನಾಕ್ಷ ಇಲ್ಲದುದರಿಂದ ಅವಳ ಉತ್ಸಾಹದಲ್ಲಿ ಒಂದು ಮಲಿನ ಛಾಯೆ ಬಂದು ಸೇರಿತು ಅದರಿಂದಲೇ ಇಂದು ಹಗಲೆಲ್ಲಾ ಹೇಮ

ನಳಿನಿ ನಳಿನಾಕ್ಷ ಉಪದೇಶಿಸಿದ್ದ ಎಲ್ಲ ಅನುಷ್ಠಾನಗಳನ್ನೂ ಅತಿ ಯತ್ನ ದಿಂದಲೂ ಚೆನ್ನಾಗಿಯೂ ಪಾಲಿಸಿರುವಳು. ಆದರೆ ಅದರಲ್ಲಿ ಬೇಸರ ಬಂದು ಕಣ್ಣೀರನ್ನು ತಡೆಯಲಾರದಷ್ಟು ನಿರಾಸೆ ತಲೆಹಾಕಿತು, ಚಹದ ಮೇಜೆಯ ಬಳಿ ಸ್ಥೈರ್ಯದಿಂದ ಅವಳು ಆತಿಥ್ಯದಲ್ಲಿ ತೊಡಗಿದ್ದಳು, ಆದರೆ ಅವಳ ಹೃದಯದಲ್ಲಿ ಒಂದು ಭಾರ ಒತ್ತಿದಂತಿತ್ತು ; ಪುನಃ ಅವಳನ್ನು ಅವಳ ಆ ಪೂರ್ವಸ್ಮೃತಿಯ ವೇದನೆ ದ್ವಿಗುಣವಾಗಿ ಆಕ್ರಮಿಸಿರುವುದು—ಮತ್ತೆ ಅವಳ ಮನಸ್ಸು ಗೃಹಹೀನ, ಆಶ್ರಯಹೀನವಾದಂತೆ ಹಾ ಹಾ ಎಂದು ಹಾರಾಡ ತೊಡಗಿರುವುದು. ಅದರಿಂದಲೇ ಅವಳು ಕಾಶಿಗೆ ಹೋಗುವ ಸಂಗತಿಯನ್ನು ಕೇಳುತ್ತಲೇ ಕಾತುರದಿಂದ, "ಅಪ್ಪಾ, ಅದೇ ಸರಿಯಾದುದು" ಎಂದಳು.

ಮರುದಿನ ಸಿದ್ಧತೆಯ ಪ್ರಯತ್ನ ನೋಡಿ ಯೋಗೇಂದ್ರ, "ಏನು, ಇದೇನು ಸಂಗತಿ ?" ಎಂದು ವಿಚಾರಿಸಿದ.

"ನಾವು ಪಶ್ಚಿಮಕ್ಕೆ ಹೋಗುವೆವು" ಎಂದರು ಅನ್ನದಾಬಾಬುಗಳು.

"ಪಶ್ಚಿಮದಲ್ಲಿ ಎಲ್ಲಿಗೆ ?" ಎಂದ ಯೋಗೇಂದ್ರ.

ಅನ್ನದಾಬಾಬುಗಳು, ಹೋಗಹೋಗುತ್ತ ಯಾವುದೋ ಒಂದು ಸ್ಥಳ ಗೊತ್ತುಮಾಡಿಕೊಳ್ಳುವೆವು ಎಂದರು. ತಾವು ಕಾಶಿಗೆ ಹೋಗುವ ಸಂಗತಿ ಯನ್ನು ಒಮ್ಮೆಗೇ ಯೋಗೇಂದ್ರನ ಬಳಿ ಹೇಳಲು ಸಂಕೋಚಗೊಂಡರು.

"ಆದರೆ ಈ ಬಾರಿ ನಾನು ನಿಮ್ಮೊಡನೆ ಬರುವಂತಿಲ್ಲ. ನಾನು ಆ ಹೆಡ್‌ಮಾಸ್ಟರ್ ಕೆಲಸಕ್ಕೆ ಅರ್ಜಿ ಕಳುಹಿಸಿರುವೆ, ಅದರ ಉತ್ತರಕ್ಕಾಗಿ ಕಾಯುತ್ತಿರುವೆ" ಎಂದು ಯೋಗೇಂದ್ರ ಹೇಳಿದ.

## ೪೫

ರಮೇಶ ಮುಂಜಾನೆಯಲ್ಲೇ ಅಲಹಾಬಾದಿನಿಂದ ಗಾಜೀಪುರಕ್ಕೆ ತಿರುಗಿ ಬಂದ. ಆಗ ಬೀದಿಯಲ್ಲಿ ಹೆಚ್ಚು ಜನ ಇರಲಿಲ್ಲ, ಮಂಜಿನ ತೆರೆಯಿಂದ ಬೀದಿಯ ಅಕ್ಕಪಕ್ಕದ ಮರಗಳು ಎಲೆಗಳ ಹೊದಿಕೆಯೊಳಗೆ ಕಣ್ಮರೆಯಾಗಿ ನಿಂತಿದ್ದುವು. ಕೇರಿಯ ಮನೆಗಳ ಮೇಲೆ ಆಗಲೂ ದಟ್ಟವಾಗಿದ್ದ ಬಿಳಿಯ ಮಂಜು ಮರಿಗಳ ಮೇಲೆ ನಿಸ್ತಬ್ಧವಾಗಿ–ಕುಳಿತಿರುವ ರಾಜಹಂಸದಂತೆ ಸ್ಥಿರವಾಗಿತ್ತು. ಆ ಜನಹೀನ ದಾರಿಯಲ್ಲಿ ಗಾಡಿಯೊಳಗೆ ಒಂದು ದಪ್ಪ

ಓವರ್ ಕೋಟಿನೊಳಗೆ ರಮೇಶನ ಎದೆ ಚಂಚಲ ಹೃತ್‌ಪಿಂಡದ ಏಟಿನಿಂದ ಕೇವಲ ಅಲ್ಲೋಲಕಲ್ಲೋಲವಾಗುತ್ತಿತ್ತು.

ಬಂಗಲೆಯ ಹೊರಗೇ ಗಾಡಿ ನಿಲ್ಲಿಸಿ ರಮೇಶ ಇಳಿದ. ಖಂಡಿತ ಗಾಡಿಯ ಶಬ್ದವನ್ನು ಕಮಲೆ ಕೇಳಿರುವಳು—ಸದ್ದು ಕೇಳಿ ತಪ್ಪದೆ ವರಾಂಡದಲ್ಲಿ ಬಂದು ನಿಂತಿರುವಳು ಎಂದು ಭಾವಿಸಿದ. ತನ್ನ ಕೈಯಿಂದಲೇ ಕಮಲೆಯ ಕೊರಳಿಗೆ ಹಾಕಲು ಅಲಹಾಬಾದಿನಿಂದ ರಮೇಶ ಒಂದು ಬೆಲೆ ಬಾಳುವ 'ನೆಕ್‌ಲೇಸ್' ಕೊಂಡು ತಂದಿದ್ದ—ಆ ಪೆಟ್ಟಿಗೆಯನ್ನು ರಮೇಶ ತನ್ನ ಓವರ್ ಕೋಟಿನ ದೊಡ್ಡ ಜೇಬಿನಿಂದ ಹೊರತೆಗೆದ.

ಬಂಗಲೆಯ ಎದುರಿಗೆ ಬಂದು ರಮೇಶ ವರಾಂಡದಲ್ಲಿ ಆಳು ವಿಷ್ಣು ಆತಂಕವಿಲ್ಲದೆ ನಿದ್ದೆಮಾಡುತಿರುವುದನ್ನೂ ಮನೆಯ ಬಾಗಿಲು ಮುಚ್ಚಿರುವುದನ್ನೂ ನೋಡಿದ. ಆಶ್ಚರ್ಯ ಮುಖದೊಡನೆ ರಮೇಶ ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಂತ. ಒಮ್ಮೆ ಗಟ್ಟಿಯಾಗಿ "ವಿಷ್ಣು" ಎಂದು ಕೂಗಿದ. ಈ ಕೂಗಿನಿಂದ ಮನೆಯೊಳಗಿನ ನಿದ್ದೆಗೂ ಭಂಗಬರುವುದೆಂದು ಭಾವಿಸಿದ. ಈ ರೀತಿಯಲ್ಲಿ ನಿದ್ದೆ ಕೆಡಿಸಬೇಕೆಂಬ ಅಪೇಕ್ಷೆ ಅವನ ಮನಸ್ಸಿನಲ್ಲಿ ನುಡಿಯುತ್ತಿತ್ತು; ರಮೇಶನಾದರೋ ಅರ್ಧ ರಾತ್ರಿಯವರೆಗೂ ನಿದ್ರಿಸಲಾರದವನಾಗಿದ್ದ.

ಎರಡು-ಮೂರು ಬಾರಿ ಕೂಗಿದರೂ ವಿಷ್ಣು ಏಳಲಿಲ್ಲ—ಕಡೆಗೆ ಅವನನ್ನು ತಟ್ಟಿ ಎಬ್ಬಿಸಬೇಕಾಯಿತು. ವಿಷ್ಣು ಎದ್ದು ಕುಳಿತು ಕ್ಷಣಕಾಲ ಮಂಕು ಕವಿದವನಂತೆ ನೋಡುತ್ತಿದ್ದ.

"ಅಮ್ಮನವರು ಮನೆಯಲ್ಲಿರುವರೇ?" ಎಂದು ರಮೇಶ ಕೇಳಿದ.

ವಿಷ್ಣುವಿಗೆ ಮೊದಲೇ ರಮೇಶನ ಮಾತು ಅರ್ಥವಾಗಲಿಲ್ಲ—ಆ ಬಳಿಕ ಕೂಡಲೇ ಬೆಚ್ಚಿಬಿದ್ದು ಹೇಳಿದ, "ಹೌದು, ಅವರು ಮನೆಯಲ್ಲೇ ಇರುವರು" ಎಂದು ಹೇಳಿ ಅವನು ಪುನಃ ಮಲಗಿ ನಿದ್ದೆಮಾಡತೊಡಗಿದ.

ರಮೇಶ ಬಾಗಿಲು ತಟ್ಟುತ್ತಲೇ ಬಾಗಿಲು ತೆರೆಯಿತು. ಒಳಕ್ಕೆ ಹೋಗಿ ಕೋಣೆ ಕೋಣೆಯಲ್ಲೂ ಹುಡುಕಿದ. ಎಲ್ಲೂ ಯಾರೂ ಇಲ್ಲ. ಆದರೂ ಒಮ್ಮೆ ಗಟ್ಟಿಯಾಗಿ "ಕಮಲಾ" ಎಂದು ಕೂಗಿದ. ಎಲ್ಲೂ ಯಾವ ಸದ್ದೂ ಇಲ್ಲ. ಹೊರ ತೋಟದಲ್ಲಿ ಬೇವಿನ ಮರದಡಿಯವರೆಗೆ ಸುತ್ತಿಬಂದ, ಅಡುಗೆ ಕೋಣೆಯಲ್ಲಿ, ಆಳುಗಳ ಕೋಣೆಯಲ್ಲಿ, ಕುದುರೆಲಾಯದಲ್ಲಿ ಹುಡುಕಿ ನೋಡಿದ; ಕಮಲೆಯನ್ನು ಎಲ್ಲೂ ಕಾಣಲಿಲ್ಲ. ಆಗ ಬಿಸಿಲು ಮೂಡಿತ್ತು-ಕಾಗೆಗಳು

ಕಾ ಕಾ ಎನ್ನತೊಡಗಿದ್ದುವು ಮತ್ತು ಬಂಗಲೆಯ ಭಾವಿಯಿಂದ ನೀರೊಯ್ಯಲು ಕೊಡ ತಲೆಯಮೇಲಿಟ್ಟುಕೊಂಡು ಕೇರಿಯ ಒಬ್ಬಿಬ್ಬರು ಹುಡುಗಿಯರು ಕಾಣ ಬಂದರು. ದಾರಿಯ ಆಚೆಯ ಗುಡಿಸಲ ಅಂಗಳದಲ್ಲಿ ಯಾವಳೋ ಹಳ್ಳಿಯ ಹೆಂಗಸು ವಿಚಿತ್ರ ಸ್ವರದಲ್ಲಿ ಹಾಡುತ್ತ ಬೀಸುವ ಕಲ್ಲಿನಲ್ಲಿ ಗೋಧಿ ಒಡೆಯುತ್ತಲಿದ್ದಳು.

ರಮೇಶ ಬಂಗಲೆಯೊಳಕ್ಕೆ ತಿರುಗಿ ಬಂದು ನೋಡಿದಾಗ, ವಿಷ್ಣು ಮತ್ತೆ ಗಾಢನಿದ್ರೆಯಲ್ಲಿ ಮುಳುಗಿದ್ದ. ಆಗ ಅವನು ಬಗ್ಗಿ ಅವನನ್ನು ಎರಡು ಕೈಗಳಿಂದಲೂ ಬಲವಾಗಿ ಅಲುಗಾಡಿಸ ತೊಡಗಿದ—ನೋಡಿದರೆ ಅವನ ನಿಟ್ಟುಸಿರಿನಲ್ಲಿ ಹೆಂಡದ ದುರ್ವಾಸನೆ ಹೊರಡುತ್ತಿತ್ತು.

ಅಲುಗಾಡಿಸುವ ರಭಸಕ್ಕೆ ವಿಷ್ಣು ಅತಿಯಾಗಿ ಎಚ್ಚರಗೊಂಡು ಚಡಪಡಿಸುತ್ತ ಎದ್ದು ನಿಂತ. ರಮೇಶ ಪುನಃ, " ಅಮ್ಮಾವರೆಲ್ಲಿ ? " ಎಂದು ಕೇಳಿದ.

" ಅವರು ಮನೆಯಲ್ಲೇ ಇರುವರು " ಎಂದ ವಿಷ್ಣು.

ರಮೇಶ—ಹೇಳು, ಮನೆಯಲ್ಲಿ ಎಲ್ಲಿ ?

ವಿಷ್ಣು—ನಿನ್ನೆ ಇಲ್ಲಿಗೆ ಬಂದಿದ್ದರು.

ರಮೇಶ—ಆಮೇಲೆ ಎಲ್ಲಿಗೆ ಹೋದರು ?

ವಿಷ್ಣು ಬಾಯಿಬಿಟ್ಟುಕೊಂಡು ರಮೇಶನ ಮುಖದ ಕಡೆ ನೋಡುತ್ತಿದ್ದ.

ಆ ವೇಳೆಗೆ ದೊಡ್ಡಂಚಿನ ಒಂದು ಬಿಳಿಯ ಪಂಚೆಯುಟ್ಟು ಮೇಲು ವಸ್ತ್ರ ಹಾರಾಡಿಸುತ್ತ ಕೆಂಗಣ್ಣಿನ ಉಮೇಶ ಬಂದು ಸೇರಿದ. ರಮೇಶ ಅವನನ್ನು ಪ್ರಶ್ನಿಸಿದ, " ಉಮೇಶ, ನಿಮ್ಮ ಅಮ್ಮ ಎಲ್ಲಿ ? "

" ಅಮ್ಮ ನಿನ್ನೆಯಿಂದ ಇಲ್ಲೇ ಇರುವರು " ಎಂದ ಉಮೇಶ.

ರಮೇಶ ಕೇಳಿದ. " ನೀನು ಎಲ್ಲಿದ್ದೆ ? ".

ಉಮೇಶ, " ನನ್ನನ್ನು ತಾಯಿಯವರು ನಿನ್ನೆ ಸಂಜೆ ನಿಧಿಬಾಬುಗಳ ಮನೆಯಲ್ಲಿ ಯಕ್ಷಗಾನ ನೋಡಲು ಕಳುಹಿಸಿದ್ದರು " ಎಂದು ಹೇಳಿದ.

ಗಾಡಿಯವನು ಬಂದು, '' ಬಾಬೂ, ನನ್ನ ಬಾಡಿಗೆ '' ಎಂದ.

ರಮೇಶ ಕೂಡಲೇ ಅದೇ ಗಾಡಿಯಲ್ಲಿ ಏರಿಕೊಂಡು ನೆಟ್ಟಗೆ ಚಿಕ್ಕಪ್ಪನ ಮನೆಗೆ ಹೋಗಿ ತಲುಪಿದ. ಅಲ್ಲಿಗೆ ಹೋಗಿ ನೋಡಿದಾಗ, ಮನೆಯವರೆಲ್ಲ ಚಂಚಲರಾಗಿದ್ದರು. ಕಮಲೆಗೆ ಏನಾದರೂ ಅನಾರೋಗ್ಯವುಂಟಾಗಿರಬೇಕು ಎಂದು ರಮೇಶ ಭಾವಿಸಿದ. ಆದರೆ ಅದಲ್ಲ. ನಿನ್ನೆ ಸಂಜೆಯ ಬಳಿಕ ಉಮಿ

ಹಠಾತ್ತನೆ ಅತಿಯಾಗಿ ಕಿರುಚುತ್ತ ಅಳತೊಡಗಿದಳು ಮತ್ತು ಅವಳ ಮುಖ ನೀಲಿಯೂ ಕೈ-ಕಾಲು ತಣ್ಣಗೂ ಆಗಿ ಕೇರಿಯ ಜನರೆಲ್ಲ ಅತಿ ಗಾಬರಿಗೊಂಡರು. ಅವಳ ಶುಶ್ರೂಷೆಗಾಗಿ ನಿನ್ನೆ ಮನೆಯವರೆಲ್ಲ ಕಾತುರದಿಂದ ಇದ್ದರು.

ರಾತ್ರಿಯೆಲ್ಲಾ ಯಾರೊಬ್ಬರೂ ನಿದ್ದೆ ಮಾಡಲಿಲ್ಲ.

ಉಮಿಯ ಅನಾರೋಗ್ಯದಿಂದ ಖಂಡಿತ ನಿನ್ನೆ ಕಮಲ ಇಲ್ಲಿಗೆ ಬಂದಿರಬೇಕು ಎಂದು ರಮೇಶ ತಿಳಿದಿದ್ದ.

"ಉಮೆಯ ವಿಷಯದಲ್ಲಿ ಕಮಲ ಬಹಳ ಉದ್ವಿಗ್ನಳಾಗಿರುವಳು" ಎಂದು ವಿಪಿನನಿಗೆ ಹೇಳಿದ.

ಕಮಲ ನಿನ್ನೆ ರಾತ್ರಿ ಇಲ್ಲಿಗೆ ಬಂದಿದ್ದಳೋ ಇಲ್ಲವೋ, ಅದು ವಿಪಿನನಿಗೆ ಸರಿಯಾಗಿ ತಿಳಿಯದು—ಆದರಿಂದಲೇ ರಮೇಶನ ಮಾತಿನಲ್ಲಿ ಒಂದು ಬಗೆಯ ದನಿಗೂಡಿಸುತ್ತ ಹೇಳಿದ. "ಹೌದು, ಅವಳು ಉಮಿಯನ್ನು ಅತಿಯಾಗಿ ಪ್ರೀತಿಸುವಳೆಂದು ತಿಳಿದಿರುವೆ. ಯೋಚನೆಗೆ ಅವಕಾಶವಿಲ್ಲವೆಂದು ಡಾಕ್ಟರು ಹೇಳಿರುವರು".

ಏನೇ ಆಗಲಿ, ಅತಿ ಹೆಚ್ಚಿನ ಉಲ್ಲಾಸದ ಮುಖಕ್ಕೆ ಕಲ್ಪನೆಯ ಪೂರ್ಣ ಉಛ್ವಾಸದಿಂದ ತಡೆಯುಂಟಾಗಿ ರಮೇಶನ ಮನಸ್ಸು ಕಳವಳಪಡಲಾರಂಭಿಸಿತು. ತಮ್ಮ ಮಿಲನದಲ್ಲಿ ಒಂದು ದೈವೀತಡೆಯಿರಬೇಕೆಂದು ಅವನು ಆಲೋಚಿಸತೊಡಗಿದ.

ಆ ವೇಳೆಗೆ ರಮೇಶನ ಬಂಗಲೆಯಿಂದ ಉಮೇಶ ಬಂದ. ಇಲ್ಲಿನ ಅಂತಃಪುರಕ್ಕೆ ಅವನು ಹೋಗಿಬರುತಿದ್ದ. ಈ ಹುಡುಗನನ್ನು ಶೈಲಜೆ ಸ್ನೇಹದಿಂದ ಕಾಣುವಳು. ಮನೆಯೊಳಗೆ ಶೈಲಜೆಯ ಕೋಣೆಗೆ ಅವನು ಹೋಗುವುದನ್ನು ನೋಡಿ ಉಮಿಯ ನಿದ್ದೆ ತಿಳಿದೀತೆಂಬ ಹೆದರಿಕೆಯಿಂದ ಶೈಲ ಕೂಡಲೇ ಕೊಠಡಿಯಿಂದ ಹೊರಕ್ಕೆ ಬಂದಳು.

"ಅಮ್ಮ ಎಲ್ಲಿ ಚಿಕ್ಕಮ್ಮನವರೇ" ಎಂದು ಉಮೇಶ ಕೇಳಿದ. ಶೈಲ ಆಶ್ಚರ್ಯದಿಂದ, "ಏನೋ ಅದು. ನೀನೇ ನಿನ್ನೆ ಅವಳನ್ನು ಕರೆದುಕೊಂಡು ಆ ಮನೆಗೆ ಹೋದೆ. ಸಂಜೆಯಾದಮೇಲೆ ನಮ್ಮ ಲಚಮುನಿಯಾಳನ್ನು ಅಲ್ಲಿಗೆ ಕಳುಹಿಸಬೇಕೆಂದಿದ್ದೆ, ಮಗಳ ಅನಾರೋಗ್ಯದಿಂದ ಸಾಧ್ಯವಾಗಲಿಲ್ಲ" ಎಂದಳು.

ಉಮೇಶ ಮುಖ ಚಿಕ್ಕದು ಮಾಡಿಕೊಂಡು, "ಆ ಮನೆಯಲ್ಲಿ ಅವರನ್ನು ಕಾಣಲಿಲ್ಲ" ಎಂದ.

ಶೈಲ ಕಳವಳದಿಂದ ಕೇಳಿದಳು, "ಹಾಗೆಂದರೇನು, ನಿನ್ನೆ ರಾತ್ರಿ ನೀನೆಲ್ಲಿದ್ದೆ ?"

ಉಮೇಶ—ತಾಯಿಯವರು ನನ್ನನ್ನು ಇರಗೊಡಲಿಲ್ಲ. ಆ ಮನೆಗೆ ಹೋಗುತ್ತಲೇ ಅವರು ನನ್ನನ್ನು ನಿಧಿಬಾಬುಗಳಲ್ಲಿಗೆ ಯಕ್ಷಗಾನ ನೋಡಲು ಕಳುಹಿಸಿದರು.

ಶೈಲ – ನೀನೂ ಬಹಳ ಬುದ್ಧಿವಂತನೆಂದು ತೋರುವುದು. ವಿಷ್ಣು ಎಲ್ಲಿದ್ದ ?

ಉಮೇಶ – ಅವನು ಏನೂ ಹೇಳಲಿಲ್ಲ. ನಿನ್ನೆ ಅವನು ಪೂರ್ತಿಯಾಗಿ ಹೆಂಡ ಕುಡಿದಿದ್ದ.

ಶೈಲ—ಹೋಗು ಹೋಗು, ಬೇಗ ಬಾಬುಗಳನ್ನು ಕರೆದುಕೊಂಡು ಬಾ.

ವಿಪಿನ ಬರುತ್ತಲೇ ಶೈಲ, "ನೋಡಿದೆಯಾ ಇದೇನು ಸರ್ವನಾಶ". ಎಂದಳು.

ವಿಪಿನನ ಮುಖ ಬಣ್ಣಗೆಟ್ಟಿತು. ಅವನು ಕಳವಳದಿಂದ, "ಏನು, ಏನಾಯಿತು" ಎಂದ.

ಶೈಲ—ಕಮಲ ನಿನ್ನೆ ಆ ಬಂಗಲೆಗೆ ಹೋಗಿದ್ದಳು, ಅವಳು ಹುಡುಕಿದರೂ ಅಲ್ಲಿ ಇರಲಿಲ್ಲ.

ವಿಪಿನ್—ಆ ! ನಿನ್ನೆ ರಾತ್ರಿ ಇಲ್ಲಿಗೆ ಬರಲಿಲ್ಲವೇನು ?

ಶೈಲ—ಇಲ್ಲವಲ್ಲ-ಉಮಿಯ ಕಾಯಿಲೆಗಾಗಿ ಕರೆಸಬೇಕು ಎಂದಿದ್ದೆ ಹೋಗುವವರು ಯಾರಿದ್ದರು ? ರಮೇಶಬಾಬು ಬಂದಿರುವರೇನು ?

ವಿಪಿನ—ಹಾಗಾದರೆ ಆ ಬಂಗಲೆಯಲ್ಲಿ ಕಾಣದಿರಲು ಕಮಲ ಇಲ್ಲಿಯೇ ಇರಬೇಕೆಂದು ಅವರು ನಿಶ್ಚಯಿಸಿರಬೇಕು. ಅವರು ಇಲ್ಲಿಗೆ ಬಂದಿರುವರು.

ಶೈಲ—ನಡೆ ನಡೆ, ಬೇಗ ನಡೆ, ಅವಳನ್ನು ಹುಡುಕಲು ಹೋಗು. ಉಮಿ ಈಗ ನಿದ್ದೆಮಾಡುತ್ತಿರುವಳು—ಅವಳು ಚೆನ್ನಾಗಿಯೇ ಇರುವಳು.

ವಿಪಿನನೂ ರಮೇಶನೂ ಪುನಃ ಅದೇಗಾಡಿಯಲ್ಲಿ ಹತ್ತಿಕೊಂಡು ಬಂಗಲೆಗೆ ತಿರುಗಿ ಹೋದರು. ವಿಷ್ಣುವನ್ನು ವಿಚಾರಿಸಿದರು. ಬಹಳ

ಪ್ರಯತ್ನದಿಂದ ವಿಚಾರಿಸಿ ಇಷ್ಟು ಸಂಗತಿ ತಿಳಿದುಕೊಂಡರು—ನಿನ್ನೆ ಸಂಜೆ ಕಮಲ ಒಂಟಿಯಾಗಿ ಗಂಗಾನದಿಯ ಕಡೆಗೆ ಹೋದಳು. ವಿಷ್ಣು ಅವಳೊಡನೆ ಬರುವುದಾಗಿ ಹೇಳಿದ, ಕಮಲ ಅವನ ಕೈಗೆ ಒಂದು ರೂಪಾಯಿ ಕೊಟ್ಟು ಅವನನ್ನು ಬರಬೇಡವೆಂದು ಕಳುಹಿಸಿದಳು. ಅವನು ಕಾವಲು ಕಾಯಲು ಹೆಬ್ಬಾಗಿಲ ಬಳಿ ಕುಳಿತಿದ್ದ. ಆ ವೇಳೆಯಲ್ಲಿ ಮರದಿಂದ ಅದೇ ತಾನೇ ಇಳಿಸಿದ್ದ ನೊರೆಯುಕ್ಕುತಿದ್ದ ಹೆಂಡದ ಮಡಕೆ ಹೊತ್ತು ಹೆಂಡದವನು ಅವನೆದುರಿಗೆ ಹೋಗುತಿದ್ದ, ಆ ಬಳಿಕ ಜಗತ್ತಿನಲ್ಲಿ ಏನ ನಡೆಯಿತೋ ಅದು ಅವನಿಗೆ ಸ್ವಲ್ಪವೂ ತಿಳಿಯದು. ಯಾವ ದಾರಿಯಲ್ಲಿ ಕಮಲ ಗಂಗೆಗೆ ಹೋದಳೋ, ವಿಷ್ಣು ಅದನ್ನು ತೋರಿಸಿದ.

ಆ ದಾರಿ ಅನುಸರಿಸಿ ಮಂಜಿನಿಂದ ತೋಯ್ದು ಹೊಲದ ಮೇಲೆ ರಮೇಶ, ವಿಪಿನ ಮತ್ತು ಉಮೇಶ ಕಮಲೆಯನ್ನು ಹುಡುಕಲು ಹೊರಟರು. ಉಮೇಶ ಮರಿಯನ್ನು ಕಳೆದುಕೊಂಡ ಬೇಟೆಯ ಮೃಗದಂತೆ ನಾಲ್ಕೂಕಡೆ ತೀಕ್ಷ್ಣವ್ಯಾಕುಲ ದೃಷ್ಟಿ ಬೀರಲಾರಂಭಿಸಿದ. ಮೂವರೂ ನೆಟ್ಟಗೆ ಗಂಗೆಯ ತೀರಕ್ಕೆ ಬಂದು ನಿಂತರು. ಅಲ್ಲಿ ಸುತ್ತಲೂ ಬಯಲು. ಬಿಳಿಯ ಮರಳು ಬೆಳಗಿನ ಬಿಸಲಿನಲ್ಲಿ ಬಿಕೋ ಅನ್ನುತಿತ್ತು. ಎಲ್ಲೂ ಯಾರೂ ಕಂಡುಬರಲಿಲ್ಲ ಉಮೇಶ ಗಟ್ಟಿಯಾಗಿ ಚೀತ್ಕಾರ ಮಾಡುತ್ತ ಕೂಗಿದ, "ಅಮ್ಮ, ಅಮ್ಮಾ ಎಲ್ಲಿದ್ದೀರಮ್ಮ; ಆ ದಡದ ಅತಿದೂರದ ಎತ್ತರವಾದ ತೀರದಿಂದ ಅದರ ಮಾರ್ನುಡಿ ಕೇಳಿಬಂತು—ಯಾರೂ ಉತ್ತರ ಕೊಡಲಿಲ್ಲ. ಹುಡುಕುತ್ತ ಹುಡುಕುತ್ತ ಉಮೇಶ ಹಠಾತ್ತನೆ ದೂರದಲ್ಲಿ ಏನೋ ಒಂದು ಬಿಳಿಯಪದಾರ್ಥ ಕಂಡ. ಕೂಡಲೆ ಹತ್ತಿರಕ್ಕೆ ಹೋಗಿ ನೋಡಿದ, ಸಂಪೂರ್ಣವಾಗಿ ನೀರ ಹತ್ತಿರದಲ್ಲೇ ಒಂದು ಕರವಸ್ತ್ರದಲ್ಲಿ ಕಟ್ಟಿದ ಒಂದು ಬೀಗದಕೈ ಗೊಂಚಲು ಬಿದ್ದಿತ್ತು. "ಏನೋ, ಅದೇನೋ" ಎನ್ನುತ್ತ ರಮೇಶನೂ ಬಂದ. ನೋಡಿದರೆ ಕಮಲೆಯ ಬೀಗದಕೈ ಗೊಂಚಲು.

ಬೀಗದ ಕೈ ಬಿದ್ದಿದ್ದ ಮರಳು ದಡದ ಕೊನೆಯಲ್ಲಿ ಆ ಕೆಸರು ಮಣ್ಣಿನ ಮೇಲಿಂದ ಗಂಗೆಯ ನೀರಿನ ವರೆಗೆ ಚಿಕ್ಕ ಎರಡು ಪಾದಗಳ ಆಳವಾದ ಹೆಜ್ಜೆಯ ಗುರುತು ಬಿದ್ದಿತ್ತು. ಅಲ್ಲೇ ನೀರಿನಲ್ಲಿ ಏನೋ ಒಂದು ಹೊಳೆಯುತಿತ್ತು, ಅದು ಉಮೇಶನ ದೃಷ್ಟಿಗೆ ಬೀಳದಿರಲಿಲ್ಲ—ಅವನು ಅದನ್ನು ಅವಸರ

ಅವಸರವಾಗಿ ಎತ್ತಿಕೊಂಡು ನೋಡಿದ, ಚಿನ್ನದ ಮೇಲೆ ಎನಾಮಲ್ಲಿನ ಚಿತ್ರವಿರುವ ಒಂದು ಸಣ್ಣ ಬ್ರೂಚ್–ಇದೂ ರಮೇಶನ ಕಾಣಿಕೆ.

ಈ ರೀತಿ ಎಲ್ಲ ಸಂಕೇತವೂ ಗಂಗೆಯ ಕಡೆಗೆ ಬೆರಳು ತೋರಲು ಇನ್ನು ಉಮೇಶನಿಂದ ತಡೆಯಲಾಗಲಿಲ್ಲ– "ಅಮ್ಮ, ಎಲ್ಲವಮ್ಮಾ" ಎಂದು ಚೀರುತ್ತ ನೀರಿನಲ್ಲಿ ಮುಳುಗಿದ. ಅಲ್ಲಿ ನೀರು ಅಷ್ಟಾಗಿರಲಿಲ್ಲ–ಉಮೇಶ ಒಂದೇ ಸಮನೆ ಹುಚ್ಚನಂತೆ ಮುಳುಗಿ ಮುಳುಗಿ ತಳ ನೋಡುತ್ತ ಸುತ್ತಾಡ ತೊಡಗಿದ ನೀರು ಕೆಸರಾಯಿತು.

ರಮೇಶ ಮಂಕು ಕವಿದವನಂತೆ ನಿಂತಿದ್ದ. ವಿಪಿನ, "ಉಮೇಶ, ನೀನೇನು ಮಾಡುತ್ತಿರುವೆ? ಎದ್ದು ಬಾ" ಎಂದ.

ಉಮೇಶ ಬಾಯಿಂದ ನೀರು ಉಗುಳುತ್ತ ಉಗುಳುತ್ತ "ನಾ ಏಳಲಾರೆ ನಾ ಏಳಲಾರೆ. ಅಮ್ಮಾ, ನೀನು ನನ್ನನ್ನು ಬಿಟ್ಟು ಹೋಗಲಾರೆ" ಎಂದು ಅಳುತಿದ್ದ.

ವಿಪಿನನಿಗೆ ಹೆದರಿಕೆಯಾಯಿತು. ಆದರೆ ಉಮೇಶ ನೀರಮೀನಿನಂತೆ ತೇಲಿ ಹೋಗುತಿದ್ದ–ನೀರಿನಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದು ಅವನಿಂದ ಸಾಧ್ಯವಿಲ್ಲ. ಅವನು ಬಹಳವಾಗಿ ಮುಳುಗಿ–ತೇಲಿ ದಣಿದು ದಡಕ್ಕೆ ಎದ್ದು ಬಂದ ಮರಳಿನ ಮೇಲೆ ಹೊರಳುತ್ತ ಅಳಲಾರಂಭಿಸಿದ.

ವಿಪಿನ ನಿಸ್ತಬ್ಧ ರಮೇಶನನ್ನು ಸ್ಪರ್ಶಿಸಿ, "ರಮೇಶ್ ಬಾಬು, ನಡೆಯಿರಿ, ಇಲ್ಲಿ ನಿಂತಿದ್ದರೆ ಏನಾದೀತು. ಒಮ್ಮೆ ಪೋಲೀಸರಿಗೆ ಸಮಾಚಾರ ತಿಳಿಸೋಣ. ಅವರು ಎಲ್ಲವನ್ನೂ ಕಂಡು ಹಿಡಿಯುವರು" ಎಂದು ಹೇಳಿದ.

ಶೈಲಜೆಯ ಮನೆಯಲ್ಲಿ ಆ ದಿನ ಆಹಾರ ನಿದ್ದೆ ಇಲ್ಲದೆ ಅಳುವಿನ ಚೀರಾಟವೆದ್ದಿತು. ನದಿಯಲ್ಲಿ ಬೆಸ್ತರು ದೋಣಿ ಬಿಟ್ಟು ಬಹಳ ದೂರದ ವರೆಗೆ ಬಲೆ ಬೀಸಿ ಸುತ್ತಾಡಿದರು. ಪೋಲೀಸಿನವರು ನಾಲ್ಕೂಕಡೆ ಹುಡುಕ ತೊಡಗಿದರು —

ರೈಲ್ವೆಸ್ಟೇಷನ್ನಿಗೆ ಹೋಗಿ ವಿಚಾರಿಸಿ ಕಮಲೆಯನ್ನು ಹೋಲುವಂಥ ಯಾವ ಬಂಗಾಳಿ ಹುಡುಗಿಯೂ ರಾತ್ರಿ ಗಾಡಿ ಹತ್ತಲಿಲ್ಲವೆಂದು ರಮೇಶ ತಿಳಿದುಕೊಂಡ.

ಅಂದೇ ಸಂಜೆ ಚಿಕ್ಕಪ್ಪ ಬಂದು ಸೇರಿದರು. ಕೆಲವು ದಿನಗಳಿಂದ ಕಮಲೆಯ ನಡವಳಿಕೆ ಮತ್ತು ಆಗಿನ ಎಲ್ಲಾ ಸಂಗತಿಯನ್ನೂ ಕೇಳಿ ಅವಳು

ಗಂಗೆಯ ನೀರಿನಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಂಡಿರಬೇಕು ಎನ್ನಲು ಸಂದೇಹವೇ ಅವರಿಗೆ ಉಳಿಯಲಿಲ್ಲ.

ಲಚಮನಿಯೂ ಹೇಳಿದಳು "ಆದುದರಿಂದಲೇ ಹುಡುಗಿ ನಿನ್ನೆ ರಾತ್ರಿ ಅಕಾರಣ ಅಳು ಅತ್ತು ಒಂದು ಅದ್ಭುತ ಕಾಂಡ ನಡೆಸಿದಳು. ಅವಳಿಗೆ ಚೆನ್ನಾಗಿ ಮಂತ್ರ ಹಾಕಿಸಬೇಕು."

ರಮೇಶನ ಹೃದಯ ಒಣಗಿಹೋಯಿತು—ಅವನಲ್ಲಿ ಕಣ್ಣೀರಿನ ಒಂದು ಹನಿ ಕೂಡ ಇರಲಿಲ್ಲ. ಒಂದು ದಿನ ಇದೇ ಕಮಲ ಇದೇ ಗಂಗೆಯ ನೀರಿನಿಂದ ಎದ್ದು ನನ್ನ ಬಳಿಗೆ ಬಂದಿದ್ದಳು, ಪುನಃ ಪೂಜೆಯ ಪವಿತ್ರ ಹೂವಿನಂತೆ ಈ ದಿನ ಇದೇ ಗಂಗೆಯ ನೀರಿನಲ್ಲಿ ಐಕ್ಯಳಾದಳು ಎಂದು ಅವನು ಕುಳಿತು ಯೋಚಿಸಲಾರಂಭಿಸಿದ.

ಸೂರ್ಯ ಮುಳುಗಿದ ಬಳಿಕ ರಮೇಶ ಮತ್ತೊಮ್ಮೆ ಅದೇ ಗಂಗೆಯ ತೀರಕ್ಕೆ ಬಂದ—ಬೇಗದ ಕೈ ಗೊಂಚಲು ಬಿದ್ದಿದ್ದ ಕಡೆ ನಿಂತು ಅದೇ ಕಾಲ ಚಿಹ್ನೆಯನ್ನು ನೆಟ್ಟ ನೋಟದಿಂದ ನೋಡಿದ. ಆ ಬಳಿಕ ತೀರದಲ್ಲಿ ಎಕ್ಕಡ ಬಿಚ್ಚಿಟ್ಟು ಬಟ್ಟೆ ಕಳಚಿಟ್ಟು ನೀರಿನಲ್ಲಿ ಸ್ವಲ್ಪದೂರದವರೆಗೆ ಇಳಿದು ಹೋದ, ಹಾಗೂ ಪೆಟ್ಟಿಗೆಯಿಂದ ಆ ಹೊಸ 'ನೆಕ್‌ಲೇಸ್' ಹೊರತೆಗೆದು ಅತಿದೂರ ನೀರಿನ ನಡುವೆ ಬಿಸಾಡಿದ.

ರಮೇಶ ಯಾವಾಗ ಗಾಜೀಪುರದಿಂದ ಹೊರಟುಹೋದನೋ ಚಿಕ್ಕಪ್ಪನ ಮನೆಯಲ್ಲಿ ಯಾರೂ ಅವನ ಸುದ್ದಿ ತಿಳಿಯುವ ಸ್ಥಿತಿಯಲ್ಲಿರಲಿಲ್ಲ.

೪೬

ಈಗ ರಮೇಶನಿಗೆ ಯಾವ ಕೆಲಸವೂ ಇಲ್ಲ. ಇಹಜೀವನದಲ್ಲಿ ತಾನು ಯಾವ ಕೆಲಸವನ್ನೂ ಮಾಡಲಾರೆ, ಎಲ್ಲೂ ನೆಲೆಯಾಗಿ ನಿಲ್ಲಲಾರೆ ಎಂದು ಅವನ ಮನಸ್ಸು ಹೇಳಲಾರಂಭಿಸಿತು, ಹೇಮನಳಿನಿಯ ವಿಷಯ ಅವನ ಮನಸ್ಸಿನಲ್ಲಿ ಸ್ವಲ್ಪವೂ ನೆನಪಿನಲ್ಲಿರಲಿಲ್ಲ, ಅಷ್ಟೇ ಅಲ್ಲ, ಅದನ್ನು ಅವನು ದೂರ ಮಾಡಿರುವ—" ನನ್ನ ಜೀವನದಲ್ಲಿ ಒದಗಿದ ಕಠಿಣ ಪ್ರಸಂಗ, ನನ್ನನ್ನು ಎಂದೆಂದಿಗೂ ಜಗತ್ತಿನಲ್ಲಿ ಅನರ್ಹನನ್ನಾಗಿ ಮಾಡಿರುವುದು. ಸಿಡಿಲ ಹೊಡೆತಕ್ಕೆ ಸಿಕ್ಕಿದ ಮರ ಪ್ರಫುಲ್ಲ ಉದ್ಯಾನವನದಲ್ಲಿ ಸ್ಥಳ ಪಡೆಯಲು ಆಶಿಸಬಹುದೆ?" ಎಂದು ಅವನು ಮನಸ್ಸಿನಲ್ಲೇ ತೀರ್ಮಾನಿಸಿದ.

ರಮೇಶ ಸಂಚರಿಸುತ್ತ ಅಲೆದಾಡುವುದಕ್ಕಾಗಿ ಹೊರಹೊರಟ. ಒಂದೆಡೆ ಎಲ್ಲೂ ಹೆಚ್ಚು ದಿನ ತಂಗುವಂತಿರಲಿಲ್ಲ. ಅವನು ದೋಣಿಯಲ್ಲಿ ಕುಳಿತು ಕಾಶಿಯ ಸ್ನಾನಘಟ್ಟಗಳ ಸೌಂದರ್ಯ ನಿಟ್ಟಿಸಿದ, ದೆಹಲಿಯಲ್ಲಿ ಕುತುಬ್ ಮಿನಾರಿನ ಮೇಲಕ್ಕೆ ಏರಿದ, ಆಗ್ರಾದಲ್ಲಿ ಬೆಳುದಿಂಗಳ-ರಾತ್ರಿಯಲ್ಲಿ ತಾಜ ಮಹಲ್ ನೋಡಿಬಂದ. ಅಮೃತಸರದಲ್ಲಿ ಗುರುದ್ವಾರ ನೋಡಿ ರಜಪುಟಾಣ ದಲ್ಲಿ ಆಬೂ ಪರ್ವತ ಶಿಖರದ ದೇವಾಲಯ ದರ್ಶಿಸಲು ಹೋದ— ಈ ರೀತಿ ರಮೇಶ ತನ್ನ ಶರೀರಕ್ಕೂ-ಮನಸ್ಸಿಗೂ ವಿಶ್ರಾಂತಿ ಕೊಡುತ್ತಿರಲಿಲ್ಲ.

ಕಡೆಗೆ ಈ ಪ್ರಯಾಣದಿಂದ ದಣಿದ ಯುವಕನ ಅಂತಃಕರಣ ಕೇವಲ ಮನೆ ಅಪೇಕ್ಷಿಸಿ ಹಾಹಾಕಾರಕ್ಕೆ ಆರಂಭಿಸಿತು. ಅವನ ಮನದಲ್ಲಿ ಒಂದು ಶಾಂತಿಮಯ ಗೃಹದ ಹಿಂದಿನ ನೆನಪು ಹಾಗೂ ಒಂದು ಸಂಭವನೀಯ ಗೃಹದ ಸುಖದ ಕಲ್ಪನೆ ಬರಿಯ ನೋವನ್ನುಂಟುಮಾಡುವುದು. ಕೊನೆಯಲ್ಲಿ ಒಂದು ದಿನ ಅವನ ಶೋಕಕಾಲಯಾಪನದ ಸಂಚಾರ ಹಠಾತ್ತನೆ ನಿಂತು ಹೋಯಿತು. ಅವನು ಒಂದು ಆಳವಾದ ನಿಟ್ಟುಸಿರು ಬಿಟ್ಟು ಕಲ್ಕತ್ತೆಗೆ ಟಿಕೆಟ್ ಕೊಂಡುಕೊಂಡು ರೈಲುಗಾಡಿ ಹತ್ತಿದ.

ಕಲ್ಕತ್ತೆ ಸೇರಿ ರಮೇಶ ನೆಟ್ಟಗೆ ಆ ಕಲೂಟೋಲಾದ ಬೀದಿಗೆ ಬರಲಾರ ದಾದ. ಅಲ್ಲಿಗೆ ಹೋಗಿ ಅವನು ಏನು ನೋಡುವನು, ಏನು ಕೇಳುವನು ಎಂಬುದು ತಿಳಿಯದು, ಅಲ್ಲಿ ಒಂದು ಪ್ರಬಲ ಪರಿವರ್ತನೆ ನಡೆದಿರಬೇಕು ಎಂದು ಹೃದಯದಲ್ಲಿ ಸಂದೇಹಕ್ಕೆ ಮೊದಲಾಯಿತು. ಒಂದು ದಿನ ಅವನು ಬೀದಿಯ ತಿರುವಿನವರೆಗೆ ಹೋಗಿ ತಿರುಗಿ ಬಂದ. ಮರುದಿನ ಸಂಜೆ ರಮೇಶ ತಾನೇ ಬಲಾತ್ಕಾರದಿಂದ ಆ ಮನೆಯ ಎದುರಿಗೆ ಬಂದು ನಿಂತ. ಮನೆಯ ಎಲ್ಲ ಬಾಗಿಲು-ಕಿಟಕಿಗಳೂ ಹಾಕಿತ್ತು. ಒಳಗೆ ಜನರಿರುವ ಲಕ್ಷಣವಿಲ್ಲ. ಆಳುಮಗ-ಆ ಸುಖನನಾದರೂ ಶೂನ್ಯಗೃಹವನ್ನು ಕಾಯುತ್ತಿರಬಹುದೆಂದೆಣಿಸಿ ರಮೇಶ ಆಳುಮಗನನ್ನು ಕೂಗುತ್ತ ಬಾಗಿಲು ಬಡಿಯಲಾರಂಭಿಸಿದ. ಯಾರೂ ಉತ್ತರಕೊಡಲಿಲ್ಲ. ನೆರಮನೆಯ ಚಂದ್ರಮೋಹನ ತನ್ನ ಮನೆಯ ಜಗಲಿ ಯಲ್ಲಿ ಕುಳಿತು ಹೊಗೆಸೊಪ್ಪು ಅಗಿಯುತ್ತಿದ್ದ— ಅವನು, "ಯಾರು, ರಮೇಶ ಬಾಬು ಅಲ್ಲವೆ? ಚೆನ್ನಾಗಿರುವಿರಾ? ಈ ಮನೆಯಲ್ಲಿ ಅನ್ನದಾಬಾಬುಗಳ ಮನೆಯವರು ಯಾರೂ ಇಲ್ಲ" ಎಂದ.

ರಮೇಶ— ಅವರು ಎಲಿ ಹೋದರೆಂದು ಬಲ್ಲಿರಾ?

ಚಂದ್ರಮೋಹನ—ಆ ಸಂಗತಿ ತಿಳಿಯದು, ಪಶ್ಚಿಮಕ್ಕೆ ಹೋಗಿರುವ ರೆಂದು ಹೇಳಬಲ್ಲೆ.

ರಮೇಶ—ಮಹಾಶಯರೆ, ಯಾರು ಯಾರು ಹೋಗಿರುವರು ?

ಚಂದ್ರ—ಅನ್ನದಾಬಾಬುಗಳೂ ಅವರ ಮಗಳೂ.

ರಮೇಶ—ಅವರೊಡನೆ ಬೇರೆ ಯಾರೂ ಹೋಗಿಲ್ಲವೆಂದು ಸರಿಯಾಗಿ ಗೊತ್ತೇ ?

ಚಂದ್ರ—ಚೆನ್ನಾಗಿ ಬಲ್ಲೆ. ಹೋಗುವ ಮೊದಲು ನನ್ನನ್ನು ನೋಡಿ ಹೋದರು.

ಆಗ ರಮೇಶ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲಾರದೆ ಹೋದ. "ನಳಿನ್‌ಬಾಬು ಎಂಬುವರೊಬ್ಬರು ಅವರೊಡನೆ ಹೋಗಿರುವರೆಂದು ನನಗೆ ಯಾರೋ ಹೇಳಿದರು".

ಚಂದ್ರ—ತಪ್ಪು ತಿಳಿದಿರುವಿರಿ. ನಳಿನಬಾಬು ನಿಮ್ಮ ಆ ಮನೆಯಲ್ಲಿ ಕೆಲವು ದಿನ ಇದ್ದರು. ಇವರುಗಳು ಹೊರಡುವ ಮೂರು-ನಾಲ್ಕು ದಿನ ಮೊದಲೇ ಅವರು ಕಾಶಿಗೆ ಹೋದರು.

ಆಗ ರಮೇಶ ಚಂದ್ರಮೋಹನನನ್ನು ಪ್ರಶ್ನಿಸಿ ನಳಿನಾಕ್ಷಬಾಬುವಿನ ವಿಚಾರ ತಿಳಿದುಕೊಂಡ. ಅವನ ಹೆಸರು ನಳಿನಾಕ್ಷ ಚಟ್ಟೋಪಧ್ಯಾಯ. ಹಿಂದೆ ರಂಗಪುರದಲ್ಲಿ ಡಾಕ್ಟರ್ ವೃತ್ತಿಯಲ್ಲಿದ್ದನೆಂದು ಹೇಳುವರು. ಈಗ ತಾಯಿಯ ಸಂಗಡ ಕಾಶಿಯಲ್ಲಿರುವನು. ರಮೇಶ ಕ್ಷಣಕಾಲ ಸ್ತಬ್ಧನಾಗಿದ್ದ. "ಯೋಗೇನ ಈಗ ಎಲ್ಲಿರುವನೆಂದು ಹೇಳಬಲ್ಲಿರಾ ?" ಎಂದು ಕೇಳಿದ.

"ಯೋಗೇಂದ್ರ ಮೈಮನಸಿಂಹದ ಜಮೀನ್ದಾರರೊಬ್ಬರು ಸ್ಥಾಪಿಸಿದ ಪ್ರೌಢಶಾಲೆಯ ಮುಖ್ಯೋಪಾಧ್ಯಾಯನಾಗಿ ಬಿಷಾಯುಪುರಕ್ಕೆ ಹೋಗಿರುವನು" ಎಂದು ಚಂದ್ರಮೋಹನ ಹೇಳಿದ.

ಚಂದ್ರಮೋಹನ, "ರಮೇಶ್‌ಬಾಬು, ಬಹಳ ದಿನ ನಿಮ್ಮನ್ನು ಕಾಣಲೇ ಇಲ್ಲವಲ್ಲ—ಇಷ್ಟು ದಿನ ನೀವೆಲ್ಲಿದ್ದಿರಿ ?" ಎಂದು ಕೇಳಿದ.

ಇನ್ನು ಗುಟ್ಟಾಗಿಟ್ಟು ಉಪಯೋಗವಿಲ್ಲವೆಂದು ತಿಳಿದು ರಮೇಶ— "ಲಾಯರ್ ಉದ್ಯೋಗ ಮಾಡಲು ಗಾಜೀಪುರಕ್ಕೆ ಹೋಗಿದ್ದೆ" ಎಂದ.

ಚಂದ್ರ—ಹಾಗಾದರೆ ಇನ್ನುಮೇಲೆ ನೀವು ಅಲ್ಲೇ ಇರುವಿರಾ ?

ರಮೇಶ—ಇಲ್ಲ, ನಾನು ಅಲ್ಲಿರಲಾರೆ—ಎಲ್ಲಿ ಹೋಗುವುದೆಂದು ಇನ್ನೂ ನಿಶ್ಚಯಿಸಿಲ್ಲ.

ರಮೇಶ ಹೊರಟು ಹೋದ ಸ್ವಲ್ಪ ಹೊತ್ತಿಗೆಲ್ಲಾ ಅಕ್ಷಯ ಬಂದ. ಯೋಗೇಂದ್ರ ಹೋಗುವಾಗ, ಆಗಾಗ ತನ್ನ ಮನೆಯ ಮೇಲ್ವಿಚಾರಣೆ ನೋಡಿಕೊಳ್ಳುವ ಭಾರವನ್ನು ಅಕ್ಷಯನಿಗೆ ವಹಿಸಿ ಹೋಗಿದ್ದ. ಅಕ್ಷಯ ಆ ಹೊಣೆ ಹೊತ್ತುಕೊಂಡ, ಮತ್ತು ಅದನ್ನು ನೆರವೇರಿಸಲು ಎಂದೂ ತಪ್ಪುತ್ತಿರಲಿಲ್ಲ—ಅದರಿಂದಲೇ ಹಠಾತ್ತನೆ ಅವನು ಆಗಾಗ ಬಂದು ಮನೆಯ ಇಬ್ಬರು ಆಳುಗಳಲ್ಲಿ ಒಬ್ಬನಾದರೂ ಇದ್ದು ನೋಡುಕೊಳ್ಳುತ್ತಿರುವನೋ ಇಲ್ಲವೋ ಎಂದು ನೋಡಿಕೊಂಡು ಹೋಗುವನು.

ಚಂದ್ರಮೋಹನ ಅವನಿಗೆ "ಈಗ ಸ್ವಲ್ಪ ಹೊತ್ತಿಗೆ ಮೊದಲು ರಮೇಶ ಬಾಬು ಇಲ್ಲಿಂದ ಹೋದ" ಎಂದು ಹೇಳಿದ.

ಅಕ್ಷಯ—ಏನೆಂದಿರಿ ? ಏತಕ್ಕಾಗಿ ಬಂದಿದ್ದ ?

ಚಂದ್ರ—ಅದು ತಿಳಿಯದು. ನನ್ನ ಹತ್ತಿರ ರಮೇಶ ವಿಷಯವನ್ನೆಲ್ಲ ವಿಚಾರಿಸಿದ. ಗುರುತು ಸಿಗದಂತೆ ಅವನು ಬಡವಾಗಿ ಹೋಗಿರುವನು—ಆಳು ಮಗನನ್ನು ಕೂಗದಿದ್ದರೆ ನಾನು ಗುರುತು ಹಿಡಿಯುತ್ತಿರಲಿಲ್ಲ.

ಅಕ್ಷಯ—ಈಗಿರುವುದೆಲ್ಲಿ ? ಅದನ್ನೇನಾದರೂ ಕೇಳಿದಿರಾ ?

ಚಂದ್ರ—ಇಷ್ಟು ದಿನ ಗಾಜೀಪುರಗಲ್ಲಿದ್ದ—ಈಗ ಅಲ್ಲಿಂದ ಹೊರಟು ಬಂದಿರುವ, ಎಲ್ಲಿರುವನೆಂದು ಸರಿಯಾಗಿ ಹೇಳಲಿಲ್ಲ. ಅಕ್ಷಯ "ಓ" ಎಂದು ಹೇಳಿ ತನ್ನ ಕೆಲಸದ ಕಡೆ ಗಮನವಿಟ್ಟ.

ರಮೇಶ ಮನೆಗೆ ಹಿಂದಿರುಗಿ ಬಂದು ಯೋಚಿಸಲಾರಂಭಿಸಿದ. "ಅದೃಷ್ಟ ಇದೆಂಥ ವಿಷಮ ಕುತೂಹಲದಲ್ಲಿ ನಿರತವಾಗಿರುವುದು. ಸಂಪೂರ್ಣವಾಗಿ ಕಾದಂಬರಿಯಂತೆ ಇತ್ತ ನನ್ನೊಡನೆ ಕಮಲ ಹಾಗೂ ಅತ್ತ ನಳಿನಾಕ್ಷನ ಸಂಗಡ ಹೇಮನಳಿನಿಯ ಮಿಲನ. ಅದೂ ತಪ್ಪು ತಪ್ಪಾಗಿ ಬರೆದ ಕಾದಂಬರಿಯಂತೆ. ಈ ರೀತಿ ಅದಲುಬದಲುಮಾಡಿ ಸೇರಿಸುವುದು ಅದೃಷ್ಟದಂಥ ನಿರ್ಭಯ ಲೇಖಕನಿಗೆ ಮಾತ್ರ ಸಾಧ್ಯ—ಜಗತ್ತಿನಲ್ಲಿ ಇಂಥ ಅದ್ಭುತ ಘಟನೆ ನಡೆಯಿತು, ಎಂದು ಯಾವ ಅಂಜುಕುಳಿ ಲೇಖಕನೂ ಕಾಲ್ಪನಿಕ ಕತೆಯಲ್ಲೂ ಬರೆಯುವ ಸಾಹಸ ಮಾಡನು. ಆದರೆ ರಮೇಶ, ಈಗವನು ತನ್ನ ಜೀವನ ಸಮಸ್ಯಾ ಜಾಲದಿಂದ ಬಿಡುಗಡೆ ಹೊಂದಿರುವ ಕಾರಣ, ಅದೃಷ್ಟ ಈ ಜಟಿಲ ಕಾದಂ

ಬರಿಯ ಕಡೆಯ ಅಧ್ಯಾಯದಲ್ಲಿ ರಮೇಶನನ್ನು ಕುರಿತ ನಿಷ್ಠುರ ಉಪಸಂಹಾರ ಬರೆಯಲಾರದು '' ಎಂದು ಭಾವಿಸಿದ್ದ.

ಯೋಗೇಂದ್ರ ಬಿಷಾಯಪುರದ ಜಮೀನ್ದಾರರ ಮನೆಯ ಸಮೀಪದಲ್ಲೇ ಒಂದು ಒಂದಂತಸ್ತಿನ ಮನೆಯಲ್ಲಿ ವಾಸವಾಗಿದ್ದ—ಅಲ್ಲಿ ಭಾನುವಾರ ಬೆಳಗ್ಗೆ ಸಮಾಚಾರ ಪತ್ರಿಕೆ ಓದುತ್ತಿದ್ದ. ಆ ವೇಳೆಯಲ್ಲಿ ಅಂಗಡೀಬೀದಿಯವನೊಬ್ಬ ಅವನ ಕೈಗೆ ಒಂದು ಕಾಗದ ಕೊಟ್ಟ. ಲಕೋಟೆಯ ಮೇಲಿದ್ದ ಅಕ್ಷರ ನೋಡುತ್ತಲೇ ಅವನಿಗೆ ಆಶ್ಚರ್ಯವಾಯಿತು. ಒಡೆದು ನೋಡಿದರೆ ರಮೇಶ ಬರೆದಿರುವುದು—ಅವನು ಮುಖ್ಯವಾದ ಕೆಲವು ಮಾತುಗಳನ್ನು ಹೇಳಲು ಬಿಷಾಯಪುರದ ಅಂಗಡಿಯೊಂದರಲ್ಲಿ ನಿರೀಕ್ಷಿಸುತಿರುವನು.

ಯೋಗೇಂದ್ರ ಕೂಡಲೆ ಕುರ್ಚಿ ಬಿಟ್ಟು ಹಾರಿದ. ರಮೇಶನನ್ನು ಅವನು ಒಂದು ದಿನ ಅವಮಾನಗೊಳಿಸಬೇಕಾಗಿ ಬಂದಿದ್ದರೂ—ಆ ಬಾಲ್ಯ ಮಿತ್ರನನ್ನು ಈ ದೂರದೇಶದಲ್ಲಿ ಇಷ್ಟು ಕಾಲದಿಂದ ನೋಡದ ಮೇಲೂ ಹಿಂದಿರುಗಗೊಡಲಾರದಾದ. ಇಷ್ಟೇಕೆ, ಅವನ ಹೃದಯದಲ್ಲಿ ಒಂದು ಸಂತೋಷವುಂಟಾಯಿತು—ಕುತೂಹಲವೂ ಕಡಿಮೆಯಾಗಲಿಲ್ಲ. ಅದರಲ್ಲೂ ಹೇಮನಳಿನಿ ಹತ್ತಿರ ಇಲ್ಲದಿದ್ದಾಗ ರಮೇಶನ ಮೂಲಕ ಯಾವ ಕೆಡುಕಿನ ಸಂದೇಹವನ್ನೂ ಎದುರುನೋಡಲಿಲ್ಲ.

ಪತ್ರ ತಂದವನನ್ನು ಜೊತೆ ಮಾಡಿಕೊಂಡು ಯೋಗೇಂದ್ರ ಸ್ವತಃ ರಮೇಶನನ್ನು ಹುಡುಕಲು ಹೊರಟ. ಅವನು ಒಂದು ಚಿಲ್ಲರೆ ವ್ಯಾಪಾರಿಯ ಅಂಗಡಿಯಲ್ಲಿ ಒಂದು ಬರಿದಾಗಿದ್ದ ಸೀಮೆಯೆಣ್ಣೆ ಪೆಟ್ಟಿಗೆ ನಿಲ್ಲಿಸಿ ಅದರ ಮೇಲೆ ತೆಪ್ಪನೆ ಕುಳಿತಿದ್ದುದನ್ನು ನೋಡಿದ,—ವ್ಯಾಪಾರಿ ಬ್ರಾಹ್ಮಣರ ಹುಕ್ಕಾದಲ್ಲಿ ಅವನಿಗೆ ತಂಬಾಕು ಕೊಡಲು ಮುಂದೆ ಬಂದ, ಆದರೆ ಕನ್ನಡಕ ಹಾಕಿಕೊಂಡಿರುವ ಬಾಬುಗಳು ತಂಬಾಕು ಸೇವಿಸರೆಂದು ಕೇಳಿ ವ್ಯಾಪಾರಿ ಅವನನ್ನು ಪಟ್ಟಣದಲ್ಲಿ ಹುಟ್ಟಿದ ಯಾವುದೋ ಅದ್ಭುತ ಶ್ರೇಣಿಯ ಪದಾರ್ಥದ ನಡುವೆ ಲೆಕ್ಕಿಸಿದ್ದ. ಆ ಕಾಲದಲ್ಲಿ ಇಬ್ಬರಲ್ಲೂ ಯಾವ ಬಗೆಯ ಮಾತುಕತೆಯ ಪರಿಚಯದ ಪ್ರಯತ್ನವೂ ನಡೆಯಲಿಲ್ಲ.

ಯೋಗೇಂದ್ರ ವೇಗವಾಗಿ ಬಂದು ನೆಟ್ಟಗೆ ರಮೇಶನ ಕೈ ಹಿಡಿದು ಅವನನ್ನು ಎಳೆದುಕೊಂಡ—'' ನಿನ್ನೊಡನೆ ಸರಿಗಟ್ಟಲಾಗಲಿಲ್ಲ. ನೀನು ನಿನ್ನ ಅನ್ಯಮನಸ್ಕತೆಯೊಡನೆ ಹೊರಟುಹೋದೆ. ನೆಟ್ಟಗೆ ನನ್ನ ಮನೆಗೆ

ಬರುವುದನ್ನು ಬಿಟ್ಟು ದಾರಿಯಲ್ಲಿ ಚಿಲ್ಲರೆ ಅಂಗಡಿಯಲ್ಲಿ ಬೆಲ್ಲದ ಬತ್ತಾಸು ಮತ್ತು ಪುರಿಯುಂಡೆಯ ನಡುವೆ ಅಲುಗಾಡದೆ ಕುಳಿತಿರುವೆ" ಎಂದ.

ರಮೇಶ ಅಪ್ರತಿಭನಾಗಿ ಒಮ್ಮೆ ನಕ್ಕ. ದಾರಿಯಲ್ಲಿ ಯೋಗೇಂದ್ರ ಒಂದೇ ಸಮನೆ ಮಾತನಾಡತೊಡಗಿದ, "ಯಾರು ಏನೇ ಹೇಳಲಿ, ವಿಧಾತನನ್ನು ನಮ್ಮಲ್ಲಿ ಯಾರೂ ಅರಿಯುವಂತಿಲ್ಲ. ಅವನು ನನ್ನನ್ನು ಪಟ್ಟಣದ ನಡುವೆ ದೊಡ್ಡವನನ್ನಾಗಿ ಮಾಡಿ, ಅತಿ ಹಿರಿಯ ಪಟ್ಟಣಿಗನಾಗಿಸಿದ್ದು ಈ ಭಯಂಕರ ಹಳ್ಳಿಗಾಡಿನಲ್ಲಿ ನನ್ನ ಜೀವಾತ್ಮನನ್ನು ಸಂಪೂರ್ಣವಾಗಿ ಮಣ್ಣುಗೂಡಿಸುವುದಕ್ಕೇನು ?'' ಎಂದು ಕೇಳಿದ.

ರಮೇಶ ಸುತ್ತಲೂ ನಿರೀಕ್ಷಿಸಿ, ''ಏಕೆ, ಸ್ಥಳ ಅಷ್ಟು ಕೆಟ್ಟದ್ದೇನೂ ಅಲ್ಲವಲ್ಲ.

ಯೋಗೇಂದ್ರ—ಹಾಗೆಂದರೆ ?

ರಮೇಶ—ಹಾಗೆಂದರೆ ನಿರ್ಜನ . . .

ಯೋಗೇಂದ್ರ—ಅದರಿಂದಲೇ ನನ್ನಂಥ ಇನ್ನೂ ಒಬ್ಬ ಮನುಷ್ಯನನ್ನು ತೊಲಗಿಸಿ ಈ ನಿರ್ಜನತೆಯನ್ನು ಮತ್ತಷ್ಟು ಹೆಚ್ಚಿಸಲು ನಾನು ಹಗಲೂ ರಾತ್ರಿ ವ್ಯಾಕುಲದಿಂದಿರುವೆ.

ರಮೇಶ—ಏನೇ ಹೇಳು ಮನಶ್ಶಾಂತಿಗೆ . . .

ಯೋಗೇಂದ್ರ—ಆ ಮಾತನ್ನೆಲ್ಲ ನನಗೆ ಹೇಳಬೇಡ—ಕೆಲವು ದಿನಗಳಿಂದ ಬೇಕಾದಷ್ಟು ಮನಶ್ಶಾಂತಿ ಅನುಭವಿಸಿ ನನ್ನ ಪ್ರಾಣ ಒಂದೇ ಸಲಕ್ಕೆ ಗಂಟಲಿಗೆ ಬಂದಿರುವುದು. ನನ್ನಿಂದ ಸಾಧ್ಯವಾದಷ್ಟೂ ಈ ಶಾಂತಿಭಂಗಕ್ಕೆ ಕೊರತೆ ತರಲಿಲ್ಲ. ಈ ನಡುವೆ ಕಾರ್ಯದರ್ಶಿಯೊಡನೆ ಕೈ ಕೈ ನಡೆಯಲು ಪ್ರಾರಂಭಿಸಿದೆ. ಜಮೀನ್ದಾರರ ಬಳಿ ನನ್ನ ಸ್ವಭಾವದ ಪರಿಚಯವನ್ನು ಹೇಗೆ ಮಾಡಿಕೊಟ್ಟಿರುವೆನೆಂದರೆ ಸುಲಭವಾಗಿ ಅವರು ನನ್ನ ಮೇಲೆ ಕೈ ಮಾಡಲು ಬರುವಂತಿಲ್ಲ. ಅವರು ನನ್ನ ಮೂಲಕ ಇಂಗ್ಲಿಷ್ ಸಮಾಚಾರ ಪತ್ರಿಕೆಯಲ್ಲಿ ತಮ್ಮ ಪ್ರಶಂಸೆ ಮಾಡಿಸಿಕೊಳ್ಳಲು ಆಶಿಸಿದರು—ಆದರೆ ನನ್ನದು ಸ್ವತಂತ್ರ ಮನೋಭಾವವೆಂದು ಅವರಿಗೆ ಖಚಿತವಾಗಿ ತಿಳಿಸಿರುವೆ. ಅದು ನನ್ನ ಸಹಜಗುಣವಲ್ಲವೆಂದು ಗುರಿಯಿಟ್ಟಿರುವರು. ಈಗಿನ ಡೆಪ್ಯುಟೀ ಕಲೆಕ್ಟರು ನನ್ನನ್ನು ಬಹಳವಾಗಿ ಒಪ್ಪಿರುವರು—ಜಮೀನ್ದಾರರೂ ಆ ಭಯ

ದಿಂದಲೇ ನನ್ನನ್ನು ಬೀಳ್ಕೊಡದಿರುವರು – ಎಂದು ಗೆಜೆಟಿನಲ್ಲಿ ಡೆಪ್ಯುಟೀ ಕಲೆಕ್ಟರ ವರ್ಗವನ್ನು ನೋಡುವೆಯೋ ಅಂದೇ ನನ್ನ ಮುಖ್ಯೋಪಾಧ್ಯಾಯತ್ವದ ಸೂರ್ಯ ಬಿಷಾಯ್‌ಪುರದ ಆಕಾಶದಲ್ಲಿ ಮುಳುಗುವನೆಂದು ತಿಳಿ. ಈಗ ಇಲ್ಲಿ ನನಗೊಬ್ಬ ಪರಿಚಿತನಿರುವನು–ನನ್ನ ನಾಯಿ— ಇನ್ನುಳಿದವರೆಲ್ಲರೂ ನನ್ನನ್ನು ನೋಡುವ ನೋಟವನ್ನು ಯಾವ ಬಗೆಯಲ್ಲೂ ಶುಭದೃಷ್ಟಿ ಎಂದು ಹೇಳುವಂತಿಲ್ಲ.

ಯೋಗೇಂದ್ರನ ಮನೆಗೆ ಬಂದ ರಮೇಶ ಒಂದು ಕುರ್ಚಿಯಲ್ಲಿ ಕುಳಿತ. "ಊಹೂ, ಕುಳಿತುಕೊಳ್ಳಬೇಡ" ಎಂದ ಯೋಗೇಂದ್ರ. ಬೆಳಗಿನ ಸ್ನಾನವೆಂಬ ಹೆಸರಿನಲ್ಲಿ ನಿನಗೆ ಒಂದು ಭಯಂಕರ ಕುಸಂಸ್ಕಾರ ಇರುವುದು ನನಗೆ ಗೊತ್ತು— ಅದನ್ನು ಮುಗಿಸಿ ಬಾ ಅಷ್ಟರಲ್ಲಿ ಇನ್ನೊಮ್ಮೆ ಬಿಸಿ ನೀರಿನ ಕೆಟಲಿಯನ್ನು ಬೆಂಕಿಯ ಮೇಲಿಡುವೆ. ಆತಿಥ್ಯದ ಹೆಸರಿನಲ್ಲಿ ಈ ದಿನ ಎರಡನೆಯ ಬಾರಿ ಚಹ ಕುಡಿಯುವೆ" ಎಂದ.

ಈ ರೀತಿ ಊಟ, ಮಾತು ಹಾಗೂ ವಿಶ್ರಾಂತಿಯಲ್ಲಿ ಹಗಲು ಕಳೆಯಿತು. ರಮೇಶ ಯಾವ ಮುಖ್ಯ ಸಂಗತಿ ಹೇಳಲು ಇಲ್ಲಿಗೆ ಬಂದಿದ್ದನೋ ಅದಕ್ಕೆ ಯಾವ ರೀತಿಯಲ್ಲೂ ಅವಕಾಶ ಕೊಡಲಿಲ್ಲ. ಸಂಜೆ ಊಟವಾದ ಬಳಿಕ ಸೀಮೆಯೆಣ್ಣೆ ಬೆಳಕಿನಲ್ಲಿ ಇಬ್ಬರೂ ಎರಡು ಒರಗು ಕುರ್ಚಿ ಎಳೆದುಕೊಂಡು ಕುಳಿತರು. ಸ್ವಲ್ಪ ದೂರದಲ್ಲೇ ನರಿ ಊಳೆಯಿಟ್ಟಿತು. ಹೊರಗಿನ ಕತ್ತಲ ರಾತ್ರಿ ಜೀರುಂಡೆಯ ಧ್ವನಿಯಿಂದ ಕಂಪಿಸಲಾರಂಭಿಸಿತು.

ರಮೇಶ ಹೇಳಿದ, "ಯೋಗೇನ, ನಿನಗೆ ಏನು ಹೇಳಲು ಇಲ್ಲಿಗೆ ಬಂದಿರುವೆಯೆಂಬುದನ್ನು ನೀನು ತಿಳಿದೇ ಇರುವೆ. ಒಂದು ದಿನ ನೀನು ನನ್ನನ್ನು ಯಾವ ಪ್ರಶ್ನೆ ಕೇಳಿದೆಯೋ ಆಗ ಆ ಪ್ರಶ್ನೆಗೆ ಉತ್ತರ ಹೇಳುವಂತೆ ಇರಲಿಲ್ಲ ಈ ದಿನ ಉತ್ತರ ಹೇಳಲು ಯಾವ ತಡೆಯೂ ಇಲ್ಲ".

ಹೀಗೆ ಹೇಳಿ ರಮೇಶ ಕ್ಷಣಹೊತ್ತು ಸ್ತಬ್ಧನಾಗಿ ಕುಳಿತಿದ್ದ. ಆ ಬಳಿಕ ಮೆಲ್ಲಮೆಲ್ಲನೆ ಅವನು ಮೊದಲಿನಿಂದ ಕೊನೆಯವರೆಗೆ ಎಲ್ಲ ಘಟನೆಯನ್ನೂ ವಿವರಿಸಿದ. ನಡುನಡುವೆ ಅವನ ಸ್ವರ ನಿಂತುನಿಂತು ಗಂಟಲು ನಡುಗುವುದು. ಆಗಾಗ ಯಾವುಯಾವುದೋ ಸ್ಥಳದಲ್ಲಿ ಅವನು ಒಂದೆರಡು ನಿಮಿಷ ಮೌನವಾಗಿದ್ದ. ಯೋಗೇಂದ್ರ ಯಾವ ಮಾತೂ ಆಡದೆ ಮನಗೊಟ್ಟು ಕೇಳಿದ.

ಮಾತು ಮುಗಿದ ಮೇಲೆ ಯೋಗೇಂದ್ರ ಒಂದು ನಿಟ್ಟುಸಿರು ಬಿಟ್ಟು, "ಈ ಎಲ್ಲ ಸಂಗತಿಯನ್ನೂ ಆ ದಿನ ಹೇಳಿದ್ದರೆ ನಾನು ನಂಬುತ್ತಿರಲಿಲ್ಲ" ಎಂದ.

ರಮೇಶ—ನಂಬಿಕೆಗೆ ಕಾರಣ ಆ ದಿನ ಹೇಗಿತ್ತೊ ಇಂದೂ ಹಾಗೆಯೇ ಇದೆ. ಅದರಿಂದಲೇ ನಿನ್ನಲ್ಲಿ ನನ್ನದೊಂದು ಕೋರಿಕೆಯಿದೆ, ನಾನು ಮದುವೆ ಯಾಗಿದ್ದ ಹಳ್ಳಿಗೆ ಒಮ್ಮೆ ನಿನ್ನನ್ನು ಕರೆದುಕೊಂಡುಹೋಗುವೆ. ಆಬಳಿಕ ಅಲ್ಲಿಂದ ಕಮಲೆಯ ಸೋದರ ಮಾವನ ಮನೆಗೂ ಕರೆದೊಯ್ಯುವೆ.

ಯೋಗೇಂದ್ರ—ನಾನು ಎಲ್ಲಿಗೂ ಒಂದು ಹೆಜ್ಜೆ ಎತ್ತಿಡಲಾರೆ—ನಾನು ಈ ಆರಾಮು ಕುರ್ಚಿಯಲ್ಲೇ ಸ್ಥಿರವಾಗಿ ಕುಳಿತು ನಿನ್ನ ಮಾತಿನ ಪ್ರತಿಯೊಂದು ಅಕ್ಷರವನ್ನೂ ನಂಬುವೆ. ನಿನ್ನ ಎಲ್ಲ ಹೇಳಿಕೆಯನ್ನೂ ನಂಬುವುದು ಬಹಳ ಕಾಲದಿಂದ ನನಗೆ ಅಭ್ಯಾಸವಾಗಿದೆ ;—ಜೀವನದಲ್ಲಿ ಒಂದೇ ಒಂದು ಸಲ ಅದಕ್ಕೆ ವಿರುದ್ಧವಾಗಿ ನಡೆಯಿತು. ಇದಕ್ಕಾಗಿ ನಾನು ನಿನ್ನ ಬಳಿ ಕ್ಷಮೆ ಯಾಚಿಸುವೆ.

ಹೀಗೆ ಹೇಳಿ ಯೋಗೇಂದ್ರ ಕುರ್ಚಿಯಿಂದೆದ್ದು ರಮೇಶನೆದುರಿಗೆ ಬಂದ— ರಮೇಶ ಎದ್ದು ನಿಲ್ಲುತ್ತಲೇ ಈರ್ವರು ಬಾಲ್ಯ ಸ್ನೇಹಿತರೂ ಒಮ್ಮೆಗೆ ಪರಸ್ಪರ ಆಲಿಂಗಿಸಿಕೊಂಡರು. ರಮೇಶ ಬಿಗಿದ ಕಂಠವನ್ನು ಸರಿಪಡಿಸಿಕೊಂಡು "ನಾನು ಎಲ್ಲಿಂದಲೋ ಒಂದು ವಿಧಿರಚಿತವಾದಂಥ ಕತ್ತರಿಸಲಾರದ ಮಿಥ್ಯಾಜಾಲದಲ್ಲಿ ಸಿಕ್ಕಿಕೊಂಡೆನಲ್ಲ, ಅದರ ನಡುವೆಯೇ ಸಂಪೂರ್ಣವಾಗಿ ನಿಲ್ಲುವುದನ್ನು ಬಿಟ್ಟರೆ ಯಾವ ದಿಕ್ಕಿನಲ್ಲೂ ಯಾವ ಉಪಾಯವೂ ಕಂಡು ಬರಲಿಲ್ಲ. ಇಂದು ನಾನು ಅದರಿಂದ ಬಿಡುಗಡೆ ಹೊಂದಿರುವೆ, ಇನ್ನು ನಾನು ಯಾರ ಬಳಿಯಲ್ಲೂ ಯಾವುದನ್ನೂ ರಹಸ್ಯವಾಗಿಡಬೇಕಾಗಿಲ್ಲ. ಇದರಿಂದ ನಾನು ಜೀವ ಪಡೆದಿರುವೆ. ಕಮಲ ಯಾವುದನ್ನು ತಿಳಿದು ಯಾವುದನ್ನು ಭಾವಿಸಿ ಆತ್ಮಹತ್ಯ ಮಾಡಿಕೊಂಡಳೋ ಅದು ಇಂದಿನ ವರೆಗೂ ನನಗೆ ಅರ್ಥ ವಾಗಿಲ್ಲ, ಮತ್ತೆ ತಿಳಿದುಕೊಳ್ಳುವ ಯಾವ ಸಂಭವವೂ ಇಲ್ಲ—ಆದರೆ ಇಷ್ಟು ನಿಶ್ಚಯ, ಮೃತ್ಯು ಈ ರೀತಿಯಲ್ಲಿ ನಮ್ಮಿಬ್ಬರ ಜೀವನದ ಈ ಕಠಿಣಗ್ರಂಥಿಯನ್ನು ಕತ್ತರಿಸಿ ಹಾಕದಿದ್ದರೆ, ಕಡೆಗೆ ನಾವಿಬ್ಬರೂ ಯಾವ ದುರ್ಗತಿಯಲ್ಲಿ ಹೋಗಿ ಸೇರಬೇಕಾಗಿತ್ತೆಂಬುದನ್ನು ನೆನದರೇ ನನ್ನ ಹೃದಯ ಕಂಪಿಸಲಾರಂಭಿಸುವುದು. ಮೃತ್ಯುವಿನ ದವಡೆಯಿಂದ ಒಂದು ದಿನ ಈ ಸಮಸ್ಯೆ ಆಕಸ್ಮಿಕವಾಗಿ ಎದ್ದು

ಬಂದಿತ್ತು. ಮೃತ್ಯುವಿನ ಗರ್ಭದಲ್ಲೇ ಒಂದು ದಿನ ಆ ಸಮಸ್ಯೆ ಅದೇ ರೀತಿಯಲ್ಲಿ ಆಕಸ್ಮಿಕವಾಗಿ ವಿಲೀನವಾಯಿತು" ಎಂದ.

ಯೋಗೇಂದ್ರ—ಕಮಲೆ ಖಂಡಿತವಾಗಿಯೂ ಆತ್ಮಹತ್ಯೆ ಮಾಡಿಕೊಂಡಿರುವಳೆಂಬುದನ್ನು ನಿಃಸಂಶಯವಾಗಿ ಸಿದ್ಧಪಡಿಸಿಕೊ. ಅವಳು ಏನೇ ಆಗಿರಲಿ ನೀನು ಇದರಿಂದ ಬಿಡುಗಡೆ ಪಡೆದೆ. ಈಗ ನಳಿನಾಕ್ಷನ ವಿಷಯವನ್ನೇ ನಾನು ಯೋಚಿಸುತ್ತಿರುವೆ.

ಆ ಬಳಿಕ ಯೋಗೇಂದ್ರ ನದಿನಾಕ್ಷನ ಸಂಗತಿ ತಿಳಿಸಿದ. "ನಾನು ಆ ರೀತಿಯ ಮನುಷ್ಯರನ್ನು ಸರಿಯಾಗಿ ತಿಳಿದುಕೊಂಡೆ. ಯಾವುದನ್ನು ಅರಿಯೆನೋ ಅದನ್ನು ನಾನು ಒಪ್ಪಲಾರೆ. ಆದರೆ ಅನೇಕ ಜನರಲ್ಲಿ ಬೇರೆ ಬಗೆಯ ಬುದ್ಧಿಯನ್ನು ಕಂಡಿರುವೆ. ಅವರಿಗೆ ಯಾವುದು ತಿಳಿಯುವುದಿಲ್ಲವೋ ಅದನ್ನೇ ಅತಿಯಾಗಿ ಇಷ್ಟಪಡುವರು. ಅದರಿಂದಲೇ ಹೇಮಳ ವಿಷಯದಲ್ಲಿ ನನಗೆ ಹೆದರಿಕೆ. ಅವಳು ಚಹ ಬಿಟ್ಟಿರುವಳು, ಮೀನು-ಮಾಂಸ ತಿನ್ನುವುದಿಲ್ಲ, ಅಷ್ಟೇಯೇಕೆ, ಹಾಸ್ಯಮಾಡಿದರೆ ಮೊದಲಿನಂತೆ ಅವಳ ಕಣ್ಣುಗಳು ಚಂಚಲಗೊಳ್ಳುವುದಿಲ್ಲ, ಅದಕ್ಕೆ ಪ್ರತಿಯಾಗಿ ಮೃದು ಮಂದವಾಗಿ ನಗುವಳು, ಸಂಗತಿ ಚೆನ್ನಾಗಿಲ್ಲವೆಂದು ಆಗ ತಿಳಿದುಕೊಂಡೆ. ಏನೇಆಗಲಿ, ನಿನ್ನ ಸಹಾಯ ಒದಗಿದರೆ ಅವಳನ್ನು ಉದ್ಧಾರಮಾಡಲು ಸ್ವಲ್ಪವೂ ವಿಳಂಬವಾಗದು-ಅದನ್ನು ನಾನು ನಿಶ್ಚಯವಾಗಿ ಬಲ್ಲೆ—ಆದ್ದರಿಂದಲೇ ಸಿದ್ಧನಾಗು—ಇಬ್ಬರು ಗೆಳೆಯರೂ ಕಲೆತು ಸಂನ್ಯಾಸಿಯ ವಿರುದ್ಧ ಯುದ್ಧ ಯಾತ್ರೆಗೆ ಹೊರಡೋಣ" ಎಂದು ಹೇಳಿದ.

ರಮೇಶ ನಕ್ಕು, "ಸರಿ, ನಾನು ವೀರ ಪುರುಷನೆಂದು ಹೆಸರುವಾಸಿಯಾಗಿಲ್ಲವಾದರೂ ಸಿದ್ಧನಾಗಿರುವೆ" ಎಂದ.

ಯೋಗೇಂದ್ರ—ನಿಧಾನಿಸು, ನನ್ನ ಕ್ರಿಸ್‌ಮಸ್‌ರಜ ಬರಲಿ.

ರಮೇಶ—ಅದಕ್ಕೆ ಇನ್ನೂ ಬಹಳ ದಿನ ವಿದೆ—ಅಷ್ಟರಲ್ಲಿ ನಾನು ಒಂಟಿಯಾಗಿ ಮುಂದುವರಿದರೇನು ;

ಯೋಗೇಂದ್ರ—ಬೇಡ ಬೇಡ, ಅದೆಂದಿಗೂ ಸಾಧ್ಯವಿಲ್ಲ. ನಿಮ್ಮಗಳ ಮದುವೆ ನಿಲ್ಲಿಸಿದವನು ನಾನು, ನಾನೇ ನನ್ನ ಕೈಯಿಂದ ಅದರ ಪ್ರತಿಕಾರ ಮಾಡುವೆ. ನೀನೇನಾದರು ಮುಂದೆ ಹೋಗಿ ನನ್ನ ಈ ಶುಭಕಾರ್ಯ

ಕದಿಯುವುದಾದರೆ ನಾನದಕ್ಕೆ ಅವಕಾಶವೀಯೆ  ರಜಕ್ಕೆ ಕೇವಲ ಹತ್ತೇ ದಿನಗಳು ಉಳಿದಿವೆ.

ರಮೇಶ—ಹಾಗಾದರೆ ಅಷ್ಟರಲ್ಲಿ ನಾನೊಮ್ಮೆ . . .

ಯೋಗೇಂದ್ರ—ಇಲ್ಲ ಇಲ್ಲ, ನಾನು ಅದನ್ನೆಲ್ಲ ಕೇಳುವುದಿಲ್ಲ—ಈ ಹತ್ತುದಿನ ನೀನು ನನ್ನೊಡನೆ ಇರು. ಇಲ್ಲಿ ಜಗಳವಾಡುತ್ತಿದ್ದ ಜನರನೆಲ್ಲಾ ನಾನು ಒಬ್ಬೊಬ್ಬರನ್ನಾಗಿ ತೀರಿಸಿರುವೆ— ಈಗ ಬಾಯಿ ಚಪಲ ಬದಲಾಯಿಸಲು ಒಬ್ಬ ಗೆಳೆಯನ ಆವಶ್ಯಕತೆ ಇದೆ—ಈ ಸ್ಥಿತಿಯಲ್ಲಿ ನಿನ್ನನ್ನು ಕಳುಹಿಸಿಕೊಡುವಂತಿಲ್ಲ. ಇಷ್ಟು ದಿನವೂ ಸಂಜೆಯ ಹೊತ್ತಿನಲ್ಲಿ ಕೇವಲ ನರಿಯ ಕೂಗು ಕೇಳುತ್ತ ಬಂದಿರುವೆ— ಈಗ ಹೆಚ್ಚೇನು, ನಿನ್ನ ಕಂಠಸ್ವರ ನನಗೆ ವೀಣೆಯ ಧ್ವನಿ ಅಣಕಿಸುವಂತೆ ತೋರುವುದು, ನನ್ನಗತಿ ಅಷ್ಟು ಶೋಚನೀಯ.

೪೭

ಚಂದ್ರಮೋಹನನಿಂದ ರಮೇಶನ ಸುದ್ದಿಕೇಳಿ ಅಕ್ಷಯನ ಮನಸಿನಲ್ಲಿ ನಾನಾಚಿಂತೆ ತಲೆದೋರಿತು. ಅವನು ಯೋಚಿಸಲಾರಂಭಿಸಿದ, “ಸಂಗತಿ ಯೇನು? ರಮೇಶ ಗಾಜೀಪುರದಲ್ಲಿ ಪ್ರಾಕ್ಟೀಸ್ ಮಾಡುತಿದ್ದ—ಇಷ್ಟುದಿನ ಸ್ವತಃ ತಲೆಮರೆಸಿಕೊಂಡಿದ್ದ—ಇಷ್ಟರಲ್ಲಿ ಅಲ್ಲಿಯ ಪ್ರಾಕ್ಟೀಸ್ ಬಿಟ್ಟು ಪುನಃ ಸಾಹಸದೊಡನೆ ಕಲೂಟೋಲಾದಲ್ಲಿ ತನ್ನನ್ನು ಬಹಿರಂಗಪಡಿಸಿಕೊಳ್ಳಲು ಬರುವಂಥ ಘಟನೆ ಏನು ನಡೆದಿರಬಹುದು. ಅನ್ನದಾಬಾಬುಗಳು ಕಾಶಿಗೆ ಹೋಗಿರುವರೆಂದು ಎಂದೋ ಯಾರಿಂದಲೋ ತಿಳಿದು ಖಂಡಿತ ಅವನು ಅಲ್ಲಿಗೆ ಹೋಗಿ ಸೇರುವನು”. ಅಕ್ಷಯ, “ಇಷ್ಟರಲ್ಲಿ ಗಾಜೀಪುರಕ್ಕೆ ಹೋಗಿ ಎಲ್ಲ ಸಮಾಚಾರವನ್ನೂ ತಿಳಿಯುವೆ ಮತ್ತು ಒಮ್ಮೆ ಕಾಶಿಗೆ ಹೋಗಿ ಅನ್ನದಾಬಾಬುಗಳನ್ನು ನೋಡಿ ಬರುವೆ” ಎಂದು ತೀರ್ಮಾನಿಸಿದ.

ಒಂದು ದಿನ ಮಾರ್ಗಶಿರಮಾಸದ ಮಧ್ಯಾಹ್ನದಲ್ಲಿ ಅಕ್ಷಯ ತನ್ನ ಚೀಲ ಕೈಯಲ್ಲಿ ಹಿಡಿದುಕೊಂಡು ಗಾಜೀಪುರಕ್ಕೆ ಬಂದು ಸೇರಿದ. ಮೊದಲು ಅಂಗಡೀ ಬೀದಿಯಲ್ಲಿ, “ರಮೇಶಬಾಬು ಎಂಬೊಬ್ಬ ಬಂಗಾಳಿ ವಕೀಲರು ಇಲ್ಲಿ ಯಾವ ಕಡೆ ಇರುವರು” ಎಂದು ವಿಚಾರಿಸಿದ. ಅನೇಕ ಜನರನ್ನು ಕೇಳಿ, ಅಂಗಡಿ

ಬೀದಿಯಲ್ಲಿ ರಮೇಶಬಾಬು ಎಂಬ ಹೆಸರಿನ ಯಾವ ವಕೀಲರೂ ಇಲ್ಲ—ಎಂದು ತಿಳಿದುಕೊಂಡ. ಆ ಬಳಿಕ ಅವನು ನ್ಯಾಯಾಲಯಕ್ಕೆ ಬಂದ. ಆಗ ನ್ಯಾಯಾಲಯದ ಹೊತ್ತು ಮೀರಿತ್ತು. ರುಮಾಲು ಧರಿಸಿದ್ದ ಬಂಗಾಳಿ ವಕೀಲರೊಬ್ಬರು ಗಾಡಿ ಹತ್ತಿ ಹೋಗುತ್ತಿದ್ದರು, ಅಕ್ಷಯ ಅವರನ್ನು ಕೇಳಿದ, "ಮಹಾಶಯರೆ, ರಮೇಶಚಂದ್ರ ಚೌಧುರಿಯೆಂಬ ಹೊಸ ಬಂಗಾಳಿ ವಕೀಲರೊಬ್ಬರು ಗಾಜೀಪುರಕ್ಕೆ ಬಂದಿರುವರು, ಅವರು ಎಲ್ಲಿರುವರೆಂದು ಬಲ್ಲಿರಾ ?".

ಅಕ್ಷಯ ಇವರ ಬಳಿಯಿಂದ, ಇಷ್ಟುದಿನ ರಮೇಶ ಚಿಕ್ಕಪ್ಪನವರ ಮನೆಯಲ್ಲೇ ಇದ್ದನೆಂದೂ, ಈಗ ಅವನು ಅಲ್ಲೇ ಇರುವನೋ ಅಥವಾ ಎಲ್ಲಾದರೂ ಹೋಗಿರುವನೋ ತಿಳಿಯದೆಂದೂ, ಅವನ ಹೆಂಡತಿ ಕಾಣದಿರುವಳೆಂದೂ ಅವಳು ನೀರಿಗೆ ಬಿದ್ದು ಸತ್ತಿದ್ದರೂ ಸತ್ತಿರಬಹುದೆಂದೂ ಸುದ್ದಿ ಅರಿತುಕೊಂಡ.

ಅಕ್ಷಯ ಚಿಕ್ಕಪ್ಪನ ಮನೆಗೆ ಹೋದ. ದಾರಿ ನಡೆಯುತ್ತ ನಡೆಯುತ್ತ, ಈಗ ರಮೇಶನ ಮೋಸ ಹೊರಬೀಳುವುದು, ಹೆಂಡತಿ ಸತ್ತಿರುವಳು, ಈಗವನು ಸಂಕೋಚವಿಲ್ಲದೆ ಹೇಮನಳಿನಿಯ ಹತ್ತಿರ ತನಗೆ ಹೆಂಡತಿಯೇ ಇರಲಿಲ್ಲವೆಂದು ಪ್ರತಿಜ್ಞೆಮಾಡಲು ಪ್ರಯತ್ನಿಸುವನು, ಇನ್ನು ಹೇಮನಳಿನಿಯ ಸ್ಥಿತಿಯೆಂದರೆ ರಮೇಶನ ಮಾತನ್ನು ನಂಬದೆ ಇರಲು ಅವಳಿಂದ ಸಾಧ್ಯವಿಲ್ಲ. ಯಾರು ಧರ್ಮ-ನೀತಿ ಹೊತ್ತು ಬಹಳ ದೊಡಸ್ತಿಕೆಯಿಂದ ಓಡಾಡುವರೋ, ಅಂಥವರು ಗುಪ್ತವಾಗಿ ಅದೆಷ್ಟು ಭಯಂಕರ ವ್ಯಕ್ತಿಗಳು, ಎಂದು ಯೋಚಿಸುತ್ತ ಅಕ್ಷಯ ಮನದಲ್ಲೇ ಆಲೋಚಿಸಿ ತನ್ನ ವಿಷಯದಲ್ಲಿ ಶ್ರದ್ಧೆ ಅನುಭವಿಸಲಾರಂಭಿಸಿದ.

ಚಿಕ್ಕಪ್ಪನ ಬಳಿ ಹೋಗಿ ಅವರನ್ನು ರಮೇಶ ಮತ್ತು ಕಮಲೆಯ ವಿಷಯವಾಗಿ ಕೇಳಿದ ಕೂಡಲೇ ಅವರಿಂದ ಶೋಕ ತಡೆಯಲಾಗಲಿಲ್ಲ—ಅವರ ಕಣ್ಣಿಂದ ಕಣ್ಣೀರು ಬರಲಾರಂಭಿಸಿತು. "ನೀವು ರಮೇಶಬಾಬುಗಳ ಆಪ್ತ ಮಿತ್ರರೆಂದ ಬಳಿಕ ನಮ್ಮ ತಾಯಿ ಕಮಲೆಯನ್ನು ಖಂಡಿತ ನೀವು ಗೆಳತಿಯೆಂದು ಅರಿತಿರುವಿರಿ. ನಾನು ಹೇಳುವುದೇನೆಂದರೆ ಕೆಲವು ದಿನಗಳ ಕಾಲ ಅವಳನ್ನು ನೋಡಿದ್ದರಿಂದಲೇ ನಾನು ನನ್ನ ಮಗಳಿಗೂ ಅವಳಿಗೂ ವ್ಯತ್ಯಾಸವನ್ನೇ ಮರೆತುಬಿಟ್ಟೆ. ಎರಡು ದಿನದ ಮಟ್ಟಿಗೆ ಈ ಮಾಯೆ ತೋರಿಸಿ ಮಹಾಲಕ್ಷ್ಮಿ ತಾಯಿ ನಮಗೆ ಇಂಥ ಸಿಡಿಲು ಹೊಡೆತ ಹೊಡೆದು ಹೊರಟು ಹೋಗುವಳೆಂದು ನನಗೆ ಹೇಗೆ ತಿಳಿಯಬೇಕು" ಎಂದು ಅವರು ಹೇಳಿದರು.

ಅಕ್ಷಯ ಮುಖ ಬಾಡಿಸಿಕೊಂಡು ಹೇಳಿದ, "ಇಂಥ ಘಟನೆ ಹೇಗೆ ನಡೆಯಿತೆಂದು ನನಗೆ ಸ್ವಲ್ಪವೂ ಅರ್ಥವಾಗದು. ನಿಜವಾಗಿಯೂ ರಮೇಶ ಕಮಲೆಯೊಡನೆ ಹುಡುಗಾಟ ಮಾಡಿರಲಾರ".

ಚಿಕ್ಕಪ್ಪ—ನೀವು ಕೋಪಿಸಿಕೊಳ್ಳಬೇಡಿ—ನಿಮ್ಮ ರಮೇಶನನ್ನು ಇಷ್ಟು ದಿನವಾದರೂ ನನಗೆ ತಿಳಿದುಕೊಳ್ಳಲಾಗಲಿಲ್ಲ. ಇತ್ತ ಹೊರಗಡೆ ಬಹಳ ಒಳ್ಳೆಯ ಮನುಷ್ಯ. ಆದರೆ ಮನಸಿನಲ್ಲೇನು ಭಾವಿಸುವರೋ, ಏನು ಮಾಡುವರೋ ಯಾವುದೂ ತಿಳಿಯದು. ಇಲ್ಲವಾದರೆ ಕಮಲೆಯಂಥ ಉತ್ತಮ ಸ್ತ್ರೀಯನ್ನು ಏನೆಂದು ತಿಳಿದು ಅನಾದರ ಮಾಡುತಿದ್ದರೋ ಅದು ಅರ್ಥವೇ ಆಗುವುದಿಲ್ಲ. ಕಮಲೆಯಂಥ ಸತಿ-ಲಕ್ಷ್ಮಿ, ನಮ್ಮ ಮಗಳ ಜೊತೆ ತನ್ನ ಸ್ವಂತ ಒಡಹುಟ್ಟಿದವಳಂತೆ ಭಾವನೆಯಿಟ್ಟಿದ್ದಳು. ಆದರೂ ಎಂದೂ ಒಂದುದಿನವಾದರೂ ತನ್ನ ಗಂಡನ ವಿರುದ್ಧವಾಗಿ ಒಂದು ಮಾತೂ ಹೇಳಲಿಲ್ಲ. ಅವಳು ಮನಸಿನಲ್ಲೇ ಕಷ್ಟ ಅನುಭವಿಸುತ್ತಿರುವಳೆಂದು ಆಗಾಗ ನನ್ನ ಮಗಳು ತಿಳಿದುಕೊಳ್ಳುತಿದ್ದಳು. ಆದರೆ ಕಡೆಯದಿನದವರೆವಿಗೂ ಒಂದು ಮಾತನ್ನೂ ಹೇಳಲಿಲ್ಲ. ಇಂಥ ಹೆಂಗಸು ಈ ಕೆಲಸಮಾಡಬೇಕಾದರೆ ಅದೆಷ್ಟು ಅಸಹನೀಯ ಕಷ್ಟ ಅನುಭವಿಸಿರಬೇಕೆಂದು ನೀವು ತಿಳಿಯಬಲ್ಲಿರಿ. ಈ ಮಾತು ನೆನಪಾದರೇ ನನ್ನ ಎದೆ ಬಿರಿದು ಹೋಗುವುದು. ಇಷ್ಟೇಅಲ್ಲ ನನ್ನ ದುರ ಅದೃಷ್ಟ. ಆಗ ನಾನು ಅಲಹಾಬಾದಿಗೆ ಹೊರಟು ಹೋಗಿದ್ದೆ. ಇಲ್ಲದಿದ್ದರೆ ತಾಯಿ ಎಂದಾದರೂ ನನ್ನನ್ನು ಬಿಟ್ಟು ಹೋಗುವಳೆ ?

ಮರುದಿನ ಬೆಳಿಗ್ಗೆ ಚಿಕ್ಕಪ್ಪನನ್ನು ಜೊತೆಮಾಡಿಕೊಂಡು ಅಕ್ಷಯ ರಮೇಶನ ಬಂಗಲೆ ಮತ್ತು ಗಂಗೆಯ ತೀರ ನೋಡಿಬಂದ. ಮನೆಗೆ ತಿರುಗಿ ಬಂದು ಹೇಳಿದ, "ನೋಡಿ ಮಹಾಶಯ, ಕಮಲ ಗಂಗೆಯಲ್ಲಿ ಮುಳುಗಿ ಸತ್ತಿರುವಳೆಂದು ನೀವು ನಿಃಸಂಶಯದಿಂದಿರುವಂತೆ ನಾನಿರಲಾರೆ"

ಚಿಕ್ಕಪ್ಪ—ನಿಮಗೆ ಹೇಗೆ ತೋರುವುದು.

ಅಕ್ಷಯ—ಅವಳು ಮನೆಬಿಟ್ಟು ಹೊರಟು ಹೋಗಿರುವಳು. ಅವಳನ್ನು ಚೆನ್ನಾಗಿ ಹುಡುಕುವುದೊಳ್ಳೆಯದೆಂದು ನನ್ನ ಮನಸಿಗೆ ತೋರುವುದು.

ಚಿಕ್ಕಪ್ಪ ಹಠಾತ್ತನೆ ಉದ್ರೇಕಗೊಂಡು, "ನೀವು ಸರಿಯಾಗಿ ಹೇಳಿದಿರಿ, ನಡೆಯಲಾರದ ಸಂಗತಿಯೇನೂ ಅಲ್ಲ" ಎಂದರು.

ಅಕ್ಷಯ—ಹತ್ತಿರದಲ್ಲೇ ಕಾಶೀಕ್ಷೇತ್ರ—ಅಲ್ಲಿ ನಮ್ಮ ಆಪ್ತ ಮಿತ್ರರು

ಒಬ್ಬರಿರುವರು. ಕಮಲ ಅವರಲ್ಲಿಗೆ ಹೋಗಿ ಆಶ್ರಯ ಪಡೆದಿದ್ದರೂ ಪಡೆದಿರಬಹುದು.

ಚಿಕ್ಕಪ್ಪ ಆಸೆಯಿಂದ, " ಏನು, ಅವರ ವಿಷಯವನ್ನು ರಮೇಶಬಾಬು ನನಗೆ ಯಾವಾಗಲೂ ಹೇಳಲೇ ಇಲ್ಲವಲ್ಲ. ಗೊತ್ತಿದ್ದಿದ್ದರೆ ಹುಡುಕದೆ ಬಿಡು ತಿದ್ದೆನೇನು " ಎಂದು ಹೇಳಿದರು.

ಅಕ್ಷಯ—ಆದರೆ ನೀವೊಮ್ಮೆ ಬನ್ನಿ, ನಾವಿಬ್ಬರೂ ಕಾಶಿಗೆ ಹೋಗೋಣ ಪಶ್ಚಿಮದ ಪ್ರಾಂತ್ಯವೆಲ್ಲಾ ನಿಮಗೆ ಚೆನ್ನಾಗಿ ಗೊತ್ತು ನೀವು ಚೆನ್ನಾಗಿ ಹುಡುಕಬಲ್ಲಿರಿ.

ಚಿಕ್ಕಪ್ಪ ಸಲಹೆಗೆ ಉತ್ಸಾಹದಿಂದ ಸಮ್ಮತಿಸಿದರು. ತನ್ನ ಮಾತನ್ನು ಹೇಮನಳಿನಿ ಎಂದೂ ನಂಬಳೆಂದು ಅಕ್ಷಯ ಅರಿತಿದ್ದ, ಅದರಿಂದಲೇ ಇಂಥ ಪ್ರಾಮಾಣಿಕ ಸಾಕ್ಷಿಯ ರೂಪದಲ್ಲಿ ಚಿಕ್ಕಪ್ಪನನ್ನು ಸಂಗಡ ಕರೆದುಕೊಂಡು ಕಾಶಿಗೆ ಹೊರಟ.

## ೬೮

ನಗರದ ಹೊರಗೆ ದಂಡಿನ ಎಲ್ಲೆಯಲ್ಲಿ ಬಯಲು ಪ್ರದೇಶದಲ್ಲಿ ಒಂದು ಬಂಗಲೆ ಬಾಡಿಗೆಗೆ ತೆಗೆದುಕೊಂಡು ಅನ್ನದಾಬಾಬುಗಳು ವಾಸಮಾಡುತಿದ್ದರು.

ಅನ್ನದಾಬಾಬುಗಳು ಕಾಶಿಗೆ ಬಂದು ತಲುಪುತ್ತಲೇ ನಳಿನಾಕ್ಷನ ತಾಯಿ ಕ್ಷೇಮಂಕರಿಯ ಸಾಧಾರಣ ಜ್ವರ ಕೆಮ್ಮು ಕ್ರಮೇಣ ನ್ಯೂಮೋನಿಯಾಕ್ಕೆ ತಿರುಗಿದೆಯೆಂಬ ಸುದ್ದಿ ಕೇಳಿದರು. ಜ್ವರವಿದ್ದಾಗಲೂ ಈ ಚಳಿಯಲ್ಲಿ ಆಕೆ ನಿಯಮಿತ ಪ್ರಾತಃಸ್ನಾನ ಬಿಡದಿದ್ದುದರಿಂದಲೇ ಆಕೆಯ ಸ್ಥಿತಿ ಇಷ್ಟು ಕಠಿಣವಾಯಿತು.

ಕೆಲವು ದಿನಗಳ ಕಾಲ ದಣಿವಿಲ್ಲದ ಪ್ರಯತ್ನದೊಡನೆ ಹೇಮ ಆಕೆಯ ಸೇವೆ ಮಾಡಿದ ಬಳಿಕ ಕ್ಷೇಮಂಕರಿಯ ಕಠಿನಸ್ಥಿತಿ ನಿವಾರಣೆಯಾಯಿತು. ಆದರೆ ಇನ್ನೂ ಆಕೆಗೆ ಸಾಕಾದಷ್ಟು ಶಕ್ತಿಯಿಲ್ಲ. ಶುಚಿತ್ವದ ವಿಷಯದಲ್ಲಿ ಬಹಳ ಕಟ್ಟುನಿಟ್ಟಿನಿಂದಿರಲು ಪಥ್ಯ ನೀರು ಮೊದಲಾದ ವಿಷಯಗಳಲ್ಲಿ ಆಕೆಗೆ ಹೇಮನಳಿನಿಯ ಸಹಾಯ ಸ್ವಲ್ಪವೂ ಉಪಯೋಗಕ್ಕೆ ಬರಲಿಲ್ಲ. ಇದಕ್ಕೆ ಹಿಂದೆ ಆಕೆ ಸ್ವಯಂಪಾಕ ಊಟಮಾಡುವಳು. ಈಗ ನಳಿನಾಕ್ಷ ಆಕೆಯ

ಪಥ್ಯ ಸಿದ್ಧಪಡಿಸತೊಡಗಿದ ಮತ್ತು ಆಹಾರದ ವಿಷಯದಲ್ಲಿ ತಾಯಿಯ ಸಮಸ್ತ ಸೇವೆಯನ್ನೂ ನಳಿನಾಕ್ಷ ಸ್ವಹಸ್ತದಿಂದ ಮಾಡುವನು. ಕ್ಷೇಮಂಕರಿ ಯಾವಾಗಲೂ ಇದಕ್ಕೆ ಆಕ್ಷೇಪಣೆ ಹೇಳುವಳು, "ನಾನು ಸಾಯಬೇಕಾಗಿತ್ತು. ಕೇವಲ ನಿನಗೆ ಕಷ್ಟಕೊಡುವುದಕ್ಕಾಗಿಯೇ ಮತ್ತೆ ವಿಶ್ವೇಶ್ವರ ನನ್ನನ್ನು ಜೀವದಿಂದಿಟ್ಟಿರುವ".

ಕ್ಷೇಮಂಕರಿ ತನ್ನ ವಿಷಯದಲ್ಲಿ ಕಠೋರತೆ ಅವಲಂಬಿಸಿರುವಳು, ಆದರೆ ಆಕೆ ಸುತ್ತ ಮುತ್ತಲಿನ ಕೆಲಸಕಾರ್ಯ ಮತ್ತು ಸೌಂದರ್ಯ ವಿನ್ಯಾಸಕ್ಕೆ ಹೆಚ್ಚು ಗಮನ ಕೊಡುವಳು ಎಂದು ಹೇಮನಳಿನಿ ನಳಿನಾಕ್ಷನಿಂದ ಕೇಳಿ ತಿಳಿದಿದ್ದಳು. ಈ ಕಾರಣದಿಂದ ಅವಳು ಅತಿ ಯತ್ನದಿಂದ ಎಲ್ಲ ಕೆಲಸ ಕಾರ್ಯಗಳನ್ನೂ ಮಾಡುವಳು ಮತ್ತು ಮನೆ-ಬಾಗಿಲನ್ನು ಸಿಂಗರಿಸಿಡುವಳು ಹಾಗೂ ಸ್ವತಃ ಅಲಂಕಾರಮಾಡಿಕೊಂಡು ಕ್ಷೇಮಂಕರಿಯ ಬಳಿಗೆ ಬರುವಳು. ಅನ್ನದಾಬಾಬುಗಳು ದಂಡಿನಲ್ಲಿ ಒಂದು ತೋಟ ಬಾಡಿಗೆಗೆ ಕೊಂಡಿದ್ದರಲ್ಲ, ಅಲ್ಲಿಂದ ಪ್ರತಿನಿತ್ಯವೂ ಹೂ ತಂಗು ಕೊಡುವರು, ಹೇಮನಳಿನಿ ಕ್ಷೇಮಂಕರಿಯ ರೋಗಶಯ್ಯೆಯ ಬಳಿ ಆ ಹೂಗಳನ್ನು ನಾನಾರೀತಿಯಲ್ಲಿ ಸಿಂಗರಿಸಿಡುವಳು.

ನಳಿನಾಕ್ಷ ತಾಯಿಯ ಸೇವೆಗೆ ದಾಸಿಯನ್ನು ನೇಮಿಸಲು ಅನೇಕಬಾರಿ ಪ್ರಯತ್ನಿಸಿದ್ದ; ಆದರೆ ಅವರ ಕೈಯಿಂದ ಸೇವೆ ಮಾಡಿಸಿಕೊಳ್ಳಲು ಆಕೆ ಯಾವ ಬಗೆಯಲ್ಲೂ ಇಷ್ಟಪಡಲಿಲ್ಲ. ನೀರು ತರುವುದೇ ಮೊದಲಾದ ಕೆಲಸಕ್ಕೆ ಸೇವಕ-ಸೇವಕಿಯರಿದ್ದುದೇನೋ ನಿಜ, ಆದರೆ ಆಕೆಯ ಸ್ವಂತ ಕೆಲಸಗಳಲ್ಲಿ ಸಂಬಳಕ್ಕೆ ಕೆಲಸಮಾಡುವ ಯಾವ ಆಳೂ ಕೈಹಾಕುವುದನ್ನು ಆಕೆ ಸಹಿಸಳು. ಅವಳನ್ನು ಚಿಕ್ಕಂದಿನಲ್ಲಿ ಸಾಕಿದ್ದ ಆ ಹಿರಿಯ ತಾಯಿ ಸತ್ತುಹೋದಂದಿನಿಂದ ಅತಿ ಕಠಿಣ ರೋಗದ ಸಮಯದಲ್ಲೂ ಯಾವ ದಾಸಿಗೂ ಅವಳು ಗಾಳಿ ಬೀಸುವುದಕ್ಕಾಗಲಿ, ಕಾಲು ಹಿಸುಕುವುದಕ್ಕಾಗಲಿ ಅವಕಾಶ ಕೊಟ್ಟಿಲ್ಲ.

ಮುದ್ದು ಮಕ್ಕಳನ್ನೂ, ಸುಂದರ ಮುಖವನ್ನೂ ಆಕೆ ಅತಿಯಾಗಿ ಪ್ರೀತಿಸುವಳು ದಶಾಶ್ವಮೇಧ ಘಟ್ಟದಲ್ಲಿ ಬೆಳಗಿನ ಸ್ನಾನ ಮುಗಿಸಿ ದಾರಿಯ ಪ್ರತಿಯೊಂದು ಶಿವಲಿಂಗದ ಮೇಲೂ ಹೂವನ್ನೂ ಗಂಗಾಜಲವನ್ನೂ ಹಾಕಿ ಮನೆಗೆ ಹಿಂದಿರುಗುವಾಗ ಒಂದೊಂದು ದಿನ ಎಲ್ಲೆಲ್ಲಿಂದಲೋ ಒಬ್ಬ ಸುಂದರ ಮೊಟ್ಟಾ ಹುಡುಗನನ್ನೋ ಅಥವಾ ಯಾವುದೋ ಚೆಲುವ ಹಿಂದೂಸ್ಥಾನಿ ಬ್ರಾಹ್ಮಣ ಕನ್ಯೆಯನ್ನೋ ಮನೆಗೆ ಕರೆತರುವಳು. ಕೇರಿಯ ಒಬ್ಬಿಬ್ಬರು ಸುಂದರ

ಹುಡುಗರನ್ನು ಆಕೆ ಆಟವಾಡಿಸಿ ಕಾಸುಕೊಟ್ಟು, ಊಟಹಾಕಿ ವಶಪಡಿಸಿ ಕೊಂಡಿರುವಳು, ಅವರುಗಳು ಎಂದಾದರೂ ಅವರ ಮನೆಯಲ್ಲಿ ಮನಸ್ಸು ಬಂದೆಡೆ ಚೇಷ್ಟೆಮಾಡುತ್ತ ಆಟವಾಡುವರು; ಇದರಿಂದ ಆಕೆಗೆ ಅತಿ ಆನಂದ ವುಂಟಾಗ ವುದು ಆಕೆಯಲ್ಲಿ ಇನ್ನೊಂದು ಪದ್ಧತಿಯಿತ್ತು; ಸಣ್ಣಪುಟ್ಟ ಯಾವುದಾದರೊಂದು ಸುಂದರ ಸಾಮುಗ್ರಿಯನ್ನು ಕಂಡರೆ ಕೊಂಡುಕೊಳ್ಳದೆ ಬಿಡಳು. ಇವು ಯಾವುವೂ ಆಕೆಯ ಸ್ವಂತ ಉಪಯೋಗಕ್ಕೆ ಬಾರವು;— ಆದರೆ ಯಾವ ಪದಾರ್ಥ ಯಾರಿಗೆ ಸಿಕ್ಕಿದರೆ ಸಂತೋಷ ಪಡುವರೆಂದು ತಿಳಿದ ಕಾಣಿಕೆ ಕಳುಹಿಸುವುದರಲ್ಲಿ ಆಕೆಗೆ ಅತಿ ಸಂತೋಷವಾಗುವುದು. ಅನೇಕ ವೇಳೆಗಳಲ್ಲಿ ಆಕೆಯ ದೂರದ ಬಂಧು ಮಿತ್ರರು ಇಂಥ ಒಂದು ಪದಾರ್ಥವನ್ನು ಅಂಚೆಯಮೂಲಕ ಪಡೆದು ಆಶ್ಚರ್ಯಗೊಳ್ಳುತಿದ್ದರು. ಆಕೆಯದೊಂದು ದೊಡ್ಡ ಬೀಟೀ ಮರದ ಪೆಟ್ಟಿಗೆಯಲ್ಲಿ ಇಂಥ ಅನಾವಶ್ಯಕವಾದ ಸುಂದರ— ಸೊಗಸಿನ ಸಾಮುಗ್ರಿಗಳಿದ್ದುವು, ರೇಷ್ಮೆ ಬಟ್ಟೆಬರೆಗಳೂ ಬಹಳವಾಗಿದ್ದವು. ನಳಿನನ ಹೆಂಡತಿ ಬಂದರೆ ಇವೆಲ್ಲಾ ಅವಳಿಗೇ ಸೇರುವವು. ನಳಿನನ ಪರಮ ಸುಂದರಿಯಾದೊಬ್ಬಳ ಬಾಲವಧುವನ್ನು ಆಕೆ ಮನದಲ್ಲೇ ಕಲ್ಪಿಸಿಕೊಂಡಳು— ಅವಳು ಅವರಮನೆ ಬೆಳಗಿಸಿ ಆಡುತ್ತ ತಿರುಗಾಡುತಿದ್ದಳು—ಅವಳಿಗೆ ಈಕೆ ಉಡಿಸಿ—ತೊಡಿಸಿ ಸಿಂಗರಿಸುವಳು--ಈ ಸುಖ ಚಿಂತೆಯಲ್ಲಿ ಆಕೆ ಅನೇಕ ದಿನಗಳ ಅನೇಕ ಸಮಯವನ್ನ ಕಳೆದಿರುವಳು.

ಆಕೆ ಸ್ವತಃ ತಪಸ್ವಿನಿಯಂತಿದ್ದಳು—ಸ್ನಾನ—ಆಹ್ನಿಕ ಪೂಜೆಗಳಲ್ಲಿ ಮುಕ್ಕಾಲು ದಿನವೆಲ್ಲಾ ಕಳೆದು ಒಂದು ಹೊತ್ತು ಹಾಲು ಹಣ್ಣು ಹಂಪಲು ತಿಂದು ಕಾಲ ಕಳೆಯುವಳು. ಆದರೆ ನಿಯಮಪಾಲನೆಯಲ್ಲಿ ನಳಿನಾಕ್ಷನ ಅತಿನಿಷ್ಠೆ ಆಕೆಗೆ ಅಷ್ಟಾಗಿ ಒಗ್ಗುತ್ತಿರಲಿಲ್ಲ. "ಗಂಡಸರಿಗೆ ಇಷ್ಟು ಅತಿಯಾದ ಆಚಾರ-ವಿಚಾರದ ಗೊಂದಲವೇತಕ್ಕೆ" ಎಂದು ಹೇಳುವಳು. ಗಂಡಸರನ್ನು ಆಕೆ ದೊಡ್ಡ ಹುಡುಗರಂತೆ ಭಾವಿಸಿದ್ದಳು-ಊಟ ಉಪಚಾರ ಆಚಾರ ವಿಚಾರದಲ್ಲಿ ಅವರುಗಳಿಗೆ ಇತಿ ಮಿತಿಯಾಗಲಿ, ಕರ್ತವ್ಯ ಜ್ಞಾನವಾಗಲಿ ಇರದಿದ್ದರೆ ಅದನ್ನು ಆಕೆ ಸ್ನೇಹಪೂರ್ವಕ ಸಹಾನುಭೂತಿಯ ಬುದ್ಧಿಯಿಂದ ಯುಕ್ತವೆಂದೆಣಿಸುವಳು—ಕ್ಷಮೆಯೊಡನೆ, "ಗಂಡಸರು ಕಠೋರತೆ ಅನುಭವಿಸ ಲಾರರು" ಎಂದು ಹೇಳುವಳು. ಖಂಡಿತ ಧರ್ಮವನ್ನು ಎಲ್ಲರೂ ರಕ್ಷಿಸಬೇಕು ಆದರೆ ಆಚಾರ ಗಂಡಸಿಗಾಗಲ್ಲ, ಎಂದು ಆಕೆ ಮನದಲ್ಲೇ ನಿಶ್ಚಯಿಸಿದ್ದಳು,

ಒಂದು ವೇಳೆ ನಳಿನಾಕ್ಷ ಇತರ ಸಾಮಾನ್ಯ ಗಂಡಸರಂತೆ ಕಿರಿಯ ಅಳತೆಯಲ್ಲಿ ಅವಿಚಾರಿಯೂ, ಸ್ವೇಚ್ಛಾಚಾರಿಯೂ ಆಗಿದ್ದು, ಎಚ್ಚರಿಕೆಯಿಂದ ಕಾಯ್ದಿರುವ ಪೂಜಾಗೃಹಕ್ಕೆ ಹೊತ್ತಲ್ಲದ ಹೊತ್ತಿನಲ್ಲಿ ಬಂದು ಅವಳ ಮಡಿ ಹಾಳು ಮಾಡಿದ್ದರೂ ಆಕೆಗೆ ಸಂತೋಷವೇ ಆಗುತಿತ್ತು.

ರೋಗ ವಾಸಿಯಾಗಿ ಎದ್ದ ಬಳಿಕ ಕ್ಷೇಮಂಕರಿ, ನಳಿನಾಕ್ಷನ ಉಪದೇಶದಂತೆ ಹೇಮನಳಿನಿ ನಾನಾ ಬಗೆಯ ನಿಯಮ ಪಾಲನೆಯಲ್ಲಿ ನಿರತಳಾಗಿರುವುದನ್ನೂ ಅಷ್ಟೇಕೆ, ಮುದುಕ ಅನ್ನದಾಬಾಬು ನಳಿನಾಕ್ಷನ ಎಲ್ಲ ಮಾತನ್ನೂ ಹಿರಿಯ ಗುರುವಾಕ್ಯದಂತೆ ವಿಶೇಷ ಶ್ರದ್ಧೆ ಮತ್ತು ಭಕ್ತಿಯೊಡನೆ ಗಮನವಿಟ್ಟು ಕೇಳುವುದನ್ನೂ ನೋಡಿದಳು.

ಇದರಿಂದ ಕ್ಷೇಮಂಕರಿಗೆ ಬಹಳ ಆಶ್ಚರ್ಯವಾಯಿತು. ಆಕೆ ಒಂದು ದಿನ ಹೇಮನಳಿನಿಯನ್ನು ಕರೆದು ನಗುತ್ತ ಹೇಳಿದಳು, "ಮಗೂ, ನೀನು ನಳಿನನನ್ನು ಇನ್ನೂ ಹುಚ್ಚೆಬ್ಬಿಸುವಂತೆ ತೋರುವುದು. ಅವನ ಆ-ಎಲ್ಲ ಹುಚ್ಚುಮಾತುಗಳನ್ನೂ ನೀನು ಕೇಳುವುದೇಕೆ? ನೀನು ಅಲಂಕಾರ-ಶೃಂಗಾರ ಮಾಡಿಕೊಂಡು ನಕ್ಕು-ಆಡಿ, ಸುಖಸಂತೋಷದಿಂದ ತಿರುಗಾಡು. ಇದೇನು ನೀನು ಸಾಧನೆ ಮಾಡುವ ವಯಸ್ಸೇ? ನೀನೇಕೆ ತಪ್ಪದೆ ಇವನ್ನೆಲ್ಲ ಅನು ಸರಿಸುವೆ? ಎಂದು ಕೇಳುವೆಯಾದರೆ ಅದಕ್ಕೊಂದು ಕತೆಯಿದೆ, ನಮ್ಮ ಅಪ್ಪ ಅಮ್ಮ ಅತಿ ನಿಷ್ಠಾವಂತರಾಗಿದ್ದರು. ಚಿಕ್ಕಂದಿನಿಂದಲೂ ನನ್ನ ಸೋದರ-ಸೋದರಿಯರು ಈ ಎಲ್ಲ ಶಿಕ್ಷಣದ ನಡುವೆ ಬೆಳೆದವರು ಒಂದು ವೇಳೆ ನಾನು ಅದನ್ನು ಬಿಟ್ಟರಲು ನನಗೆ ಬೇರೆ ಯಾವ ಆಶ್ರಯವೂ ಇರಲಿಲ್ಲ ಆದರೆ ನಿನಗೆ ಹಾಗಿಲ್ಲ – ನಿನ್ನ ಪಾಠಪ್ರವಚನ ಎಲ್ಲವನ್ನೂ ನಾಬಲ್ಲೆ. ನೀನು ಮಾಡುವುದೆಲ್ಲ ಕೇವಲ ಬಲವಂತದಿಂದ ಮಾಡುತ್ತಿರುವೆ— ಇದರಿಂದ ಲಾಭ ವೆ ನಾಯಿತು. ನಾನು ಹೇಳುವುದಿಷ್ಟೇ. ಏನನ್ನು ಪಡೆದಿರುವೆಯೋ ಅದನ್ನು ಚೆನ್ನಾಗಿ ಕಾಪಾಡಿಕೊಂಡು ಹೋಗಬೇಕು ಬೇಡಬೇಡ, ಅವೆಲ್ಲಾ ಬೇಡ-ಅವೆಲ್ಲಾ ಬಿಟ್ಟು ಬಿಡು. ನಿನ್ನ ಈ ಸಾತ್ವಿಕ ಆಹಾರವೇಕೆ; ಯೋಗ, ತಪಸ್ಸು ತಾನೇ ಏಕೆ! ನಳಿನನಾದರೂ ಇಷ್ಟು ದೊಡ್ಡ ಗುರುವಾದದ್ದು ಯಾವಾಗ? ಅವನು ಇವನ್ನೆಲ್ಲಾ ಬಲ್ಲನೇನು ಮೊದಲೆಲ್ಲಾ ಅವನು ಮನಸ್ಸಿಗೆ ಬಂದಂತೆ ಮಾಡುವನು. ಶಾಸ್ತ್ರದ ಮಾತು ಕೇಳಿದರೆ ಒಮ್ಮೆಗೇ ಕಲ್ಲಿನ ಪ್ರತಿಮೆ

ಯಾಗುತ್ತಿದ್ದ. ನನ್ನನ್ನು ಸಂತೋಷಗೊಳಿಸಲು ಇವನ್ನೆಲ್ಲಾ ಪ್ರಾರಂಭಿಸಿದ. ಕಡೆಗೆ ನೋಡಿದರೆ, ಎಂದೋ ಒಂದು ದಿನ ಪೂರ್ಣ ಸಂನ್ಯಾಸಿಯಾಗಿ ದೇಶಾಂತರ ಹೋಗುವಂತಿದೆ. ನಾನವನಿಗೆ ಬಾರಿಬಾರಿಗೂ, " ಚಿಕ್ಕಂದಿನಿಂದ ನಿನಗೆ ಯಾವ ನಂಬಿಕೆಯೋ ಅದರಂತೆ ನಡೆ—ಅದು ಕೆಟ್ಟದ್ದೇನೂ ಅಲ್ಲ, ಅದರಿಂದ ನಾನು ಸಂತೋಷಗೊಳ್ಳುವೆನಲ್ಲದೆ ಅಸಂತೋಷಪಡೆನು ಎಂದು ಹೇಳಿದೆ. ಕೇಳಿ ನಳಿನ ನಗುವನು—ಅದು ಅವನ ಸ್ವಭಾವ—ಎಲ್ಲ ಮಾತನ್ನೂ ಮೌನವಾಗಿ ಕೇಳುವನು—ಬೈದರೂ ಬಾಯಿಬಿಟ್ಟು ಉತ್ತರ ಹೇಳುವುದಿಲ್ಲ ".

ಸಂಜೆ ಐದರ ಬಳಿಕ ಹೇಮನಳಿನಿಯ ತಲೆ ಬಾಚುತ್ತ ಬಾಚುತ್ತ ಈ ಎಲ್ಲ ಆಲೋಚನೆ ನಡೆಯುವುದು. ಹೇಮಳ ಹೆರಳು ಹಾಕಿಕೊಳ್ಳುವಿಕೆ ಕ್ಷೇಮಂಕರಿಗೆ ಒಪ್ಪಿಗೆಯಾಗುತ್ತಿರಲಿಲ್ಲ " ನೀನು ಮನಸ್ಸಿಗೆ ಏನು ತಿಳಿದು ಕೊಳ್ಳುವೆಯೋ ತಾಯಿ , ನಾನೂ ಅತಿ ಹಿಂದಿನಕಾಲದವಳು, ಈಗಿನ ಕಾಲದ ಫ್ಯಾಷನ್ ಸ್ವಲ್ಪವೂ ತಿಳಿಯದು. ಆದರೆ ನಾನು ಎಷ್ಟು ರೀತಿಯಲ್ಲಿ ಹೆರಳು ಹಾಕಬಲ್ಲೆನೋ ಅಷ್ಟು ನಿನಗೆ ತಿಳಿಯದು. ಒಬ್ಬಳು ಒಳ್ಳೆಯ ಮೇಮ್ (ಆಂಗ್ಲ ಮಹಿಳೆ) ಸಿಕ್ಕಿದ್ದಳು. ಅವಳು ನನಗೆ ಕಸೂತಿ ಕಲಿಸಲು ಬರುವಳು, ಆಗ ಎಷ್ಟೋ ಬಗೆಯಲ್ಲಿ ಹೆರಳು ಹಾಕುವುದನ್ನೂ ಕಲಿತಿರುವೆ. ಅವಳು ಹೊರಟು ಹೋದಮೇಲೆ ನಾನು ಸ್ನಾನಮಾಡಿ ಬಟ್ಟೆ ಬದಲಾಯಿಸ ಬೇಕಾಗುವುದು. ಏನು ಮಾಡುವುದಪ್ಪಾ, ಸಂಸ್ಕಾರ, ಅದರ ಒಳ್ಳೆಯದು–ಕೆಟ್ಟದ್ದು ತಿಳಿಯದು–ಮಾಡದೆ ಇರಲೂ ಸಾಧ್ಯವಿಲ್ಲ. ನಿನ್ನ ಹತ್ತಿರ ಏನೇನೋ ಹೇಳಿದೆ. ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ. ಅದು ಮನಸ್ಸಿನ ಬೇಸರವಲ್ಲ. ಬರಿಯ ಒಂದು ಅಭ್ಯಾಸ. ನಳಿನನ ಮನೆಯಲ್ಲಿ ಬೇರೆ ಮತವಾಯಿತು, ಹಿಂದೂ ಧರ್ಮ ಹಾಳಾಯಿತು, ಆಗಲೂ ನಾನು ಎಲ್ಲವನ್ನೂ ಸಹಿಸಿಕೊಂಡೆ. ಯಾವ ಮಾತನ್ನೂ ಹೇಳಲಿಲ್ಲ - ಯಾವುದನ್ನು ಚೆನ್ನಾಗಿ ಅರಿತು ಕೊಳ್ಳ ಬೇಕೋ ಅದನ್ನು ಮಾತ್ರ ನಾನು ಹೇಳಿರುವೆ. ಹೆಣ್ಣು ಹೆಂಗಸು, ಇಷ್ಟು ಕಾಲದಿಂದ ಯಾವುದು ಅಭ್ಯಾಸವೋ ಅದನ್ನು ಬಿಡಲಾರೆ, ಎಂದು ಆಕೆ ಹೇಳಿದಳು ಹೇಳುತ್ತ ಹೇಳುತ್ತ ಕ್ಷೇಮಂಕರಿ ಒಂದು ಹನಿ ಕಣ್ಣೀರನ್ನು ಅವಸರ ಅವಸರವಾಗಿ ಸೆರಗಿನಿಂದ ಒರೆಸಿಕೊಂಡಳು.

ಈ ರೀತಿಯಲ್ಲಿ ಹೇಮನಳಿನಿಯ ಹೆರಳು ಬಿಚ್ಚಿಹಾಕಿ ಅವಳ ನೀಳ್ಗೂದಲನ್ನು ಪ್ರತಿದಿನವೂ ಹೊಸ ಹೊಸರೀತಿಯಲ್ಲಿ ಜಡೆ ಹಾಕುವುದೆಂದರೆ

ಕ್ಷೇಮಂಕರಿಗೆ ಬಹಳ ಇಷ್ಟ. ಹೀಗೂ ನಡೆಯುವುದುಂಟು, ಆಕೆ ತನ್ನ ಆ ಬೀಟೀ ಮರದ ಪೆಟ್ಟಿಗೆಯಿಂದ ತನಗೆ ಇಷ್ಟವಾದ ಬಟ್ಟೆ ಹೊರತೆಗೆದು ಅವಳಿಗೆ ಉಡಿಸುವಳು. ಮನಸಿಗೆ ಬಂದಂತೆ ಸಿಂಗರಿಸುವುದೆಂದರೆ ಆಕೆಗೆ ಹಿಡಿಸಲಾರದ ಸಂತೋಷ. ಪ್ರಾಯಃ ದಿನವೂ ಹೇಮನಳಿನಿ ತನ್ನ ಕಸೂತಿತಂದು ಕ್ಷೇಮಂಕರಿಗೆ ತೋರಿಸಿಕೊಂಡು ಹೋಗುವಳು. ಕ್ಷೇಮಂಕರಿ ಅವಳಿಗೆ ಹೊಸ ಹೊಸನಮೂನೆಯ ಕಸೂತಿ ಹಾಕುವಿಕೆಯನ್ನು ಕಲಿಸಲಾರಂಭಿಸಿದಳು. ಇವೆಲ್ಲ ಆಕೆಯ ಸಂಜೆಯ ಕೆಲಸವಾಗಿತ್ತು. ಬಂಗಾಳಿ ಮಾಸ ಪತ್ರಿಕೆ ಮತ್ತು ಕತೆ ಪುಸ್ತಕ ಓದುವುದರಲ್ಲೂ ಉತ್ಸಾಹ ಕಡಿಮೆಯಾಗಿರಲಿಲ್ಲ. ಹೇಮನಳಿನಿಯ ಬಳಿ ಇದ್ದ ಎಲ್ಲ ಪುಸ್ತಕ ಹಾಗೂ ಪತ್ರಿಕೆಗಳನ್ನೂ ಅವಳು ಕ್ಷೇಮಂಕರಿಗೆ ತಂದು ಕೊಟ್ಟಿದ್ದಳು. ಒಂದೊಂದು ಪ್ರಬಂಧವನ್ನೋ ಅಥವಾ ಪುಸ್ತಕದ ವಿಷಯವನ್ನೋ ಕ್ಷೇಮಂಕರಿ ವಿಮರ್ಶಿಸುವುದನ್ನು ಕೇಳಿ ಹೇಮನಳಿನಿಗೆ ಆಶ್ಚರ್ಯವಾಗುವುದು–ಇಂಗ್ಲೀಷು ಕಲಿಯದೆ ಇಷ್ಟು ವಿಮರ್ಶಾಪೂರ್ವಕವಾಗಿ ಚರ್ಚಿಸಬಹುದೆಂದು ಹೇಮ್ ತಿಳಿದಿರಲಿಲ್ಲ. ನಳಿನಾಕ್ಷನ ತಾಯಿಯ ಮಾತು ಕತೆ ಹಾಗೂ ಸಂಸ್ಕಾರ–ಆಚರಣೆ ಎಲ್ಲವನ್ನೂ ನೋಡಿ ಹೇಮನಳಿನಿ ಆಕೆಯನ್ನು ಅತಿ ಅದ್ಭುತ ಮಹಿಳೆಯೆಂನು ಭಾವಿಸಿದಳು. ಎಲ್ಲವೂ ಅವಳು ನಿರೀಕ್ಷಿಸದ ರೀತಿಯಲ್ಲಿತ್ತು.

೪೯

ಕ್ಷೇಮಂಕರಿಗೆ ಪುನಃ ಜ್ವರ ಬರಲಾರಂಭಿಸಿತು ಈ ಸಲ ಸ್ವಲ್ಪದರಲ್ಲಿ ಜ್ವರ ವಾಸಿಯಾಯಿತು. ಬೆಳಗ್ಗೆ ನಳಿನಾಕ್ಷ ನಮಸ್ಕಾರಮಾಡಿ ಆಕೆಯ ಪಾದಧೂಳಿ ತೆಗೆದುಕೊಳ್ಳುವಾಗ, "ಅಮ್ಮಾ, ನೀನು ಕೆಲವು ದಿನ ರೋಗಿಯ ನಿಯಮದಂತೆ ಇರಬೇಕು. ದುರ್ಬಲ ಶರೀರ ಈ ಕಠೋರತೆಯನ್ನು ಸಹಿಸ ಲಾರದು" ಎಂದು ಹೇಳಿದ.

ಕ್ಷೇಮಂಕರಿ ಹೇಳಿದಳು, "ನಾನು ರೋಗಿಯ ನಿಯಮದಂತೆ ಇರುವೆ. ನೀನು ಯೋಗಿಯ ನಿಯಮದಂತೆ ಇರುವೆ. ನಳಿನ, ನೀನು ಇನ್ನು ಈರೀತಿ ನಡೆಯುವುದು ಸರಿಯಲ್ಲ. ನಾನು ಅಪ್ಪಣೆಕೊಡುವುದಿಷ್ಟೇ, ನೀನು ಈಸಲ ಮದುವೆಮಾಡಿಕೊಳ್ಳಲೇಬೇಕು".

ನಳಿನಾಕ್ಷ ಸುಮ್ಮನೆ ಕುಳಿತಿದ್ದ, "ನೋಡು ಮಗೂ, ನನ್ನ ಈ ಶರೀರ

ಹೆಚ್ಚುದಿನ ಬಾಳುವುದಿಲ್ಲ—ನೀನು ಸಂಸಾರಿಯಾದುದನ್ನು ನೋಡಿದರೆ ನೆಮ್ಮದಿಯಿಂದ ಸಾಯಬಹುದು. ಪುಟ್ಟ ಚೆಲುವೆ ಸೊಸೆಯೊಬ್ಬಳು ನಮ್ಮ ಮನೆಗೆ ಬರುವಳು, ನಾನವಳಿಗೆ ಸ್ವತಃ ಓದು-ಬರಹ ಕಲಿಸಿ ದೊಡ್ಡವಳನ್ನಾಗಿ ಮಾಡುವೆ, ಅವಳಿಗೆ ಉಡಿಸಿ-ತೊಡಿಸಿ ನನ್ನಿಷ್ಟದಂತೆ ಇರಿಸುವೆನೆಂದು ಹಿಂದೆ ಮನಸ್ಸಿನಲ್ಲೆಣಿಸಿಕೊಂಡಿದ್ದೆ. ಆದರೆ ಈ ಸಲದ ರೋಗದಲ್ಲಿ ಭಗವಂತ ನನಗೆ ಎಚ್ಚರಿಕೆ ಕೊಟ್ಟಿರುವನು. ಸ್ವಂತ ಆಯುಸ್ಸಿನ ಮೇಲೆ ನಂಬಿಕೆಯಿಡು ವಂತಿಲ್ಲ, ನಾನು ಯಾವಾಗ ಇರುವೆನೋ, ಯಾವಾಗ ಇರೆನೋ ಎಂಬುದರ ನೆಚ್ಚಿಕೆಯೇನು? ಎಳೆಯ ಹುಡುಗಿಯೊಬ್ಬಳನ್ನು ನಿನ್ನ ಕುತ್ತಿಗೆಗೆ ಕಟ್ಟಿ ಹೊರಟುಹೋದರೆ ಮತ್ತಷ್ಟು ತೊಂದರೆಯಾದೀತು. ಅದಕ್ಕಿಂತ ನಿನ್ನಿಷ್ಟ ದಂತೆ ವಯಸ್ಕಳಾದ ಹುಡುಗಿಯನ್ನೇ ಮದುವೆಯಾಗು, ಜ್ವರದ ಕಾಲದಲ್ಲಿ ಈ ಎಲ್ಲ ವಿಷಯವನ್ನೂ ಯೋಚಿಸುತ್ತ ಯೋಚಿಸುತ್ತ ರಾತ್ರಿ ನನಗೆ ನಿದ್ದೆ ಹತ್ತುತ್ತಿರಲಿಲ್ಲ ನನ್ನ ಈ ಕೆಲಸ ಉಳಿದಿದೆಯೆಂದು ನಾನು ಚೆನ್ನಾಗಿ ಬಲ್ಲೆ— ಇದನ್ನು ನೆರವೇರಿಸುವುದಕ್ಕಾಗಿಯೇ ನಾನು ಬದುಕಿರುವುದು. ಇಲ್ಲವಾದರೆ ನನಗೆ ಶಾಂತಿಯಿಲ್ಲ" ಎಂದು ಕ್ಷೇಮಂಕರಿ ಹೇಳಿದಳು.

ನಳಿನಾಕ್ಷ—ನಮ್ಮಗಳೊಡನೆ ಹೊಂದಿಕೊಳ್ಳುವಂಥಾ ವಧು ಎಲ್ಲಿ ದೊರೆಯುವಳು?

ಕ್ಷೇಮಂಕರಿ, "ಒಳ್ಳೆಯದು, ಅದನ್ನು ನಾನು ನಿಶ್ಚಯಿಸಿ ನಿನಗೆ ತಿಳಿಸುವೆ, ಅದಕ್ಕಾಗಿ ನೀನೇನೂ ಯೋಚಿಸಬೇಡ" ಎಂದಳು.

ಇಂದಿನ ತನಕ ಕ್ಷೇಮಂಕರಿ ಅನ್ನದಾಬಾಬುಗಳೆದುರಿಗೆ ಬಂದಿರಲಿಲ್ಲ. ಸಂಜೆಗೆ ಸ್ವಲ್ಪ ಮುಂಚೆ ಪ್ರತಿದಿನದ ಪದ್ಧತಿಯಂತೆ ತಿರುಗಾಡುತ್ತ ತಿರು ಗಾಡುತ್ತ ಅನ್ನದಾಬಾಬುಗಳು ನಳಿನಾಕ್ಷನ ಮನೆಗೆ ಬಂದಾಗ ಕ್ಷೇಮಂಕರಿ ಅನ್ನದಾಬಾಬುಗಳನ್ನು ಕರೆಯ ಕಳುಹಿಸಿದಳು. "ನಿಮ್ಮ ಹುಡುಗಿ ಸಾಕ್ಷಾತ್ ಲಕ್ಷ್ಮಿ—ಅವಳಲ್ಲಿ ನನಗೆ ಅತಿ ಸ್ನೇಹವುಂಟಾಗಿರುವುದು. ಇನ್ನು ನಳಿನನನ್ನು ನೀವು ತಿಳಿದೇ ಇರುವಿರಿ, ಹುಡುಗನ ವಿಷಯದಲ್ಲಿ ಯಾರೂ ಏನೂ ಹೇಳು ವಂತಿಲ್ಲ—ಡಾಕ್ಟರ್ ವೃತ್ತಿಯಲ್ಲೂ ಅವನಿಗೆ ಒಳ್ಳೆಯ ಹೆಸರಿದೆ. ನಿಮ್ಮ ಮಗಳಿಗಾಗಿ ಇಂಥ ಸಂಬಂಧ ಹುಡುಕಿದರೆ ಬೇಗ ದೊರೆಯುವುದೇನು?" ಎಂದು ಅವರೊಡನೆ ಹೇಳಿದಳು.

ಅನ್ನದಾಬಾಬುಗಳು ದುಗುಡದಿಂದ ಹೇಳಿದರು, "ಏನು ಹೇಳುವಿರಿ,

ಇಂಥ ಸಂಗತಿಯನ್ನು ಆಶಿಸುವ ಸಾಹಸವೂ ನನಗಿರಲಿಲ್ಲ. ನಳಿನಾಕ್ಷನೊಡನೆ ನನ್ನ ಮಗಳ ಮದುವೆಯಾದರೆ ಅದಕ್ಕಿಂತ ಹೆಚ್ಚಾಗಿ ಅಪೇಕ್ಷಿಸುವ ಸೌಭಾಗ್ಯ ನನಗೇನಿರುವುದು ! ಆದರೆ ಅವರೇನು - - - ".

ಕ್ಷೇಮಂಕರಿ, " ನಳಿನ ಬೇಡ ಎನ್ನುವುದಿಲ್ಲ. ಅವನು ಈಗಿನ ಹುಡುಗ ರಂತಲ್ಲ. ಅವನು ನನ್ನ ಮಾತು ಕೇಳುವನು. ಅಲ್ಲದೆ ಇದರಲ್ಲಿ ಬಲಾತ್ಕಾರ ಮಾಡುವ ಸಂಗತಿಯಾದರೂ ಏನಿರುವುದು. ನಿಮ್ಮ ಮಗಳನ್ನು ಒಪ್ಪ ದವರಾರು ! ಅದರಿಂದಲೇ ಈ ಕೆಲಸವನ್ನು ನಾನು ಆದಷ್ಟು ಬೇಗ ಮುಗಿಸಲು ಆಶಿಸುವೆ. ನನ್ನ ಶರೀರದ ಸ್ಥಿತಿ ನನಗೇ ಚೆನ್ನಾಗಿ ತಿಳಿಯದು" ಎಂದಳು.

ಆ ರಾತ್ರಿ ಅನ್ನದಾಬಾಬ.ಗಳು ಹಿಗ್ಗುತ್ತ ಮನೆಗೆ ತೆರಳಿದರು. ಅಂದೇ ರಾತ್ರಿ ಅವರು ಹೇಮನಳಿನಿಯನ್ನು ಕರೆದು, " ಅಮ್ಮಾ, ನನಗೂ ವಯಸ್ಸಾ ಯಿತು. ನನ್ನ ಶರೀರದ ಸ್ಥಿತಿ ಇಂದಿಗೂ ಉತ್ತಮವಾಗಿಲ್ಲ. ನಿನಗೊಂದು ಸರಿಯಾದ ಸ್ಥಿತಿಯನ್ನು ಮಾಡದಿದ್ದರೆ ನನ್ನ ಮನಸ್ಸಿಗೆ ಸುಖವಿಲ್ಲ. ಹೇಮ್, ನನ್ನ ಬಳಿ ನಾಚಿಕೆ ಪಟ್ಟರೆ ನಡೆಯದು. ನಿಮ್ಮ ತಾಯಿಯಿಲ್ಲ, ಈಗ ನಿನ್ನ ಎಲ್ಲ ಹೊಣೆಯೂ ನನ್ನ ಮೇಲೆಯೇ" ಎಂದು ಹೇಳಿದರು.

• ಹೇಮನಳಿನಿ ಉತ್ಕಂಠಿತಳಾಗಿ ತನ್ನ ತಂದೆಯ ಮುಖದ ಕಡೆ ನೋಡುತ್ತಿದ್ದಳು.

ಅನ್ನದಾಬಾಬುಗಳು ಹೇಳಿದರು, " ಅಮ್ಮಾ, ಮನಸ್ಸಿನ ಆನಂದವನ್ನು ನನಗೆ ಅಡಗಿಸಿಕೊಳ್ಳಲಾರದಂಥ ಒಂದು ಒಳ್ಳೆಯ ಸಂಬಂಧ ನಿನಗೆ ಬಂದಿರು ವುದು. ನಡುವೆ ಏನಾದರೂ ವಿಘ್ನವುಂಟಾಗುವುದೇನೋ ಎಂದು ನನಗೆ ಭಯವಾಗುವುದು. ಈ ದಿನ ನಳಿನಾಕ್ಷನ ತಾಯಿ ತಾವಾಗಿಯೇ ನನ್ನನ್ನು ಕರೆದು ತನ್ನ ಮಗನೊಡನೆ ನಿನ್ನ ಮದುವೆ ಪ್ರಸ್ತಾಪ ಮಾಡಿದರು".

ಹೇಮನಳಿನಿ ಮುಖ ಕೆಂಪಗೆ ಮಾಡಿಕೊಂಡು ಅತಿಯಾದ ಸಂಕೋಚ ದಿಂದ, " ಅಪ್ಪಾ, ನೀವು ಹೇಳುವುದೇನು ! ಇಲ್ಲ ಇಲ್ಲ ಎಂದಿಗೂ ಸಾಧ್ಯವಿಲ್ಲ" ಎಂದಳು.

ಎಂದಾದರೂ ನಳಿನಾಕ್ಷ ಮದುವೆಯಾಗಬಹುದು ಎಂಬ ಸಂಭವದ ಸಂದೇಹವೂ ಹೇಮನಳಿನಿಯ ಮನಸ್ಸಿನಲ್ಲಿ ಹುಟ್ಟಿರಲಿಲ್ಲ-ಹಠಾತ್ತಾಗಿ ತಂದೆಯ ಬಾಯಿಂದ ಈ ವಿಷಯ ಕೇಳಿ, ನಾಚಿಕೆ-ಸಂಕೋಚಗಳು ಅವಳನ್ನು ಚಂಚಲ ಳನ್ನಾಗಿ ಮಾಡಿತು.

"ಏಕಾಗಲಾರದು ?" ಎಂದು ಅನ್ನದಾಬಾಬುಗಳು ಕೇಳಿದರು.

"ನಳಿನಾಕ್ಷಬಾಬು ! ಇದೆಂದಾವರೂ ಆಗುವುದೇ" ಎಂದಳು. ಹೇಮ ನಳಿನಿಯ ಈ ರೀತಿ ಉತ್ತರವನ್ನು ಜಾಣತನವೆನ್ನುವಂತಿಲ್ಲ. ಆದರೆ ಜಾಣತನಕ್ಕಿಂತಲೂ ಇದು ಹೆಚ್ಚು ಶಕ್ತಿಯುಳ್ಳದ್ದು.

ಹೇಮಳಿಗೆ ಅಲ್ಲಿರಲು ಸಾಧ್ಯವಾಗಲಿಲ್ಲ—ಅವಳು ವರಾಂಡಕ್ಕೆ ಹೊರಟು ಹೋದಳು.

ಅನ್ನದಾಬಾಬುಗಳು ವಿಸ್ಮಯಗೊಂಡರು. ಇಂಥ ಕಡೆಯ ಮಾತನ್ನು ಅವರು ಊಹಿಸಿರಲಿಲ್ಲ. ಅದಕ್ಕೆ ವಿರುದ್ಧವಾಗಿ ನಳಿನಾಕ್ಷನೊಡನೆ ವಿವಾಹದ ಮಾತಿನಿಂದ ಹೇಮ ಒಳಗೊಳಗೇ ಸಂತೋಷಗೊಳ್ಳುವಳೆಂದು ಅವರು ಭಾವಿಸಿದ್ದರು. ಏನು ಮಾಡುವುದೆಂದು ತಿಳಿಯದೆ ಮುದುಕರು ವಿಷಣ್ಣ ಮುಖದಿಂದ ಸೀಮೆಯೆಣ್ಣೆಯ ದೀಪದ ಕಡೆ ನೋಡಿ ಸ್ತ್ರೀ ಪ್ರಕೃತಿಯ ತಿಳಿಯಲಾರದ ರಹಸ್ಯವನ್ನೂ, ಹೇಮನಳಿನಿಯ ತಾಯಿ ಇಲ್ಲದಿದ್ದುದನ್ನೂ ಮನದಲ್ಲೇ ಚಿಂತಿಸತೊಡಗಿದರು.

ಹೇಮ ಅನೇಕ ಕ್ಷಣ ವರಾಂಡದ ಕತ್ತಲೆಯಲ್ಲಿ ಕುಳಿತಿದ್ದಳು. ಆ ಬಳಿಕ ಕೊಠಡಿಯ ಕಡೆ ನಿರೀಕ್ಷಿಸುತ್ತಲೇ ತನ್ನ ತಂದೆಯ ಅತಿ ನಿರಾಶೆಯ ಮುಖದ ಭಾವ ಕಣ್ಣಿಗೆ ಬಿದ್ದು ಅವಳ ಮನಸ್ಸು ಕಾತುರಗೊಂಡಿತು. ಕೂಡಲೇ ತನ್ನ ತಂದೆಯ ಕುರ್ಚಿಯ ಹಿಂದೆ ನಿಂತುಕೊಂಡು ಅವರ ತಲೆಯ ಮೇಲೆ ಬೆರಳಾಡಿಸುತ್ತ ಹೇಳಿದಳು, "ಅಪ್ಪಾ ನಡೆಯಿರಿ, ಊಟದ ಹೊತ್ತು ಮೀರಿದೆ. ಅಡುಗೆ ತಣ್ಣಗಾಗಿರಬಹುದು".

ಅನ್ನದಾಬಾಬು ಯಂತ್ರ ನಡೆಯುವಂತೆ ಎದ್ದು ಊಟಮಾಡುವ ಸ್ಥಳಕ್ಕೆ ಹೋದರು. ಆದರೆ ಸರಿಯಾಗಿ ಊಟಮಾಡಲಾಗಲಿಲ್ಲ. ಹೇಮ ನಳಿನಿಯ ಎಲ್ಲ ದುಗ್ರ್ರಹವೂ ಕಳೆದುಹೋಯಿತೆಂದು ಅವರು ಅತಿ ಆಶೆಯಿಂದ ಇದ್ದರು, ಆದರೆ ಹೇಮನಳಿನಿಯಿಂದ ಇಷ್ಟು ದೊಡ್ಡ ತಡೆಯುಂಟಾದುದಕ್ಕಾಗಿ ಅವರು ಬಹಳ ಕುಗ್ಗಿಹೋದರು. ಮತ್ತೆ ಅವರು ಚಿಂತೆಯ ನಿಟ್ಟುಸಿರು ಬಿಟ್ಟು, "ಹೇಮ ಇನ್ನೂ ರಮೇಶನನ್ನು ಮರೆತಿಲ್ಲ" ಎಂದು ಭಾವಿಸಿದರು.

ಇತರ ದಿನಗಳಲ್ಲಿ ಊಟ ಮುಗಿದ ಮೇಲೆ ಅನ್ನದಾಬಾಬು ಮಲಗಲು ಹೋಗುವರು. ಇಂದು ವರಾಂಡದ ಚಿತ್ರದ ಆರಾಮ ಕುರ್ಚಿಯಲ್ಲಿ ಕುಳಿತು ಮನೆಯ ತೋಟದೆದುರಿಗಿದ್ದ ದಂಡಿನ ನಿರ್ಜನ ಬೀದಿಯ ಕಡೆ ನೋಡುತ್ತ

ಆಲೋಚಿಸತೊಡಗಿದರು. ಹೇಮನಳಿನಿ ಬಂದು ಸ್ನಿಗ್ಧಸ್ವರದಲ್ಲಿ, "ಅಪ್ಪಾ, ಈಗ ಬಹಳ ಚಳಿ, ಮಲಗಲು ನಡೆಯಿರಿ" ಎಂದಳು.

"ನೀನು ಮಲಗು ಹೋಗು, ನಾನಿನ್ನು ಸ್ವಲ್ಪಹೊತ್ತಿನ ಬಳಿಕ ಹೋಗುವೆ" ಎಂದರು ಅನ್ನದಾಬಾಬುಗಳು. ಹೇಮನಳಿನಿ ತೆಪ್ಪನೆ ಅವರ ಹಿಂದೆ ನಿಂತಿದ್ದಳು. ಕ್ಷಣಕಾಲದ ಬಳಿಕ ಪುನಃ, "ಅಪ್ಪಾ, ನಿಮಗೆ ಚಳಿ ಯಾಗುವುದು, ಇಲ್ಲದಿದ್ದರೆ ಒಂದು ವೇಳೆ ಬೈಠಕ್‌ಖಾನೆಗಾದರೂ ಹೋಗಿ" ಎಂದಳು.

ಆಗ ಅನ್ನದಾಬಾಬುಗಳು ಕುರ್ಚಿಯಿಂದೆದ್ದು ಏನನ್ನೂ ಹೇಳದೆ ಮಲಗಲು ಹೋದರು.

ಒಂದುವೇಳೆ ತನ್ನ ಕರ್ತವ್ಯಕ್ಕೆ ಕುಂದು ಬರಬಹುದೆಂದು ತಿಳಿದ ಹೇಮ ನಳಿನಿ ರಮೇಶನ ವಿಷಯವನ್ನು ಒಳಗೊಳಗೇ ಆಲೋಚಿಸುತ್ತ ಮನಸ್ಸನ್ನು ದುಃಖಕ್ಕೆ ಈಡುಮಾಡಿಕೊಂಡಿರಲಿಲ್ಲ. ಇದರಿಂದಲೇ ಇಷ್ಟುದಿನ ಅವಳು ಅಂತರಂಗದೊಡನೆ ಅನೇಕ ಹೋರಾಟ ನಡೆಸುತ್ತ ಬಂದಿರುವಳು. ಆದರೆ ಹೊರಗಿನಿಂದ ಪೆಟ್ಟು ತಗುಲಿದಾಗ ಗಾಯವಿರುವ ಸ್ಥಳದ ಎಲ್ಲ ವೇದನೆಯೂ ಉದ್ರೇಕಗೊಳ್ಳುವುದು. ಹೇಮನಳಿನಿಯು ಮುಂದಿನ ಜೀವನ ಯಾವ ರೀತಿ ಯಲ್ಲಿ ನಡೆಯಬೇಕು, ಎಂದು ಅವಳು ಇಲ್ಲಿಯ ತನಕ ಸ್ಪಷ್ಟವಾಗಿ ಯಾವುದನ್ನೂ ತೀರ್ಮಾನಿಸಿರಲಿಲ್ಲ— ಈ ಕಾರಣದಿಂದಲೇ ಯಾವುದೋ ಒಂದು ಸುದೃಢವಾದ ಅವಲಂಬನೆಯನ್ನು ಹುಡುಕಿ ಕಡೆಗೆ ನಳಿನಾಕ್ಷನನ್ನು ಗುರುವೆಂದು ಗೌರವಿಸಿ ಅವನ ಉಪದೇಶದಂತೆ ನಡೆಯಲು ಸಿದ್ಧಳಾಗಿದ್ದಳು. ಆದರೆ ಮದುವೆಯ ಪ್ರಸ್ತಾಪದಿಂದ ಅವಳನ್ನು ಅವಳ ಹೃದಯದ ಗಭೀರತಮ ಪ್ರದೇಶದ ಆಶ್ರಯ ಸೂತ್ರದಿಂದ ಎಳೆದು ತರಲಾಶಿಸಿದರೆ, ಆ ಬಂಧನ ಎಷ್ಟು ಕಠಿಣವೆಂದು ಅವಳು ಬಲ್ಲಳು. ಅದನ್ನು ಯಾರು ಕತ್ತರಿಸಲು ಬಂದರೂ ಹೇಮನಳಿನಿಯ ಸಮಸ್ತ ಹೃದಯವೂ ವ್ಯಾಕುಲದಿಂದ ಆ ಬಂಧನವನ್ನು ಎರಡರಷ್ಟು ಬಲದಿಂದ ಗಟ್ಟಿಯಾಗಿ ಹಿಡಿದಿಡಲು ಪ್ರಯತ್ನಿಸುವುದು.

## ೫೦

ಇತ್ತ ಕ್ಷೇಮಂಕರಿ ನಳಿನಾಕ್ಷನನ್ನು ಕರೆದು, "ನಾನು ನಿನಗೆ ಹೆಣ್ಣು ನಿಶ್ಚಯಿಸಿರುವೆ" ಎಂದಳು.

ನಳಿನಾಕ್ಷ ತುಸುನಕ್ಕು ಹೇಳಿದ, "ಇಷ್ಟು ಬೇಗ ತೀರ್ಮಾನಿಸಿದೆಯಾ"?

ಕ್ಷೇಮಂಕರಿ—ಹಾಗಲ್ಲವೆಯೇನು. ನಾನೇನು ಹೆಚ್ಚುದಿನ ಬದುಕಿರುವವಳೇ? ಇಲ್ಲಿ ಕೇಳು, ನಾನು ಹೇಮನಳಿನಿಯನ್ನು ಒಪ್ಪಿಕೊಂಡಿರುವೆ—ಇಂಥ ಹುಡುಗಿ ಬೇರೊಬ್ಬಳು ಸಿಗಳು, ಬಣ್ಣ ಅಷ್ಟು ಬಿಳುಪಲ್ಲ, ಆದರೆ—

ನಳಿನಾಕ್ಷ—ದಮ್ಮಯ್ಯ ಅಮ್ಮಾ, ನಾನು ಬಿಳಿಯ ಬಣ್ಣದ ವಿಷಯ ಯೋಚಿಸುತ್ತಿಲ್ಲ. ಆದರೆ ಹೇಮನಳಿನಿಯನ್ನು ಮಾಡಿಕೊಳ್ಳುವುದು ಹೇಗೆ? ಅದು ಎಂದಾದರೂ ಸಾಧ್ಯವೇ?

ಕ್ಷೇಮಂಕರಿ—ಓ, ಅದೆಂಥ ಮಾತು, ಸಾಧ್ಯವಾಗದಿರುವ ಕಾರಣವೇ ಕಂಡುಬರಲಿಲ್ಲವಲ್ಲ.

ಈ ಪ್ರಶ್ನೆಗೆ ಉತ್ತರ ಹೇಳುವುದು ನಳಿನಾಕ್ಷನಿಗೆ ಅತಿ ಕಷ್ಟ. ಆದರೆ ಹೇಮನಳಿನಿ—ಇಷ್ಟು ದಿನ ಯಾರ ಬಳಿ ಅಸಂಕೋಚದಿಂದ ಗುರುವಿನಂತೆ ಉಪದೇಶ ಹೇಳುತ್ತ ಬಂದಿರುವನೋ—ಪತಾತ್ತನೆ ಅವಳೊಡನೆ ಮದುವೆಯ ಪ್ರಸ್ತಾಪದಿಂದ ನಳಿನಾಕ್ಷನಿಗೆ ಎಂಥ ನಾಚಿಕೆಯ ಪೆಟ್ಟು ಬಿದ್ದಿತು.

ನಳಿನಾಕ್ಷ ಮೌನವಾಗಿರುವುದನ್ನು ಕಂಡು ಕ್ಷೇಮಂಕರಿ ಹೇಳಿದಳು, "ಈ ಸಲ ನೀನು ಬೇಡ ಎಂದರೆ ನಾನು ಕೇಳುವುದಿಲ್ಲ. ನನಗಾಗಿ ನೀನು ಈ ವಯಸ್ಸಿನಲ್ಲಿ ಎಲ್ಲವನ್ನೂ ಬಿಟ್ಟು ಕಾಶಿಯಲ್ಲಿ ವಾಸಿಸುತ್ತ ತಪಸ್ಸುಮಾಡುವುದನ್ನು ನಾನಿನ್ನು ಸ್ವಲ್ಪವೂ ಸಹಿಸುವುದಿಲ್ಲ. ಈ ಸಲ ಬರುವ ಶುಭದಿನ ವ್ಯರ್ಥವಾಗಬಾರದು, ಈ ಮಾತನ್ನು ನಾನು ಹೇಳಿಟ್ಟಿರುವೆ".

ನಳಿನಾಕ್ಷ ಸ್ವಲ್ಪ ಹೊತ್ತು ಸ್ತಬ್ಧನಾಗಿದ್ದು, "ಹಾಗಾದರೆ ಅಮ್ಮಾ, ನಿನಗೊಂದು ಮಾತು ಹೇಳುವೆ—ಆದರೆ ಮೊದಲಿಂದಲೂ ಹೇಳಬೇಕೆಂದಿರುವೆ, ನೀನು ಅಧೈರ್ಯಪಡಬಾರದು. ನಾನು ಹೇಳುವ ಘಟನೆ ಇಂದಿನದಲ್ಲ—ಹತ್ತು ತಿಂಗಳು ಕಳೆದುಹೋಯಿತು, ಈಗ ಅದಕ್ಕಾಗಿ ಕಳವಳಗೊಳ್ಳುವುದರಿಂದ ಯಾವ ಪ್ರಯೋಜನವೂ ಇಲ್ಲ. ಆದರೆ ನಿನ್ನ ಸ್ವಭಾವ ಎಂಥದೆಂದರೆ ಅಮ್ಮಾ, ಒಂದು ಅಮಂಗಳ ಕಳೆದುಹೋದರೂ ಅದರ ಭಯ ಹೇಗೂ ನಿನ್ನನ್ನು ಬಿಟ್ಟು ಹೋಗದು. ಇದರಿಂದಲೇ ಎಷ್ಟೋ ದಿನ ನಿನಗೆ ಹೇಳಬೇಕು-ಹೇಳಬೇಕು ಎಂದಿದ್ದರೂ ಹೇಳಲಾಗಲಿಲ್ಲ. ನನ್ನ ಗ್ರಹಶಾಂತಿಗಾಗಿ ನಿನ್ನಿಷ್ಟ ಬಂದಂತೆ ಸ್ವಸ್ತ್ಯಯನ ಮಾಡಿಸು, ಆದರೆ ಅನಾವಶ್ಯಕವಾಗಿ ಮನಸ್ಸಿಗೆ ತೊಂದರೆ ಕೊಡಬೇಡ".

ಕ್ಷೇಮಂಕರಿ ಆತುರದಿಂದ, “ಏನು ಮಗು ಅದು, ಏನು ಹೇಳುವೆ, ನಿನ್ನ ಪೀಠಿಕೆ ಕೇಳಿದರೆ ನನ್ನ ಮನಸ್ಸು ಒಡೆದುಕೊಳ್ಳುವುದು. ಬದುಕಿರುವಷ್ಟು ದಿನ, ನಮ್ಮನ್ನು ಮುಚ್ಚಿಟ್ಟುಕೊಂಡಿದ್ದರೆ ನಡೆಯುಲಾಗುವುದಿಲ್ಲ, ನಾನೇನೋ ದೂರವಾಗಿರಬೇಕೆಂದೇ ಆಶಿಸುವೆ, ಆದರೆ ಕೆಟ್ಟದ್ದನ್ನು ಹುಡುಕಿ ಹೊರಹಾಕಲಾಗಲಿಲ್ಲ. ಅದು ತಾನಾಗಿಯೇ ಕೊರಳಿಗೆ ಗಂಟು ಬೀಳುವುದು. ಅದು ಒಳ್ಳೆಯದೇ ಆಗಿರಲಿ, ಕೆಟ್ಟದೇ ಆಗಿರಲಿ, ನಿನ್ನ ಮಾತನ್ನು ಹೇಳು ಕೇಳೋಣ” ಎಂದಳು.

“ಈ ಮಾಘಮಾಸದಲ್ಲಿ ನಾನು ರಂಗಪುರದಲ್ಲಿ ನಮ್ಮ ಎಲ್ಲ ಆಸ್ತಿಪಾಸ್ತಿಯನ್ನೂ ಮಾರಿ ನಮ್ಮ ತೋಟದ ಮನೆಯನ್ನು ಬಾಡಿಗೆಗೆ ಮಾತನಾಡಿ ಹಿಂದಿರುಗಿ ಬರುತ್ತಿದ್ದೆ. ಸಾಂಡಾಯರ್‌ಗೆ ಬಂದು ನನಗೆ ಯಾವ ದೆವ್ವ ಹಿಡಿಯಿತೋ ರೈಲಿನಲ್ಲಿ ಹೋಗದೆ ಕಲ್ಕತ್ತೆಯವರೆಗೆ ದೋಣಿ ಗೊತ್ತುಮಾಡಿಕೊಂಡು ಹೋಗಲು ನಿಶ್ಚಯಿಸಿದೆ. ಸಾಂಡಾಯರ್‌ನಲ್ಲಿ ಒಂದು ದೊಡ್ಡ ಸ್ವದೇಶೀ ದೋಣಿ ಬಾಡಿಗೆಗೆ ಮಾಡಿಕೊಂಡು ಪ್ರಯಾಣ ಹೊರಟೆ. ಎರಡು ದಿನದ ಹಾದಿ ಕಳೆದು ಒಂದು ಗುಡ್ಡದ ಹತ್ತಿರ ದೋಣಿ ನಿಲ್ಲಿಸಿ ಸ್ನಾನ ಮಾಡುತ್ತಿದ್ದೆ. ಆ ಸಮಯದಲ್ಲಿ ಹಠಾತ್ತನೆ ನಮ್ಮ ಭೂಪೇನ ಕೈಯಲ್ಲಿ ಒಂದು ಬಂದೂಕ ಹಿಡಿದು ಬರುವುದನ್ನು ನೋಡಿದೆ. ನನ್ನನ್ನು ನೋಡುತ್ತಲೇ ಅವನಿಗೆ ಆಶ್ಚರ್ಯವಾಯಿತು, “ಶಿಕಾರಿ ಹುಡುಕುತ್ತ ಬಂದರೆ ಒಳ್ಳೆಯ ಶಿಕಾರಿಯೇ ದೊರೆಯಿತು” ಎಂದ. ಅವನು ಆ ಕಡೆಯೇ ಎಲ್ಲೋ ಡೆಪ್ಯುಟೀ ಮ್ಯಾಜಿಸ್ಟ್ರೇಟನಾಗಿದ್ದ—ಡೇರೆ ಹಾಕಿ ಹಕ್ಕಿ ಸುತ್ತಲು ಹೊರಟಿದ್ದ. ಬಹಳ ದಿನಗಳ ಬಳಿಕ ನೋಡಿದ್ದು, ನನ್ನನ್ನು ಏನು ಮಾಡಿದರೂ ಬಿಡಲಿಲ್ಲ. ಜೊತೆಯಲ್ಲೇ ಕರೆದುಕೊಂಡು ಸಂಚಾರಮಾಡಲಾರಂಭಿಸಿದ. ಘೋಬಾಪುಕುರ್ ಎಂಬ ಹೆಸರಿನ ಸ್ಥಳದಲ್ಲಿ ಒಂದು ದಿನ ಆತನ ಡೇರೆ ಹಾಕಲಾಯಿತು. ಸಂಜೆ ನಾವುಗಳು ಹಕ್ಕಿ ಸುತ್ತಿ ಬರಲು ಹೊರಟಿದ್ದೆವು—ಅತಿ ಕುಗ್ರಾಮ–ಒಂದು ದೊಡ್ಡ ಹೊಲದ ಅಂಚಿನಲ್ಲಿ ಒಂದು ಗೋಡೆ ಹಾಕಿ ಛಾವಣಿ ಹೊದಿಸಿದ್ದ ಮನೆಯೊಳಕ್ಕೆ ಬಂದು ಸೇರಿದೆವು. ಮನೆಯ ಯಜಮಾನ ನಾವು ಕೂರಲು ಅಂಗಳದಲ್ಲಿ ಎರಡು ಕುರ್ಚಿ ತಂದು ಹಾಕಿದರು. ಆಗ ಜಗುಲಿಯ ಮೇಲೆ ಕೂಲಿಮಠ ನಡೆಯುತ್ತಿತ್ತು. ಪ್ರಾಥಮಿಕ ಶಾಲೆಯ ಪಂಡಿತರು ಒಂದು ಮರದ ಕುರ್ಚಿಯಲ್ಲಿ ಕುಳಿತು ಮನೆಯ ಒಂದು ಗೂಟದ ಮೇಲೆ ಎರಡು

ಕಾಲನ್ನೂ ಎತ್ತಿಟ್ಟುಕೊಂಡಿದ್ದರು. ಕೆಳಗೆ ನೆಲದ ಮೇಲೆ ಕುಳಿತು ಕೈಯಲ್ಲಿ ಕಪ್ಪುಹಲಗೆ ಹಿಡಿದಿದ್ದ ಹುಡುಗರು ಬಹಳ ಕೋಲಾಹಲ ಮಾಡುತ್ತ ಮಾಡುತ್ತ ವಿದ್ಯೆ ಕಲಿಯುತ್ತಿದ್ದರು ಮನೆಯ ಯಜಮಾನನ ಹೆಸರು ತಾರಿಣೀ ಚಟ್ಟೋಪಾಧ್ಯಾಯ. ಭೂಪೇನನ ಹತ್ತಿರ ಅದೂ—ಇದೂ ಕೇಳಿ ನನ್ನ ಪರಿಚಯ ಮಾಡಿಕೊಂಡರು. ಡೇರೆಗೆ ಹಿಂದಿರುಗಿ ಬರುತ್ತ ಭೂಪೇನ ಹೇಳಿದ, “ನೋಡಿದೆಯೋ, ನಿನ್ನ ಅದೃಷ್ಟ ಒಳ್ಳೆಯದು—ನಿನಗೊಂದು ಮದುವೆಯ ಸಂಬಂಧ ಬಂದಿರುವುದು”. ಅದು ಹೇಗೆ? ಎಂದು ನಾನು ಕೇಳಿದೆ. “ಆ ತಾರಿಣೀ ಚಟ್ಟೋಪಾಧ್ಯಾಯ ಇರುವನಲ್ಲ, ಅವನು ಲೇವಾದೇವಿ ನಡೆಸುತ್ತಾನೆ. ಆದರೂ ಅಂಥ ನಿಪುಣ ಜಗತ್ತಿನಲ್ಲೇ ಇಲ್ಲ. ಆ ಶಾಲೆಗಾಗಿ ಮನೆಯಲ್ಲಿ ಸ್ಥಳಕೊಟ್ಟಿರುವನಲ್ಲ, ಅದಕ್ಕಾಗಿ ಹೊಸ ಮ್ಯಾಜಿಸ್ಟ್ರೇಟ್ ಬಂದ ಕೂಡಲೇ ತನ್ನ ಲೋಕೋಪಕಾರಿತ್ವ ತೋರಿಸಲು ಅತಿ ಆಡಂಬರ ಮಾಡುವನು. ಆದರೆ ಶಾಲೆಯ ಪಂಡಿತನಿಗೆ ಮನೆಯಲ್ಲಿ ಕೇವಲ ಒಪ್ಪತ್ತು ಊಟ ಹಾಕಿ ರಾತ್ರಿ ಪತ್ತರವರೆಗೆ ಬಡ್ಡಿಯ ಲೆಕ್ಕಾಚಾರ ಹಾಕಿಸುವ, ಸರ್ಕಾರಿ ಸಹಾಯ ಹಾಗೂ ಶಾಲೆಯ ವೇತನದಿಂದಲೇ ತಿಂಗಳ ಸಂಬಳ ಹುಟ್ಟುವುದು. ಆತನ ಸೋದರಿಯೊಬ್ಬಳ ಗಂಡ ಸತ್ತ ಬಳಿಕ ಆ ಅನಾಥೆಗೆ ಎಲ್ಲೂ ಆಶ್ರಯ ದೊರೆಯದೆ ಈತನ ಬಳಿಗೆ ಬಂದಳು. ಆಗ ಆಕೆ ಗರ್ಭಿಣಿಯಾಗಿದ್ದಳು. ಇಲ್ಲಿಗೆ ಬಂದು ಒಂದು ಹೆಣ್ಣು ಮಗು ಹೆತ್ತು ಸ್ವಲ್ಪವೂ ಔಷಧಿ–ಪಥ್ಯ ಇಲ್ಲದೆ ಆಕೆ ಸತ್ತುಹೋದಳು. ಇನ್ನೊಬ್ಬಳು ವಿಧವೆ ಸೋದರಿ ಮನೆಯ ಕೆಲಸವನ್ನೆಲ್ಲ ಮಾಡಿ ದಾಸಿಗೆ ಕೊಡಬೇಕಾಗಿದ್ದ ಹಣ ಉಳಿಸುವಳು. ಆಕೆ ಈ ಹುಡುಗಿಯನ್ನು ಸಾಕಿದಳು. ಹುಡುಗಿ ಸ್ವಲ್ಪ ದೊಡ್ಡವಳಾಗುತ್ತಲೇ ಆಕೆಯೂ ತೀರಿಕೊಂಡಳು. ಆಗಿನಿಂದ ಸೋದರತ್ತೆ–ಸೋದರ ಮಾವನ ಸೇವೆ ಮಾಡುತ್ತ ಹಗಲೂ ರಾತ್ರಿ ಬೈಗಳು ಸಹಿಸುತ್ತ ಹುಡುಗಿ ದೊಡ್ಡವಳಾಗಿರುವಳು. ಮದುವೆಯ ವಯಸ್ಸು ಮೀರಿದೆ. ಆದರೆ ಇಂಥ ಅನಾಥೆಗೆ ವರ ಸಿಕ್ಕುವುದೆಲ್ಲಿ? ಮುಖ್ಯವಾಗಿ ಅವಳ ತಾಯಿ–ತಂದೆಯನ್ನು ಇಲ್ಲಿಯವರಾರೂ ತಿಳಿಯರು. ತಂದೆಯಿಲ್ಲದಿರುವ ಸ್ಥಿತಿಯಲ್ಲಿ ಅವಳು ಹುಟ್ಟಿದ್ದು. ಇದರಿಂದ ಕೇರಿಯ ವಿಪಕ್ಷದವರು ಬೇಕಾದಷ್ಟು ಸಂದೇಹ ಪಟ್ಟಿರುವರು. ತಾರಿಣೀ ಚಟ್ಟೋಪಾಧ್ಯಾಯನಿಗೆ ಹೇರಳವಾಗಿ ಹಣ ಇರುವುದನ್ನು ಎಲ್ಲರೂ ಬಲ್ಲರು, ಈ ಹುಡುಗಿಯ ಮದುವೆಯ ನೆಪದಲ್ಲಿ ಹುಡುಗಿಯ ಸಂಬಂಧವಾಗಿ

ಸುಳ್ಳು ಸುದ್ದಿ ಹೇಳಿ ಅವನಿಂದ ಚೆನ್ನಾಗಿ ಹಣ ಕೀಳಬೇಕೆಂದು ಜನರ ಇಷ್ಟ. ಆತನಾದರೋ ಇಂದಿಗೆ ನಾಲ್ಕು ವರ್ಷಗಳಿಂದ ಆ ಹುಡುಗಿಗೆ ಹತ್ತು ವರ್ಷ ಎಂದೇ ಹೇಳುತ್ತ ಬಂದಿರುವ. ಹಾಗಾದರೂ ಲೆಕ್ಕಾಚಾರದಂತೆ ಅವಳಿಗೆ ಈಗ ಕಡೆಯ ಪಕ್ಷ ಹದಿನಾಲ್ಕು ಇದ್ದೀತು. ಆದರೆ ಏನೇ ಹೇಳು, ಹುಡುಗಿಯ ಹೆಸರು ಕಮಲ—ಎಲ್ಲ ವಿಷಯಗಳಲ್ಲೂ ಸಂಪೂರ್ಣವಾಗಿ ಲಕ್ಷ್ಮಿಯ ಪ್ರತಿಮೆ. ಇಂಥ ಸುಂದರ ಹುಡುಗಿಯನ್ನು ನಾನು ಬೇರೆ ಕಂಡಿಲ್ಲ. ಈ ಹಳ್ಳಿಗೆ ಯಾರಾದರೂ ಹೊರನಾಡಿನ ಬ್ರಾಹ್ಮಣ ಹುಡುಗರು ಬರುತ್ತಲೇ ತಾರಿಣೀ ಮದುವೆಗಾಗಿ ಅವರ ಕೈ-ಕಾಲು ಕಟ್ಟುವನು. ಒಂದು ವೇಳೆ ಯಾರಾದರೂ ಒಪ್ಪಿಕೊಂಡರೆ, ಹಳ್ಳಿಯ ಜನ ರಹಸ್ಯ ತಿಳಿಸಿಬಿಡುವರು. ಅದರಿಂದಲೇ ಇದು ನಿನ್ನ ಸರದಿ!" ತಿಳಿಯಿತೇನಪ್ಪಾ, ನನ್ನ ಮನಸ್ಸು ಆಗ ನಿರ್ಜೀವವಾದಂತೆ ಇತ್ತು—ನಾನು ಸ್ವಲ್ಪವೂ ಆಲೋಚನೆ ಮಾಡದೆ, "ಈ ಹುಡುಗಿಯನ್ನು ನಾನೇ ಮದುವೆಯಾಗುವೆ" ಎಂದೆ. ಇದಕ್ಕೆ ಮೊದಲೇ ನಾನು ಒಂದು ಹಿಂದೂ ಕುಟುಂಬದ ಹುಡುಗಿಯನ್ನು ಮದುವೆಯಾಗಿ ಕರೆ ತಂದು ನಿನ್ನನ್ನು ಬೆರಗುಗೊಳಿಸಬೇಕೆಂದು ತೀರ್ಮಾನಿಸಿದ್ದೆ—ವಯಸ್ಕಳಾದ ಬ್ರಾಹ್ಮಸಮಾಜದ ಹುಡುಗಿ ನಮ್ಮ ಮನೆಗೆ ಬಂದರೆ ಅದರಿಂದ ಎಲ್ಲರಿಗೂ ತೊಂದರೆಯಾದೀತು ಎಂದು ನಾನು ತಿಳಿದಿದ್ದೆ. ಭೂಪೇನನಿಗೆ ಆಶ್ಚರ್ಯವಾಯಿತು. ಅವನು 'ಏನೆಂದೆ' ಎಂದು ಕೇಳಿದ. ನಾನು, 'ಹೇಳಿದ್ದು ಮಾತ್ರವಲ್ಲ. ನಾನು ಸಂಪೂರ್ಣವಾಗಿ ಮನಸಿನಲ್ಲಿ ನಿಶ್ಚಯಿಸಿರುವೆ' ಎಂದೆ. 'ಖಂಡಿತವೋ' ಎಂದು ಭೂಪೇನ ಕೇಳಿದ. 'ಹೂಂ' ಎಂದೆ ಅದೇ ಸಂಜೆ ಸ್ವಯಂ ತಾರಿಣೀಚಟ್ಟೋಪಾಧ್ಯಾಯ ನಮ್ಮ ಡೇರೆಗೆ ದಯಮಾಡಿಸಿದ. ಬ್ರಾಹ್ಮಣ ಕೈಕಾಲು ಹಿಡಿಯುತ್ತ ಕೈಮುಗಿದು, 'ನನ್ನನ್ನು ಉದ್ಧಾರ ಮಾಡಬೇಕು' ಹುಡುಗಿಯನ್ನು ಕಣ್ಣಿಂದ ನೋಡಿ, ಒಪ್ಪಿಗೆಯಾಗಿದ್ದರೆ ಮುಂದಿನ ಮಾತು—ಆದರೆ ಶತ್ರುಪಕ್ಷದವರ ಮಾತು ಕೇಳಬೇಡಿ' ಎಂದರು. 'ನೋಡುವ ಅಗತ್ಯವೇ ಇಲ್ಲ. ದಿನ ಗೊತ್ತುಮಾಡಿ' ಎಂದೆ ನಾನು. ತಾರಿಣಿ ಹೇಳಿದರು, "ನಾಡಿದ್ದು ದಿನ ಚೆನ್ನಾಗಿದೆ, ನಾಡಿದ್ದೇ ನಡೆಯಲಿ. ಅವಸರ ಅವಸರವಾಗಿ ಬೀಳ್ಕೊಟ್ಟು ಮದುವೆಯಲ್ಲಿ ಸಾಧ್ಯವಾದಷ್ಟು ಹಣ ಉಳಿಸಬೇಕೆಂದು ಆತನ ಇಷ್ಟ. ಮದುವೆಯಂತೂ ಆಯಿತು".

ಕ್ಷೇಮಂಕರಿ ಬೆಚ್ಚಿಬಿದ್ದು, “ಮದುವೆ ಆಯಿತು—ಏನು ಹೇಳುತ್ತಿರುವೆ ನಳಿನ” ಎಂದಳು.

ನಳಿನಾಕ್ಷ—ಹೌದು, ಆಯಿತು. ವಧುವನ್ನು ಕರೆಸುತ್ತೊಂಡು ದೋಣಿ ಹತ್ತಿದೆ. ಯಾವ ದಿನ ಸಂಜೆ ಹತ್ತಿದನೋ ಅದೇ ದಿನ ಒಂದೆರಡು ಗಂಟೆಗಳ ನಂತರ ಸೂರ್ಯ ಮುಳುಗಿದ ಸ್ವಲ್ಪ ಹೊತ್ತಿನ ಬಳಿಕ ಹಠಾತ್ತನೆ ಆಕಾಲದಲ್ಲಿ ಫಾಲ್ಗುಣಮಾಸದಲ್ಲಿ ಎಲ್ಲಿಂದಲೋ ಅತಿ ಬಲವಾದ ಒಂದು ಬಿರುಗಾಳಿ ಬಂದು ಒಂದು ಮುಹೂರ್ತದಲ್ಲಿ ನಮ್ಮ ದೋಣಿಯನ್ನು ಬುಡಮೇಲಾಗಿ ಮಾಡಿತು, ಯಾವುದೂ ಗೋಚರವಾಗಲಿಲ್ಲ.

“ಮಧುಸೂದನಾ” ಎಂದಳು ಕ್ಷೇಮಂಕರಿ. ಅವಳ ಮೈಯಲ್ಲಿ ಮುಳ್ಳು ಚುಚ್ಚಿದಂತಾಯಿತು.

ನಳಿನಾಕ್ಷ—ಕ್ಷಣಕಾಲದ ಬಳಿಕ ಜ್ಞಾನಬಂದು ನೋಡಿದಾಗ, ನಾನು ನದಿಯಲ್ಲಿ ಒಂದು ಕಡೆ ಈಜುತಿದ್ದೆ, ಅದರ ಹತ್ತಿರದಲ್ಲಿ ದೋಣಿ ಅಥವಾ ಪ್ರಯಾಣಿಕರ ಸುಳಿವೇ ಇಲ್ಲ. ಪೋಲೀಸರಿಗೆ ಸುದ್ದಿತಿಳಿಸಿ ಬಹಳವಾಗಿ ಹುಡುಕಿದುದಾಯಿತು. ಯಾವ ಫಲವೂ ದೊರೆಯಲಿಲ್ಲ.

ಕ್ಷೇಮಂಕರಿ ಮುಖ ಕೆಂಪಗೆ ಮಾಡಿಕೊಂಡು ಹೇಳಿದಳು, “ಹೋಗಲಿ. ಕಳೆದದ್ದು ಕಳೆದುಹೋಯಿತು, ಆ ಮಾತನ್ನು ಇನ್ನು ಎಂದೆಂದೂ ನನ್ನ ಬಳಿ ಹೇಳಬೇಡ—ನೆನೆಸಿದರೇ ನನ್ನ ಎದೆ ಕಂಪಿಸುವುದು”.

ನಳಿನಾಕ್ಷ—ಈ ಮಾತನ್ನು ನಾನು ಎಂದಿಗೂ ನಿನಗೆ ಹೇಳುತ್ತಿರಲಿಲ್ಲ. ಆದರೆ ಮದುವೆಯ ಮಾತಿನಿಂದ ನೀನು ಸುಮ್ಮನೆ ನನ್ನನ್ನು ಬಲಾತ್ಕರಿಸುತ್ತಿದ್ದುದರಿಂದ ಹೇಳಬೇಕಾಯಿತು.

“ಒಮ್ಮೆ ಒಂದು ದುರ್ಘಟನೆ ನಡೆಯಿತೆಂದು ನೀನು ಇಹಜೀವನದಲ್ಲಿ ಎಂದೆಂದೂ ಮದುವೆ ಮಾಡಿಕೊಳ್ಳೆಯಾ?” ಎಂದು ಕ್ಷೇಮಂಕರಿ ಕೇಳಿದಳು.

“ಅದಕ್ಕಾಗಿ ಅಲ್ಲಮ್ಮಾ, ಒಂದುವೇಳೆ ಆ ಹುಡುಗಿ ಬದುಕಿದ್ದರೆ?” ಎಂದ ನಳಿನಾಕ್ಷ.

ಕ್ಷೇಮಂಕರಿ—ಹುಚ್ಚೇನು? ಬದುಕಿದ್ದರೆ ನಿನಗೆ ಸಮಾಚಾರ ತಿಳಿಸುತ್ತಿರಲಿಲ್ಲವೆ?

ನಳಿನಾಕ್ಷ—ನನ್ನ ಸಮಾಚಾರ ಅವಳು ಬಲ್ಲಳೇನು? ಅವಳಿಗೆ ನನಗಿಂತ ಅಪರಿಚಿತರಿಲ್ಲ. ಅವಳು ನನ್ನ ಮುಖವನ್ನೇ ನೋಡಲಿಲ್ಲವೆಂದು ತೋರುವುದು.

ಕಾಶಿಗೆ ಬಂದು ತಾರಿಣೀಚಟ್ಟೋಪಾಧ್ಯಾಯರಿಗೆ ನನ್ನ ನೆಲೆ ತಿಳಿಸಿದೆ—ಅವರು ಕಮಲೆಯ ಸುದ್ದಿಯೇ ತಿಳಿಯದೆಂದು ನನಗೆ ಪತ್ರ ಬರೆದಿರುವರು.

ಕ್ಷೇಮಂಕರಿ—ಹಾಗಾದರೆ ಈಗೇನು !

ನಳಿನಾಕ್ಷ—ಪೂರ್ತಿ ಒಂದು ವರ್ಷ ನಿರೀಕ್ಷಿಸಿದ ಬಳಿಕ ಅವಳು ಸತ್ತಳೆಂದು ತೀರ್ಮಾನಿಸುವುದು, ಎಂದು ನಾನು ನಿಶ್ಚಯಿಸಿರುವೆ.

ಕ್ಷೇಮಂಕರಿ—ನಿನ್ನದೆಲ್ಲಾ ಅತಿ ವಿಚಿತ್ರ. ಇನ್ನೂ ಒಂದು ವರ್ಷ ನಿರೀಕ್ಷಿಸಬೇಕೆ ?

ನಳಿನಾಕ್ಷ—ಅಮ್ಮಾ! ಇನ್ನೂ ಒಂದು ವರ್ಷದ ಅವಕಾಶವೇಕೆ ? ಈಗ ಆಶ್ವಯುಜ ; ಪುಷ್ಯದಲ್ಲಿ ಮದುವೆ ಆಗುವಂತಿಲ್ಲ—ಆಮೇಲೆ ಮಾಘ ಕಳೆದು ಫಾಲ್ಗುಣ.

ಕ್ಷೇಮಂಕರಿ—ಹಾಗಿದ್ದರೆ ಸರಿ. ಆದರೆ ವಧು ನಿಶ್ಚಯವಾಗಿದೆ. ಹೇಮ ನಳಿನಿಯ ತಂದೆಗೆ ನಾನು ಮಾತುಕೊಟ್ಟಿರುವೆ.

ನಳಿನಾಕ್ಷ, "ಅಮ್ಮಾ, ಮನುಷ್ಯ ಬರಿಯ ಮಾತು ಮಾತ್ರ ಕೊಡಬಲ್ಲ, ಆ-ಮಾತಿನ ಸಫಲತೆ ಯಾರಿಂದ ನಡೆಯಬೇಕೋ, ಅವರನ್ನೇ ನಂಬಿಕೊಂಡಿರ ಬೇಕು" ಎಂದು ಹೇಳಿದ.

ಕ್ಷೇಮಂಕರಿ—ಏನೇ ಆಗಲಿ ಮಗೂ, ನಿನ್ನ ಈ ನಡವಳಿಕೆ ಕೇಳಿ ಈಗಲೂ ನನ್ನ ಮೈ ನಡುಗುತ್ತಿರುವುದು.

ನಳಿನಾಕ್ಷ—ಅದು ನನಗೆ ತಿಳಿದಿದೆಯಮ್ಮ, ನಿನ್ನ ಮನಸ್ಸು ಸರಿ ಯಾಗಲು ಅನೇಕ ದಿನ ಬೇಕು. ನಿನ್ನ ಮನಸ್ಸು ಒಮ್ಮೆ ಸ್ವಲ್ಪ ಅಲ್ಲೋಲ ಕಲ್ಲೋಲವಾದರೆ ಅದರ ಆಂದೋಳನ ಇನ್ನು ಯಾವುದರಿಂದಲೂ ನಿಲ್ಲ ಲಾರದು. ಅದರಿಂದಲೇ ಅಮ್ಮ, ನಿನಗೆ ಈ ಬಗೆಯ ಎಲ್ಲ ಸುದ್ದಿಯನ್ನೂ ಹೇಳುವುದಿಲ್ಲ.

ಕ್ಷೇಮಂಕರಿ—ಒಳ್ಳೆಯದೇ ಮಾಡಿದೆ ಮಗೂ—ಇತ್ತೀಚೆಗೆ ನನಗೆ ಏನಾಗುವುದೆಂದೇ ತಿಳಿಯದು—ಒಂದು ಕೆಟ್ಟ ಸುದ್ದಿ ಕೇಳಿದ ಕೂಡಲೇ ಅದರ ಭಯ ಯಾವುದರಿಂದಲೂ ಹೋಗದು. ಒಂದು ಅಂಚೆಯ ಕಾಗದ ಬಿಚ್ಚುವು ದಕ್ಕೂ ನನಗೆ ಹೆದರಿಕೆಯಾಗುವುದು—ಒಂದುವೇಳೆ ಅದರಲ್ಲಿ ಕೆಟ್ಟ ಸುದ್ದಿ ಇದ್ದೀತು ಎಂದು. ನಾನೂ ನಿನಗೆ ಹೇಳಿಟ್ಟಿರುವೆ. ನನಗೆ ಯಾವ ಸುದ್ದಿ

ಯನ್ನೂ ತಿಳಿಸಬೇಕಾದ ಅಗತ್ಯವೇ ಇಲ್ಲ;—ನಾನಂತೂ ನಿಶ್ಚಯಿಸಿ ಕೊಂಡಿರುವೆ, ಈ ಜಗತ್ತಿನಲ್ಲಿ ನಾನು ಸತ್ತೇ ಹೋಗಿರುವೆ ಎಂದು, ಇಂಥ ಪೆಟ್ಟಿಗಳು ಇನ್ನು ನನಗೇತಕ್ಕೆ ?

೫೧

ಕಮಲ ಗಂಗಾತೀರ ಸೇರಿದಾಗ, ಶೀತಕಾಲದ ಸೂರ್ಯ ಕಿರಣಗಳ ಕಾಂತಿಹೀನತೆಯಿಂದ ಕಳೆಗುಂದಿದ್ದ ಪಶ್ಚಿಮಾಕಾಶವ ಕೆಳಗಡೆ ಇಳಿಯ ತ್ತಿದ್ದ. ಕಮಲ ಮುಂಬರುವ ಅಂಧಕಾರದ ಎದುರಿಗೆ ಆ ಮುಳುಗುವ ಸೂರ್ಯನನ್ನು ನಮಸ್ಕರಿಸಿದಳು. ಆ ಬಳಿಕ ತಲೆಯ ಮೇಲೆ ಗಂಗೆಯ ನೀರು ಚಿಮುಕಿಸಿ ಕೊಂಡು ನದಿಯಲ್ಲಿ ಸ್ವಲ್ಪ ದೂರ ಇಳಿದಳು. ಹಾಗೂ ಎರಡು ಕೈಗಳಿಂದಲೂ ಗಂಗೆಯ ಪ್ರವಾಹದಲ್ಲಿ ಅಂಜಲಿಯನ್ನು ಅರ್ಪಿಸಿ ಹೂ ತೇಲಿಬಿಟ್ಟಳು. ನಮಸ್ಕಾರ ಮಾಡಿ ತಲೆ ಎತ್ತುತ್ತಲೇ ಮತ್ತೊಬ್ಬ ನಮನೀಯ ವ್ಯಕ್ತಿಯ ನೆನಪಾಯಿತು. ಎಂದೂ ಮುಖ ಎತ್ತಿ ಅವನ ಮುಖದ ಕಡೆ ಅವಳು ನೋಡಿ ರಲಿಲ್ಲ-ಒಂದು ದಿನ ರಾತ್ರಿ ಅವಳು ಅವನ ಪಕ್ಕದಲ್ಲಿ ಕುಳಿತಿದ್ದಳು. ಆಗ ಅವನ ಕಾಲಿನ ಕಡೆಯೂ ಅವಳ ನೋಟ ಹರಿಯ.ಲಿಲ್ಲ—ಒಸಗೆಯ ಮನೆಯಲ್ಲಿ ಇತರ ಹುಡುಗಿಯರೊಡನೆ ಅವಳು ಎರಡು-ಮೂರು ಮಾತು ಹೇಳಿದ್ದಳು, ಅದೂ ಅವಳ ಮುಸುಕಿನೊಳಗಿಂದ, ನಾಚಿಕೆಯ ಮೂಲಕ ಅಷ್ಟು ಸ್ಪಷ್ಟ ವಾಗಿ ಕೇಳಿಸಲಿಲ್ಲ. ಅವನ ಆ ಕಂಠಸ್ವರ ನೆನೆಯಲು ಇಂದು ಈ ನೀರಿನ ಪ್ರವಾಹದಲ್ಲಿ ನಿಂತು ಅವಳು ಏಕಾಗ್ರತೆಯಿಂದ ಪ್ರಯತ್ನಿಸಿದಳು, ಆದರೆ ಯಾವ ಬಗೆಯಲ್ಲೂ ಜ್ಞಾಪಕ ಬರಲಿಲ್ಲ.

ರಾತ್ರಿ ಬಹಳ ಹೊತ್ತಾದ ಮೇಲೆ ಅವಳ ಮದುವೆಯ ಲಗ್ನವಿತ್ತು, ಅತಿ ಯಾಗಿ ಬಳಲಿದ ದೇಹದಿಂದ ಅವಳು ಯಾವಾಗ ಎಲ್ಲಿ ನಿದ್ದೆ ಮಾಡಿದಳೋ ಅವಳಿಗೇ ತಿಳಿಯ.ದು-ಬೆಳಗ್ಗೆ ಎದ್ದು ನೋಡಿದಾಗ ಅವರ ನೆರೆಮನೆಯ ಸೊಸೆ ಯೊಬ್ಬಳು ಅವಳನ್ನು ತಟ್ಟಿ ಎಬ್ಬಿಸಿ ಖಿಲಖಿಲನೆ ನಗುತ್ತಿದ್ದಳು-ಹಾಸಿಗೆಯಲ್ಲಿ ಬೇರೆ ಯಾರೂ ಇಲ್ಲ. ಜೀವನದ ಆ ಕಡೆಯ ಗಳಿಗೆಯಲ್ಲಿ ಜೀವೇಶ್ವರನನ್ನು ನೆನೆಯುವ ಶಕ್ತಿ ಅವಳಿಗೆ ಎಳ್ಳಷ್ಟೂ ಇಲ್ಲ. ಅತ್ತ ಸಂಪೂರ್ಣ ಕತ್ತಲು-ಯಾವ ಮೂರ್ತಿಯೂ ಇಲ್ಲ, ಯಾವ ಮಾತೂ ಇಲ್ಲ, ಯಾವ ಗುರುತೂ ಇಲ್ಲ.

ಯಾಹ ಕೆಂಪು ಸೀರೆಯೊಡನೆ* ಅವನ ಮೇಲುವಸ್ತ್ರ ಗಂಟು ಹಾಕಿ ದ್ದಿತೋ-ತಾರಿಣೀಚರಣ ಕೊಟ್ಟಿದ್ದ ಆ ಕಡಿಮೆ ಬೆಲೆಯ ಸೀರೆಯ ವ ಉಲ್ಯ ಕಮಲೆಗೆ ತಿಳಿಯದು-ಆ ಸೀರೆಯನ್ನೂ ಅವಳು ಜೋಪಾನವಾಗಿಡಲಿಲ್ಲ.

ರಮೇಶ ಹೇಮನಳಿನಿಗೆ ಬರೆದಿದ್ದ ಪತ್ರ, ಕಮಲೆಯ ಸೆರಗಿನ ಕೊನೆ ಯಲ್ಲಿ ಕಟ್ಟಿತ್ತು—ಆ ಪತ್ರ ಬಿಚ್ಚಿ ಮರಳಿನ ಮೇಲೆ ಕುಳಿತು ಅದರ ಒಂದು ಭಾಗವನ್ನು ಗೋಧೂಳಿಯ ಬೆಳಕಿನಲ್ಲಿ ಓದತೊಡಗಿದಳು. ಆ ಭಾಗದಲ್ಲಿ ಅವಳ ಗಂಡನ ಪರಿಚಯ ಇತ್ತು. ಸ್ಪಷ್ಟವಾಗಿಲ್ಲ. ಕೇವಲ ಅವನ ಹೆಸರು ನಳಿನಾಕ್ಷಚಟ್ಟೋಪಾಧ್ಯಾಯ, ಅವನು ರಂಗಪುರದಲ್ಲಿ ಡಾಕ್ಟರಾಗಿದ್ದ ಹಾಗೂ ಅಲ್ಲಿ ಅವನ ನೆಲೆ ತಿಳಿಯುವಂತಿಲ್ಲ. ಇಷ್ಟೇ ! ಎಷ್ಟು ಮಾಡಿದರೂ ಪತ್ರದ ಉಳಿದ ಭಾಗ ಕೈಗೆ ಸಿಕ್ಕಲಿಲ್ಲ. "ನಳಿನಾಕ್ಷ" ಈ ಹೆಸರು ಅವಳ ಮನಸಿನಲ್ಲಿ ಅಮೃತದ ಮಳೆಗರೆಯುಲಾರಂಭಿಸಿತು,—ಈ ಹೆಸರು ಅವಳ ಹೃದಯವನ್ನೆಲ್ಲಾ ತುಂಬಿಕೊಂಡಿತು. ಈ ಹೆಸರು ಒಂದು ವಸ್ತುಹೀನ ದೇಹ ಹೊತ್ತು ಅವಳನ್ನು ಸುತ್ತುಗಟ್ಟಿತ್ತು—ಅವಳ ಕಣ್ಣಿಂದ ಅವಿರಳ ಧಾರೆ ಹರಿದು ನೀರು ಬಿದ್ದು ಅವಳ ಹೃದಯವನ್ನು ತೋಯಿಸಿತು—ತನ್ನ ಅಸಹನೀಯ ಚಿಂತೆ ಕಳೆದು ಹೋಯಿತೆಂದು ಭಾವಿಸಿದಳು. ಕಮಲೆಯ ಅಂತಃಕರಣ, "ಇದು ಶೂನ್ಯತೆ ಯಲ್ಲ, ಇದು ಅಂಧಕಾರವಲ್ಲ—ನಾನು ನೋಡುತ್ತಿರುವೆ, ಅಲ್ಲಿರುವುದೇನೋ ಅದು ನಾನೇ ಆಗಿರುವೆ" ಎಂದು ನುಡಿಯಲಾರಂಭಿಸಿತು—ಆಗ ಕಮಲ ಬಲ ಪೂರ್ವಕವಾಗಿ, "ನಾನು ಸತಿಯಾಗಿದ್ದಿದ್ದರೆ ಈ ಜೀವನದಲ್ಲೇ ನಾನು ಅವನ ಪಾದಧೂಳಿಯಾಗುವೆ, ವಿಧಾತ ನನಗೆ ಎಂದೂ ತೊಂದರೆಪಡಿಸಲಾರ. ನಾನು ಬದುಕಿರುವಾಗ ಅವನು ಎಲ್ಲೂ ಹೋಗಿರುವುದಿಲ್ಲ, ಅವನ ಸೇವೆ ಮಾಡುವುದ ಕ್ಕಾಗಿಯೇ ಭಗವಂತ ನನ್ನನ್ನು ಜೀವದಿಂದಿಟ್ಟಿರುವ" ಎಂದು ಹೇಳಿದಳು.

ಹೀಗೆ ಹೇಳಿ ಅವಳು ತನ್ನ ಕರವಸ್ತ್ರದಲ್ಲಿ ಕಟ್ಟಿದ್ದ ಬೀಗದಕೈ ಗೊಂಚ ಲನ್ನು ಅಲ್ಲೇ ಬಿಸುಟಳು ಮತ್ತು ರಮೇಶ ಕೊಟ್ಟಿದ್ದ ಒಂದು ಬ್ರೂಚ್ ಅವಳ ಬಟ್ಟೆಯಲ್ಲಿ ಚುಚ್ಚಿಕೊಂಡಿದ್ದುದು ಇದ್ದಕ್ಕಿದ್ದಂತೆ ನೆನಪಾಯಿತು. ಅದನ್ನೂ ಅವಸರ ಅವಸರವಾಗಿ ಬಿಚ್ಚಿ ನೀರಿನೊಳಕ್ಕೆ ಎಸೆದಳು. ಆ ಬಳಿಕ ಪಶ್ಚಿಮಕ್ಕೆ ತಿರುಗಿಕೊಂಡು ಅವಳು ನಡೆಯಲಾರಂಭಿಸಿದಳು—ಎಲ್ಲಿಗೆ ಹೋಗುವುದು,

---

*ಬಂಗಾಳಿಗಳಲ್ಲಿ ಮದುವೆಯ ಹೆಣ್ಣುಗಂಡು ಕೆಂಪುಸೀರೆ ಉಡುವ ಪದ್ಧತಿಯಿದೆ.

ಏನು ಮಾಡುವುದು, ಎಂದು ಅವಳು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡಿರಲಿಲ್ಲ. ತಾನು ಹೋಗಲೇ ಬೇಕು, ಇಲ್ಲಿ ತನಗೆ ಒಂದು ಕ್ಷಣಕಾಲವೂ ನಿಲ್ಲಲು ಎಡೆಯಿಲ್ಲವೆಂದು ಮಾತ್ರ ಅವಳು ತಿಳಿದಿದ್ದಳು.

ಚಳಿಗಾಲದ ಹಗಲಿನ ಕಡೆಯ ಪ್ರಕಾಶವೂ ಕಣ್ಮರೆಯಾಗಲು ಹೆಚ್ಚು ಕಾಲವಿಳಂಬವಾಗಲಿಲ್ಲ. ಕತ್ತಲೆಯಲ್ಲಿ ಬಿಳಿಯ ಮರಳ ತೀರ ಅಸ್ಪಷ್ಟವಾಗಿ ಬಿಕೋ ಎನ್ನಲಾರಂಭಿಸಿತು, ಹಠಾತ್ತನೆ ಒಂದು ಸ್ಥಳದಲ್ಲಿ ಯಾರೋ ವಿಚಿತ್ರ ಸೃಷ್ಟಿಯ ನಡುವೆ ಸೃಷ್ಟಿಯ ಕೆಲವು ಚಿತ್ರಗಳನ್ನು ಸಂಪೂರ್ಣವಾಗಿ ಅಳಿಸಿ ಹಾಕಲಾಯಿತು—ಕೃಷ್ಣಪಕ್ಷದ ಕತ್ತಲ ರಾತ್ರಿ, ತನ್ನ ಸಮಸ್ತ ನಿರ್ನಿಮೇಷ ನಕ್ಷತ್ರಗಳಿಂದ ಈ ಜನಹೀನ ನದೀ ತೀರದ ಮೇಲೆ ಬಹಳ ನಿಧಾನವಾಗಿ ನಿಟ್ಟುಸಿರು ಬಿಡತೊಡಗಿತು.

ಕಮಲೆಯ ಎದುರಿಗೆ ಮನೆಯಿಲ್ಲದ ಅನಂತ ಅಂಧಕಾರವನ್ನುಳಿದು ಬೇರೇನೂ ಕಾಣಲಿಲ್ಲ, ಆದರೆ ತಾನು ಹೋಗಲೇಬೇಕು, ಎಂದು ಅವಳು ಬಲ್ಲಳು—ಎಲ್ಲಾದರೂ ತಲಪುವೆನೋ ಇಲ್ಲವೋ, ಅದನ್ನು ಯೋಚಿಸುವ ಶಕ್ತಿಯೂ ಅವಳಿಗಿಲ್ಲ.

ನದಿಯ ತೀರದಲ್ಲಿ ಅವಳು ಒಂದೇ ಸಮನೆ ನಡೆದು ಹೋಗಬೇಕು. ಹೀಗೆಂದು ಅವಳು ನಿಶ್ಚಯಿಸಿರುವಳು—ಹಾಗಾದರೆ ಯಾರನ್ನೂ ದಾರಿ ಕೇಳಬೇಕಾಗುವುದಿಲ್ಲ ಮತ್ತು ವಿಪತ್ತೇನಾದರೂ ಸಂಭವಿಸುವುದಾದರೆ ಆಗ ಕ್ಷಣಮಾತ್ರದಲ್ಲಿ ಗಂಗಾಮಾತೆ ನನಗೆ ಆಶ್ರಯ ಕೊಡುವಳು.

ಆಕಾಶದಲ್ಲಿ ಸ್ವಲ್ಪವೂ ಮಂಜು ಇರಲಿಲ್ಲ—ತಡೆಯಿಲ್ಲದ ಕತ್ತಲೆ ಕಮಲೆಯನ್ನು ಮುಚ್ಚಿಬಿಟ್ಟಿತು, ಆದರೆ ಅವಳ ನೋಟಕ್ಕೆ ತಡೆಯುಂಟು ಮಾಡಲಿಲ್ಲ.

ರಾತ್ರಿ ಮುಂದುವರಿಯುತ್ತಿತ್ತು. ಗೋಧಿಯ ಪೈರಿನ ಅಂಚಿನಿಂದ ನರಿ ಊಳಿಯಿಟ್ಟಿತು. ಕಮಲ ಬಹಳ ದೂರ ನಡೆದು ನಡೆದು ಮರಳ ತೀರದಲ್ಲೇ ಒಂದು ಹಳ್ಳಿ ಕಣ್ಣಿಗೆ ಬಿತ್ತು. ಕಮಲ ಕಂಪಿತ ಹೃದಯದಿಂದ ಹಳ್ಳಿಯ ಬಳಿ ಬಂದು ನೋಡಿದಾಗ ಹಳ್ಳಿ ನಿದ್ದೆಯಲ್ಲಿ ಮುಳುಗಿತ್ತು. ಹೆದರುತ್ತ ಹೆದರುತ್ತ ಹಳ್ಳಿ ದಾಟಿ ಹೋಗುತ್ತ ಹೋಗುತ್ತ ಅವಳ ದೇಹದಲ್ಲಿ ಹೆಚ್ಚು ತ್ರಾಣ ಉಳಿಯಲಿಲ್ಲ. ಕಡೆಗೆ ಒಂದು ಸ್ಥಳದಲ್ಲಿ ಒಂದು ಡೊಂಕು ತೀರದ ಬಳಿಗೆ ಬಂದು ಸೇರಿದಳು. ಅಲ್ಲಿ ಎದುರಿಗೆ ಯಾವ ದಾರಿಯೂ

ಸಿಗಲಿಲ್ಲ. ನಿತ್ರಾಣಳಾಗಿ ಒಂದು ಆಲದ ಮರದಡಿಯಲ್ಲಿ ಮಲಗಿಕೊಂಡಳು. ಮಲಗುತ್ತಲೇ ಯಾವಾಗ ನಿದ್ದೆ ಹತ್ತಿತೋ ತಿಳಿಯದು.

ಮುಂಜಾನೆ ಕಣ್ಣು ತೆರೆದು ನೋಡಿದಾಗ, ಕೃಷ್ಣಪಕ್ಷದ ಚಂದ್ರನ ಬೆಳಕಿನಲ್ಲಿ ಅಂಧಕಾರ ಕ್ಷೀಣಿಸುತ್ತ ಬಂದಿರುವುದು. ಪ್ರೌಢ ಹೆಂಗಸೊಬ್ಬಳು ಅವಳನ್ನು, "ನೀನಾರವ್ವಾ, ಚಳಿಗಾಲದ ರಾತ್ರಿಯಲ್ಲಿ ಈ ಮರದಡಿಯಲ್ಲಿ ಏಕೆ ಮಲಗಿರುವೆ ?" ಎಂದು ವಿಚಾರಿಸುತಿರುವಳು.

ಕಮಲ ಆಶ್ಚರ್ಯದಿಂದ ಎದ್ದು ಕುಳಿತಳು. ಅವಳಿಗೆ ಸ್ವಲ್ಪ ದೂರದಲ್ಲೇ ಘಟ್ಟದಲ್ಲಿ ಎರಡು ದೋಣಿ ಕಟ್ಟಿಹಾಕಿದೆ—ಆ ವಯಸ್ಕಳು ಜನ ಏಳುವುದಕ್ಕೆ ಮೊದಲೇ ಸ್ನಾನ ಮುಗಿಸಿಕೊಳ್ಳಲು ಬಂದಿದ್ದಳು.

"ಅಮ್ಮಾ, ನೀನು ಬಂಗಾಳಿ ಹುಡುಗಿಯಂತೆ ಕಾಣುವೆಯಲ್ಲ" ಎಂದು ಆ ಹಿರಿಯಾಕೆ ಕೇಳಿದಳು.

ಕಮಲ—ನಾನು ಕಾಶಿಗೆ ಹೋಗಬೇಕೆಂದು ಹೊರಟಿರುವೆ. ರಾತ್ರಿ ಬಹಳ ಹೊತ್ತಾಯಿತು. ನಿದ್ದೆ ಹತ್ತಿತು. ಇಲ್ಲೇ ಮಲಗಿಕೊಂಡೆ.

ಹಿರಿಯಾಕೆ—ಅವ್ವಾ, ಇದೆಂಥ ಮಾತು! ಕಾಲುನಡಿಗೆಯಲ್ಲಿ ಕಾಶಿಗೆ ಹೋಗುವೆಯಾ ? ಹಾಗಾದರೆ ನಡೆ, ಆ ದೋಣಿಗೆ ಹೋಗು, ನಾನು ಸ್ನಾನ ಮುಗಿಸಿ ಬರುವೆ.

ಸ್ನಾನವಾದ ಬಳಿಕ ಆ ಹೆಂಗಸಿನೊಡನೆ ಕಮಲೆಯ ಪರಿಚಯವಾಯಿತು.

ಗಾಜೀಪುರದಲ್ಲಿ ಬಹಳ ವೈಭವದಿಂದ ಮದುವೆ ಮಾಡುತ್ತಿದ್ದರಲ್ಲ, ಸಿದ್ಧೇಶ್ವರಬಾಬುಗಳು, ಅವರು ಈಕೆಯ ನೆಂಟರು. ಈಕೆಯ ಹೆಸರು ನವೀನಕಾಳಿ, ಈಕೆಯ ಗಂಡನ ಹೆಸರು ಮುಕುಂದಲಾಲದತ್ತ—ಕೆಲವು ದಿನದಿಂದ ಕಾಶಿಯಲ್ಲೇ ವಾಸವಾಗಿರುವರು. ಈಕೆ ನೆಂಟರ ಮನೆಯ ಆಹ್ವಾನ ಕಡೆಗಣಿಸಲಾರಳು, ಆದರೆ ಅವರ ಮನೆಯಲ್ಲಿ ಊಟ ಮಾಡಿ ತಂಗಬೇಕಾದೀತೆಂದು ದೋಣಿ ಮಾಡಿಕೊಂಡು ಹೋಗಿದ್ದಳು. ಮದುವೆ ಮನೆಯ ಒಡತಿ ಆಕ್ಷೇಪಣೆ ಮಾಡಲು ನವೀನಕಾಳಿ, "ನಿನಗೆ ತಿಳಿದೇಯಿದೆಯಕ್ಕ, ಯಜಮಾನರ ಮೈ ನೆಟ್ಟಗಿಲ್ಲ. ಹಾಗೂ ಚಿಕ್ಕಂದಿನಿಂದಲೂ ಇವರ ಅಭ್ಯಾಸವೇ ಒಂದು ರೀತಿ. ಮನೆಯಲ್ಲಿ ಹಸು ಕಟ್ಟಿ, ಹಾಲಿನಿಂದ ಬೆಣ್ಣೆ ತೆಗೆದು ಆ ಬೆಣ್ಣೆ ಕಾಯಿಸಿದ

ತುಪ್ಪದಲ್ಲೇ ಅವರಿಗೆ ಪೂರಿ ಕರಿಯಬೇಕು. ಮತ್ತೆ ಆ ಹಸುವಿಗೆ ಸಿಕ್ಕಿದ್ದು ತಿನ್ನಿಸಿದರೆ ನಡೆಯದು" – ಇತ್ಯಾದಿ ಇತ್ಯಾದಿ ಹೇಳಿದಳು.

"ನಿನ್ನ ಹೆಸರೇನು?" ಎಂದು ನವೀನಕಾಳಿ ವಿಚಾರಿಸಿದಳು.

ಕಮಲ, "ನನ್ನ ಹೆಸರು ಕಮಲ" ಎಂದಳು.

ನವೀನಕಾಳಿ—ನಿನ್ನ ಕೈಯಲ್ಲಿ ಕಬ್ಬಿಣದ ಬಳೆಯಿದೆ, ಗಂಡ ಇರುವನೆಂದು ತೋರುವುದು!

ಮದುವೆಯಾದ ಮರುದಿನವೇ ಗಂಡ ದೇಶಾಂತರ ಹೊರಟುಹೋದ" ಎಂದಳು ಕಮಲ.

ನವೀನಕಾಳಿ—ಅಮ್ಮಾ, ಅದೆಂಥ ಮಾತು. ನಿನಗೆ ಅಷ್ಟಾಗಿ ವಯಸ್ಸಾಗಿರುವಂತೆ ಕಾಣುವುದಿಲ್ಲವಲ್ಲ.

ಅವಳನ್ನು ತಲೆಯಿಂದ ಕಾಲವರೆಗೆ ನೋಡಿ ಹೇಳಿದಳು, "ಹದಿನೈದಕ್ಕೆ ಹೆಚ್ಚಿರಲಾರದು".

ಕಮಲ ಹೇಳಿದಳು, "ವಯಸ್ಸು ಸರಿಯಾಗಿ ತಿಳಿಯದು, ಬಹುಶಃ ಹದಿನೈದಿದ್ದೀತು".

ನವೀನಕಾಳಿ – ನೀನು ಬ್ರಾಹ್ಮಣರ ಹುಡುಗಿಯಲ್ಲವೆ?

ಕಮಲ, "ಹೌದು" ಎಂದಳು.

"ನಿಮ್ಮ ಮನೆ ಎಲ್ಲಿ?" ಎಂದು ನವೀನಕಾಳಿ ವಿಚಾರಿಸಿದಳು.

ಕಮಲ—ಅತ್ತೆ ಮನೆಗೆ ಹೋಗಿಯೇ ಇಲ್ಲ, ತಂದೆಯ ಮನೆ ಬಿಶುಖಾಲಿಯಲ್ಲಿ.

ಕಮಲೆಯ ತಂದೆಯ ಮನೆ ಬಿಶುಖಾಲಿಯಲ್ಲೇ ಇದ್ದುದೆಂದು ಅವಳು ಬಲ್ಲಳು.

ನವೀನಕಾಳಿ—ನಿನ್ನ ತಂದೆ-ತಾಯಿ?

ಕಮಲ—ನನಗೆ ತಂದೆತಾಯಿ ಯಾರೂ ಇಲ್ಲ.

ನವೀನಕಾಳಿ—ರಾಮರಾಮ! ನೀನೇನು ಮಾಡುವೆ?

ಕಮಲ—ಕಾಶಿಯಲ್ಲಿ ಯಾರಾದರೂ ಕುಟುಂಬಸ್ಥರು ಮನೆಯಲ್ಲಿಟ್ಟುಕೊಂಡು ಎರಡು ಹೊತ್ತು ಊಟ ಹಾಕಿದರೆ, ನಾನು ಕೆಲಸ ಮಾಡಿಕೊಡುವೆ, ನಾನು ಅಡುಗೆ ಮಾಡಬಲ್ಲೆ.

ನವೀನಕಾಳಿ ಸಂಬಳವಿಲ್ಲದ ಬ್ರಾಹ್ಮಣ ಅಡುಗೆಯವಳನ್ನು ಪಡೆದು

ಒಳಗೊಳಗೇ ಸಂತೋಷಪಟ್ಟಳು. "ನನಗೇನೂ ಬೇಕಾಗಿಲ್ಲ—ಬ್ರಾಹ್ಮಣ ಕೆಲಸಗಾರರೂ ನನ್ನ ಜೊತೆಯಲ್ಲಿ ಇರುವರು. ನಮಗೆ ಇನ್ನು ಬ್ರಾಹ್ಮಣರು ಬೇಕಾಗಿಲ್ಲ—ಯಜಮಾನರ ಊಟ ಉಪಚಾರದಲ್ಲಿ ಹೆಚ್ಚುಕಡಿಮೆಯಾದರೆ ಗತಿಯೇನು ! ಬ್ರಾಹ್ಮಣರಿಗೆ ತಿಂಗಳಿಗೆ ಹದಿನಾಲ್ಕು ರೂಪಾಯಿ ಕೊಡಬೇಕು, ಜೊತೆಗೆ ಊಟ-ಬಟ್ಟೆ, ಏನೇ ಆಗಲಿ, ಬ್ರಾಹ್ಮಣರ ಹುಡುಗಿ, ನೀನು ಕಷ್ಟದಲ್ಲಿರುವೆ,—ಹೊರಡು ನಮ್ಮಲ್ಲಿಗೇ ನಡೆ, ಎಷ್ಟೋ ಜನ ಉಂಡು ಉಡುತ್ತಿರುವರು, ಅದೆಷ್ಟು ಚೆಲ್ಲಿಹೋಗುತ್ತಿದೆ, ಎರಚಾಡುತ್ತಿದೆ, ಇನ್ನೊಬ್ಬರು ಹೆಚ್ಚಿದರೆ ಯಾರ ಲಕ್ಷ್ಯಕ್ಕೂ ಬಾರದು. ನಮ್ಮ ಮನೆಯಲ್ಲಿ ಅಷ್ಟೇನೂ ಕೆಲಸ ಇಲ್ಲ. ಇಲ್ಲಿ ನಾನು, ನಮ್ಮ ಯಜಮಾನರು ಇಬ್ಬರೇ ಇರುವುದು. ಹೆಣ್ಣು ಮಕ್ಕಳಿಗೆಲ್ಲಾ ಮದುವೆ ಆಗಿದೆ. ಅವರೆಲ್ಲಾ ಒಳ್ಳೆಯ ಮನೆಯನ್ನೇ ಸೇರಿರುವರು. ನಮಗೆ ಒಬ್ಬನೇ ಮಗ ; ಅವನು ಮ್ಯಾಜಿಸ್ಟ್ರೇಟ್. ಈಗ ಸಿರಾಜಗಂಜಿನಲ್ಲಿರುವನು. ಗವರ್ನರ್ ಬಳಿಯಿಂದ ಎರಡು ತಿಂಗಳಿಗೊಮ್ಮೆ ಅವನ ಹೆಸರಿಗೆ ಕಾಗದ ಬರುವುದು. ಹುಡುಗನಿಗೆ ಯಾವ ಕೊರತೆಯೂ ಇಲ್ಲವಲ್ಲ, ಅವನಿಗೆ ಈ ಭಂಗವೇಕೆ ಎಂದು ನಾನು ಯಜಮಾನರನ್ನು ಕೇಳಿದೆ. ಇಷ್ಟು ದೊಡ್ಡ ಹುದ್ದೆ ಎಲ್ಲರ ಹಣೆಯಲ್ಲೂ ಬರೆದಿಲ್ಲವೆಂದೂ ಬಲ್ಲೆ, ಆದರೆ ಮಗನನ್ನು ಹೊರದೇಶದಲ್ಲಿ ಬಿಟ್ಟಿರಬೇಕು. ಏನೋ ಏತಕ್ಕೋ ! ಯಜಮಾನರು ಹೇಳುವರು, "ಅದಕ್ಕಾಗಲ್ಲ, ಅದಕ್ಕಾಗಲ್ಲ. ನೀನು ಹೆಣ್ಣು ಹೆಂಗಸು, ಅದೆಲ್ಲಾ ತಿಳಿಯುವುದಿಲ್ಲ. ನಾನೇನು ಸಂಬಳಕ್ಕಾಗಿ ಮಗುವನ್ನು ಕೆಲಸಕ್ಕೆ ಸೇರಿಸಿರುವೆನೆ. ನಮಗೇತರ ಕೊರತೆ. ಏಕೆಂದರೆ, ಕೈಯಲ್ಲಿ ಕೆಲಸ ಇರಬೇಕು. ಇಲ್ಲವಾದರೆ ಚಿಕ್ಕವಯಸ್ಸಿನಲ್ಲಿ ಯಾವಾಗ ಯಾವ ಬುದ್ಧಿ ಇರುವುದೋ ಯಾರು ಬಲ್ಲರು".

ಪಟಕ್ಕೆ ಗಾಳಿಯ ವೇಗ ಹೆಚ್ಚಾಗಿತ್ತು. ಕಾಶಿಯನ್ನು ಸೇರಲು ಹೆಚ್ಚು ಕಾಲ ಹಿಡಿಸಲಿಲ್ಲ. ಪಟ್ಟಣದ ಹೊರಗಡೆ ಸಣ್ಣ ತೋಟದ ನಡುವೆ ಒಂದು ಎರಡಂತಸ್ತಿನ ಮನೆಯನ್ನು ಸೇರಿದರು.

ಅಲ್ಲಿ ಹದಿನಾಲ್ಕು ರೂಪಾಯಿ ಸಂಬಳದ ಬ್ರಾಹ್ಮಣನ ಸುಳಿವೇ ಇಲ್ಲ—ಒಬ್ಬ ಉಡಿಯ ಬ್ರಾಹ್ಮಣನಿದ್ದ. ಕೆಲವು ದಿನಗಳಲ್ಲೇ ನವೀನಕಾಳಿ ಒಂದು ದಿನ ಅವನ ಮೇಲೆ ಇಷ್ಟಕ್ಕಿದ್ದಂತೆ ಅತಿ ಕಿಡಿಕಿಡಿಯಾಗಿ ಸಂಬಳ ಕೊಡದೆ ಅವನನ್ನು ಹೊರಡಿಸಿಬಿಟ್ಟಳು. ಇಷ್ಟರಲ್ಲಿ ಹದಿನಾಲ್ಕು ರೂಪಾಯಿ ಸಂಬಳದ

ಅತಿ ದುರ್ಲಭ—ಎರಡನೆಯ ಅಡುಗೆಯವನು ನೇಮಕವಾಗುವ ಮೊದಲು ಕಮಲೆಯೇ ಅಡುವ—ಬಡಿಸುವ ಕೆಲಸವೆಲ್ಲವನ್ನೂ ನಿರ್ವಹಿಸಬೇಕಾಯಿತು.

ನವೀನಕಾಳಿ ಆಗಾಗ ಎಚ್ಚರಿಕೆ ಕೊಡುವಳು, "ನೋಡು ಮಗೂ, ಕಾಶೀಪಟ್ಟಣ ಅಷ್ಟು ಒಳ್ಳೆಯದಲ್ಲ, ನಿನಗೂ ಚಿಕ್ಕ ವಯಸ್ಸು. ಮನೆಬಿಟ್ಟು ಹೊರಗೆ ಹೋಗಬೇಡ. ಗಂಗಾಸ್ನಾನ, ವಿಶ್ವೇಶ್ವರನ ದರ್ಶನಕ್ಕೆ ನಾನು ಹೋದಾಗ, ನಿನ್ನನ್ನು ಸಂಗಡ ಕರೆದೊಯ್ಯುವೆ".

ಕಮಲೆ ಎಲ್ಲಾದರೂ ಕೈಬಿಟ್ಟು ಹೋಗಬಹುದೆಂದು ನವೀನಕಾಳಿ ಅವಳನ್ನು ಜಾಗರೂಕತೆಯಿಂದ ಕಾಯುತ್ತಿದ್ದಳು. ಬಂಗಾಳಿ ಹುಡುಗಿಯ ರೊಡನೆ ಹೆಚ್ಚು ಮಾತನಾಡಲು ಅವಳಿಗೆ ಅವಕಾಶ ಕೊಡುತ್ತಿರಲಿಲ್ಲ. ಹಗಲು ಹೊತ್ತು ಕೆಲಸಕ್ಕೆ ಕೊರತೆ ಇರಲಿಲ್ಲ. ಸಂಜೆಯ ಬಳಿಕ ಒಮ್ಮೊಮ್ಮೆ ನವೀನ ಕಾಳಿ ಸ್ವಲ್ಪಹೊತ್ತು ತನ್ನ ಐಶ್ವರ್ಯ, ಒಡವೆ ವಸ್ತು, ಚಿನ್ನ ಬೆಳ್ಳಿ ಪಾತ್ರೆ ಪದಾರ್ಥ, ಮಖಮಲ್-ಕಿಂಕಾಪಿನ ಅಲಂಕಾರ ವಸ್ತುಗಳನ್ನು ಕಳ್ಳರ ಭಯ ದಿಂದ ಕಾಶಿಗೆ ತರಲಾಗಲಿಲ್ಲ—ಎಂದೇ ಮಾತುಕತೆ ನಡೆಸುವಳು. "ಕಂಚಿನ ತಟ್ಟೆಯಲ್ಲಿ ಊಟ ಮಾಡುವುದೆಂದರೆ ಯಜಮಾನರಿಗೆ ಎಂದೂ ಅಭ್ಯಾಸವಿಲ್ಲ. ಅದರಿಂದ ಮೊದಮೊದಲು ಈ ವಿಷಯದಲ್ಲಿ ಅವರು ಬೇಕಾದಷ್ಟು ಜಗಳ ಮಾಡಿದ್ದರು. ಅವರು, "ಒಂದೆರಡು ಕಳುವಾದರೆ ಆಗಲಿ, ಅದೂ ಒಳ್ಳೆಯದು, ಪುನಃ ಮಾಡಿಸಬೇಕಾದರೆ ಎಷ್ಟು ಹೊತ್ತು" ಎನ್ನುವರು, ಆದರೆ ಹಣ ಇದೆಯೆಂದು ನಷ್ಟಮಾಡಿಕೊಳ್ಳುವುದೇ, ನನಗದು ಸರಿಬೀಳದು. ಅದಕ್ಕಿಂತ ಸ್ವಲ್ಪಕಾಲ ಕಷ್ಟಪಡುವುದೇ ಮೇಲು. ಇಷ್ಟೇ ಅಲ್ಲ ಕೇಳು, ಊರಿನಲ್ಲಿ ನಮಗೆ ದೊಡ್ಡ ಮನೆ ಇದೆ. ಅಲ್ಲಿ ಜನ-ಆಳುಕಾಳು ಬೇಕಾದಹಾಗೆ ಇರು ವರು, ಹೀಗೆಂದು ಕೆಲಸಗಾರರನ್ನು ಇಲ್ಲಿಗೆ ಕರೆತರಲು ಸಾಧ್ಯವೆ? ಯಜ ಮಾನರು ಉಪಯೋಗವಿಲ್ಲದಿದ್ದರೂ "ಇನ್ನೊಂದು ಮನೆ ಬಾಡಿಗೆಗೆ ಮಾಡಿ ಕೊಳ್ಳಬೇಕು" ಎನ್ನುವರು. "ಬೇಡ, ಅದು ನನ್ನಿಂದಾಗದು—ಸ್ವಲ್ಪ ವಾದರೂ ಇಲ್ಲಿ ನೆಮ್ಮದಿಯಿಂದ ಇರಬಾರದೆ, ಯಾದೂ ಜನ-ಮನೆ ಎಂದು ಹಗಲೂ ರಾತ್ರಿ ಯೋಚನೆ ಮಾಡುತ್ತ ಇರುವುದಿಲ್ಲ" ಎಂದು ನಾನು ಹೇಳುವೆ—ಇತ್ಯಾದಿ.

೫೨

ನವೀನಕಾಳಿಯ ಆಶ್ರಯದಲ್ಲಿ ಕಮಲೆಯ ಪ್ರಾಣ ಸ್ವಲ್ಪ ನೀರಿನ ಪಾಚಿ ತುಂಬಿದ—ಪುಷ್ಕರಣಿಯ ಮೀನಿನಂತೆ ವ್ಯಾಕುಲ ಪಡತೊಡಗಿತು. ಇಲ್ಲಿಂದ ಹೊರಟು ಹೋಗುವುದಾದರೆ ಅವಳು ಬದುಕುವಳು, ಆದರೆ ಹೊರಗೆ ಹೋದರೆ ನೆಲೆಯೆಲ್ಲಿ ? ಆ ದಿನ ರಾತ್ರಿಯ ಮನೆಯಿಲ್ಲದ ಹೊರಗಿನ ಜಗತ್ತನ್ನು ಅವಳು ಅರಿತಿರುವಳು ; ಅಲ್ಲೂ ಕಣ್ಣುಮುಚ್ಚಿಕೊಂಡು ಆತ್ಮಸಮರ್ಪಣೆ ಮಾಡಿ ಕೊಳ್ಳಲು ಅವಳಿಗೆ ಈಗ ಧೈರ್ಯ ಬರಲಿಲ್ಲ.

ನವೀನ ಕಾಳಿ ಕಮಲೆಯನ್ನು ಪ್ರೀತಿಸುತ್ತಿರಲಿಲ್ಲ ಎಂದಲ್ಲ, ಆದರೆ ಆ ಪ್ರೀತಿಯಲ್ಲಿ ರಸ ಇರಲಿಲ್ಲ. ಒಂದೆರಡು ದಿನ ಖಾಯಿಲೆ ಕಸಾಯಿಲೆ ಬಂದಾಗ ಅವಳು ಕಮಲೆಯನ್ನು ಕಾಪಾಡಿರುವಳು, ಆದರೆ ಆ ಸೇವೆಯನ್ನು ಕೃತಜ್ಞತೆ ಯೊಡನೆ ಸ್ವೀಕರಿಸುವುದು ಕಷ್ಟ. ಅವಳ ಕೆಲಸ ಮಾಡುತ್ತಿರುವುದೇ ಒಳ್ಳೆಯದು. ಏಕೆಂದರೆ ನವೀನ ಕಾಳಿಯ ಸ್ನೇಹದಲ್ಲಿ ಕಾಲ ಕಳೆಯುವುದೇ ಅವಳಿಗೆ ಎಲ್ಲಕ್ಕೂ ಹೆಚ್ಚಿನ ಸಂಕಟ ಕಾಲ.

ಒಂದು ದಿನ ಬೆಳಗ್ಗೆ ನವೀನಕಾಳಿ ಕಮಲೆಯನ್ನು ಕರೆದು ಹೇಳಿದಳು, "ಓ ಬ್ರಾಹ್ಮಣಿತೀ, ಇಂದು ಯಜಮಾನರ ಆರೋಗ್ಯ ನೆಟ್ಟಗಿಲ್ಲ. ಈ ದಿನ ಅನ್ನ ಮಾಡಬೇಡ, ಈ ದಿನ ರೊಟ್ಟಿ. ಆದರೆ ಹೀಗೆಂದು ಹೇಳಿ ಒಂದು ಮಣ ತುಪ್ಪ ತೆಗೆದುಕೊಳ್ಳಬೇಡ. ನಿನ್ನ ಅಡುಗೆಯ ಲಕ್ಷಣ ತಿಳಿ ದಿದೆಯಲ್ಲ. ಅದಕ್ಕಾಗಿ ಇಷ್ಟೊಂದು ತುಪ್ಪ ಹೇಗೆ ಖರ್ಚಾಗುವುದೆಂದೇ ಗೊತ್ತಾಗುವುದಿಲ್ಲ. ಇದಕ್ಕಿಂತ ಆ ಉಡಿಯಾ ಬ್ರಾಹ್ಮಣ ಮೇಲಾಗಿದ್ದ— ಅವನೂ ತುಪ್ಪ ಹಾಕುವನು, ಆದರೆ ಅಡುಗೆಯಲ್ಲಿ ಅಷ್ಟಿಷ್ಟು ತುಪ್ಪದ ರುಚಿ ಇರುವುದು ".

ಕಮಲೆ ಈ ಎಲ್ಲ ಮಾತಿಗೂ ಯಾವ ಉತ್ತರವನ್ನೂ ಹೇಳಲಿಲ್ಲ— ಕೇಳಲೇ ಇಲ್ಲವೆನ್ನುವಂತೆ ಮೌನವಾಗಿ ಅವಳು ಕೆಲಸದತ್ತ ಹೋದಳು.

ಇಂದು ಅಪಮಾನದ ರಹಸ್ಯವಾದ ಹೊರೆ ಹೊತ್ತ ಹೃದಯದಿಂದ ಕಮಲ ತೆಪ್ಪನೆ ತರಕಾರಿ ಹೆಚ್ಚುತ್ತಿದ್ದಳು—ಜಗತ್ತೆಲ್ಲ ಶೂನ್ಯವಾಗಿಯೂ ಜೀವನ ಅಸಹನೀಯವಾಗಿಯೂ ತೋರಿತು, ಆ ವೇಳೆಯಲ್ಲಿ ಗೃಹಿಣಿಯ ಕೋಣೆಯಿಂದ ಹೊರಟ ಮಾತೊಂದು ಅವಳ ಕಿವಿಗೆ ಬಿದ್ದು ಕಮಲೆಯನ್ನು ಆಶ್ಚರ್ಯ

ಗೊಳಿಸಿತು. ನವೀನಕಾಳಿ ತನ್ನ ಆಳು ಮಗನನ್ನು ಕೂಗಿ ಹೇಳುತ್ತಿದ್ದಳು. "ಏ ತುಳಸೀ, ಹೋಗು ಮತ್ತೆ, ಪಟ್ಟಣದಿಂದ ನಳಿನಾಕ್ಷ ಡಾಕ್ಟರರನ್ನು ಬೇಗ ಕರೆದುಕೊಂಡು ಬಾ. ಯಜಮಾನರ ಮೈ ಬಹಳ ಕೆಟ್ಟಿದೆ ಎಂದು ಹೇಳು".

ನಳಿನಾಕ್ಷ ಡಾಕ್ಟರ್! ಕಮಲೆಯ ಕಣ್ಣಮುಂದೆ ಸಮಸ್ತ ಆಕಾಶದ ಬೆಳಕೂ ಬಡಿದೆಬ್ಬಿಸಿದ ವೀಣೆಯ ಸ್ವರ್ಣ ತಂತಿಯ ನಾದದಂತೆ ಕಂಪಿಸ ಲಾರಂಭಿಸಿತು. ಅವಳು ತರಕಾರಿ ಹೆಚ್ಚುವುದನ್ನು ಬಿಟ್ಟು ಬಾಗಿಲ ಬಳಿ ಬಂದು ನಿಂತಳು. ತುಳಸಿ ಕೆಳಕ್ಕೆ ಇಳಿದು ಬರುತ್ತಲೇ ಕಮಲ, "ಎಲ್ಲಿಗೆ ಹೋಗುವೆ ತುಳಸಿ" ಎಂದು ವಿಚಾರಿಸಿದಳು. ಅವನು "ನಳಿನಾಕ್ಷ ಡಾಕ್ಟ ರನ್ನು ಕರೆತರಲು ಹೋಗುವೆ" ಎಂದ.

ಕಮಲ "ಅವರು ಎಂಥ ಡಾಕ್ಟರು" ಎಂದು ಕೇಳಿದಳು.

ತುಳಸಿ ಹೇಳಿದ, "ಅವರು ಇಲ್ಲಿಯ ಪ್ರಸಿದ್ಧ ವೈದ್ಯರು".

ಕಮಲ—ಅವರು ಇರುವುದೆಲ್ಲಿ ?

ತುಳಸಿ, "ಪಟ್ಟಣದಲ್ಲೇ ಇರುವರು. ಇಲ್ಲಿಂದ ಅರ್ಧ ಹರಿದಾರಿ ಯಾದೀತು".

ಊಟ ತಿಂಡಿಯಲ್ಲಿ ಅಲ್ಪಸ್ವಲ್ಪ ಉಳಿದುದನ್ನು ಕಮಲ ಮನೆಯ ಆಳು ಕಾಳುಗಳಿಗೆ ಹಂಚಿಕೊಡುವಳು. ಇದಕ್ಕಾಗಿ ಅವಳು ಬೇಕಾದಷ್ಟು ಬೈಗಳು ಸಹಿಸಿರುವಳು. ಆದರೂ ಆ ಪದ್ಧತಿಯನ್ನು ಬಿಡಲಿಲ್ಲ. ಮುಖ್ಯವಾಗಿ ಗೃಹಿಣಿಯ ಕಠಿಣ ನಿಯಮದಂತೆ ಈ ಮನೆಯಲ್ಲಿ ಜನರ ಊಟಕ್ಕೆ ಬಹಳ ತೊಂದರೆಯಾಗುವುದು. ಇಷ್ಟೇ ಅಲ್ಲದೆ ಯಜಮಾನ—ಯಜಮಾನಿಯ ಊಟ ಹೊತ್ತಾಗುವುದು—ಆಳುಗಳು ಆ ಬಳಿಕ ಊಟಮಾಡಬೇಕು. ಅವರುಗಳು ಬಂದು ಕಮಲೆಯ ಬಳಿ, "ಬ್ರಾಹ್ಮಣಿತಿಯಮ್ಮಾ! ಬಹಳ ಹಸಿವೆ ಯಾಗಿದೆ" ಎಂದು ಹೇಳಿದಾಗ ಅವಳು ಅವರುಗಳಿಗೆ ಅಲ್ಪಸ್ವಲ್ಪವಾದರೂ ತಿನ್ನಲು ಕೊಡದೆ ಇರುತ್ತಿರಲಿಲ್ಲ. ಈ ರೀತಿ ಮನೆಯ ಆಳುಕಾಳುಗಳು ಎರಡೇ ದಿನದಲ್ಲಿ ಕಮಲೆಯ ಅಂತರಂಗದವರಾದರು.

ಮೇಲಿಂದ ಮಾತು ಕೇಳಿಸಿತು, "ಅಡುಗೆ ಮನೆಯ ಬಾಗಿಲಲ್ಲಿ ನಿಂತು ಯಾರೊಡನೆ ಮಾತನಾಡುತ್ತಿರುವೆ ತುಳಸೀ ? ನನಗೆ ಕಣ್ಣಿಲ್ಲವೆಂದು ತಿಳಿದಿರು ವೆಯಾ ? ಪಟ್ಟಣಕ್ಕೆ ಹೋಗುವ ದಾರಿಯಲ್ಲಿ ಒಮ್ಮೆ ಅಡುಗೆ ಮನೆ ಇಣಿಕಿ ನೋಡದಿದ್ದರೆ ನಡೆಯದೆಂದು ತೋರುವುದು. ಹೀಗೆ ಮಾಡಿಯೇ ಸಾಮಾನು

ಸರಂಜಾಮೆಲ್ಲ ಹೋಗುವುದು. ಏನು ಬ್ರಾಹ್ಮಣಿತಿ, ಹಾದಿಯಲ್ಲಿ ಬಿದ್ದಿದ್ದೆ, ದಯೆ ತೋರಿಸಿ ನಿನಗೆ ಆಶ್ರಯ ಕೊಟ್ಟಿದ್ದಕ್ಕೆ ಈ ರೀತಿ ಸೇಡು ತೀರಿಸಿ ಕೊಳ್ಳುವೆಯೆಂದು ತೋರುವುದು".

ಎಲ್ಲರೂ ತನ್ನ ಸಾಮಾನನ್ನು ಕದಿಯುತ್ತಿರುವರು, ಎಂಬ ಸಂದೇಹವನ್ನು ನವೀನಕಾಳಿ ಏನುಮಾಡಿದರೂ ಬಿಡಲಿಲ್ಲ. ಪ್ರಮಾಣಕ್ಕೆ ಅವಕಾಶವೇ ಇಲ್ಲದಿರುವಾಗ ಅವಳು ಊಹಿಸಿಕೊಂಡು ಬೈಯತೊಡಗುವಳು. ಕತ್ತಲಲ್ಲಿ ಕಲ್ಲು ಎಸೆದರೂ ಅದರಲ್ಲಿ ಹೆಚ್ಚು ಸಂಖ್ಯೆಯವು ಗುರಿಮುಟ್ಟುವುವು. ತಾನು ಸರ್ವದಾ ಎಚ್ಚರಿಕೆಯಿಂದಿರುವುದರಿಂದ ತನಗೆ ಮೋಸ ಮಾಡಲು ಸಾಧ್ಯವಿಲ್ಲವೆಂದು ಸೇವಕರು ತಿಳಿಯಲಿ ಎಂದು ಅವಳು ಮನದಲ್ಲೇ ತೀರ್ಮಾನಿಸಿದ್ದಳು.

ಇಂದು ನವೀನಕಾಳಿಯ ಮಾತು ಕಮಲೆಯ ಹೃದಯವನ್ನು ಸೇರಲೇ ಇಲ್ಲ. ಅವಳು ಇಂದು ಬರಿಯ ಯಂತ್ರದಂತೆ ಕೆಲಸ ಮಾಡುತ್ತಿರುವಳು ಅವಳ ಮನಸ್ಸು ಎಲ್ಲಿ ಕೆಲಸ ಮಾಡದೆ ನಿಲ್ಲುವುದೆಂದು ಹೇಳುವಂತಿಲ್ಲ

ಕೆಳಗೆ ಅಡುಗೆ ಮನೆಯ ಬಾಗಿಲ ಬಳಿ ನಿಂತು ಕಮಲ ನಿರೀಕ್ಷಿಸುತ್ತಿದ್ದಳು ಅಷ್ಟು ಹೊತ್ತಿಗೆ ತುಳಸಿ ಹಿಂದಿರುಗಿ ಬಂದ. "ತುಳಸಿ, ಏನು ಡಾಕ್ಟರ್ ಬಾಬು ಬರಲಿಲ್ಲವೆ? ಎಂದು ಕಮಲ ವಿಚಾರಿಸಿದಳು.

ತುಳಸಿ, "ಇಲ್ಲ, ಅವರು ಬರಲಿಲ್ಲ" ಎಂದ.

ಕಮಲ – ಏಕೆ ?.

ತುಳಸಿ—ಅವರ ತಾಯಿಗೆ ಕಾಯಿಲೆಯಾಗಿದೆ.

ಕಮಲ—ತಾಯಿಗೆ ಕಾಯಿಲೆ? ಮನೆಯಲ್ಲಿ ಬೇರೆ ಯಾರೂ ಇಲ್ಲವೆ?

ತುಳಸಿ—ಇಲ್ಲ, ಅವರು ಮದುವೆ ಮಾಡಿಕೊಂಡಿಲ್ಲ.

ಕಮಲ—ಮದುವೆ ಮಾಡಿಕೊಂಡಿಲ್ಲ, ನಿನಗೆ ಹೇಗೆ ಗೊತ್ತು ?

ತುಳಸಿ – ಸೇವಕರು ಹೇಳಿ ಕೇಳಿದ್ದು, ಅವರ ಹೆಂಡತಿ ಇಲ್ಲ.

ಕಮಲ—ಅವರ ಹೆಂಡತಿ ಸತ್ತಿರಬಹುದು.

ತುಳಸಿ –ಇದ್ದರೂ ಇರಬಹುದು. ಅವರು ರಂಗಪುರದಲ್ಲಿ ಕೆಲಸ ಮಾಡುತ್ತಿದ್ದಾಗಲೂ ಅವರಿಗೆ ಹೆಂಡತಿ ಇರಲಿಲ್ಲ ಎಂದು ಆಳು ವ್ರಜ ಹೇಳಿದ.

ಮೇಲಿಂದ ಕರೆ ಬಂತು, "ತುಳಸೀ". ಕೂಡಲೇ ಕಮಲ ಅಡುಗೆ ಮನೆಯೊಳಕ್ಕೆ ಓಡಿದಳು. ಹಾಗೂ ತುಳಸಿ ಮೇಲಕ್ಕೆ ಹೋದ

ನಳಿನಾಕ್ಷ - ರಂಗಪುರದಲ್ಲಿ ಡಾಕ್ಟರ್ ಆಗಿದ್ದ—ಕಮಲೆಯ ಮನಸ್ಸಿನಲ್ಲಿ

ಯಾವ ಸಂದೇಹವೂ ಇಲ್ಲ. ತುಳಸಿ ಇಳಿದುಬರುತ್ತಲೇ ಪುನಃ ಕಮಲ ಅವನನ್ನು ವಿಚಾರಿಸಿದಳು, "ನೋಡು ತುಳಸಿ, ಡಾಕ್ಟರ್‌ಬಾಬುಗಳ ಹೆಸರಿನವರೇ ನನಗೊಬ್ಬ ನೆಂಟರಿರುವರು—ಅವರು ಬ್ರಾಹ್ಮಣರಲ್ಲವೆ ಹೇಳು?".

ತುಳಸಿ – ಹೌದು, ಬ್ರಾಹ್ಮಣ, ಚಟ್ಟೋಪಾಧ್ಯಾಯ.

ಮನೆಯಾಕೆ ನೋಡಿಯಾಳೆಂಬ ಹೆದರಿಕೆಯಿಂದ ತುಳಸಿಗೆ ಬ್ರಾಹ್ಮಣಿತಿಯೊಡನೆ ಹೆಚ್ಚು ಹೊತ್ತು ಮಾತನಾಡುವ ಧೈರ್ಯ ಬರಲಿಲ್ಲ—ಅವನು ಹೊರಟುಹೋದ.

ಕಮಲ ನವೀನಕಾಳಿಯ ಬಳಿಗೆ ಹೋಗಿ, "ಕೆಲಸಕಾರ್ಯಗಳನ್ನೆಲ್ಲ ಮುಗಿಸಿ ಈ ದಿನ ನಾನು ಒಮ್ಮೆ ದಶಾಶ್ವಮೇಧ ಘಟ್ಟದಲ್ಲಿ ಸ್ನಾನಮಾಡಿ ಬರುವೆ" ಎಂದಳು.

ನವೀನಕಾಳಿ—ನಿನ್ನದೆಲ್ಲ ಅತಿರೇಕ. ಯಜಮಾನರಿಗೆ ಇಂದು ಮೈ ಚೆನ್ನಾಗಿಲ್ಲ—ಈ ದಿನವೇ ಹೋಗಲು ಕಾರಣ ಹೇಳು ನೋಡೋಣ, ಇಂದು ನೀನು ಹೊರಟುಹೋದರೆ ಹೇಗೆ?

"ನನ್ನ ಸ್ವಂತದವರೊಬ್ಬರು ಕಾಶಿಯಲ್ಲಿ ಇರುವರೆಂದು ಕೇಳಿದೆ, ಅವರನ್ನೊಮ್ಮೆ ನೋಡಲು ಹೋಗುವೆ" ಎಂದಳು ಕಮಲ.

ನವೀನಕಾಳಿ—ಇದೆಲ್ಲಾ ಚೆನ್ನಾಗಿಲ್ಲ. ನನಗೆ ಬೇಕಾದಷ್ಟು ವಯಸ್ಸಾಗಿದೆ. ನಾನೆಲ್ಲಾ ಬಲ್ಲೆ. ನಿನಗೆ ಸುದ್ದಿ ಹೇಳಿದವರು ಯಾರು? ತುಳಸಿ ಅಲ್ಲವೆ? ಆ ಮನೆಹಾಳನನ್ನು ಇನ್ನು ಇಟ್ಟುಕೊಳ್ಳಬಾರದು. ಹೇಳುವುದನ್ನು ಕೇಳು ಬಾಹ್ಮಣಿತಿ, ನನ್ನ ಹತ್ತಿರ ಇರುವಷ್ಟುದಿನ, ಘಟ್ಟಕ್ಕೆ ಒಂಟಿಯಾಗಿ ಸ್ನಾನಮಾಡಲು ಹೋಗ ವುದೂ, ನೆಂಟರನ್ನು ಹುಡುಕಿಕೊಂಡು ಪಟ್ಟಣಕ್ಕೆ ಹೋಗುವುದೂ ಚೆನ್ನಾಗಿರುವುದಿಲ್ಲ, ಈಗಲೇ ಹೇಳಿರುವೆ.

ತುಳಸಿಯನ್ನು ಈ ಕ್ಷಣವೇ ಓಡಿಸಿಬಿಡಬೇಕು, ಅವನು ಈ ಮನೆಯ ಕಡೆಗೆ ತಿರುಗಿಯೂ ನೋಡಬಾರದು ಎಂದು ಬಾಗಿಲು ಕಾಯುವವನಿಗೆ ಅಪ್ಪಣೆಯಾಯಿತು.

ಒಡತಿಯ ಅಪ್ಪಣೆಯಂತೆ ಇತರ ಆಳುಕಾಳುಗಳೂ ಕಮಲೆಯ ಸಂಪರ್ಕವನ್ನು ಸಾಧ್ಯವಾದಷ್ಟು ಬಿಟ್ಟುಬಿಟ್ಟರು.

ನಳಿನಾಕ್ಷನ ಸಂಬಂಧ ಕಮಲೆಗೆ ತಿಳಿಯದಿರುವವರೆಗೆ ಅವಳಿಗೆ ಧೈರ್ಯವಿತ್ತು; ಈಗ ಧೈರ್ಯವುಳಿಸಿಕೊಳ್ಳಲು ಅವಳಿಗೆ ಸಾಧ್ಯವಿಲ್ಲವಾಗಿದೆ. ಈ

ಊರಿನಲ್ಲೇ ತನ್ನ ಗಂಡ ಇರುವನು, ಅದರಿಂದ ಒಂದು ಮುಹೂರ್ತವಾದರೂ ಇತರರ ಆಶ್ರಯದಲ್ಲಿ ಇರುವುದು ಅವಳಿಗೆ ಅಸಹನೀಯವಾಯಿತು. ಅವಳ ಕೆಲಸಕಾರ್ಯದಲ್ಲಿ ಅಡಿಗಡಿಗೂ ತಪ್ಪಾಗಲಾರಂಭಿಸಿತು.

"ಏನು ಬ್ರಾಹ್ಮಣಿತಿ, ನಿನ್ನ ಸ್ಥಿತಿ ಚೆನ್ನಾಗಿರುವಂತೆ ತೋರಲಿಲ್ಲ. ನಿನಗೆ ಭೂತ ಹಿಡಿದಿದೆಯೇನು! ನೀನು ಸ್ವತಃ ಊಟ ತಿಂಡಿ ಬಿಟ್ಟಿರುವೆ, ನಮ್ಮನ್ನೂ ಉಪವಾಸಹಾಕಿ ಕೊಲ್ಲುವೆ. ಇತ್ತೀಚೆಗೆ ನಿನ್ನ ಅಡುಗೆ ಬಾಯಿಗೆ ಹಾಕುವಂತೆಯೇ ಇಲ್ಲ" ಎಂದಳು ನವೀನಕಾಳಿ.

ಕಮಲ ಹೇಳಿದಳು "ನಾನು ಇನ್ನು ಇಲ್ಲಿರಲಾರೆ—ನನ್ನ ಮನಸ್ಸು ಸ್ವಲ್ಪವೂ ಸರಿಯಾಗಿಲ್ಲ. ನನ್ನನ್ನು ಕಳುಹಿಸಿ ಬಿಡಿ".

ನವೀನಕಾಳಿ ಗರ್ಜಿಸುತ್ತ ಹೇಳಿದಳು, ಚೆನ್ನಾಯಿತು. ಕಲಿಕಾಲದಲ್ಲಿ ಯಾರಿಗೂ ಉಪಕಾರ ಮಾಡಕೂಡದು. ದಯೆತೋರಿ ನಿನಗೆ ಆಶ್ರಯ ಕೊಡುವುದಕ್ಕಾಗಿ ಅಂಥ ಒಳ್ಳೆಯ ಬ್ರಾಹ್ಮಣನನ್ನು ಕಳುಹಿಸಿಬಿಟ್ಟೆ, ಒಂದು ಮಾತು ಕೂಡ ಹೇಳಲಿಲ್ಲ—ನೀನು ನಿಜವಾಗಿಯೂ ಬ್ರಾಹ್ಮಣರ ಹುಡುಗಿಯಲ್ಲವೆ? ಇಂದು ಕಳುಹಿಸಿಬಿಡಿ ಎನ್ನುವೆಯಲ್ಲವೆ! ಓಡಿಹೋಗುವ ಪ್ರಯತ್ನವೇನಾದರೂ ಮಾಡಿದರೆ ಪೋಲೀಸಿಗೆ ಸುದ್ದಿಮುಟ್ಟಿಸುವೆ! ನನ್ನ ಮಗ ಮ್ಯಾಜಿಸ್ಟ್ರೇಟ್—ಅವನ ಅಪ್ಪಣೆಯಿಂದ ಎಷ್ಟೋ ಜನಕ್ಕೆ ಗಲ್ಲಾಗಿದೆ—ನನ್ನ ಹತ್ತಿರ ನಿನ್ನ ಆಟವೇನೂ ನಡೆಯದು. ಕೇಳುತ್ತಿರುವೆಯಾ—ಗದಾ ಯಜಮಾನರ ಮಾತಿಗೆ ಉತ್ತರ ಹೇಳುವುದಕ್ಕೆ ಹೊರಟನಲ್ಲ. ಅವನಿಗೆ ಏನಾಯಿತು ಬಲ್ಲೆಯಾ, ಆ ಮಗ ಇಂದಿಗೂ ಜೈಲಿನಲ್ಲೇ ಬಿದ್ದಿರುವ. ನನ್ನನ್ನು ನೀನು ಹಾಗೆ-ಹೀಗೆ ಎಂದು ತಿಳಿಯಬೇಡ".

ಮಾತು ಸುಳ್ಳಲ್ಲ—ಆಳು ಮಗ ಗದಾನ ಮೇಲೆ ಗಡಿಯಾರದ ಕಳ್ಳತನ ಹೊರಿಸಿ ಜೈಲಿಗೆ ಕಳುಹಿಸಿದ್ದುದೇನೋ ನಿಜ.

ಕಮಲೆಗೆ ಯಾವ ಉಪಾಯವೂ ತೋರಲಿಲ್ಲ. ಅವಳ ಚಿರಜೀವನದ ಸಾರ್ಥಕತೆಗಾಗಿ ಮುಂದಕ್ಕೆ ಕೈ ಚಾಚುವಾಗ ಅದೇ ಕೈಯಲ್ಲಿ ಇಷ್ಟು ಕಠಿಣ ಬಂಧನ ಬೀಳುವುದೆಂದರೆ ಸಾಧ್ಯವೆ! ಕಮಲ ತನ್ನ ಕೆಲಸ ಕಾರ್ಯದಲ್ಲಿ, ಕೋಣೆಯೊಳಗೆ ಯಾವ ಬಗೆಯಲ್ಲೂ ನಿಲ್ಲಲಾರದಾದಳು. ಅವಳ ರಾತ್ರಿಯ ಕೆಲಸಗಳೆಲ್ಲ ಮುಗಿಯಿತು, ಬಳಿಕ ಅವಳು ಚಳಿಯಲ್ಲಿ ಒಂದು ಹೊದಿಕೆ ಹೊದ್ದುಕೊಂಡು ತೋಟದಿಂದ ಹೊರಕ್ಕೆ

ಹೊರಟಳು ಪೌಳೀಗೋಡೆಯ ಅರುಗಿನಲ್ಲಿ ನಿಂತು ಪಟ್ಟಣದ ಕಡೆಗೆ ಹೋಗುವ ದಾರಿಯನ್ನು ನಿಟ್ಟಿಸಿದಳು, ಅವಳು ಯಾವ ತರುಣ ಹೃದಯದ ಸೇವೆಗಾಗಿ ಕಾತುರಪಡುತ್ತಿದ್ದಳೋ, ಭಕ್ತಿನಿವೇದನೆಗಾಗಿ ಆತುರಪಡುತ್ತಿದ್ದಳೋ—ಆ ಹೃದಯವನ್ನು ಕಮಲ ಆ ಕತ್ತಲ ಜನಹೀನ ಮಾರ್ಗ ದಾಟಿ ನಗರದ ಮಧ್ಯೆ ಯಾವುದೋ ಒಂದು ಅಪರಿಚಿತ ಮನೆಯನ್ನು ಉದ್ದೇಶಿಸಿ ಕಳುಹಿಸುತ್ತಿದ್ದಳು—ಆ ಬಳಿಕ ಬಹಳ ಕಾಲ ನೀರವವಾಗಿ ನಿಂತು ನೆಲಮುಟ್ಟಿ ನಮಸ್ಕಾರ ಮಾಡಿ ತನ್ನ ಮಲಗುವ ಕೋಣೆಯೊಳಕ್ಕೆ ಹಿಂದಿರುಗಿ ಬರುವಳು.

ಆದರೆ ಈ ಅಲ್ಪ ಸುಖ, ಅಲ್ಪ ಸ್ವಾತಂತ್ರ್ಯವೂ ಕಮಲೆಗೆ ಹೆಚ್ಚು ದಿನ ಲಭಿಸಲಿಲ್ಲ. ರಾತ್ರಿ ಕೆಲಸವೆಲ್ಲ ಮುಗಿದಿದ್ದರೂ ಒಂದು ದಿನ ಯಾವುದೋ ಕಾರಣದಿಂದ ನವೀನ ಕಾಳಿ ಕಮಲೆಯನ್ನು ಕರೆಕಳುಹಿದಳು. ಆಳು ಬಂದು, "ಬ್ರಾಹ್ಮಣಿತಿ ಕಾಣಲೇ ಇಲ್ಲ" ಎಂದು ಹೇಳಿದ.

ನವೀನಕಾಳಿ ಉದ್ವೇಗದಿಂದ ಕೇಳಿದಳು, "ಹಾಗೆಂದರೇನೋ, ಹಾಗಾದರೆ ಓಡಿಹೋದಳೇನು?".

ನವೀನಕಾಳಿ ಸ್ವತಃ ಆ ರಾತ್ರಿಯಲ್ಲಿ ದೀಪ ಹಿಡಿದು ಎಲ್ಲ ಕೊಠಡಿಯನ್ನೂ ಹುಡುಕಿ ನೋಡಿದಳು. ಎಲ್ಲೂ ಕಮಲೆ ಇಲ್ಲ. ಮುಕುಂದ ಬಾಬು ಅರ್ಧ ಕಣ್ಣುಮುಚ್ಚಿಕೊಂಡು ಗುಡಿಗುಡಿ ಸೇದುತ್ತಿದ್ದರು – ಅವರ ಹತ್ತಿರ ಹೋಗಿ, "ಕೇಳಿದೆಯೇನು, ಬ್ರಾಹ್ಮಣಿತಿ ಓಡಿಹೋದಂತಿದೆ" ಎಂದಳು.

ಇದರಿಂದ ಮುಕುಂದಬಾಬುವಿನ ಶಾಂತಿಗೆ ಭಂಗಬರಲಿಲ್ಲ. ಅವರು ಕೇವಲ ಆಲಸ್ಯ ತುಂಬಿದ ಧ್ವನಿಯಲ್ಲಿ ಹೇಳಿದರು, "ಆಗಲೇ ಬೇಡ ಎಂದಿದ್ದೆ—ಕೇಳಬೇಕಲ್ಲ. ಯಾವುದೂ ಕಳವಾಗಿಲ್ಲವಷ್ಟೆ?"

ಗೃಹಿಣಿ, "ಆ ದಿನ ಅವಳಿಗೆ ಉಟ್ಟುಕೊಳ್ಳಲು ಕೊಟ್ಟಿದ್ದ ಧಾವಳಿ ಮನೆಯಲ್ಲಿಲ್ಲ, ಇಷ್ಟೇ ಅಲ್ಲದೆ ಇನ್ನೂ ಏನೇನು ಹೋಗಿದೆಯೋ ನೋಡಿಲ್ಲ" ಎಂದಳು.

ಯಜಮಾನ ಅವಿಚಲಿತ ಗಂಭೀರ ಧ್ವನಿಯಲ್ಲಿ "ಪೋಲೀಸಿಗೆ ಹೋಗಿ ಹೇಳಿ" ಎಂದರು

ಆಳೊಬ್ಬ ಕೈಯಲ್ಲಿ ಲಾಂದ್ರ ಹಿಡಿದು ಬೀದಿಗೆ ಹೋದ. ಇಷ್ಟರಲ್ಲಿ ಕಮಲ ತನ್ನ ಕೊಠಡಿಗೆ ಹಿಂದಿರುಗಿ ಬಂದು ನೋಡಿದಾಗ, ನವೀನಕಾಳಿ ಆ

ಕೋಣೆಯ ವಸ್ತು ಸಾಮಗ್ರಿಗಳನ್ನೂ ಕೆದಕಿ-ಕೆದಕಿ ನೋಡುತ್ತಿದ್ದಳು. ಯಾವುದಾದರೂ ಸಾಮಾನು ಕಳುವಾಗಿದೆಯೋ ಇಲ್ಲವೋ ಎಂದು ಪತ್ತೆ ಮಾಡುವುದರಲ್ಲಿ ಆಕೆ ಮಗ್ನಳಾಗಿದ್ದಳು. ಆ ವೇಳೆಯಲ್ಲಿ ಪಠಾತ್ತನೆ ಕಮಲೆ ಯನ್ನು ಕಂಡು ನವೀನಕಾಳಿ ಕೇಳಿದಳು, "ಏನು ಕೆಲಸ ಮಾಡಿದೆ, ಎಲ್ಲಿಗೆ ಹೋಗಿದ್ದೆ ?".

"ಕೆಲಸ ಮುಗಿಸಿ ಹಾಗೇ ತೋಟದಲ್ಲಿ ತಿರುಗಾಡುತ್ತಿದ್ದೆ" ಎಂದಳು ಕಮಲ.

ನವೀನಕಾಳಿ ಬಾಯಿಗೆಬಂದಂತೆಲ್ಲಾ ಹೇಳಿದಳು. ಮನೆಯ ಆಳು ಕಾಳುಗಳೆಲ್ಲ ಬಾಗಿಲ ಹತ್ತಿರ ಗುಂಪುಗೂಡಿದರು.

ಕಮಲ ಎಂದೂ ನವೀನಕಾಳಿಯ ಯಾವ ಬೈಗಳಿಗೂ ಅವಳೆದುರಿಗೆ ಕಣ್ಣೀರು ಸುರಿಸಿರಲಿಲ್ಲ. ಇಂದೂ ಅವಳು ಕಠೋರ ಮೂರ್ತಿಯಂತೆ ಸ್ತಬ್ಧಳಾಗಿ ನಿಂತಳು.

ನವೀನಕಾಳಿಯ ಮಾತಿನ ಮಳೆ ಸ್ವಲ್ಪ ನಿಂತ ಮೇಲೆ ಕಮಲ, "ನನ್ನ ಮೇಲೆ ನಿಮಗೆ ಅಸಮಾಧಾನವಿದ್ದರೆ ನನ್ನನ್ನು ಕಳುಹಿಸಿಬಿಡಿ" ಎಂದಳು

ನವೀನಕಾಳಿ—ಕಳುಹಿಸದೆ ! ನಿನ್ನಂಥ ಅಕೃತಘ್ನಳನ್ನು ಎಂದೆಂದೂ ಅನ್ನ-ಒಟ್ಟೆ ಕೊಟ್ಟು ಸಾಕುವೆ ಎಂದು ಮನಸ್ಸಿನಲ್ಲೂ ಎಣಿಸಬೇಡ. ಆದರೆ ಎಂಥ ಜನರ ಕೈಗೆ ಸಿಕ್ಕಿಬಿದ್ದಿರುವೆ ಎಂಬುದನ್ನು ಮೊದಲು ಚೆನ್ನಾಗಿ ತಿಳಿಸಿ ಕೊಟ್ಟು ಬಳಿಕ ಕಳುಹಿಸಿಕೊಡುವೆ.

ಇಷ್ಟಾದ ಬಳಿಕ ಕಮಲೆಗೆ ಮನೆ ಬಿಟ್ಟು ಹೋಗಲು ಧೈರ್ಯ ಬರಲಿಲ್ಲ. ಅವಳು ಕೋಣೆಯೊಳಗೆ ಕದ ಮುಚ್ಚಿ ಕುಳಿತುಕೊಂಡು ಮನದಲ್ಲೇ ಆಲೋ ಚಿಸಿದಳು. "ಇಷ್ಟು ದುಃಖ ಸಹಿಸುವರಿಗೆ ದೇವರು ಸತ್ಯವಾಗಿಯೂ ಒಂದು ಮಾರ್ಗ ತೋರಿಸುವ".

ಮುಕುಂದಬಾಬು ತಮ್ಮ ಇಬ್ಬರು ಸೇವಕರೊಡನೆ ಗಾಳಿ ಸಂಚಾರಕ್ಕೆ ಹೋಗಿದ್ದರು. ಮನೆಯ ಹೆಬ್ಬಾಗಿಲು ಒಳಗಡೆಯಿಂದ ಚಿಲಕ ಹಾಕಿತ್ತು. ಸಂಜೆಯಾಗುತ್ತ ಬಂದಿತ್ತು.

"ಮುಕುಂದಬಾಬು ಮನೆಯಲ್ಲಿರುವರೇ ?" ಎಂದು ಬಾಗಿಲ ಬಳಿ ಸದ್ದಾ ಯಿತು.

ನವೀನಕಾಳಿ ಆಶ್ಚರ್ಯದಿಂದ, "ಓಹೋ, ನಳಿನಾಕ್ಷ ಡಾಕ್ಟರ್ ಬಂದಿರುವರು, ಬುಧಿಯಾ, ಬುಧಿಯಾ" ಎಂದಳು.

ಬುಧಿಯಾ ಎಂಬ ಹೆಸರಿನವಳ ಸದ್ದೇ ಇರಲಿಲ್ಲ. ಆಗ ನವೀನಕಾಳಿ, "ಬ್ರಾಹ್ಮಣಿತಿ, ಹೋಗು, ಬೇಗನೆ ಹೋಗಿ ಬಾಗಿಲು ತೆರೆ, ಡಾಕ್ಟರ್ ಬಾಬುವಿಗೆ ಹೇಳು, ಯಜಮಾನರು ಗಾಳಿ ಸಂಚಾರಕ್ಕೆ ಹೋಗಿರುವರು, ಈಗಲೇ ಬರುವರು—ಸ್ವಲ್ಪ ಕುಳಿತುಕೊಳ್ಳಿ ಎಂದು ಹೇಳು" ಎಂದಳು.

ಕಮಲ ಲಾಂದ್ರ ಹಿಡಿದು ಕೆಳಕ್ಕೆ ಇಳಿದು ಬಂದಳು—ಅವಳ ಕಾಲು ನಡುಗುತ್ತಿತ್ತು. ಅವಳ ಎದೆ ಡವಡವ ಎನ್ನುತ್ತಿತ್ತು. ಅವಳ ಕೈ ತಣ್ಣಗೆ ಹಿಮದಂತಾಯಿತು. ಪ್ರಾಯಃ ಈ ವಿಷನು ವ್ಯಾಕುಲತೆಯಿಂದ ಕಣ್ಣು ತೆರೆದು ಸರಿಯಾಗಿ ನೋಡಲಾಗದಿದ್ದರೆ ! ಎಂದು ಅವಳಿಗೆ ಹೆದರಿಕೆ ಆಗ ತೊಡಗಿತು.

ಕಮಲ ಒಳಗಡೆ ಚಿಲಕ ತೆಗೆದು ಮುಸುಕು ಎಳೆದುಕೊಂಡು ಬಾಗಿಲ ಮರೆಯಲ್ಲಿ ನಿಂತಳು.

ನಳಿನಾಕ್ಷ, "ಯಜಮಾನರು ಮನೆಯಲ್ಲಿರುವರೆ" ಎಂದು ವಿಚಾರಿಸಿದ.

ಕಮಲ ಹೇಗೆಹೇಗೋ, "ಇಲ್ಲ, ನೀವು ಬನ್ನಿ" ಎಂದಳು.

ನಳಿನಾಕ್ಷ ಹೊರಗಿನ ಕೊಠಡಿಯಲ್ಲಿ ಬಂದು ಕುಳಿತ ಇಷ್ಟರಲ್ಲಿ ಬುಧಿಯಾ ಬಂದು ಹೇಳಿದಳು "ಯಜಮಾನರು ತಿರುಗಾಡಲು ಹೋಗಿರುವರು. ಈಗಲೇ ಬರುವರು ತಾವು ಸ್ವಲ್ಪ ಹೊತ್ತು ಕುಳಿತಿರಿ".

ಕಮಲೆಯ ನಿಟ್ಟುಸಿರು ವೇಗವಾಗಿ ಅವಳ ಹೃದಯದೊಳಗೆ ತೊಂದರೆಯಾಗುತ್ತಿತ್ತು. ಕತ್ತಲೆಯ ವರಾಂಡದಲ್ಲಿ ನಳಿನಾಕ್ಷ ಚೆನ್ನಾಗಿ ಕಾಣುವಂಥ ಸ್ಥಳದಲ್ಲಿ ಆಶ್ರಯ ಪಡೆದಳು. ಆದರೆ ನಿಲ್ಲಲಾಗಲಿಲ್ಲ. ಚಂಚಲ ಹೃದಯವನ್ನು ಸಮಾಧಾನಗೊಳಿಸಲು ಅವಳು ಅಲ್ಲೇ ಕುಳಿತುಕೊಳ್ಳಬೇಕಾಯಿತು. ಅವಳ ಮನಸ್ಸಿನ ಚಂಚಲತೆಯೊಡನೆ ಚಳಿಗಾಳಿಯೂ ಸೇರಿಕೊಂಡು ಅವಳನ್ನು ಥರಥರನೆ ನಡುಗುವಂತೆ ಮಾಡಿತು.

ನಳಿನಾಕ್ಷ ಸೀಮೆಯೆಣ್ಣೆ-ದೀಪದ ಬಳಿ ಕುಳಿತು ಮೌನವಾಗಿ ಏನನ್ನೋ ಯೋಚಿಸುತ್ತಿದ್ದ. ಅಂಧಕಾರದ ಮರೆಯಲ್ಲಿ ನಡುಗುವ ಮೈಯ ಕಮಲ ನಳಿನಾಕ್ಷನ ಮುಖದ ಕಡೆ ನೆಟ್ಟ ನೋಟದಿಂದ ನೋಡುತ್ತಿದ್ದಳು. ನೋಡುತ್ತ ನೋಡುತ್ತ ಅವಳ ಎರಡು ಕಣ್ಣುಗಳಿಂದಲೂ ಬಾರಿಬಾರಿಗೂ ನೀರು ಸುರಿಯ

ತೊಡಗಿತು. ಕೂಡಲೇ ನೀರು ಒರೆಸಿಕೊಂಡು ಅವಳು ತನ್ನ ಏಕಾಗ್ರ ದೃಷ್ಟಿಯಿಂದ ನಳಿನಾಕ್ಷನನ್ನು ತನ್ನ ಅಂತಃಕರಣದ ಆಳವಾದ ಒಳಪ್ರದೇಶದಲ್ಲಿ ಆಕರ್ಷಣೆ ಮಾಡಿಕೊಂಡಳು ಆ ಅಗಲ ಹಣೆಯ ನೀರವ ಮುಖದ ಮೇಲೆ ದೀಪದ ಬೆಳಕು ಪ್ರತಿಬಿಂಬಿಸಿತ್ತು, ಆ ಮುಖ ಕಮಲೆಯ ಹೃದಯದೊಳಗೆ ಸ್ಪಷ್ಟವಾಗಿ ಅಂಕಿತವಾದಂತೆಲ್ಲ ಅವಳ ಸಮಸ್ತ ಶರೀರವೂ ಕ್ರಮೇಣ ಹಿಡಿತಕ್ಕೆ ತಪ್ಪಿ ಸುತ್ತಲ ಆಕಾಶದೊಡನೆ ಸೇರಿಕೊಂಡು ಹೋಗಲಾರಂಭಿಸಿತು ;—ವಿಶ್ವ ಜಗತ್ತಿನ ನಡುವೆ ಬೇರೆಯಾವುದೂ ಉಳಿಯಲಿಲ್ಲ, ಕೇವಲ ಆ ಬೆಳಕು ಬಿದ್ದ ಮುಖ ಮಾತ್ರ ಉಳಿಯಿತು—ಯಾವುದು ಎದುರಿಗಿತ್ತೋ ಆ ಮುಖದೊಡನೆ ಸಂಪೂರ್ಣ ರೀತಿಯಲ್ಲಿ ಐಕ್ಯಳಾದಳು.

ಈ ರೀತಿ ಅದೆಷ್ಟು ಹೊತ್ತು ಕಮಲ ಎಚ್ಚರದಿಂದ ಅಥವಾ ಎಚ್ಚರವಿಲ್ಲದೆ ಇದ್ದಳೆಂದು ಹೇಳುವಂತಿಲ್ಲ—ಆಗ ಹಠಾತ್ತನೆ ಅವಳು ಬೆಚ್ಚುತ್ತ ನೋಡಿದಾಗ, ನಳಿನಾಕ್ಷ ಕುರ್ಚಿ ಬಿಟ್ಟು ಎದ್ದುನಿಂತು ಮುಕುಂದಬಾಬುಗಳ ಸಂಗಡ ಮಾತನಾಡುತ್ತಿದ್ದ.

ಈಗ ಅವನು ವರಾಂಡಕ್ಕೆ ಬರಬಹುದು ಹಾಗೂ ಕಮಲೆಯನ್ನು ನೋಡಬಹುದು ಎಂಬ ಹೆದರಿಕೆಯಿಂದ ಕಮಲ ವರಾಂಡಾ ಬಿಟ್ಟು ಕೆಳಗೆ ತನ್ನ ಅಡುಗೆಯ ಕೋಣೆಗೆ ಹೋಗಿ ಕುಳಿತಳು. ಅಡುಗೆ ಮನೆ ಹೊರಾಂಗಣದ ಅರುಗಿನಲ್ಲಿತ್ತು. ಹೊರಾಂಗಣ ಮನೆಯೊಳಗಿಂದ ಹೊರಕ್ಕೆ ಹೋಗುವ ದಾರಿಯಲ್ಲಿತ್ತು.

ಕಮಲೆಯ ಸರ್ವಾಂಗವೂ ಪುಳಕಿತವಾಗಿ ಕುಳಿತು ಕುಳಿತು ಯೋಚಿಸ ತೊಡಗಿದಳು. "ನನ್ನಂಥ ಹತಭಾಗಿನಿಗೆ ಇಂಥ ಗಂಡ ! ದೇವತೆಯಂಥ ಸೌಮ್ಯ ನಿರ್ಮಲಪ್ರಸನ್ನ ಸುಂದರ ಮೂರ್ತಿ ! ಓ ದೇವರೇ, ನನ್ನ ಎಲ್ಲ ಕಷ್ಟವೂ ಸಾರ್ಥಕವಾಯಿತು".

ಹೀಗೆಂದು ಅನೇಕಬಾರಿ ದೇವರಿಗೆ ನಮಸ್ಕರಿಸಿದಳು. ಮೆಟ್ಟಿಲು ಇಳಿದು ಹೊರಕ್ಕೆ ಹೋಗುವ ಹೆಜ್ಜೆಯ ಸದ್ದು ಕೇಳಿತು. ಕಮಲ ಕೂಡಲೇ ಕತ್ತಲಲ್ಲಿ ಬಾಗಿಲ ಬಳಿ ನಿಂತಳು. ಬುಧಿಯಾ ದೀಪ ಹಿಡಿದು ಮುಂದೆ ಮುಂದೆ ಹೋದಳು, ಅವಳನ್ನು ಹಿಂಬಾಲಿಸುತ್ತ ನಳಿನಾಕ್ಷ ಹೊರಹೊರಟ.

"ನಿನ್ನ ಶ್ರೀಚರಣದ ದಾಸಿಯಾಗಿ ಇಲ್ಲಿ ಪರರ ಬಾಗಿಲಲ್ಲಿ ದಾಸತ್ವಕ್ಕೆ

ಸಿಕ್ಕಿಕೊಂಡಿರುವೆ, ಕಣ್ಣೆದುರಿಗೇ ಹೊರಟುಹೋದೆ. ಆದರೂ ಗುರುತಿಸಲಿಲ್ಲ" ಎಂದು ಮನದಲ್ಲೇ ಅಂದುಕೊಂಡಳು.

ಮುಕುಂದಬಾಬು ಊಟಮಾಡಲು ಒಳಮನೆಗೆ ಹೋದರು. ಕಮಲ ಮೆಲ್ಲಮೆಲ್ಲನೆ ಆ ಕುಳಿತುಕೊಳ್ಳುವ ಕೊಠಡಿಗೆ ತೆರಳಿದಳು. ನಳಿನಾಕ್ಷ ಕುಳಿತಿದ್ದ ಕುರ್ಚಿಯ ಎದುರಿಗೆ ಹಣೆ ನೆಲಕ್ಕೆ ಮುಟ್ಟಿಸಿ ಅಲ್ಲಿಯ ಧೂಳನ್ನು ಚುಂಬಿಸಿದಳು. ಸೇವೆಮಾಡಲು ಯಾವ ಅವಕಾಶವೂ ದೊರೆಯದೆ ಒಳಗೆ ಅಡಗಿದ್ದ ಭಕ್ತಿಯಿಂದ ಕಮಲೆಯ ಹೃದಯ ಕಳವಳಪಡುತ್ತಿತ್ತು.

ಮರುದಿನ ಕಮಲೆ, ವಾಯುಪರಿವರ್ತನೆಗಾಗಿ ಡಾಕ್ಟರ್‌ಬಾಬು ಆ ಮನೆಯ ಯಜಮಾರನ್ನು ಕಾಶಿಗಿಂತಲೂ ಹೆಚ್ಚು ಆರೋಗ್ಯಕರವಾದ ಅತಿ ದೂರ ಪಶ್ಚಿಮಕ್ಕೆ ಹೋಗುವಂತೆ ಸಲಹೆ ಕೊಟ್ಟಿರುವರೆಂಬ ಸುದ್ದಿ ಕೇಳಿದಳು. ಅದರಿಂದ ಅಂದಿನಿಂದಲೇ ಪ್ರಯಾಣದ ಸಿದ್ಧತೆ ನಡೆಯತೊಡಗಿತ್ತು.

ಕಮಲ ನವೀನ ಕಾಳಿಯ ಬಳಿ ಹೋಗಿ, "ನಾನು ಕಾಶಿ ಬಿಟ್ಟು ಬರಲಾರೆ" ಎಂದಳು.

ನವೀನಕಾಳಿ—ನಮಗೆ ಸಾಧ್ಯವಾದದ್ದು ನಿನಗೆ ಸಾಧ್ಯವಿಲ್ಲವೋ? ಬಹಳ ಭಕ್ತಿ ಕಾಣುವುದು.

ಕಮಲ—ನೀವು ಏನೇ ಹೇಳಿ, ನಾನು ಇಲ್ಲೇ ತಂಗುವೆ.

ನವೀನ ಕಾಳಿ—ಸರಿ, ಹೇಗಿರುವೆಯೋ ನೋಡೋಣ.

"ನನ್ನ ಮೇಲೆ ಕರುಣೆ ಇಡಿ, ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಬೇಡಿ" ಎಂದಳು ಕಮಲ.

ನವೀನಕಾಳಿ—ನೀನು ಬಹಳ ಭಯಂಕರ ವ್ಯಕ್ತಿಯಂತೆ ಕಾಣುವೆ. ಹೊರಡುವ ಸಮಯಕ್ಕೆ ಸರಿಯಾಗಿ ನೆಪಹೇಳುವೆ. ನಾವು ಈ ತಕ್ಷಣ ಜನರನ್ನು ಹುಡುಕುವುದೆಲ್ಲಿ? ನಮ್ಮ ಕೆಲಸ ಹೇಗೆ ನಡೆಯಬೇಕು.

ಕಮಲೆಯ ಬೇಡಿಕೆ-ಕೋರಿಕೆಗಳೆಲ್ಲ ವ್ಯರ್ಥವಾಯಿತು—ಕಮಲ ತನ್ನ ಕೋಣೆಯ ಕದ ಮುಚ್ಚಿಕೊಂಡು. ದೇವರನ್ನು ಕರೆಯುತ್ತ ಅಳಲಾರಂಭಿಸಿದಳು.

೫೩

ನಳಿನಾಕ್ಷನನ್ನು ಮದುವೆಯಾಗಲು ಹೇಮನಳಿನಿಯೊಡನೆ ಅನ್ನದಾ ಬಾಬುಗಳು ಆಲೋಚನೆ ನಡೆಸಿದ ದಿನ ರಾತ್ರಿಯೇ ಅನ್ನದಾಬಾಬುಗಳಿಗೆ ಪುನಃ ಹೊಟ್ಟೆನೋವು ಪ್ರಾರಂಭಿಸಿತು.

ರಾತ್ರಿ ಕಷ್ಟದಿಂದ ಕಳೆಯಿತು. ಬೆಳಗ್ಗೆ ಅವರ ವೇದನೆ ಕಡಿಮೆಯಾದ ಮೇಲೆ ಅವರು ತಮ್ಮ ಮನೆಯ ತೋಟದ ದಾರಿಯಹತ್ತಿರ ಶೀತಪ್ರಭಾತದ ಎಳೆಬಿಸಿಲಿಗೆ ಎದುರಾಗಿ ಒಂದು ಮುಕ್ಕಾಲುಮಣೆ ಹಾಕಿಕೊಂಡು ಕುಳಿತಿದ್ದರು. ಹೇಮನಳಿನಿ ಅಲ್ಲೇ ಅವರ ಚಹ ಕುಡಿಯುವ ವ್ಯವಸ್ಥೆಮಾಡುತ್ತಿದ್ದಳು, ಹಿಂದಿನರಾತ್ರಿಯ ಕಷ್ಟದಿಂದ ಅನ್ನದಾಬಾಬುಗಳ ಮುಖ ಬಣ್ಣಗೆಟ್ಟಿತ್ತು ಮತ್ತು ಬಾಡಿಹೋಗಿತ್ತು. ಅವರ ಕಣ್ಣಿನ ಕೆಳಗೆ ಕಪ್ಪು ಮೂಡಿತ್ತು. ಒಂದೇ ರಾತ್ರಿಯಲ್ಲಿ ಅವರ ವಯಸ್ಸು ಬಹಳ ಹೆಚ್ಚಾಗಿರುವಂತೆ ತೋರುತಿತ್ತು.

ಅನ್ನದಾಬಾಬುಗಳ ಈ ಕ್ಲಾಂತ ಮುಖದಕಡೆ ಹೇಮನಳಿನಿಯ ದೃಷ್ಟಿ ಬಿದ್ದಾಗಲೆಲ್ಲ, ಅವಳಹೃದಯದಲ್ಲಿ ಚೂರಿ ಚುಚ್ಚಿದಂತಾಗಿತ್ತು. ನಳಿನಾಕ್ಷನನ್ನು ಮದುವೆಯಾಗಲು ಹೇಮನಳಿನಿ ಅಸಮ್ಮತಿಸಿದುದರಿಂದಲೇ ಮುದುಕರಿಗೆ ದುಃಖವಾಗಿರುವುದು. ಮತ್ತು ಅವರ ಮನೋವೇದನೆಯೇ ಅವರ ವ್ಯಾಧಿಗೆ ಮುಖ್ಯವಾದ ಕಾರಣ, ಇದು ಹೇಮನಳಿನಿಗೆ ಅಂತರಂಗ ವೇದನೆಯ ವಿಷಯ ವಾಯಿತು. ಅವಳು ಏನು ಮಾಡುವುದು, ಯಾವರೀತಿಯಲ್ಲಿ ಮುದುಕ ತಂದೆಯನ್ನು ಸಂತೈಸುವುದು, ಎಂದು ಎಷ್ಟು ಯೋಚಿಸಿಯೂ ಯಾವ ಬಗೆಯಲ್ಲೂ ತೀರ್ಮಾನಿಸಲಾರದಾದಳು.

ಆ ಸಮಯದಲ್ಲಿ ಹಠಾತ್ತನೆ ಚಿಕ್ಕಪ್ಪನೊಡನೆ ಅಕ್ಷಯ ಅಲ್ಲಿಗೆ ಬಂದು ಸೇರಿದ, ಹೇಮನಳಿನಿ ಕೂಡಲೇ ಹೊರಟುಹೋಗಲು ಪ್ರಯತ್ನಿಸುತ್ತಿದ್ದಾಗ ಅಕ್ಷಯ, "ನೀವು ಹೋಗಕೂಡದು, ಇವರು ಗಾಜಿಪುರದ ಚಕ್ರವರ್ತಿ ಮಹಾಶಯರು ಇವರನ್ನು ಪಶ್ಚಿಮಪ್ರಾಂತ್ಯದಲ್ಲಿ ಎಲ್ಲರೂ ಬಲ್ಲರು–ನಿಮ್ಮೊಡನೆ ಇವರು ಮಾತನಾಡಬೇಕಾದ ಸಂಗತಿ ಇದೆ" ಎಂದು ಹೇಳಿದ.

ಆ ಸ್ಥಳವಲ್ಲೇ ಕಟ್ಟೆಯಂತೆ ಕಟ್ಟಲಾಗಿತ್ತು–ಚಿಕ್ಕಪ್ಪ, ಅಕ್ಷಯ ಅಲ್ಲೇ ಕುಳಿತರು.

ಚಿಕ್ಕಪ್ಪ ಹೇಳಿದರು, "ರಮೇಶಬಾಬುವಿಗೂ ನಿಮಗೂ ನೆಚ್ಚಿನ ಗೆಳೆತನ

ಇರುವುದೆಂದು ಕೇಳಿರುವೆ–ನಾನು ಅದರಿಂದಲೇ ಅವರ ಹೆಂಡತಿಯ ಸುದ್ದಿ ನಿಮಗೇನಾದರೂ ತಿಳಿದಿದೆಯೇ ಎಂದು ವಿಚಾರಿಸಲು ಬಂದಿರುವೆ".

ಅನ್ನದಾಬಾಬುಗಳು ಕ್ಷಣಕಾಲ ಮೂಕರಂತೆ ಕುಳಿತಿದ್ದರು. ಬಳಿಕ, "ರಮೇಶಬಾಬುಗಳ ಹೆಂಡತಿ !" ಎಂದು ಕೇಳಿದರು.

ಹೇಮನಳಿನಿ ನೆಲ ನೋಡುತ್ತ ಕುಳಿತಿದ್ದಳು. ಚಕ್ರವರ್ತಿ ಹೇಳಿದರು "ತಾಯಿ, ಬಹುಶಃ ನೀವೆಲ್ಲ ನನ್ನನ್ನು ಹಳೆಯಕಾಲದ ಅನಾಗರಿಕನೆಂದು ತಿಳಿದಿರಬಹುದು. ಸ್ವಲ್ಪ ಸಾವಧಾನದಿಂದ ಎಲ್ಲ ಸಂಗತಿಯನ್ನೂ ಕೇಳಿದರೆ, ನಾನು ಕೆಲಸವಿಲ್ಲದೆ ಮೈಮೇಲೆಬಿದ್ದು ಬೇರೊಬ್ಬರ ವಿಷಯವಾಗಿ ನಿಮ್ಮಗಳ ಸಂಗಡ ಆಲೋಚನೆ ನಡೆಸಲು ಬಂದಿಲ್ಲ ಎಂದು ತಿಳಿಯಬರುವುದು. ರಮೇಶ ಬಾಬು ದುರ್ಗಾಪೂಜೆಯ ಸಮಯದಲ್ಲಿ ತನ್ನ ಹೆಂಡತಿಯನ್ನು ಕರೆದುಕೊಂಡು ಮತ್ತೊಂದು ಸ್ಟೀಮರ್‌ನಲ್ಲಿ ಪಶ್ಚಿಮದತ್ತ ಪ್ರಯಾಣ ಮಾಡುತ್ತಿದ್ದರು, ಆ ವೇಳೆಯಲ್ಲಿ ಅದೇ ಸ್ಟೀಮರಿನಲ್ಲಿ ಅವರೊಡನೆ ನನ್ನ ಪರಿಚಯವಾಯಿತು. ಕಮಲೆಯನ್ನು ಒಮ್ಮೆ ನೋಡಿದರೆ ಅವಳು ತನ್ನನ್ನು ಎಂದೆಂದಿಗೂ ಬೇರೆಯವಳಂತೆ ಭಾವಿಸಲು ಎಡೆ ಕೊಡಲಾರಳೆಂದು ನಿಮಗೆಲ್ಲಾಗೊತ್ತು. ನನ್ನ ಈ ಮುದಿವಯಸ್ಸಿನಲ್ಲಿ ಅನೇಕ ದುಃಖ–ನೋವು ಅನುಭವಿಸಿ ಹೃದಯ ಕಲ್ಲಾಗಿರುವುದು, ಆದರೆ ಆ ಮಹಾಲಕ್ಷ್ಮಿಯನ್ನು ಯಾವ ಬಗೆಯಲ್ಲೂ ಮರೆಯಲಾರೆ. ರಮೇಶಬಾಬು ಎಲ್ಲಿಗೆ ಹೋಗುವುದೆಂದು ನಿಶ್ಚಯಿಸಿರಲಿಲ್ಲ—ಆದರೆ ಈ ಮುದುಕ ನನ್ನು ಎರಡು ದಿನ ನೋಡಿದ ಮಾತ್ರಕ್ಕೆ ಆ ತಾಯಿ ಕಮಲಳಿಗೆ ಅದೆಷ್ಟು ಸ್ನೇಹವುಂಟಾಗಿತ್ತೆಂದರೆ ಅವಳು ರಮೇಶನನ್ನು ಗಾಜೀಪುರದಲ್ಲಿ ನಮ್ಮ ಮನೆಯಲ್ಲಿ ತಂಗಲು ಒಪ್ಪಿಸಿದಳು. ಅಲ್ಲಿ ಕಮಲ ನಮ್ಮ ನಡುಕಲು ಹುಡುಗಿ ಶೈಲೆಯೊಡನೆ ಸ್ವಂತ ತಂಗಿಗಿಂತ ಹೆಚ್ಚಾಗಿ ಪ್ರೀತಿಯಿಂದಿದ್ದಳು. ಆದರೆ ಏನಾಯಿತೋ ಏನೋ ತಿಳಿಯದು—ತಾಯಿ ಯಾವ ಕಾರಣದಿಂದ ನಮ್ಮನ್ನೆಲ್ಲ ಹೀಗೆ ಅಳಿಸಿ ಹಠಾತ್ತನೆ ಹೋದಳೆಂದು ಇಂದಿನವರೆಗೂ ಅರಿಯದಿರುವೆ. ಶೈಲೆಯ ಕಣ್ಣೀರು ಇನ್ನೂ ಆರಿಲ್ಲ".

ಹೇಳುತ್ತ ಹೇಳುತ್ತ ಚಕ್ರವರ್ತಿಯ ಎರಡು ಕಣ್ಣುಗಳೂ ತುಂಬಿ ನೀರು ಹರಿಯಿತು. ಅನ್ನದಾಬಾಬು ಕಾತರದಿಂದ ಕೇಳಿದರು— "ಅವಳಿಗೇನಾಯಿತು, ಅವಳೆಲ್ಲಿ ಹೋದಳು ?" ಅಕ್ಷಯಬಾಬು, ನೀವು ಎಲ್ಲ ಸಂಗತಿ

ಯನ್ನೂ ಕೇಳಿರುವಿರಲ್ಲ, ನೀವೇ ಹೇಳಿ. ಹೇಳತೊಡಗಿದರೆ ನನ್ನ ಎದೆ ಬಿರಿದುಹೋಗುವುದು" ಎಂದರು ಚಿಕ್ಕಪ್ಪ.

ಅಕ್ಷಯ ಮೊದಲಿನಿಂದ ಕಡೆಯವರೆಗೆ ಎಲ್ಲ ಸಂಗತಿಯನ್ನೂ ವಿಸ್ತಾರವಾಗಿ ವಿವರಿಸಿದ. ಸ್ವತಃ ಯಾವ ಟೀಕೆಯನ್ನೂ ಮಾಡಲಿಲ್ಲ, ಆದರೆ ಅವನ ವಿವರಣೆಯಲ್ಲಿ ರಮೇಶನ ಚರಿತ್ರೆ ಸ್ವಾರಸ್ಯವಾಗಿ ಹೊರಡಲಿಲ್ಲ.

ಅನ್ನದಾಬಾಬುಗಳು ಬಾರಿಬಾರಿಗೂ ಹೇಳತೊಡಗಿದರು, "ನಾವು ಯಾವ ಸಂಗತಿಯನ್ನೂ ಕೇಳಿದವರಲ್ಲ. ರಮೇಶ ಕಲ್ಕತ್ತೆ ಬಿಟ್ಟು ಹೋದಂದಿನಿಂದ ಅವನಿಂದ ಒಂದು ಪತ್ರವೂ ಬಂದಿಲ್ಲ".

ಅಕ್ಷಯ ಅದನ್ನು ಅನುಮೋದಿಸುತ್ತ, ಇಷ್ಟೇಕೆ, "ಅವನು ಕಮಲೆಯನ್ನು ಮದುವೆಯಾಗಿರುವ ವಿಷಯವೂ ನಮಗೆ ಸರಿಯಾಗಿ ತಿಳಿಯದು. ಒಳ್ಳೆಯದು ಚಕ್ರವರ್ತಿ ಮಹಾಶಯ, ಕಮಲೆ ರಮೇಶನ ಹೆಂಡತಿ ಎನ್ನುವುದು ನಿಜವೆ? ತಂಗಿಯೋ ಅಥವಾ ಬೇರೆಯವಳೋ ನೆಂಟಳಿರಬಹುದೆ ಎಂದು ನಿಮ್ಮನ್ನು ಕೇಳುತ್ತೇನೆ" ಎಂದ.

ಚಕ್ರವರ್ತಿ "ನೀವು ಹೇಳುವುದೇನು ಅಕ್ಷಯಬಾಬು, ಹೆಂಡತಿಯಲ್ಲದೆ ಬೇರೇನು? ಇಂಥ ಮಹಾಲಕ್ಷ್ಮಿಯಂಥ ಹೆಂಡತಿ ಅದೆಷ್ಟು ಜನರ ಭಾಗ್ಯದಲ್ಲಿ ದೊರೆಯುವಳು" ಎಂದರು.

ಅಕ್ಷಯ, "ಆಶ್ಚರ್ಯವೇನೆಂದರೆ, ಹೆಂಡತಿ ಒಳ್ಳೆಯವಳಾದಷ್ಟೂ ಅವಳ ಅನಾದರಣೆಯೂ ಅತಿ ಹೆಚ್ಚಾಗುವುದು. ದೇವರು ಒಳ್ಳೆಯವರನ್ನೇ ಎಲ್ಲಕ್ಕೂ ಹೆಚ್ಚಿನ ಕಠಿಣ ಪರೀಕ್ಷೆಗೆ ಒಳಗಾಗಿಸುವನೆಂದು ತೋರುವುದು" ಎಂದ. ಹೀಗೆ ಹೇಳಿ ಅಕ್ಷಯ ಒಂದು ನಿಟ್ಟುಸಿರು ಬಿಟ್ಟ.

ಅನ್ನದಾ ತಮ್ಮ ವಿರಳವಾಗಿದ್ದ ಕೂದಲಿನೊಳಗೆ ಬೆರಳಾಡಿಸುತ್ತ ಹೇಳಿದರು, 'ಅತಿ ದುಃಖದ ಸಂಗತಿಯೆನ್ನುವುದರಲ್ಲಿ ಸಂದೇಹವಿಲ್ಲ, ಆದರೆ ಆಗಬೇಕಾದುದು ಆಗಿಹೋಯಿತು, ಇನ್ನು ವ್ಯರ್ಥವಾಗಿ ದುಃಖಿಸಿ ಫಲವೇನು".

"ಕಮಲೆ ಆತ್ಮಹತ್ಯೆ ಮಾಡಿಕೊಳ್ಳದೆ ಮನೆ ಬಿಟ್ಟು ಹೊರಟು ಹೋಗಿದ್ದರೂ ಹೋಗಿರಬಹುದೆಂದು ನನ್ನ ಮನಸ್ಸಿಗೆ ಸಂದೇಹವೇ ಆಯಿತು. ಆದರಿಂದ ಚಕ್ರವರ್ತಿ ಮಹಾಶಯರನ್ನು ಕರೆದುಕೊಂಡು ಕಾಶಿಯಲ್ಲಿ ಒಮ್ಮೆ ಹುಡುಕಿ ನೋಡೋಣ ಎಂದು ಬಂದೆ. ನಿಮಗೆ ಯಾವ ಸಂಗತಿಯೂ

ತಿಳಿದಿಲ್ಲ ಎನ್ನುವುದು ಸ್ಪಷ್ಟವಾಯಿತು. ಏನೇ ಆಗಲಿ ನಾಲ್ಕಾರು ದಿನ ಇಲ್ಲಿ ಹುಡುಕಿನೋಡುವುದು" ಎಂದ ಅಕ್ಷಯ.

ಅನ್ನದಾಬಾಬುಗಳು, "ರಮೇಶ ಈಗ ಇರುವುದೆಲ್ಲಿ?" ಎಂದು ಕೇಳಿದರು.

"ಅವನು ನಮಗೆ ಏನೂ ಹೇಳದೆ ಹೊರಟುಹೋಗಿರುವನು" ಎಂದರು ಚಿಕ್ಕಪ್ಪ.

ಅಕ್ಷಯ, "ನಾನವನನ್ನು ನೋಡಲಿಲ್ಲ, ಅವನು ಕಲ್ಕತ್ತೆಗೇ ಹೋದನೆಂದು ಜನ ಹೇಳಿ ಕೇಳಿದೆ. ಅಲೀಪುರದಲ್ಲಿ ಪ್ರಾಕ್ಟೀಸ್ ಮಾಡುವನೆಂದು ತೋರುವುದು. ಮನುಷ್ಯ ಅನಂತಕಾಲವನ್ನು ದುಃಖಿಸುತ್ತ ಕಳೆಯಲಾರ. ಅದರಲ್ಲೂ ಅವನಿಗೆ ಚಿಕ್ಕ ವಯಸ್ಸು. ಚಕ್ರವರ್ತಿ ಮಹಾಶಯ, ನಡೆಯಿರಿ, ಪಟ್ಟಣದಲ್ಲಿ ಒಮ್ಮೆ ಚೆನ್ನಾಗಿ ಹುಡುಕಿ ನೋಡೋಣ" ಎಂದು ಹೇಳಿದ.

"ಅಕ್ಷಯ, ನೀನು ಅಲ್ಲಿಗೆ ಬರುವೆಯಲ್ಲವೆ?" ಎಂದು ಅನ್ನದಾಬಾಬುಗಳು ವಿಚಾರಿಸಿದರು.

"ಖಂಡಿತವಾಗಿ ಹೇಳಲಾರೆ. ನನ್ನ ಮನಸ್ಸು ಬಹಳ ಕೆಟ್ಟುಹೋಗಿದೆ ಅನ್ನದಾಬಾಬು. ನಾನು ಕಾಶಿಯಲ್ಲಿರುವಷ್ಟು ದಿನವೂ ಈ ಹುಡುಕುವಿಕೆಯಲ್ಲೇ ಇರಬೇಕು. ಏಕೆಂದು ಕೇಳುವಿರೋ, ಕುಟುಂಬಸ್ಥರ ಹುಡುಗಿ. ಅವಳು ಮಾನಸಿಕ ವೇದನೆಯಿಂದ ಮನೆಬಿಟ್ಟು ಬಂದಿದ್ದರೂ ಈ ದಿನ ಯಾವ ಸಂಕಟದಲ್ಲಿರುವಳೋ! ರಮೇಶಬಾಬು ಸಂಪೂರ್ಣವಾಗಿ ನಿಶ್ಚಿಂತನಾಗಿರಬಲ್ಲ, ಆದರೆ ನಾನಿರಲಾರೆ" ಎಂದು ಅಕ್ಷಯ ನುಡಿದ.

ಚಿಕ್ಕಪ್ಪನನ್ನು ಕರೆದುಕೊಂಡು ಅಕ್ಷಯ ಹೊರಟುಹೋದ.

ಅನ್ನದಾಬಾಬು ಅತಿ ಉದ್ವಿಗ್ನತೆಯಿಂದ ಒಮ್ಮೆ ಹೇಮನಳಿನಿಯ ಮುಖ ದಿಟ್ಟಿಸಿ ನೋಡಿದರು. ಹೇಮನಳಿನಿ ಸರ್ವಪ್ರಯತ್ನದಿಂದ ತನ್ನನ್ನು ಅಡಗಿಸಿಟ್ಟುಕೊಂಡಿದ್ದಳು. ತನ್ನ ತಂದೆ ಮನದಲ್ಲೇ ತನ್ನ ವಿಷಯದಲ್ಲಿ ಶಂಕೆಯಿಂದಿರುವರೆಂದು ಅವಳು ಬಲ್ಲಳು.

ಹೇಮನಳಿನಿ, "ಅಪ್ಪಾ, ಈ ದಿನ ಡಾಕ್ಟರನ್ನು ಕರೆಸಿ ನಿಮ್ಮ ದೇಹವನ್ನು ಒಮ್ಮೆ ಪರೀಕ್ಷೆ ಮಾಡಿಸಬೇಕು. ಅಲ್ಪಸ್ವಲ್ಪಕ್ಕೆಲ್ಲಾ ನಿಮ್ಮ ಆರೋಗ್ಯ ಕೆಟ್ಟುಹೋಗುವುದು, ಇದಕ್ಕೆ ಏನಾದರೂ ಚಿಕಿತ್ಸೆ ಮಾಡಬೇಕು" ಎಂದಳು.

ಅನ್ನದಾಬಾಬುಗಳು ಮನದಲ್ಲೇ ನೆಮ್ಮದಿಯನ್ನು ಅನುಭವಿಸಲಾರಂಭಿಸಿದರು. ರಮೇಶನ ವಿಷಯವಾಗಿ ದೀರ್ಘಾಲೋಚನೆ ನಡೆದ ಮೇಲೂ ಹೇಮನಳಿನಿ ಅವರ ಅನಾರೋಗ್ಯದಿಂದ ಉದ್ವಿಗ್ನತೆ ತೋರ್ಪಡಿಸಿದ್ದಳು. ಇದರಿಂದ ಅವರ ಹೃದಯದೊಳಗಿನ ಒಂದು ಭಾರ ನೀಗಿದಂತಾಯಿತು. ಇತರ ಸಮಯಗಳಲ್ಲಾಗಿದ್ದರೆ ಅವರು ತಮ್ಮ ವ್ಯಾಧಿಯ ಮಾತು ಮರೆಮಾಚಲು ಪ್ರಯತ್ನಿಸುವರು—ಇಂದು, "ಅದೂ ಒಳ್ಳೆಯದೇ, ಹೇಗಾದರೂ ಶರೀರವನ್ನು ಒಮ್ಮೆ ಪರೀಕ್ಷೆಮಾಡಿಸಿದರಾಯಿತು. ಅದಕ್ಕಾಗಿ ಇಂದೇ ಅಲ್ಲದಿದ್ದರೂ ನಳಿನಾಕ್ಷನನ್ನು ಒಮ್ಮೆ ಕರೆಯ ಕಳುಹಿಸಬೇಕು, ಏನು" ಎಂದು ಹೇಳಿದರು.

ನಳಿನಾಕ್ಷನ ವಿಷಯದಲ್ಲಿ ಹೇಮನಳಿನಿ ತುಸು ಸಂಕೋಚಕ್ಕೆ ಸಿಕ್ಕಿಕೊಂಡಿರುವಳು, ತಂದೆಯ ಎದುರಿಗೆ ಅವನೊಡನೆ ಹಿಂದಿನಂತೆ ಸಹಜರೀತಿಯಲ್ಲಿ ಕಲೆಯುವುದು ಅವಳಿಗೆ ಕಷ್ಟವಾದೀತು, ಅದರಿಂದಲೇ ಅವಳು, "ಅದೇ ಉತ್ತಮ, ಅವರನ್ನು ಕರೆಯಲು ಜನರನ್ನು ಕಳುಹಿಸುವೆ" ಎಂದಳು

ಅನ್ನದಾಬಾಬು ಹೇಮಳ ಅವಿಚಲಿತಭಾವ ನೋಡಿ ಬಳಿಕ ಧೈರ್ಯಗೊಂಡು ಕೇಳಿದರು, "ಹೇಮ್, ರಮೇಶನ ಈ ಎಲ್ಲ ಕಾಂಡ . . .".

ಹೇಮನಳಿನಿ ತಕ್ಷಣ ಅದಕ್ಕೆ ಅಡ್ಡಿಪಡಿಸುತ್ತ ಹೇಳಿದಳು, "ಅಪ್ಪಾ, ಬಿಸಿಲಿನ ಕಾವು ಏರುತ್ತಿದೆ—ನಡೆಯಿರಿ, ಮನೆಯೊಳಕ್ಕೆ ಹೋಗೋಣ" ಹೀಗೆ ಹೇಳಿ ಅವರು ಬೇಡವೆನ್ನಲು ಅವಕಾಶಕೊಡದೆ ಕೈಹಿಡಿದು ಒಳಕ್ಕೆ ಕರೆದುಕೊಂಡು ಹೋದರು. ಅಲ್ಲಿ ಅವರನ್ನು ಆರಾಮ ಕುರ್ಚಿಯಲ್ಲಿ ಕುಳ್ಳಿರಿಸಿ ಅವರ ಮೈಮೇಲೆ ಚೆನ್ನಾಗಿ ಬೆಚ್ಚನೆಯ ಬಟ್ಟೆ ಹೊದಿಸಿ ಅವರ ಕೈಗೆ ಒಂದು ಸಮಾಚಾರ ಪತ್ರಿಕೆ ಕೊಟ್ಟಳು ಮತ್ತು ಕನ್ನಡಕದ ಗೂಡಿನಿಂದ ಕನ್ನಡಕ ಹೊರತೆಗೆದು ತಾನೇ ಅವರ ಕಣ್ಣಿಗೆ ಹಾಕಿ, "ಪತ್ರಿಕೆ ಓದಿ, ನಾನೂ ಬಂದು ಬಿಡುವೆ" ಎಂದಳು.

ಅನ್ನದಾಬಾಬು ಒಳ್ಳೆಯ ಹುಡುಗನಂತೆ ಹೇಮನಳಿನಿಯ ಅಪ್ಪಣೆ ನೆರವೇರಿಸಲು ಪ್ರಯತ್ನಿಸಿದರು, ಆದರೆ ಯಾವ ಬಗೆಯಲ್ಲೂ ಮನಸ್ಸು ಕೊಡಲಾಗಲಿಲ್ಲ. ಹೇಮನಳಿನಿಯ ವಿಷಯವಾಗಿ ಅವರ ಮನಸ್ಸು ತಳಮಳಿಸುತ್ತಿತ್ತು. ಕಡೆಗೊಮ್ಮೆ ಪತ್ರಿಕೆ ಕೆಳಗಿಟ್ಟು ಹೇಮಳನ್ನು ನೋಡಲು ಹೊರಟರು. ನೋಡಿದರೆ ಆ ಬೆಳಗಿನಲ್ಲಿ ಹೊತ್ತಲ್ಲದ ಹೊತ್ತಿನಲ್ಲಿ ಕೊಠಡಿಯ ಬಾಗಿಲು ಮುಚ್ಚಿತ್ತು.

ಏನೂ ಹೇಳದೆ ಅನ್ನದಾಬಾಬು ವರಾಂಡದಲ್ಲಿ ಅತ್ತಿಂದಿತ್ತ ಹೆಜ್ಜೆಹಾಕ ತೊಡಗಿದರು. ಬಹಳ ಹೊತ್ತಿನ ಬಳಿಕ ಮತ್ತೊಮ್ಮೆ ಹೇಮನಳಿನಿಯನ್ನು ನೋಡಲು ಹೋದರು. ಆಗಲೂ ಅವಳ ಕೊಠಡಿ ಮುಚ್ಚಿತ್ತು. ಆಗ ಬಳಲಿದ್ದ ಅನ್ನದಾಬಾಬುಗಳು ದೊಪ್ಪನೆ ತಮ್ಮ ಕುರ್ಚಿಯ ಮೇಲೆ ಕುಳಿತು ಮೆಲ್ಲಮೆಲ್ಲನೆ ತಲೆಗೂದಲನ್ನು ಕೈಯಿಂದ ಸವರಿ ಸಿಕ್ಕುಬಿಡಿಸತೊಡಗಿದರು.

ನಳಿನಾಕ್ಷ ಬಂದು ಅನ್ನದಾಬಾಬುಗಳನ್ನು ಪರೀಕ್ಷಿಸಿನೋಡಿದ ಮತ್ತು ಹೇಳಲೇಬೇಕಾದುದನ್ನೂ ಹೇಳಿದ, "ಅನ್ನದಾಬಾಬುಗಳ ಮನಸ್ಸಿನಲ್ಲಿ ವಿಶೇಷ ಚಿಂತೆಯೇನಾದರೂ ಇರುವುದೇ" ಎಂದು ಹೇಮನಳಿನಿಯನ್ನು ವಿಚಾರಿಸಿದ. "ಇರಬಹುದು" ಎಂದಳು ಹೇಮ.

"ಹಾಗಿದ್ದರೆ ಅವರ ಮನಸ್ಸಿಗೆ ಸಂಪೂರ್ಣ ವಿಶ್ರಾಂತಿ ಆವಶ್ಯಕ; ನಮ್ಮ ತಾಯಿಯ ವಿಷಯದಲ್ಲೂ ಇದೇ ತೊಂದರೆಯಿದೆ—ಅವರು ಅಲ್ಪಸ್ವಲ್ಪಕ್ಕೆಲ್ಲ ಎಷ್ಟು ವ್ಯಥೆಪಡುವರೆಂದರೆ ಅವರ ಆರೋಗ್ಯ ನೆಟ್ಟಗಿರುವುದೇ ಕಷ್ಟವಾಗುವುದು. ಯಾವುದೋ ಒಂದು ಸಾಮಾನ್ಯ ಯೋಚನೆಯಿಂದ ನಿನ್ನೆ ರಾತ್ರಿಯೆಲ್ಲ ಅವರು ನಿದ್ದೆಮಾಡಲಾಗಲಿಲ್ಲ. ಅವರು ಸ್ವಲ್ಪವೂ ಕಳವಳಗೊಳ್ಳದಂತೆ ನಾನು ಪ್ರಯತ್ನಿಸುವೆ, ಆದರೂ ಜಗತ್ತಿನಲ್ಲಿರುವವರೆಗೂ ಅದು ಎಂದೆಂದಿಗೂ ಸಾಧ್ಯವಾಗಲಾರದು" ಎಂದು ನಳಿನಾಕ್ಷ ಹೇಳಿದ.

ಹೇಮನಳಿನಿ, "ನೀವು ಕೂಡ ಇಂದು ಅಷ್ಟು ಆರೋಗ್ಯವಾಗಿರುವಂತೆ ಕಾಣುವುದಿಲ್ಲ" ಎಂದಳು.

ನಳಿನಾಕ್ಷ—ಇಲ್ಲ, ನಾನು ಚೆನ್ನಾಗಿಯೇ ಇರುವೆ. ಅನಾರೋಗ್ಯ ನನಗೆ ಅಭ್ಯಾಸವೇ ಇಲ್ಲ. ನಿನ್ನೆ ರಾತ್ರಿ ಸ್ವಲ್ಪ ಎಚ್ಚರವಾಗಿದ್ದೆನೆಂದು ಹೇಳಿ ಈ ದಿನ ಆರೋಗ್ಯವಂತನಂತೆ ಕಾಣುವುದಿಲ್ಲವೆ ?

ಹೇಮನಳಿನಿ—ನಿಮ್ಮ ತಾಯಿಯ ಸೇವೆ ಮಾಡಲು ಯಾವಾಗಲೂ ಹೆಂಗಸೊಬ್ಬಳು ಅವರ ಬಳಿಯಲ್ಲಿದ್ದರೆ ಒಳ್ಳೆಯದೆಂದು ತೋರುವುದು. ನೀವು ಒಬ್ಬಂಟಿಗರು, ನಿಮಗೆ ಕೆಲಸ ಕಾರ್ಯ ಇರುವುದು ಹೇಗೆ ತಾನೆ ಅವರ ಶುಶ್ರೂಷೆ ಮಾಡಲು ಸಾಧ್ಯ !

ಈ ಮಾತನ್ನು ಹೇಮನಳಿನಿ ಸಹಜ ಭಾವದಲ್ಲೇ ಹೇಳಿರುವಳು, ಸಂಗತಿಯೂ ಯುಕ್ತವಾದುದು—ಎಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ—ಆದರೆ ಹೇಳಿದ ಕೂಡಲೇ ಅವಳನ್ನು ನಾಚಿಕೆ ಆಕ್ರಮಿಸಿತು. ಅವಳ

ಮುಖ ಕೆಂಪೇರಿತು—ಇದ್ದಕ್ಕಿದ್ದಂತೆ ಅವಳಿಗೆ, ನಳಿನಾಕ್ಷಬಾಬು ಏನಾದರೂ ತಿಳಿದುಕೊಳ್ಳಬಹುದು ಎಂದೆನಿಸಿತು. ಆಕಸ್ಮಿಕವಾಗಿ ಹೇಮನಳಿನಿಗೆ ಲಜ್ಜೆಯುಂಟಾದುದನ್ನು ಕಂಡು ನಳಿನಾಕ್ಷನಿಗೂ ತನ್ನ ತಾಯಿ ಪ್ರಸ್ತಾಪಿಸಿದ್ದ ಸಂಗತಿ ನೆನಪಾಗದಿರಲಿಲ್ಲ.

ಕೂಡಲೇ ಹೇಮನಳಿನಿ ಸವರಿಸಿಕೊಂಡು, "ಅವರ ಸೇವೆಗಾಗಿ ಸೇವಕಿಯೊಬ್ಬಳನ್ನು ಇಟ್ಟರೆ ಉತ್ತಮವಲ್ಲವೆ" ಎಂದಳು.

ನಳಿನಾಕ್ಷ ಹೇಳಿದ, "ಎಷ್ಟೆಷ್ಟೋ ಪ್ರಯತ್ನಿಸಿದೆ. ಅಮ್ಮ ಯಾವುದಕ್ಕೂ ಒಪ್ಪಲಿಲ್ಲ. ಆಕೆ ಶುದ್ಧಾಚಾರದ ವಿಷಯದಲ್ಲಿ ಬಹಳ ವಾದ ವಿವಾದ ನಡೆಸಿ ಸಂಬಳಕ್ಕಾಗಿ ಕೆಲಸಮಾಡುವವರ ಮೇಲೆ ತನಗೆ ನಂಬಿಕೆ ಇಲ್ಲವೆಂದರು. ಅಷ್ಟೇ ಅಲ್ಲ, ಯಾರಾದರೂ ಮುಂದೆ ಬಂದು ಅವರ ಸೇವೆ ಮಾಡಿದರೂ ಅದನ್ನು ಸಹಿಸಲಾರದಂಥ ಸ್ವಭಾವ ಅವರದು.

ಇದಾದ ಬಳಿಕ ಈ ವಿಷಯದಲ್ಲಿ ಹೇಮನಳಿನಿ ಯಾವ ಮಾತೂ ಆಡಲಿಲ್ಲ. ಅವಳು ಕ್ಷಣಕಾಲ ಸುಮ್ಮನಿದ್ದು, "ನಿಮ್ಮ ಉಪದೇಶದಂತೆ ನಡೆಯುತ್ತ ನಡೆಯುತ್ತ ನಡುನಡುವೆ ಆಗಾಗ ವಿಘ್ನಬಂದೊದಗುವುದು, ಈಗ ನಾನು ಹಿಂದೆ ಬಿದ್ದಿರುವೆ. ನನ್ನ ಯಾವ ಆಸೆಯೂ ಇಲ್ಲವೆನ್ನುವಂತೆ ನನಗೆ ಹೆದರಿಕೆಯಾಗುವುದು. ಎಂದಾದರೊಂದು ದಿನ ನನ್ನ ಮನಸ್ಸಿಗೆ ಒಂದು ನೆಮ್ಮದಿ ಉಂಟಾಗುವುದಿಲ್ಲವೇನು—ನಾನು ಕೇವಲ ಹೊರಗಿನ ಪೆಟ್ಟನಿಂದಲೇ ಅಸ್ಥಿರಳಾಗಿ ತಿರುಗಾಡಬೇಕೇನು?" ಎಂದು ಕೇಳಿದಳು.

ಹೇಮನಳಿನಿಯ ಈ ಕಾತುರ ಕೋರಿಕೆಯಿಂದ ನಳಿನಾಕ್ಷ ಸ್ವಲ್ಪ ಆಲೋಚಿಸಿ ಹೇಳಿದ, "ನೋಡಿ, ವಿಘ್ನ ನಮ್ಮ ಹೃದಯದ ಸಮಸ್ತ ಶಕ್ತಿಯನ್ನೂ ಜಾಗೃತಗೊಳಿಸುವುದಕ್ಕಾಗಿಯೇ ಒದಗುವುದು. ನೀವು ನಿರಾಶರಾಗಬೇಡಿ".

"ನಾಳೆ ಬೆಳಿಗ್ಗೆ ಒಮ್ಮೆ ನೀವು ಬರುವಿರಾ? ನಿಮ್ಮ ಸಹಾಯವಿದ್ದರೆ ನಾನು ಹೆಚ್ಚು ಬಲ ಪಡೆಯುವೆ" ಎಂದಳು ಹೇಮನಳಿನಿ.

ನಳಿನಾಕ್ಷನ ಮುಖದಲ್ಲೂ ಧ್ವನಿಯಲ್ಲೂ ಇರುವ ಶಾಂತ ಭಾವದಲ್ಲಿ ಹೇಮನಳಿನಿ ಅಷ್ಟಿಷ್ಟು ಆಶ್ರಯ ಪಡೆಯುವಳು. ನಳಿನಾಕ್ಷ ಹೊರಟುಹೋದ, ಆದರೆ ಹೇಮನಳಿನಿಯ ಮನಸ್ಸಿನಲ್ಲಿ ಒಂದು ಸಹಾನುಭೂತಿಯ ಸ್ಪರ್ಶವಿಟ್ಟು ಹೋಗಿದ್ದ. ಅವಳು ತನ್ನ ಮಲಗುವ ಮನೆಯ ಮುಂದಿನ ವರಾಂಡದಲ್ಲಿ

ನಿಂತು ಒಮ್ಮೆ ತಣ್ಣನೆಯ ಬಿಸಿಲ ಪ್ರಕಾಶದಿಂದ ಕೂಡಿದ್ದ ಹೊರಭಾಗವನ್ನು ನಿಟ್ಟಿಸಿದಳು. ಅವಳ ನಾಲ್ಕೂಕಡೆ ವಿಶ್ವಪ್ರಕೃತಿಯ ನಡುವೆ ಆ ರಮಣೀಯ ಮಧ್ಯಾಹ್ನದಲ್ಲಿ ದುಡಿಮೆಯೊಡನೆ ಬಿಡುವು, ಶಕ್ತಿಯೊಡನೆ ಶಾಂತಿ, ಕೆಲಸ ದೊಡನೆ ವೈರಾಗ್ಯ ಒಟ್ಟುಗೂಡಿ ಹೊಳೆಯುತ್ತಿತ್ತು, ಆ ಅದ್ಭುತ ಭಾವದ ಮಡಿಲಲ್ಲಿ ಅವಳು ತನ್ನ ನೊಂದ ಹೃದಯವನ್ನು ಸವರ್ಪಿಸಿದಳು—ಆಗಿನ ಸೂರ್ಯನ ಬೆಳಕೂ ವಿಶಾಲವಾಗಿ ಪ್ರಕಾಶಿಸುತ್ತಿದ್ದ ನೀಲಗಗನವೂ ಅವಳ ಅಂತಃಕರಣದಲ್ಲಿ ಜಗತ್ತಿನ ನಿತ್ಯ-ಉಚ್ಚಾರಿತ ಸುಗಭೀರ ಆಶೀರ್ವಚನವನ್ನು ಪ್ರೇರೇಪಿಸುವ ಅವಕಾಶ ಪಡೆಯಿತು.

ಹೇಮನಳಿನಿ ನಳಿನಾಕ್ಷನ ತಾಯಿಯ ವಿಷಯವನ್ನು ಆಲೋಚಿಸ ತೊಡಗಿದಳು. ಆಕೆಯನ್ನು ವ್ಯಾಪಿಸಿಕೊಂಡಿರುವ ಚಿಂತೆ ಯಾವುದು, ಆಕೆ ಯಾವಕಾರಣದಿಂದ ರಾತ್ರಿ ನಿದ್ದೆಮಾಡಲಿಲ್ಲ ಎಂಬುದನ್ನು ಹೇಮನಳಿನಿ ಅರಿತುಕೊಂಡಳು ನಳಿನಾಕ್ಷನೊಡನೆ ಅವಳ ಮದುವೆ-ಪ್ರಸ್ತಾಪದ ಮೊದಲ ಪೆಟ್ಟಿಗೆ ಮೊದಲ ಸಂಕೋಚವೂ ಬಿಟ್ಟುಹೋಯಿತು. ನಳಿನಾಕ್ಷನ ವಿಷಯದಲ್ಲಿ ಹೇಮನಳಿನಿಗಿದ್ದ ಅಂತರಂಗ ಅಚಲ ಭಕ್ತಿ ಕ್ರಮೇಣ ಅಭಿವೃದ್ಧಿಯಾಯಿತು, ಆದರೆ ಇದರಲ್ಲಿ ಪ್ರೀತಿಯ ವಿದ್ಯುತ್ ಸಂಚಾರದ ವೇದನೆಯಿಲ್ಲ-- ಅದು ಇರಲೇ ಇಲ್ಲ. ಆ ಆತ್ಮಗೌರವದ ನಳಿನಾಕ್ಷ ಹೆಂಗಸೊಬ್ಬಳ ಪ್ರೀತಿಯನ್ನು ಅಪೇಕ್ಷಿಸುತಿರುವನು ಎಂಬ ಭಾವನೆಯೇ ಇರಲಿಲ್ಲ. ಆದರೂ ಎಲ್ಲರಿಗೂ ಸೇವೆಯ ಅಗತ್ಯ ಇದ್ದೇ ಇರುವುದು. ನಳಿನಾಕ್ಷನನ್ನು ನೋಡಿಕೊಳ್ಳುವವರು ಯಾರು! ಈ ಜಗತ್ತಿನಲ್ಲಿ ನಳಿನಾಕ್ಷನ ಜೀವನ ಅನಾದರಕ್ಕೆಯೋಗ್ಯವಾದುದಲ್ಲ ಇಂಥ ಜನರ ಸೇವೆ ಭಕ್ತಿಯ ಸೇವೆಯೇ ಆಗಬೇಕು

ಇಂದು ಬೆಳಿಗ್ಗೆ ಹೇಮನಳಿನಿ ಕೇಳಿದ್ದ ರಮೇಶನ ಜೀವನವೃಂತಾತದ ಒಂದಂಶದಿಂದ ಅವಳ ಹೃದಯದನಡುವೆ ಒಂದು ಬಲವಾದ ಆಘಾತವುಂಟಾಗಿತ್ತು. ಈ ಸಹಿಸಲಾರದ ಏಟಿನಿಂದ ಆತ್ಮರಕ್ಷಣೆ ಮಾಡಿಕೊಳ್ಳಲು ಅವಳ ಸ್ಥಿತಿ ಹೇಗಾಗಿರುವುದೆಂದರೆ ರಮೇಶನಿಗಾಗಿ ದುಃಖಪಡುವುದೂ ಅವಳಿಗೆ ನಾಚಿಕೆಯ ಮಾತಾಗಿರುವುದು ಅವಳು ರಮೇಶನ ವಿಚಾರಣೆ ನಡೆಸಿ ತಪ್ಪಿತಸ್ಥನೆಂದು ತೀರ್ಮಾನಿಸಲಾರಳು. ಪೃಥ್ವಿಯಲ್ಲಿ ಅದೆಷ್ಟುಮಂದಿ ಅದೆಷ್ಟು ಒಳ್ಳೆಯ-ಕೆಟ್ಟಕೆಲಸಗಳಲ್ಲಿ ಮಗ್ನರಾಗಿರುವರು, ಜಗತ್ತು ನಡೆಯುತ್ತಿರುವುದು - ಹೇಮನಳಿನಿ ಇವನ್ನೆಲ್ಲಾ ಯೋಚಿಸಲೇ ಇಲ್ಲ. ರಮೇಶನ ವಿಷಯ

ಜ್ಞಾಪಿಸಿಕೊಳ್ಳುವುದಕ್ಕೂ ಇಷ್ಟಪಡಲಿಲ್ಲ. ಆಗಾಗ ಆತ್ಮಘಾತಿನಿ ಕಮಲೆಯ ವಿಷಯ ನೆನೆಸಿಕೊಂಡಂತೆಲ್ಲ ಅವಳ ಮೈ ನವಿರೇಳುವುದು—ಈ ಹತಭಾಗಿನಿಯ ಆತ್ಮಹತ್ಯೆಯೊಡನೆ ನನ್ನದೇನಾದರೂ ಸಂಬಂಧ ಇರುವುದೋ? ಎಂದವಳ ಮನಸ್ಸಿಗೆ ತೋರಿತು. ಆಗ ನಾಚಿಕೆಯಿಂದ, ತಿರಸ್ಕಾರದಿಂದ, ಕರುಣೆಯಿಂದ, ಅವಳ ಮನಸ್ಸೆಲ್ಲಾ ಕಡೆದಂತಾಗುವುದು. ಅವಳು ಕೈ ಮುಗಿಯುತ್ತ ಹೇಳಿದಳು "ಓ ದೇವರೇ, ನಾನು ತಪ್ಪುಮಾಡಿಲ್ಲ. ನಾನು ಹೇಗೆ ಇದರಲ್ಲಿ ಸಿಕ್ಕಿಬಿದ್ದೆ. ನನ್ನ ಈ ಬಂಧನ ಬಿಡಿಸು. ಒಂದೇಸಲಕ್ಕೆ ಕತ್ತರಿಸಿ ಹಾಕು. ನನಗೆ ಬೇರೆ ಯಾವುದೂ ಬೇಕಿಲ್ಲ. ನನ್ನನ್ನು ನಿನ್ನ ಈ ಜಗತ್ತಿನಲ್ಲಿ ಸಹಜ ಭಾವದಿಂದ ಬದುಕಿರುವಂತೆ ಮಾಡು".

ರಮೇಶ ಮತ್ತು ಕಮಲೆಯ ಸಂಗತಿ ಕೇಳಿ ಹೇಮನಳಿನಿಯ ಮನಸ್ಸಿಗೆ ಹೇಗಾಯಿತೋ ಏನೋ, ಎಂದು ತಿಳಿಯಲು ಅನ್ನದಾಬಾಬುಗಳು ಕುತೂಹಲದಿಂದಿದ್ದರು—ಆದರೂ ವಿಷಯವನ್ನು ಸ್ಪಷ್ಟವಾಗಿ ಕೇಳಲು ಅವರಿಗೆ ಧೈರ್ಯ ಬರಲಿಲ್ಲ. ಹೇಮನಳಿನಿ ವರಾಂಡದಲ್ಲಿ ತೆಪ್ಪನೆಕುಳಿತು ಕಸೂತಿಹಾಕುತ್ತಿದ್ದಳು, ಅಲ್ಲಿಗೆ ಒಮ್ಮೊಮ್ಮೆ ಹೋಗಿ ಹೇಮನಳಿನಿಯ ಚಿಂತಿತ ಮುಖ ನೋಡಿ ಅವರು ಹಿಂದಿರುಗಿ ಬರುವರು.

ಸಂಜೆಯಲ್ಲಿ ಡಾಕ್ಟರ್ ಉಪದೇಶದಂತೆ ಅನ್ನದಾಬಾಬುಗಳಿಗೆ ಜೀರ್ಣ ಶಕ್ತಿ ಹೆಚ್ಚಿಸುವ ಚೂರ್ಣಬೆರೆಸಿದ ಹಾಲು ಕುಡಿಯಲು ಕೊಟ್ಟು ಹೇಮನಳಿನಿ ಅವರಬಳಿ ಕುಳಿತಳು

"ದೀಪವನ್ನು ಕಣ್ಣಿಗೆ ಮರೆಮಾಡು" ಎಂದರು ಅನ್ನದಾಬಾಬುಗಳು, ಕೋಣೆ ಸ್ವಲ್ಪ ಕತ್ತಲಾಗುತ್ತಲೇ ಅನ್ನದಾಬಾಬು ಹೇಳಿದರು, "ಬೆಳಿಗ್ಗೆ ಬಂದಿದ್ದ ಮುದುಕರನ್ನು ನೋಡಿದರೆ ಬಹಳ ಸರಳಸ್ವಭಾವದವರಂತೆ ಕಾಣುವರು".

ಹೇಮನಳಿನಿ ಈ ಮಾತಿಗೆ ಯಾವ ಉತ್ತರವನ್ನೂ ಹೇಳಲಿಲ್ಲ—ಸುಮ್ಮನಿದ್ದಳು. ಪುನಃ ಅನ್ನದಾಬಾಬುಗಳಿಂದ ಹೆಚ್ಚಿನಪೀಠಿಕೆ ಹೇಳಲಾಗಲಿಲ್ಲ ಅವರು ಹೇಳಿದರು, "ರಮೇಶನ ವ್ಯವಹಾರ ಕೇಳಿ ನನಗೆ ಆಶ್ಚರ್ಯವಾಯಿತು, ಜನ ಅವನ ವಿಷಯವಾಗಿ ಏನೇನೋ ಹೇಳುವರು,—ನಾನು ಇಂದಿನವರೆಗೆ ಅದನ್ನು ನಂಬಿರಲಿಲ್ಲ—ಆದರೆ . . ."

ಹೇಮನಳಿನಿ ಕಾತರ ಧ್ವನಿಯಿಂದ, "ಅಪ್ಪಾ, ಆ ವಿಷಯದ ಚರ್ಚೆ ಬೇಡ" ಎಂದಳು.

"ಅಮ್ಮಾ, ಚರ್ಚೆಮಾಡುವ ಇಷ್ಟವೇ ಇಲ್ಲ. ಆದರೆ ವಿಧಿವಶದಿಂಡ ಆಕಸ್ಮಿಕವಾಗಿ ಒಬ್ಬೊಬ್ಬರೊಡನೆ ನಮ್ಮ ಸುಖದುಃಖಗಳನ್ನು ತೋಡಿಕೊಳ್ಳ ಬೇಕಾಗುವುದು, ಆಗ ಅಂಥವರ ಯಾವ ಆಚರಣೆಯನ್ನೂ ಕಡೆಗಣಿಸು ವಂತಿಲ್ಲ" ಎಂದರು ಅನ್ನದಾಬಾಬುಗಳು.

ಹೇಮನಳಿನಿ ಉದ್ರೇಕದಿಂದ ಹೇಳಿದಳು, "ಇಲ್ಲ ಇಲ್ಲ, ಸುಖದುಃಖದ ಬಂಧನವನ್ನು ಈರೀತಿ ಅಲ್ಲಿ–ಇಲ್ಲಿ ಏಕೆ ಹಂಚಿಕೊಳ್ಳಬೇಕು. ಅಪ್ಪಾ, ನಾನು ನೆಮ್ಮದಿಯಿಂದಿರುವೆ—ನನಗಾಗಿ ವ್ಯರ್ಥವಾಗಿ ಕಳವಳಿಸುತ್ತ ನನ್ನನ್ನು ನಾಚಿಕೆಗೆ ಗುರಿಪಡಿಸಬೇಡಿ" ಎಂದಳು.

ಅನ್ನದಾಬಾಬುಗಳು ಹೇಳಿದರು, "ಅಮ್ಮ ಹೇಮ್, ನನಗೆ ವಯ ಸ್ಸಾಯಿತು, ಈಗ ನಿನಗೆ ಒಂದು ಸ್ಥಿತಿ ಏರ್ಪಡಿಸದೆ ನನ್ನ ಮನಸ್ಸಿಗೆ ನೆಮ್ಮದಿ ಇರದು. ನಿನ್ನನ್ನು ಹೀಗೆ ತಪಸ್ವಿನಿಯಂತೆ ಬಿಟ್ಟು ನಾನು ಹೋಗಲೇ".

ಹೇಮನಳಿನಿ ಮಾತಿಲ್ಲದೆ ಕುಳಿತಿದ್ದಳು. ಅನ್ನದಾಬಾಬುಗಳು, "ನೋಡು ತಾಯಿ, ಜಗತ್ತಿನಲ್ಲಿ ಯಾವುದೋ ಒಂದು ಆಸೆ ಮಣ್ಣುಪಾಲಾ ಯಿತೆಂದು ಇತರ ಎಲ್ಲ ಬೆಲೆಬಾಳುವ ಸಾಮಗ್ರಿಗಳನ್ನೂ ತಿರಸ್ಕರಿಸಬೇಕೆಂದಿಲ್ಲ. ನಿನ್ನ ಜೀವನ ಯಾವುದರಿಂದ ಸಂತೋಷಗೊಳ್ಳುವುದು, ಸಾರ್ಥಕಗೊಳ್ಳುವುದು ಎಂದು ಇಂದಿನ ಮನಕ್ಷೋಭೆಯಲ್ಲಿ ನೀನು ತಿಳಿದುಕೊಳ್ಳಲಾರೆ—ಆದರೆ ನಾನು ಯಾವಾಗಲೂ ನಿನ್ನ ಶುಭಚಿಂತನೆಯನ್ನೇ ಮಾಡುವೆ—ನಿನ್ನ ಸುಖ ಯಾವುದರಲ್ಲಿ, ಮಂಗಳ ಯಾವುದರಲ್ಲಿ ಎಂದು ನಾನು ಬಲ್ಲೆ, ನನ್ನ ಮಾತನ್ನು ಸಂಪೂರ್ಣವಾಗಿ ತಿರಸ್ಕರಿಸಬೇಡ" ಎಂದರು.

ಹೇಮನಳಿನಿಯ ಎರಡು ಕಣ್ಣುಗಳೂ ಜಳಜಳನೆ ತುಂಬಿಬಂದವು, "ಇಂಥ ಮಾತು ಹೇಳಬೇಡಿ, ನಾನು ನಿಮ್ಮ ಯಾವ ಮಾತನ್ನೂ ತಿರಸ್ಕರಿಸಿಸು ವುದಿಲ್ಲ. ನೀವು ಹೇಳಿದಂತೆ ನಾನು ಖಂಡಿತ ನಡೆದುಕೊಳ್ಳುವೆ, ಕೇವಲ ಒಂದೇ ಒಂದು ಬಾರಿ ಅಂತಃಕರಣವನ್ನು ಪರಿಷ್ಕಾರಮಾಡಿಕೊಂಡು ಒಮ್ಮೆ ಸರಿಯಾಗಿ ಸಿದ್ಧವಾಗಬೇಕು" ಎಂದಳು.

ಅನ್ನದಾಬಾಬು ಆ ಅಂಧಕಾರದಲ್ಲಿ ಒಮ್ಮೆ ಹೇಮನಳಿನಿಯ ಕಣ್ಣೀರಿನಿಂದ

ತೋಯ್ದ ಮುಖವನ್ನು ಸವರುತ್ತ ಅವಳ ತಲೆಯ ಮೇಲೆ ಕೈಯಿಟ್ಟರು. ಇನ್ನಾವಮಾತನ್ನೂ ಹೇಳಲಿಲ್ಲ.

ಮರುದಿನಬೆಳಿಗ್ಗೆ ಅನ್ನದಾಬಾಬುಗಳು ಹೇಮನಳಿನಿಯೊಡನೆ ಹೊರಗಡೆ ಮರದಡಿಯಲ್ಲಿ ಚಹ ಕುಡಿಯಲು ಕುಳಿತಿದ್ದರು, ಆ ವೇಳೆಗೆ ಅಕ್ಷಯ ಬಂದು ಸೇರಿದ. ಅನ್ನದಾಬಾಬು ಮೂಕ ಪ್ರಶ್ನೆಯಿಂದ ಅವನ ಮುಖ ನೋಡಿದರು. "ಇಲ್ಲಿ ಯಾವ ಸುದ್ದಿಯೂ ಗೊತ್ತಾಗಲಿಲ್ಲ" ಎಂದ ಅಕ್ಷಯ. ಹೀಗೆ ಹೇಳಿ ಒಂದು ಬಟ್ಟಲು ಚಹ ತೆಗೆದುಕೊಳ್ಳುತ್ತ ಅವನು ಅಲ್ಲಿಯೇ ಕುಳಿತ.

ಮೆಲ್ಲಮೆಲ್ಲನೆ ಮಾತಿಗೆ ಆರಂಭಿಸಿದ, "ರಮೇಶಬಾಬು ಮತ್ತು ಕಮಲೆಯ ಸಾಮಗ್ರಿಗಳು ಅಷ್ಟಿಷ್ಟು ಚಕ್ರವರ್ತಿ ಮಹಾಶಯರಹತ್ತಿರ ಉಳಿದುಹೋಗಿದೆ, ಅದನ್ನು ಅವರು ಎಲ್ಲಿ ಯಾರಿಗೆ ಕಳುಹಿಸಬೇಕೆಂದು ಯೋಚಿಸುತಿರುವರು. ರಮೇಶಬಾಬು ಖಂಡಿತ ನಿಮ್ಮ ವಿಳಾಸ ತಿಳಿದುಕೊಂಡು ಶೀಘ್ರದಲ್ಲೇ ಇಲ್ಲಿಗೆ ಬರುವನು, ಆದರಿಂದಲೇ ನಿಮ್ಮ ಹತ್ತಿರ . . . "

ಅನ್ನದಾಬಾಬು ಹಠಾತ್ತನೆ ಬಹಳ ಕೋಪಿಸಿಕೊಂಡು ಹೇಳಿದರು, "ಅಕ್ಷಯ, ನಿನಗೆ ಸ್ವಲ್ಪವೂ ತಿಳುವಳಿಕೆಯೇ ಇಲ್ಲ. ರಮೇಶ ನಮ್ಮಲ್ಲಿಗೆ ಏತಕ್ಕಾಗಿ ಬರುವನು ಅವನ ಸಾಮಾನುಗಳನ್ನು ನಾವುಗಳೇ ಏತಕ್ಕೆ ಇಟ್ಟುಕೊಳ್ಳಬೇಕು".

"ಏನೇ ಆಗಲಿ, ಅನ್ಯಾಯವನ್ನೇ ಮಾಡಿರಲಿ ಅಥವಾ ತಪ್ಪನ್ನೇ ಮಾಡಿರಲಿ, ರಮೇಶಬಾಬು ಈಗ ಖಂಡಿತ ಪಶ್ಚಾತ್ತಾಪ ಪಡುವನು, ಈ ವೇಳೆಯಲ್ಲಿ ಅವನನ್ನು ಸಂತೈಸುವುದು ಅವನ ಹಿಂದಿನ ಗೆಳೆಯರ ಕರ್ತವ್ಯವಲ್ಲವೇನು? ಅವನನ್ನು ಸಂಪೂರ್ಣವಾಗಿ ಪರಿತ್ಯಾಗ ಮಾಡಬೇಕೇನು?" ಎಂದ ಅಕ್ಷಯ.

ಅನ್ನದಾಬಾಬುಗಳು, "ಅಕ್ಷಯ, ನೀನು ಸುಮ್ಮನೆ ನನ್ನನ್ನು ಕಾಡಬೇಕೆಂದು ಈ ಮಾತನ್ನೇ ಬಾರಿಬಾರಿಗೂ ಚರ್ಚಿಮಾಡುವೆ, ನಾನು ನಿನಗೆ ಮುಖ್ಯವಾಗಿ ಹೇಳುವುದಿಷ್ಟೆ, ನಮ್ಮ ಹತ್ತಿರ ನೀನು ಈ ವಿಷಯವನ್ನು ಎಂದೆಂದಿಗೂ ಎತ್ತಬೇಡ" ಎಂದರು.

ಹೇಮನಳಿನಿ ಸ್ನಿಗ್ಧಸ್ವರದಿಂದ ಹೇಳಿದಳು, "ಅಪ್ಪಾ, ನೀವು ಕೋಪಿಸಿಕೊಳ್ಳಬೇಡಿ, ನಿಮ್ಮ ಆರೋಗ್ಯ ಕೆಟ್ಟುಹೋಗುವುದು—ಅಕ್ಷಯಬಾಬು ಹೇಳಬೇಕೆಂದಿರುವುದನ್ನೆಲ್ಲ ಹೇಳಲಿ, ಅದರಿಂದ ತೊಂದರೆಯೇನು".

ಅಕ್ಷಯ "ಇಲ್ಲ ಇಲ್ಲ, ನನ್ನನ್ನು ಕ್ಷಮಿಸಬೇಕು, ನನಗೆ ಸರಿಯಾಗಿ ತಿಳಿದಿರಲಿಲ್ಲ" ಎಂದು ಹೇಳಿದ.

೫೪

ಮುಕುಂದಬಾಬು ಆಳುಕಾಳುಗಳೊಡನೆ ಕಾಶಿ ಬಿಟ್ಟು ಮೀರತ್ತಿಗೆ ಹೋಗುವುದೆಂದು ನಿಶ್ಚಯವಾಯಿತು. ಸಾಮಾನುಗಳನ್ನೆಲ್ಲಾ ಕಟ್ಟಿದ್ದಾಯಿತು. ನಾಳೆ ಬೆಳಗ್ಗೆಯೇ ಹೊರಡಬೇಕು. ಇಷ್ಟರಲ್ಲಿ ಅವರ ಪ್ರಯಾಣ ನಿಂತು ಹೋಗುವಂಥ ಒಂದು ಘಟನೆ ನಡೆಯುವುದೆಂದು ಕಮಲ ವ್ಯರ್ಥವಾಗಿ ಆಶಿಸಿದ್ದಳು. ನಳಿನಾಕ್ಷ ಡಾಕ್ಟರರೂ ಇನ್ನೂ ಮೂರು-ನಾಲ್ಕು ಬಾರಿ ತಮ್ಮ ರೋಗಿಯನ್ನು ನೋಡಲು ಬರುವರೆಂದು ಆಶಿಸುತ್ತಿದ್ದಳು. ಆದರೆ ಎರಡರಲ್ಲಿ ಯಾವುದೂ ನಡೆಯಲಿಲ್ಲ.

ಒಂದುವೇಳೆ ಬ್ರಾಹ್ಮಣಿತಿ ಪ್ರಯಾಣದ ಸಿದ್ಧತೆಯ ಕೋಲಾಹಲದಲ್ಲಿ ಓಡಿಹೋಗುವ ಅವಕಾಶ ಪಡೆದರೂ ಪಡೆಯಬಹುದು ಎಂಬ ಸಂಶಯದಿಂದ ನವೀನಕಾಳಿ ಅವಳನ್ನು ಕೆಲವು ದಿನಗಳಿಂದ ಸಮೀಪದಲ್ಲೇ ಇರಹೇಳುವಳು— ಅವಳಿಂದಲೇ ಗಂಟುಮೂಟೆ ಕಟ್ಟಿಸುವುದೇ ಮೊದಲಾದ ಕೆಲಸ ಮಾಡಿಸುವಳು.

ಕಮಲ ತನ್ನ ಏಕಾಂತ ಮನದಲ್ಲಿ, "ಇಂದು ರಾತ್ರಿಯ ಹೊತ್ತಿಗೆ ತನ್ನನ್ನು ನವೀನಕಾಳಿ ಜೊತೆಯಲ್ಲಿ ಕರೆದುಕೊಂಡು ಹೋಗಲಸಾಧ್ಯವಾಗುವಂಥ ಅನಾರೋಗ್ಯ ಸ್ಥಿತಿ ತನಗೆ ಬರಲೆಂದು ಆಶಿಸಲಾರಂಭಿಸಿದಳು ಆ ಕಠಿಣ ರೋಗದ ಚಿಕಿತ್ಸೆಯ ಭಾರ ಯಾವ ಡಾಕ್ಟರಿಗೆ ಸೇರಿದ್ದು, ಎಂಬುದನ್ನೂ ಮನದಲ್ಲೇ ಯೋಚಿಸಿಕೊಳ್ಳಲಿಲ್ಲ ಎನ್ನುವಂತಿಲ್ಲ, ಈ ರೋಗದಲ್ಲೇ ಕಡೆಗೆ ತನ್ನ ಮೃತ್ಯು ಒದಗುವುದಾದರೂ, ಸಾಯುವ ವೇಳೆಯಲ್ಲಾದರೂ ಆ ಚಿಕಿತ್ಸಕನ ಪಾದಧೂಳಿ ಪಡೆಯಬಹುದೆಂದು ಅವಳು ಕಣ್ಣುಮುಚ್ಚಿಕೊಂಡು ಕಲ್ಪಿಸಿಕೊಳ್ಳುತ್ತಿದ್ದಳು.

ರಾತ್ರಿ ನವೀನಕಾಳಿ ಕಮಲೆಯನ್ನು ತನ್ನ ಕೊಠಡಿಯಲ್ಲೇ ಮಲಗಿಸಿಕೊಂಡಳು. ಮರುದಿನ ಸ್ಟೇಷನ್ನಿಗೆ ಹೋಗುವಾಗ ತನ್ನ ಗಾಡಿಯಲ್ಲೇ ಕೂರಿಸಿಕೊಂಡಳು. ಯಜಮಾನ ಮುಕುಂದಬಾಬುಗಳು ಸೆಕೆಂಡ್ ಕ್ಲಾಸಿನಲ್ಲಿ ಕುಳಿತರು—ನವೀನಕಾಳಿ ಬ್ರಾಹ್ಮಣಿತಿಯೊಡನೆ ಇಂಟರ್ ಮೀಡಿಯೆಟ್

ಕ್ಲಾಸಿನ ಹೆಂಗಸರ ಗಾಡಿಯಲ್ಲಿ ಸ್ಥಳ ಪಡೆದಳು. ಕೊನೆಗೆ ಗಾಡಿ ಸ್ಟೇಷನ್ ಬಿಟ್ಟು ಹೊರಟಿತು—ಮದಿಸಿದ ಆನೆ ಬಳ್ಳಿಯನ್ನು ಕಿತ್ತು ಎಳೆದು ಕೊಂಡು ಹೋಗುವಂತೆ ರೈಲುಗಾಡಿ ಗರ್ಜಿಸುತ್ತ ಗರ್ಜಿಸುತ್ತ ಕಮಲೆಯನ್ನು ಎಳೆದುಕೊಂಡು ಹೊರಟಿತು. ಕಮಲ ಹಸಿದ ನೋಟದಿಂದ ಕಿಟಕಿಯ ಹೊರಗಡೆಯೇ ನೋಡುತ್ತಿದ್ದಳು. ನವೀನಕಾಳಿ, ಎಲೆಯಡಿಕೆಯ ಪೆಟ್ಟಿಗೆ ಎಲ್ಲಿಟ್ಟೆ ? " ಎಂದಳು.

ಕಮಲ ಎಲೆಯಡಿಕೆ ಪೆಟ್ಟಿಗೆ ತೆಗೆದುಕೊಟ್ಟಳು. ಪೆಟ್ಟಿಗೆ ಬಿಚ್ಚಿ ನವೀನ ಕಾಳಿ ಹೇಳಿದಳು, "ಇಲ್ಲಿ ನೋಡು, ಏನು ಯೋಚಿಸುತ್ತಿದ್ದೆನೋ ಅದೇ ನಡೆದಿದೆ. ಸುಣ್ಣದ ಡಬ್ಬಿ ಬಿಟ್ಟು ಬಂದಿರುವೆ, ಈಗ ನಾನೇನು ಮಾಡಲಿ ? ಸ್ವತಃ ನಾನು ಯಾವುದನ್ನು ನೋಡುವುದಿಲ್ಲವೋ, ಅದರಲ್ಲಿ ಒಂದಲ್ಲ ಒಂದು ಕೊರತೆ ಇದ್ದೇ ಇರುವುದು. ಬ್ರಾಹ್ಮಣಿತಿ, ನಿನಗೇನಾದರೂ ಪಿಶಾಚಿ ಹಿಡಿದು ಆಡುತ್ತಿರುವೆಯೇನು ! ಕೇವಲ ನನ್ನ ಮೇಲೆ ದ್ವೇಷ ಸಾಧಿಸುವ ಅಭಿಪ್ರಾಯ. ಬೇಕೆಂದೇ ನನ್ನ ಹೊಟ್ಟೆಯುರಿಸುತಿರುವೆ ಈ ದಿನ ಪಲ್ಯದಲ್ಲಿ ಉಪ್ಪೇ ಇರಲಿಲ್ಲ, ನಿನ್ನೆ ಪಾಯಸ ತಳ ಹಿಡಿದಿತ್ತು—ಈ ಎಲ್ಲ ಕಪಟಗಳೂ ನನಗೆ ತಿಳಿಯುವುದಿಲ್ಲ ಎಂದು ಭಾವಿಸಿರುವೆಯೇನು ? ಒಳ್ಳೆಯದು, ವಿರಾರತ್ತಿಗೆ ನಡೆ, ಆಮೇಲೆ ನೋಡುವೆಯಂತೆ ನೀನು ಯಾರು, ನಾನು ಯಾರು ಎಂದು".

ಗಾಡಿ ಸೇತುವೆಯ ಮೇಲಕ್ಕೆ ಬಂದಿತು. ಕಮಲ ಕಿಟಕಿಯ ಹೊರಕ್ಕೆ ಮುಖ ನೀಡಿ ಗಂಗಾ-ತೀರದಲ್ಲಿದ್ದ ಕಾಶೀಪಟ್ಟಣವನ್ನೊಮ್ಮೆ ನೋಡಿದಳು — ಈ ಪಟ್ಟಣದಲ್ಲಿ ಯಾವ ದಿಕ್ಕಿನಲ್ಲಿ ನಳಿನಾಕ್ಷನ ಮನೆ ಇರುವುದೆಂದು ಅವಳಿಗೆ ತಿಳಿಯದು. ಇದರಿಂದಲೇ ರೈಲುಗಾಡಿಯ ವೇಗವಾದ ಓಟದಲ್ಲಿ, ಸ್ನಾನ ಘಟ್ಟ, ಮನೆ, ಗುಡಿಯ ಗೋಪುರ ಎಂದು ಯಾವಯಾವುದು ಕಣ್ಣಿಗೆ ಬೀಳುವುದೋ ಎಲ್ಲವೂ ನಳಿನಾಕ್ಷನ ಆವಿರ್ಭಾವದಿಂದ ಅಂಕಿತವಾಗಿ ಅವಳ ಹೃದಯವನ್ನು ಸ್ಪರ್ಶಿಸಿತು.

ನವೀನಕಾಳಿ, "ಅಮ್ಮವ್ವಾ, ಅಷ್ಟೊಂದು ಬಗ್ಗಿಕೊಂಡು ಏನು ನೋಡುವೆ ! ನೀನೇನು ಹಕ್ಕಿಯೇ ?—ಹಾರಿಹೋಗಲು ನಿನಗೆ ರೆಕ್ಕೆಯಿಲ್ಲ !" ಎಂದಳು.

ಕಾಶೀನಗರದ ಚಿತ್ರ ಎಲ್ಲೋ ಮರೆಯಾಯಿತು. ಕಮಲ ಸ್ಥಿರನೀರವ ವಾಗಿ ಕುಳಿತು ಆಕಾಶವನ್ನು ನೋಡುತ್ತಿದ್ದಳು.

ಕಡೆಗೆ ಗಾಡಿ ಮೊಗಲ್‌ಸರಾಯದಲ್ಲಿ ನಿಂತಿತು. ನಿಲ್ದಾಣದ ಕೋಲಾಹಲ, ಜನರ ಗುಂಪು, ಎಲ್ಲವೂ ಕಮಲೆಗೆ ನೆರಳಿನಂತೆ, ಸ್ವಪ್ನದಂತೆ ಭಾಸವಾಗತೊಡಗಿತು. ಅವಳು ಯಂತ್ರದ ಪ್ರತಿಮೆಯಂತೆ ಒಂದು ಗಾಡಿಯಿಂದ ಇನ್ನೊಂದು ಗಾಡಿಗೆ ಹತ್ತಿದಳು.

ಗಾಡಿ ಹೊರಡುವ ಸಮಯ ಸಮೀಪಿಸಿತ್ತು. ಆ ವೇಳೆಯಲ್ಲಿ ಹಠಾತ್ತನೆ ಯಾವುದೋ ಪರಿಚಿತಧ್ವನಿ, ಅವಳನ್ನು "ಅಮ್ಮಾ" ಎಂದು ಕರೆಯುದನ್ನು ಗಾಬರಿಗೊಂಡು ಕೇಳಿದಳು.

ಕಮಲ ನಿಲ್ದಾಣದತ್ತ ಮುಖ ತಿರುಗಿಸಿ ನೋಡಿದರೆ, ಉಮೇಶ. ಕಮಲೆಯ ಮುಖ ಅರಳಿತು—"ಏನೋ ಉಮೇಶ್" ಎಂದಳು.

ಉಮೇಶ ಗಾಡಿಯ ಬಾಗಿಲು ತೆರೆದ. ಕ್ಷಣಮಾತ್ರದಲ್ಲಿ ಕಮಲೆ ಇಳಿದು ಬಂದಳು. ಕೂಡಲೇ ಉಮೇಶ ನೆಲ ಮುಟ್ಟಿ ನಮಸ್ಕಾರ ಮಾಡಿ ಕಮಲೆಯ ಪಾದಧೂಳಿಯನ್ನು ತಲೆಗೆ ಹಚ್ಚಿಕೊಂಡ. ಅವನು ಕಿವಿಯವರೆಗೂ ಬಾಯಿತೆರೆದು ನಗತೊಡಗಿದ.

ಮರುಕ್ಷಣದಲ್ಲೇ ಗಾರ್ಡ್ ಗಾಡಿಯ ಬಾಗಿಲು ಮುಚ್ಚಿದ. ನವೀನ ಕಾಳಿ ಗದ್ದಲಮಾಡತೊಡಗಿದಳು

"ಬ್ರಾಹ್ಮಣಿತಿ ಏನು ಮಾಡುತ್ತಿರುವೆ. ಗಾಡಿ ಹೊರಟಿದೆ. ಹತ್ತು ಹತ್ತು".

ಕಮಲೆಯ ಕಿವಿಗೆ ಆ ಮಾತು ಬೀಳಲೇ ಇಲ್ಲ. ಗಾಡಿ ಸಿಳ್ಳುಹಾಕುತ್ತ ಗಸಗಸ ಶಬ್ದದಿಂದ ಸ್ಟೇಷನ್ ಬಿಟ್ಟು ಹೊರಟಿತು.

ಕಮಲ, "ಉಮೇಶ, ನೀನೆಲ್ಲಿಂದ ಬರುತ್ತಿರುವೆ" ಎಂದು ವಿಚಾರಿಸಿದಳು.

"ಗಾಜೀಪುರದಿಂದ" ಎಂದ ಉಮೇಶ.

"ಅಲ್ಲಿ ಎಲ್ಲರೂ ಚೆನ್ನಾಗಿರುವರೆ? ಚಿಕ್ಕಪ್ಪನವರ ಸಮಾಚಾರವೇನು?" ಎಂದು ಕೇಳಿದಳು ಕಮಲ.

ಉಮೇಶ, "ಅವರು ಚೆನ್ನಾಗಿರುವರು" ಎಂದು ಹೇಳಿದ.

ಕಮಲ—ನಮ್ಮ ಅಕ್ಕ ಹೇಗಿದ್ದಾಳೆ.

ಉಮೇಶ - ಅಮ್ಮಾ, ಅವರು ನಿಮಗಾಗಿ ಅತ್ತು ಗೋಳಾಡುತಿರುವರು.

ಕೂಡಲೇ ಕಮಲೆಯ ಎರಡು ಕಣ್ಣಿನಲ್ಲೂ ನೀರು ತುಂಬಿಕೊಂಡಿತು.

" ಉಮಿ ಹೇಗಿರುವಳು, ಅವಳು ತನ್ನ ಚಿಕ್ಕಮ್ಮನನ್ನು ಆಗಾಗ ಜ್ಞಾಪಿಸಿ ಕೊಳ್ಳುವಳೇ ? " ಎಂದು ಕೇಳಿದಳು.

ಉಮೇಶ ಹೇಳಿದ, " ಅವಳಿಗೆ ನೀವು ಒಂದು ಜೊತೆ ಬಳೆ ಕೊಟ್ಟಿದ್ದಿರಲ್ಲ, ಅದನ್ನು ಹಾಕದಿದ್ದರೆ ಅವಳು ಏನುಮಾಡಿದರೂ ಹಾಲು ಕುಡಿಯುವುದಿಲ್ಲ. ಅದನ್ನು ಹಾಕಿಕೊಂಡು ಅವಳು ಎರಡು ಕೈಗಳನ್ನೂ ತಿರುಗಿಸುತ್ತ, ಚಿಕ್ಕಮ್ಮ, 'ಹೋ–ಹೋ–ಹೋಯಿತು' ಎನ್ನುವಳು. ಹಾಗೂ ಅವಳ ಕಣ್ಣಿನಿಂದ ನೀರು ಹರಿಯತೊಡಗುವುದು ".

ಕಮಲ, " ನೀನು ಇಲ್ಲಿಗೆ ಏತಕ್ಕಾಗಿ ಬಂದೆ " ಎಂದು ಕೇಳಿದಳು.

" ನನಗೆ ಗಾಜೀಪುರ ಸರಿಬೀಳಲಿಲ್ಲ. ಅದರಿಂದಲೇ ಹೊರಟುಬಂದೆ " ಎಂದು ಉಮೇಶ ಹೇಳಿದ.

ಕಮಲ—ಎಲ್ಲಿಗೆ ಹೋಗುವೆ ?

" ಅಮ್ಮಾ, ನಿಮ್ಮ ಸಂಗಡ ಬರುವೆ " ಎಂದ ಉಮೇಶ.

ಕಮಲ, " ನನ್ನ ಹತ್ತಿರ ಒಂದುಕಾಸೂ ಇಲ್ಲ " ಎಂದಳು.

ಉಮೇಶ ಹೇಳಿದ, " ನನ್ನ ಹತ್ತಿರ ಇದೆ ".

ಕಮಲ—ನಿನಗೆಲ್ಲಿತ್ತು ?

ಉಮೇಶ—ಅದೇ ಅಂದು ನೀವು ನನಗೆ ಐದು ರೂಪಾಯಿ ಕೊಟ್ಟಿದ್ದಿರಲ್ಲ, ಅದನ್ನು ನಾನು ವೆಚ್ಚಮಾಡಲೇ ಇಲ್ಲ.

ಹೀಗೆಹೇಳಿ ಗಂಟಿನಿಂದ ಐದು ರೂಪಾಯಿ ತೆಗೆದು ತೋರಿಸಿದ.

ಕಮಲ—ಹಾಗಾದರೆ ಹೊರಡು ಉಮೇಶ, ನಾವು ಕಾಶಿಗೆ ಹೋಗೋಣ. ಏನು ? ನೀನು ಟಿಕೆಟ್ ತರಬಲ್ಲೆಯಾ ?

" ತರಬಲ್ಲೆ " ಎಂದ ಉಮೇಶ ಹೀಗೆ ಹೇಳಿ ಟಿಕೆಟ್ ಕೊಂಡು ತಂದ. ಗಾಡಿ ಸಿದ್ಧವಾಗಿ ನಿಂತಿತ್ತು, ಗಾಡಿಯಲ್ಲಿ ಕಮಲೆಯನ್ನು ಹತ್ತಿಸಿದ—" " ಅಮ್ಮಾ, ನಾನು ಪಕ್ಕದ ಗಾಡಿಯಲ್ಲೇ ಇರುವೆ " ಎಂದು ಹೇಳಿದ.

ಕಾಶೀ ಸ್ಟೇಷನ್ನಿನಲ್ಲಿ ಇಳಿದು ಕಮಲ, " ಉಮೇಶ, ಈಗ ಎಲ್ಲಿಗೆ ಹೋಗುವುದು " ಎಂದು ವಿಚಾರಿಸಿದಳು.

" ಅಮ್ಮಾ, ನೀವು ಸ್ವಲ್ಪವೂ ಯೋಚಿಸಬೇಡಿ—ನಾನು ನಿಮ್ಮನ್ನು ಸರಿಯಾದ ಸ್ಥಳಕ್ಕೆ ಕರೆದುಕೊಂಡು ಹೋಗುವೆ " ಎಂದ ಉಮೇಶ.

ಕಮಲ—ಸರಿಯಾದ ಸ್ಥಳ ಯಾವುದು ? ನಿನಗೆ ಇಲ್ಲಿ ಏನೇನು ಗೊತ್ತು ಹೇಳು ?

"ಎಲ್ಲವೂ ಗೊತ್ತು. ಎಲ್ಲಿಗೆ ಕರೆದುಕೊಂಡು ಹೋಗುವೆ ಎಂದು ನೋಡುವಿರಂತೆ" ಎಂದು ಉಮೇಶ ಹೇಳಿದ.

ಹೀಗೆ ಹೇಳಿ ಕಮಲೆಯನ್ನು ಒಂದು ಬಾಡಿಗೆ ಗಾಡಿಯಲ್ಲಿ ಹತ್ತಿಸಿ ಅವನು ಗಾಡಿಹೊಡೆಯುವವನ ಹತ್ತಿರ ಕುಳಿತ. ಒಂದು ಮನೆಯ ಎದುರಿಗೆ ಗಾಡಿಯು ನಿಂತಿತು. ಉಮೇಶ, "ಅಮ್ಮಾ, ಇಲ್ಲೇ ಇಳಿಯಿರಿ" ಎಂದ.

ಕಮಲ ಗಾಡಿಯಿಂದ ಇಳಿದು ಉಮೇಶನನ್ನು ಹಿಂಬಾಲಿಸುತ್ತ ಮನೆಯನ್ನು ಪ್ರವೇಶಿಸುತ್ತಲೇ ಉಮೇಶ, "ಅಜ್ಜಯ್ಯಾ, ಮನೆಯಲ್ಲಿರುವಿರಾ' ಎಂದು ಕೂಗಿದ.

ಪಕ್ಕದ ಕೋಣೆಯೊಂದರಿಂದ ಮಾತು ಹೊರಬಿತ್ತು "ಯಾರು, ಉಮೇಶನಲ್ಲವೆ ? ನೀನೆಲ್ಲಿಂದ ಬಂದೆ ".

ಮರುಕ್ಷಣದಲ್ಲೇ ಕೈಯಲ್ಲಿ ಹುಕ್ಕಾ ಹಿಡಿದು ಸ್ವಯಂ ಚಕ್ರವರ್ತಿ ಚಿಕ್ಕಪ್ಪ ಬಂದು ನಿಂತರು. ಉಮೇಶ ದೊಡ್ಡದಾಗಿ ಬಾಯಿತೆರೆದು ಸುಮ್ಮನೆ ನಗಲಾರಂಭಿಸಿದ. ಆಶ್ಚರ್ಯ ಹೊಂದಿದ್ದ ಕಮಲ ನೆಲಮುಟ್ಟಿ ಚಕ್ರವರ್ತಿಗೆ ನಮಸ್ಕಾರ ಮಾಡಿದಳು. ಕ್ಷಣಕಾಲ ಚಿಕ್ಕಪ್ಪನ ಬಾಯಿಂದ ಮಾತೇ ಹೊರಡಲಿಲ್ಲ, ಅವರಿಗೆ, ಏನು ಹೇಳುವುದ , ಹುಕ್ಕಾ ಎಲ್ಲಿಡುವುದು ಎಂದು ಯಾವುದೂ ತೋಚಲಿಲ್ಲ. ಕಡೆಗೆ ಕಮಲೆಯ ಗಲ್ಲ ಹಿಡಿದು ಅವಳ ನಾಚಿಕೆಯಿಂದ ಬಾಗಿದ್ದ ಮುಖ ಮೇಲಕ್ಕೆತ್ತಿ "ನಮ್ಮಮ್ಮ, ತಿರುಗಿ ಬಂದೆಯಾ ! ನಡೆ ನಡೆ" ಎಂದರು.

"ಓ ಶೈಲಾ, ಶೈಲಾ, ಯಾರು ಬಂದಿರುವರು ನೋಡು".

ಶೈಲಜಾ ಕೂಡಲೇ ಕೊಠಡಿಯಿಂದ ಹೊರಕ್ಕೆ ಬಂದು ವರಾಂಡದ ಮೆಟ್ಟಿಲೆದುರಿಗೆ ಬಂದು ನಿಂತಳು. ಕಮಲ ಅವಳಿಗೆ ನಮಸ್ಕರಿಸಿ ಪಾದಧೂಳಿ ತೆಗೆದುಕೊಂಡಳು. ಶೈಲ ಕೂಡಲೇ ಅವಳನ್ನು ಎದೆಗೆ ಅಪ್ಪಿಕೊಂಡು ಅವಳ ಹಣೆಗೆ ಮುತ್ತಿಟ್ಟಳು. ಕಣ್ಣೀರಿನಿಂದ ಎರಡು ಕನ್ನೆಗಳನ್ನೂ ನೆನೆಸಿಕೊಂಡು, "ಅಮ್ಮಾ, ನಮ್ಮಮ್ಮಾ ! ನಮ್ಮನ್ನು ಹೀಗೆ ಅಳಿಸಿ ಹೋಗಬೇಕೆ ?" ಎಂದಳು.

"ಆ ಮಾತು ಇರಲಿ ಶೈಲ, ಈಗ ಅವಳ ಸ್ನಾನಕ್ಕೂ ಊಟಕ್ಕೂ ಏರ್ಪಡಿಸು" ಎಂದರು ಚಿಕ್ಕಪ್ಪ.

ಆ ವೇಳೆಗೆ ಉಮಾ, "ಚಿಕ್ಕಮ್ಮಾ, ಚಿಕ್ಕಮ್ಮಾ" ಎಂದು ಎರಡು ಕೈಗಳನ್ನೂ ಎತ್ತಿಕೊಂಡು ಓಡಿ ಬಂದಳು. ಕಮಲ ತಕ್ಷಣ ಅವಳನ್ನು ಸೊಂಟಕ್ಕೆ ಎತ್ತಿಟ್ಟುಕೊಂಡು ಎದೆಗೆ ಅಪ್ಪಿಕೊಳ್ಳುತ್ತ ಮುತ್ತಿಡುತ್ತ ಇಡುತ್ತ ಸಾಕುಸಾಕು ಮಾಡಿದಳು.

ಶೈಲಜೆ ಕಮಲೆಯ ಕೆದರಿದ ಕೂದಲನ್ನೂ ಕೊಳಕು ಬಟ್ಟೆಯನ್ನೂ ಕಂಡು ಸಹಿಸಲಾರದಾದಳು. ಅವಳನ್ನು ಎಳೆದುಕೊಂಡು ಹೋಗಿ ಬಲವಂತವಾಗಿ ಸ್ನಾನ ಮಾಡಿಸಿದಳು. ತನ್ನ ಒಳ್ಳೆಯ ಸೀರೆಯೊಂದನ್ನು ಹೊರತೆಗೆದು ಅವಳಿಗೆ ಉಡಿಸಿದಳು. "ನಿನ್ನೆ ರಾತ್ರಿ ನೀನು ಚೆನ್ನಾಗಿ ನಿದ್ದೆಮಾಡಿಲ್ಲವೆಂದು ತೋರುವುದು. ಕಣ್ಣು ಗುಳಿ ಬಿದ್ದು ಹೋಗಿದೆ ಸ್ವಲ್ಪ ಹೊತ್ತು ನೀನು ಹಾಸಿಗೆಯಲ್ಲಿ ಕಾಲು ಚಾಚಿಕೊಂಡಿರು. ನಾನು ಅಡುಗೆ ಮುಗಿಸಿ ಬರುವೆ" ಎಂದಳು.

ಕಮಲ ಹೇಳಿದಳು, "ಇಲ್ಲ ಅಕ್ಕ, ನಿನ್ನೊಡನೆ ನಾನೂ ಅಡುಗೆ ಮನೆಗೆ ಬರುವೆ".

ಗೆಳತಿಯರಿಬ್ಬರೂ ಒಟ್ಟಾಗಿ ಅಡುಗೆಗೆ ಹೋದರು. ಚಕ್ರವರ್ತಿ–ಚಿಕ್ಕಪ್ಪ ಅಕ್ಷಯನ ಕೋರಿಕೆಯಂತೆ ಕಾಶಿಗೆ ಹೊರಡಲು ಶೈಲಜ, "ಅಪ್ಪಾ, ನಾನೂ ನಿಮ್ಮೊಡನೆ ಕಾಶಿಗೆ ಬರುವೆ" ಎಂದು ಬೆನ್ನು ಹತ್ತಿದಳು.

"ವಿಪಿನನಿಗೆ ಈಗ ರಜ ಇಲ್ಲವಲ್ಲ" ಎಂದರು ಚಿಕ್ಕಪ್ಪ.

ಶೈಲ ಹೇಳಿದಳು, "ಏನೇ ಆಗಲಿ, ನಾನು ಒಬ್ಬಂಟಿಗಳಾಗಿಯೇ ಬರುವೆ, ಅಮ್ಮ ಇರುವಳು. ಅವರಿಗೆ ಯಾವ ತೊಂದರೆಯೂ ಆಗದು".

ಗಂಡನೊಡನೆ ಈ ರೀತಿಯ ವಿಕ್ಷೇಪದ ಪ್ರಸ್ತಾಪವನ್ನು ಶೈಲ ಹಿಂದೆಂದೂ ಮಾಡಿರಲಿಲ್ಲ.

ಚಿಕ್ಕಪ್ಪ ಸಮ್ಮತಿಸಬೇಕಾಯಿತು. ಗಾಜೀಪುರದಿಂದ ಪ್ರಯಾಣ ಹೊರಟರು.

ಕಾಶೀ ಸ್ಟೇಷನ್ನಿನಲ್ಲಿ ಇಳಿದು ನೋಡಿದಾಗ ಉಮೇಶನೂ ಗಾಡಿಯಿಂದ ಇಳಿಯುತ್ತಿದ್ದ—"ಎಲೋ ನೀನಲ್ಲಿ ಬಂದೆಯೋ".

ಎಲ್ಲರೂ ಯಾವ ಕಾರಣಕ್ಕಾಗಿ ಬಂದಿರುವರೋ ಅವನಿಗೂ ಅದೇ

ಕಾರಣ ಆದರೆ ಉಮೇಶ ಇತ್ತೀಚೆಗೆ ಚಿಕ್ಕಪ್ಪನ ಮನೆಗೆಲಸಕ್ಕೆ ನೇಮಕವಾಗಿದ್ದ-- ಅವನು ಈ ರೀತಿ ಆಕಸ್ಮಿಕವಾಗಿ ಹೊರಟು ಬಂದಿರುವುದರಿಂದ ಗೃಹಿಣಿ ಅತ್ಯಂತ ಕೋಪಿಸಿಕೊಳ್ಳುವಳೆಂದು ತಿಳಿದು ಎಲ್ಲರೂ ಸೇರಿ ಬಹಳ ಪ್ರಯತ್ನ ಮಾಡಿ ಉಮೇಶನನ್ನು ಗಾಜೀಪುರಕ್ಕೆ ಕಳುಹಿಸಿ ಕೊಟ್ಟರು. ಆ ಬಳಿಕ ಏನು ನಡೆಯಿತೆಂದು ಎಲ್ಲರೂ ಬಲ್ಲರು. ಅವನು ಗಾಜೀಪುರದಲ್ಲಿ ಯಾವ ರೀತಿಯಲ್ಲೂ ಇರಲಾರದಾದ. ಮನೆಯಾಕೆ ಅವನನ್ನು ಸಾಮಾನು ತರಲು ಕಳುಹಿಸಿದ್ದಳು. ಆ ಸಾಮಾನಿನ ಹಣ ತೆಗೆದುಕೊಂಡು ಅವನು ನೆಟ್ಟಗೆ ಗಂಗೆ ದಾಟಿ ಸ್ಟೇಷನ್ನಿಗೆ ಬಂದು ಸೇರಿದ. ಚಕ್ರವರ್ತಿಯವರ ಕುಟುಂಬ ಅಂದು ಈ ಹುಡುಗನನ್ನು ವ್ಯರ್ಥವಾಗಿ ನಿರೀಕ್ಷಿಸುತ್ತಿದ್ದಳು.

೫೫

ಈ ನಡುವೆ ಅಕ್ಷಯ ಚಕ್ರವರ್ತಿಯನ್ನು ನೋಡಲು ಬಂದಿದ್ದ ಅವರು ಅವನಿಗೆ ಕಮಲ ಹಿಂದಿರುಗಿ ಬಂದ ವಿಷಯವಾಗಿ ಯಾವ ಮಾತನ್ನೂ ಹೇಳಲಿಲ್ಲ. ರಮೇಶನಿಗೂ ಅಕ್ಷಯನಿಗೂ ಅಷ್ಟಾಗಿ ಗೆಳೆತನವಿಲ್ಲವೆಂದು ಚಿಕ್ಕಪ್ಪ ತಿಳಿದುಕೊಂಡಿದ್ದರು.

ಕಮಲ ಏತಕ್ಕೆ ಹೊರಟು ಹೋದಳು, ಎಲ್ಲಿಗೆ ಹೋಗಿದ್ದಳು ಎಂಬ ವಿಷಯವಾಗಿ ಮನೆಯ ಜನ ಯಾವ ಪ್ರಶ್ನೆಯನ್ನೂ ಕೇಳಲಿಲ್ಲ ಕಮಲೆಯೂ ಇವರೊಡನೆ ಕಾಶೀ ಸಂಚಾರಕ್ಕಾಗಿ ಬಂದಿರುವಳು ಎಂಬ ಭಾವದಿಂದ ದಿನ ಕಳೆಯುತಿತ್ತು. ಉಮಿಯುದಾದಿ, ಲಚಮನಿಯಾ ಸ್ನೇಹಮಿಶ್ರಿತ ಗದರಣೆಯ ನೆಪದಲ್ಲಿ ಏನೋ ಹೇಳುವುದರಲ್ಲಿದ್ದಳು, ಕೂಡಲೇ ಚಿಕ್ಕಪ್ಪ ಅವಳನ್ನು ಗುಟ್ಟಾಗಿ ಕರೆದು ದಂಡಿಸಿದ್ದರು.

ರಾತ್ರಿ ಶೈಲಜೆ ಕಮಲೆಯನ್ನು ತನ್ನ ಹಾಸಿಗೆಯಲ್ಲಿ ಮಲಗಿಸಿಕೊಂಡಳು ಅವಳ ಕಂಠವನ್ನು ಬಿಗಿಯಾಗಿ ಅಪ್ಪಿಕೊಂಡು ಅವಳನ್ನು ಎದೆಯಬಳಿ ಎಳೆದುಕೊಂಡಳು. ಮತ್ತು ಬಲಗೈಯಿಂದ ಅವಳ ಮೈ ಸವರಲಾರಂಭಿಸಿದಳು. ಈ ಕೋಮಲ ಹಸ್ತಸ್ಪರ್ಶ ಮೂಕ ಪ್ರಶ್ನೆಯಂತೆ ಕಮಲೆಯನ್ನು ಅವಳ ಗುಪ್ತ ವೇದನೆಯ ವಿಷಯವಾಗಿ ವಿಚಾರಿಸ ತೊಡಗಿತು.

“ಅಕ್ಕ, ನೀನು ಮನಸಿಗೆ ಏನು ತಿಳಿದುಕೊಂಡೆಯೋ? ನನ್ನ ಮೇಲೆ ಕೋಪವಿಲ್ಲವಷ್ಟೇ” ಎಂದು ಕಮಲ ಕೇಳಿದಳು.

ಶೈಲಹೇಳಿದಳು, "ನನಗೆ ಬುದ್ಧಿಯಿಲ್ಲವೇನು. ಜಗತ್ತಿನಲ್ಲಿ ನಿನಗೆ ಬೇರೆ ದಾರಿ ಇದ್ದಿದ್ದರೆ, ನೀನು ಈ ಭಯಂಕರ ದಾರಿ ಹಿಡಿಯುತ್ತಿರಲಿಲ್ಲವೆಂದು ನಾವು ಅರಿಯವೇನು? ದೇವರು ನಿನ್ನನ್ನು ಇಂಥ ವಿಪತ್ತಿಗೆ ಏಕೆ ಗುರಿ ಮಾಡಿದನೆಂದೇ ನಾವೆಲ್ಲ ಅತ್ತೆವು. ಯಾರು ಯಾವ ತಪ್ಪನ್ನೂ ಮಾಡಲರಿಯರೋ ಅವರೇ ಶಿಕ್ಷೆ ಅನುಭವಿಸುವರು"

ಕಮಲ, "ಅಕ್ಕ, ನನ್ನ ಎಲ್ಲಕತೆಯನ್ನೂ ನೀನು ಕೇಳುವೆಯಾ?" ಎಂದು ಕೇಳಿದಳು.

ಶೈಲ ಸ್ನಿಗ್ಧಸ್ವರದಲ್ಲಿ ಹೇಳಿದಳು, "ಕೇಳದೆ ಏನು ತಂಗಿ"

ಕಮಲ—ಆಗ ನಿನಗೆ ಏಕೆ ಹೇಳಲಾಗಲಿಲ್ಲವೆಂದರಿಯೆ. ಆಗ ನನಗೆ ಯಾವ ಸಂಗತಿಯನ್ನೂ ಆಲೋಚಿಸುವುದಕ್ಕೆ ಅವಕಾಶವೇ ಇರಲಿಲ್ಲ. ಇದ್ದಕ್ಕಿದಂತೆ ತಲೆಯ ಮೇಲೆ ಎಂಥ ಸಿಡಿಲು ಬಿದ್ದಿತೆಂದರೆ ಲಜ್ಜೆಯಿಂದ ನಿಮ್ಮಗಳಿಗೆ ಮುಖತೋರಿಸಲಾರದೆ ಹೋಯಿತು ಜಗತ್ತಿನಲ್ಲಿ ನನಗೆ ತಾಯಿ ತಂಗಿಯರೂ ಇಲ್ಲ. ಅಕ್ಕ, ನೀನೇ ನನ್ನ ತಾಯಿ–ಅಕ್ಕ ಎರಡೂ–ಅದರಿಂದಲೇ ನಿನಗೆ ಎಲ್ಲಮಾತನ್ನೂ ಹೇಳುತಿರುವೆ. ಇಲ್ಲದಿದ್ದರೆ ನನ್ನ ವಿಷಯವನ್ನು ಯಾರ ಬಳಿಯಲ್ಲೂ ಹೇಳಿಕೊಳ್ಳುವಂತಿಲ್ಲ

ಕಮಲೆಗೆ ಮಲಗಿರಲು ಸಾಧ್ಯವಾಗಲಿಲ್ಲ, ಎದ್ದು ಕುಳಿತಳು, ಶೈಲಳೂ ಎದ್ದು ಅವಳೆದುರಿಗೆ ಕುಳಿತಳು, ಆ ಕತ್ತಲೆಯಲ್ಲಿ ಹಾಸಿಗೆಯ ಮೇಲೆ ಕುಳಿತು ಕಮಲ ಮದುವೆಯಿಂದ ಮೊದಲು ಮಾಡಿಕೊಂಡು ತನ್ನ ಜೀವನ ಚರಿತ್ರೆ ಹೇಳಲಾರಂಭಿಸಿದಳು.

ಮದುವೆಗೆ ಮೊದಲಾಗಲಿ, ಮದುವೆಯ ರಾತ್ರಿಯಾಗಲಿ ಅವಳು ತನ್ನ ಗಂಡನನ್ನು ನೋಡಲಿಲ್ಲ ಎಂದು ಕಮಲ ಹೇಳಿದಾಗ ಶೈಲ, "ನಿನ್ನಂಥ ಬೆಪ್ಪು ಹುಡುಗಿಯನ್ನು ನಾನು ಕಂಡೇ ಇಲ್ಲ. ನಿನಗಿಂತ ಚಿಕ್ಕವಯಸ್ಸಿನಲ್ಲಿ ನನಗೆ ಮದುವೆಯಾಯಿತು—ನೀನು ಏನು ಬೇಕಾದರೂ ತಿಳಿದುಕೊ. ನಾಚಿಕೆಯಿಂದ ನಾನು ನನ್ನ ಗಂಡನನ್ನು ಸುಸಮಯಗಲ್ಲಿ ನೋಡಲಾಗಲಿಲ್ಲವೆಂದು ಎಣಿಸಿರುವೆಯೇನು?" ಎಂದಳು.

ಕಮಲ, "ನಾಚಿಕೆ ಅಲ್ಲಕ್ಕ, ನನ್ನ ಮದುವೆಯ ವಯಸ್ಸು ಏರಿತ್ತು. ಹಠಾತ್ತನೆ ನನ್ನ ಮದುವೆಯ ಮಾತು ನಿಶ್ಚಯವಾದಾಗ ನನ್ನ ಗೆಳತಿಯರೆಲ್ಲ

ನನ್ನನ್ನು ಅತಿಯಾಗಿ ಹಾಸ್ಯ ಮಾಡತೊಡಗಿದರು. ವಯಸ್ಸಾದ ಮೇಲೆ ಗಂಡನನ್ನುಪಡೆದು ನಾನು ಸಪ್ತದ್ವೀಪಾಧಿಪತಿಯ ಸಿರಿ ಸಂಪತ್ತುಗಳೇನನ್ನೂ ಪಡೆಯಲಿಲ್ಲ, ಎಂಬುದನ್ನು ತೋರ್ಪಡಿಸಿಕೊಳ್ಳಲು ನಾನು ಅವರ ಕಡೆ ಒಮ್ಮೆಯಾದರೂ ಕಣ್ಣುಹೊರಳಿಸಲಿಲ್ಲ, ಅಷ್ಟೇಕೆ, ಅವರಿಗಾಗಿ ಸ್ವಲ್ಪವಾದರೂ ಕಾತುರವನ್ನು ಮನಸ್ಸಿನಲ್ಲಿ ಅನುಭವಿಸುವುದೂ ನನಗೆ ಸಂಪೂರ್ಣವಾಗಿ ನಾಚಿಕೆ ಹಾಗೂಅಗೌರವದ ವಿಷಯವೆಂದು ತಿಳಿದಿದ್ದೆ. ಇಂದು ಅದರ ಪ್ರಾಯಶ್ಚಿತ್ತ ಅನುಭವಿಸುತಿರುವೆ" ಎಂದು ಹೇಳಿದಳು.

ಹೀಗೆ ಹೇಳಿ ಕಮಲ ಕ್ಷಣಕಾಲ ತೆಪ್ಪಸಿದ್ದಳು. ಆ ಬಳಿಕ ಆರಂಭಿಸಿ ಹೇಳಿದಳು, "ಮದುವೆಯಾದ ಬಳಿಕ ದೋಣಿ ಮುಳುಗಿ ನಾನು ಹೇಗೆ ಬದುಕಿಕೊಂಡೆ ಎಂದು ನಿನಗೆ ಹಿಂದೆಯೇ ಹೇಳಿರುವೆ. ಆದರೆ ಹೇಳಿದಾಗ, ಸಾವಿನಿಂದ ಬದುಕಿಕೊಂಡು ಯಾರ ಕೈಗೆ ಸಿಕ್ಕಿಬಿದ್ದೆನೋ, ಯಾರನ್ನು ಗಂಡ ಎಂದು ತಿಳಿದಿದ್ದೆನೋ ಅವರು ನನ್ನ ಗಂಡ ಅಲ್ಲ ಎಂದು ತಿಳಿದಿರಲಿಲ್ಲ".

ಶೈಲಜಾ ಬೆಚ್ಚಿಬಿದ್ದಳು—ಕೂಡಲೆ ಅವಳನ್ನು ಸಮೀಪಿಸಿ ಅವಳ ಗಲ್ಲ ಹಿಡಿದುಕೊಂಡು, "ಅಯ್ಯೋ ದುರದೃಷ್ಟವೆ—ಹಾಗಾದರೆ ಸರಿ. ಈಗ ಎಲ್ಲ ಸಂಗತಿಯೂ ತಿಳಿಯಿತು. ಎಂಥ ಸರ್ವನಾಶವುಂಟಾಯಿತು" ಎಂದಳು.

ಕಮಲ, "ಸತ್ತರೆ ಎಲ್ಲಿ ಕೊನೆಗಾಣುತ್ತಿದ್ದಾಗ ವಿಧಾತ ಇಂಥ ವಿಪತ್ತನ್ನೇಕೆ ಒದಗಿಸಿದ ಎಂದು ನೀನೇ ಹೇಳಕ್ಕ" ಎಂದು ಹೇಳಿದಳು.

"ರಮೇಶಬಾಬುವಿಗೂ ತಿಳಿದಿರಲಿಲ್ಲವೇನು?" ಎಂದು ಶೈಲಜಾ ವಿಚಾರಿಸಿದಳು.

ಕಮಲ ಹೇಳಿದಳು, "ಮದುವೆಯಾದ ಕೆಲವು ದಿನಗಳನಂತರ ಅವರು ಒಂದು ದಿನ ನನ್ನನ್ನು ಸುಶೀಲಾ ಎಂದು ಕರೆದರು, ನಾನು ಅವರಿಗೆ, 'ನನ್ನ ಹೆಸರು ಕಮಲ, ಹೀಗಿದ್ದೂ ನೀವುಗಳು ನನ್ನನ್ನು ಏತಕ್ಕೆ ಸುಶೀಲಾ ಎಂದು ಕರೆಯುವಿರಿ' ಎಂದೆ. ಆಗ ನಾನು ಅವರ ಭ್ರಾಂತಿನಿವಾರಣೆಯಾಯಿತೆಂದು ತಿಳಿದಿದ್ದೆ. ಆದರೆ ಅಕ್ಕ, ಆ ಹಿಂದಿನ ದಿನಗಳ ಮಾತನ್ನು ಜ್ಞಾಪಿಸಿಕೊಂಡರೆ ನನಗೆ ತಲೆತಗ್ಗಿಸುವಂತಾಗುವುದು" ಇಷ್ಟು ಹೇಳಿ ಕಮಲ ತೆಪ್ಪನೆ ಕುಳಿತಳು.

ಶೈಲಜ ಮಾತುಕತೆಯಲ್ಲಿ ಒಂದೊಂದಾಗಿ ಸಮಸ್ತ ವೃತ್ತಾಂತವನ್ನೂ ಮೊದಲಿಂದ ತುದಿಯವರೆಗೆ ಅರಿತಳು. ಎಲ್ಲ ಮಾತನ್ನೂ ಕೇಳಿದ ಬಳಿಕ ಅವಳು, "ತಂಗಿ, ನಿನ್ನದು ಕೆಟ್ಟ ಹಣೆಯಬರಹ, ಆದರೆ, ಅದೃಷ್ಟವಶದಿಂದ

ನೀನು ರಮೇಶನ ಕೈಹಿಡಿದಿರುವೆ ಎಂದು ಭಾವಿಸಿದ್ದೆ. ಏನೇ ಹೇಳು, ನಿರ್ಭಾಗ್ಯ ರಮೇಶಬಾಬುವಿನ ವಿಷಯ ನೆನಸಿದರೆ ಬಹಳ ದುಃಖವಾಗುವುದು. ಈ ರಾತ್ರಿ ಬಹಳ ಹೊತ್ತಾಗಿರುವುದು, ಕಮಲ, ಈಗ ನೀನು ನಿದ್ದೆಮಾಡು. ಅದೆಷ್ಟೋ ರಾತ್ರಿ ನಿದ್ದೆ ಮಾಡದೆಇತ್ತು ನಿನ್ನ ಮುಖ ಕಪ್ಪಿಟ್ಟಿದೆ. ಈಗ ಏನು ಮಾಡುವುದೆಂದು ನಾಳೆ ನಿರ್ಧರಿಸೋಣ" ಎಂದಳು.

ರಮೇಶ ಬರೆದಿದ್ದ ಆ ಪತ್ರ ಕಮಲೆಯ ಬಳಿ ಇತ್ತು. ಮರುದಿನ ಆ ಕಾಗದ ತೆಗೆದುಕೊಂಡು ಶೈಲಜ ತನ್ನ ತಂದೆಯನ್ನು ಗುಟ್ಟಾಗಿ ಕರೆದು ಅದನ್ನು ಅವರ ಕೈಗೆ ಕೊಟ್ಟಳು. ಚಿಕ್ಕಪ್ಪ ಕಣ್ಣಿಗೆ ಕನ್ನಡಕ ಏರಿಸಿ ಅತಿ ಸಾವಧಾನ ದಿಂದ ಓದಿಕೊಂಡರು, ಬಳಿಕ ಕಾಗದ ಮಡಿಸಿ ಕನ್ನಡಕ ತೆಗೆದು ಮಗಳನ್ನು "ಹಾಗಾದರೆ ಈಗೇನು ಮಾಡುವುದು ?" ಎಂದು ವಿಚಾರಿಸಿದರು.

"ಅಪ್ಪಾ, ಉಮಿಗೆ ಕೆಲವು ದಿನಗಳಿಂದ ನೆಗಡಿ ಕೆಮ್ಮು, ಒಮ್ಮೆ ಡಾಕ್ಟರ್ ನಳಿನಾಕ್ಷರನ್ನು ಕರೆದುಕೊಂಡು ಬನ್ನಿ. ಕಾಶಿಯಲ್ಲಿ ಅವರ ಮತ್ತು ಅವರ ತಾಯಿಯ ಹೆಸರನ್ನು ಎಲ್ಲರೂ ಬಲ್ಲರು. ಒಮ್ಮೆ ಅವರಿಗೆ ತೋರಿಸೋಣ" ಎಂದಳು ಶೈಲ.

ರೋಗಿಯನ್ನು ನೋಡಲು ಡಾಕ್ಟರ್ ಬಂದರು, ಡಾಕ್ಟರನ್ನು ನೋಡಲು ಶೈಲ ಆತುರ ಪಟ್ಟಳು. "ಕಮಲ, ಬಾ, ಬೇಗಬಾ, ಎಂದಳು.

ನವೀನಕಾಳಿಯ ಮನೆಯಲ್ಲಿ ನಳಿನಾಕ್ಷನನ್ನು ನೋಡುವ ಕುತೂಹಲ ದಲ್ಲಿ ತನ್ನನ್ನೇ ಮರೆತಿದ್ದ ಕಮಲ ಇಂದು ನಾಚಿಕೆ ಬಿಟ್ಟು ಬರಲಾಗಲಿಲ್ಲ.

"ನೋಡು, ನತದೃಷ್ಟೆ, ಈಗಲೇ ನಾನು ಹೇಳಿಬಿಟ್ಟಿರುವೆ, ನೀನು ತಡಮಾಡಬಾರದು—ನನಗೆ ಹೊತ್ತಿಲ್ಲ—ಉಮಿಯ ಕಾಯಿಲೆ ಕೇವಲ ನೆಪಮಾತ್ರ. ಡಾಕ್ಟರ್ ಹೆಚ್ಚು ಹೊತ್ತು ನಿಲ್ಲರು—ನಿನ್ನನ್ನು ಒಲಿಸಲು ಹೋಗಿ ನಡುವೆ ನಾನು ಅವರನ್ನು ನೋಡಲಾರೆ" ಎಂದು ಶೈಲ ಹೇಳಿದಳು.

ಹೀಗೆ ಹೇಳಿ ಕಮಲೆಯನ್ನು ಬಲಾತ್ಕಾರದಿಂದ ಎಳೆದುಕೊಂಡು ಶೈಲಜ ಬಾಗಿಲ ಮರೆಯಲ್ಲಿ ಬಂದು ನಿಂತಳು. ನಳಿನಾಕ್ಷ ಉಮಿಯ ಎದೆ-ಬೆನ್ನುಗಳನ್ನು ಚೆನ್ನಾಗಿ ಪರೀಕ್ಷಿಸಿ ಔಷಧಿ ಬರೆದುಕೊಟ್ಟು ಹೋದರು.

ಶೈಲ ಕಮಲೆಗೆ ಹೇಳಿದಳು, "ಕಮಲಾ, ವಿಧಾತನಿನಗೆ ಎಷ್ಟೇ ದುಃಖ ಕೊಡಲಿ, ನಿನ್ನ ಅದೃಷ್ಟ ಒಳ್ಳೆಯದು. ತಂಗೀ, ಈಗ ಒಂದೆರಡುದಿನ ನೀನು ಸ್ವಲ್ಪ ಧೈರ್ಯದಿಂದ ಇರಬೇಕು—ನಾನೊಂದು ಏರ್ಪಾಡು ಮಾಡುವೆ-

ಇಷ್ಟರಲ್ಲಿ ಉಮಿಗೆ ಮೇಲಿಂದ ಮೇಲೆ ಡಾಕ್ಟರ ಆವಶ್ಯಕತೆ ಬೀಳುವುದು, ಆದ್ದರಿಂದ ನೀನೇನೂ ನಷ್ಟ ಅನುಭವಿಸಬೇಕಾಗದು ".

ಒಂದು ದಿನ ನಳಿನಾಕ್ಷ ಮನೆಯಲ್ಲಿಲ್ಲದ ಸಮಯ ನೋಡಿ ಚಿಕ್ಕಪ್ಪ ಡಾಕ್ಟರನ್ನು ಕರೆಯಲು ಹೋದರು, ಆಳು, " ಡಾಕ್ಟರ್‌ಬಾಬು ಇಲ್ಲ" ಎಂದ. ಚಿಕ್ಕಪ್ಪ ಹೇಳಿದರು, '' ಅಮ್ಮಾವರು ಇರುವರಲ್ಲ; ಅವರಿಗೆ ಹೇಳು, ಒಬ್ಬ ಮುದಿಬ್ರಾಹ್ಮಣ ಅವರನ್ನು ನೋಡಲು ಬಂದಿರುವನೆಂದು ತಿಳಿಸು "

ಮೇಲಕ್ಕೆ ಕರೆ ಬಂತು. ಚಿಕ್ಕಪ್ಪಹೋಗಿ, '' ತಾಯಿ, ನಿಮ್ಮ ಹೆಸರು ಕಾಶಿಯಲ್ಲಿ ಸುಪ್ರಸಿದ್ಧ. ಆದ್ದರಿಂದ ನಿಮ್ಮನ್ನು ನೋಡಿ ಕೃತಾರ್ಥ ನಾಗಲು ಬಂದೆ. ನನಗೆ ಬೇರಾವ ಆಸೆಯೂ ಇಲ್ಲ. ನನ್ನ ಮೊಮ್ಮಗಳೊಬ್ಬಳಿಗೆ ಕಾಯಿಲೆ, ನಿಮ್ಮ ಮಕ್ಕಳನ್ನು ಕರೆಯಲು ಬಂದಿದ್ದೆ, ಅವರು ಮನೆಯಲ್ಲಿಲ್ಲ– ಅದರಿಂದಲೇ ವ್ಯರ್ಥವಾಗಿ ಹೋಗಬಾರದು, ಒಮ್ಮೆ ನಿಮ್ಮ ದರ್ಶನಮಾಡಿ ಹೋಗಬೇಕು ಎಂದು ತೀರ್ಮಾನಿಸಿದೆ " ಎಂದು ಹೇಳಿದರು.

ಕ್ಷೇಮಂಕರಿ, '' ನಳಿನ ಈಗಲೇ ಬರುವನು, ಅಲ್ಲಿಯವರೆಗೆ ನೀವು ಸ್ವಲ್ಪ ಕುಳಿತಿರಿ. ಹೊತ್ತೇನೂ ಕಡಿಮೆಯಾಗಿಲ್ಲ–ನಿಮಗಾಗಿ ಸ್ವಲ್ಪ ಫಲಹಾರ ತರಿಸಿಕೊಡುವೆ " ಎಂದಳು.

ಚಿಕ್ಕಪ್ಪ ಹೇಳಿದರು, '' ನೀವು ನನಗೆ ಫಲಹಾರ ಕೊಡದೆ ಕಳುಹಿಸು ವುದಿಲ್ಲವೆಂದು ನಾನು ಬಲ್ಲೆ–ಊಟದ ವಿಷಯದಲ್ಲಿ ನನಗೆ ಸ್ವಲ್ಪ ಆಸಕ್ತಿ ಇದೆ–ಜನ ನನ್ನನ್ನು ನೋಡಿಯೇ ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವರು– ಮತ್ತು ಈ ವಿಷಯದಲ್ಲಿ ಎಲ್ಲರೂ ನನ್ನಮೇಲೆ ದಯೆಯಿಟ್ಟಿರುವರು ".

ಕ್ಷೇಮಂಕರಿ ಚಿಕ್ಕಪ್ಪನಿಗೆ ಫಲಹಾರ ಕೊಟ್ಟು ಅತಿ ಸಂತೋಷಗೊಂಡಳು. " ನಾಳೆ ನಮ್ಮ ಮನೆಗೆ ನೀವು ಮಧ್ಯಾಹ್ನದ ಊಟಕ್ಕೆ ಬರಬೇಕು–ಈ ದಿನ ಏನೂ ಮಾಡಿರಲಿಲ್ಲ, ನಿಮಗೆ ಚೆನ್ನಾಗಿ ಉಣಬಡಿಸಲಾಗಲಿಲ್ಲ " ಎಂದಳು.

ಚಿಕ್ಕಪ್ಪ, '' ಕೆಲಸಬಿದ್ದಾಗ ಈ ಬ್ರಾಹ್ಮಣನನ್ನು ಜ್ಞಾಪಿಸಿಕೊಳ್ಳಿ. ನಿಮ್ಮ ಮನೆಯಿಂದ ನಾನು ಅಷ್ಟೇನೂ ದೂರದಲ್ಲಿಲ್ಲ. ಅಪ್ಪಣೆಯಾದರೆ ನಿಮ್ಮ ಸೇವಕನನ್ನು ಕರೆದುಕೊಂಡು ಹೋಗಿ ನಮ್ಮ ಮನೆ ತೋರಿಸುವೆ" ಎಂದರು.

ಈ ರೀತಿ ಚಿಕ್ಕಪ್ಪ ನಾಲ್ಕಾರು ದಿನ ಹೋಗಿಬರುವುದರಲ್ಲಿ ನಳಿನಾಕ್ಷನ ಮನೆಯಲ್ಲಿ ಅತಿ ಸಲಿಗೆ ಪಡೆದರು.

ಕ್ಷೇಮಂಕರಿ ನಳಿನಾಕ್ಷನನ್ನು ಕರೆದು. " ಓ ನಳಿನ್, ನೀನು ಚಕ್ರವರ್ತಿ ಮಹಾಶಯರ ಹತ್ತಿರ ಫೀಸು ತೆಗೆದುಕೊಂಡೆಯೇನು ? " ಎಂದು ಕೇಳಿದಳು.

ಚಿಕ್ಕಪ್ಪ ನಕ್ಕು ಹೇಳಿದರು, " ತಾಯಿಯ ಅಪ್ಪಣೆ ಪಡೆಯುವ ಮೊದಲೇ ಅವರು ಅದನ್ನು ನಡೆಸುತ್ತ ಬಂದಿರುವರು–ನನ್ನ ಹತ್ತಿರ ಅವರು ಏನೂ ತೆಗೆದುಕೊಂಡಿಲ್ಲ ದಾತೃಗಳಾದವರು ನೋಡಿದೊಡನೆಯೇ ಬಡವರನ್ನು ಗುರ್ತಿಸಬಲ್ಲರು ".

ಒಂದೆರಡು ದಿನ ತಂದೆ ಮಗಳಲ್ಲಿ ಆಲೋಚನೆ ನಡೆಯಿತು. ಬಳಿಕ ಒಂದುದಿನ ಚಿಕ್ಕಪ್ಪ ಕಮಲೆಯನ್ನು ಕರೆದು, " ನಡೆಯಮ್ಮ, ನಾವು ದಶಾಶ್ವ ಮೇಧಘಟ್ಟದಲ್ಲಿ ಸ್ನಾನಮಾಡಲು ಹೋಗೋಣ " ಎಂದರು.

ಕಮಲ ಶೈಲಳಿಗೆ, " ಅಕ್ಕಾ, ನೀನೂ ಬಾ " ಎಂದಳು.

" ಇಲ್ಲ ತಂಗಿ, ಉಮಿಯ ಮೈ ಅಷ್ಟುಚೆನ್ನಾಗಿಲ್ಲ " ಎಂದು ಶೈಲ ಹೇಳಿದಳು

ಸ್ನಾನ ಮುಗಿಸಿದಬಳಿಕ ಚಿಕ್ಕಪ್ಪ, ಸ್ನಾನಘಟ್ಟಕ್ಕೆ ಹೋದ ದಾರಿಯಲ್ಲೇ ಹಿಂದಿರುಗದೆ ಬೇರೆದಾರಿಯಲ್ಲಿ ಹೊರಟರು––ಸ್ವಲ್ಪ ದೂರ ಹೋಗುತ್ತಲೇ ಓರ್ವ ಹೆಂಗಸು ಸ್ನಾನಮುಗಿಸಿ ರೇಶ್ಮೆವಸ್ತ್ರ ಧರಿಸಿ ತಂಬಿಗೆಯಲ್ಲಿ ಗಂಗೆಯ ನೀರು ತುಂಬಿಕೊಂಡು ಮೆಲ್ಲಮೆಲ್ಲನೆ ಬರುತ್ತಿರುವುದನ್ನು ನೋಡಿದರು.

ಕಮಲೆಯನ್ನು ಸಮೀಪಕ್ಕೆ ಕರೆದು ಚಿಕ್ಕಪ್ಪ ಹೇಳಿದರು, " ಅಮ್ಮಾ, ಇವರಿಗೆ ನಮಸ್ಕಾರಮಾಡು, ಇವರು ಡಾಕ್ಟರ್‌ಬಾಬುಗಳ ತಾಯಿ ".

ಇದನ್ನು ಕೇಳಿ ಕಮಲ ಅಚ್ಚರಿಗೊಂಡು ಕೂಡಲೇ ಕ್ಷೇಮಂಕರಿಗೆ ನಮಸ್ಕಾರಮಾಡಿ ಆವಳ ಪಾದಧೂಳಿ ತೆಗೆದುಕೊಂಡಳು.

" ನೀನಾರಮ್ಮ. ಆಹಾ, ಅದೆಂಥಹ ರೂಪು ! ಲಕ್ಷ್ಮಿಯ ಪ್ರತಿಮೆ " ಎಂದಳು ಕ್ಷೇಮಂಕರಿ. ಹೀಗೆ ಹೇಳಿ ಕಮಲೆಯ ಮುಸುಕು ಓರೆಮಾಡಿ ಅವಳ ನತನೇತ್ರ ಮುಖವನ್ನು ಚೆನ್ನಾಗಿ ನೋಡಿದಳು. " ನಿನ್ನ ಹೆಸರೇನು ಮಗೂ " ಎಂದಳು.

ಕಮಲ ಉತ್ತರ ಹೇಳುವ ಮೊದಲೇ ಚಿಕ್ಕಪ್ಪ ಹೇಳಿದರು, " ಇವಳ ಹೆಸರು ಹರಿದಾಸಿ. ಇವಳು ನಮ್ಮ ದೂರದ ಬಳಗದ ಅಣ್ಣನ ಮಗಳು. ಇವಳಿಗೆ ತಂದೆ–ತಾಯಿ ಯಾರೂ ಇಲ್ಲ–ನನ್ನನ್ನೇ ನಂಬಿರುವಳು "

ಕ್ಷೇಮಂಕರಿ, “ಬನ್ನಿ ಚಕ್ರವರ್ತಿಮಹಾಶಯ, ನಮ್ಮ ಮನೆಗೆ ಬನ್ನಿರಿ” ಎಂದಳು.

ಮನೆಗೆ ಕರೆದು ಕೊಂಡುಹೋಗಿ ಕ್ಷೇಮಂಕರಿ ಒಮ್ಮೆ ನಳಿನಾಕ್ಷನನ್ನು ಕರೆದಳು. ನಳಿನಾಕ್ಷ ಆಗ ಹೊರಗಡೆ ಹೋಗಿದ್ದ.

ಚಿಕ್ಕಪ್ಪ ಕುಳಿತುಕೊಂಡರು--ಕಮಲ ನೆಲದ ಮೇಲೆ ಕುಳಿತಳು “ನೋಡಿ, ನಮ್ಮ ಅಣ್ಣನ ಮಗಳ ಅದೃಷ್ಟ ಒಳ್ಳೆಯದಲ್ಲ. ಮದುವೆಯಾದ ಮರುದಿನವೇ ಇವಳ ಗಂಡ ಸಂನ್ಯಾಸಿಯಾಗಿ ದೇಶಾಂತರ ಹೊರಟುಹೋದ- ಇವಳನ್ನು ನೋಡುವುದೇ ಇಲ್ಲ. ಧರ್ಮ ಕರ್ಮ ಎಂದು ತೀರ್ಥಕ್ಷೇತ್ರದಲ್ಲೇ ವಾಸಮಾಡಲು ಹರಿದಾಸಿಗೆ ಇಷ್ಟ-ಧರ್ಮ ಅಲ್ಲದಿದ್ದರೂ ಇವಳಿಗೆ ಸಮಾಧಾನದವಸ್ತು ಬೇರೊಂದಿಲ್ಲ. ಇಲ್ಲಿ ನಮಗೆ ಮನೆಯಿಲ್ಲ. ನನಗೆ ನೌಕರಿಯಿದೆ-ಸಂಪಾದನೆಮಾಡಿ ನಾವು ಸಂಸಾರ ನಿರ್ವಹಿಸಬೇಕು. ಇವಳನ್ನು ಕರೆದುಕೊಂಡು ಬಂದು ಇಲ್ಲೇ ಇರಲು ನನಗೆ ಅನುಕೂಲವಿಲ್ಲ. ಅದರಿಂದಲೇ ನಿಮ್ಮ ಮರೆಹೊಕ್ಕಿರುವುದು. ಇವಳನ್ನು ನಿಮ್ಮ ಮಗಳಂತೆ ಹತ್ತಿರದಲ್ಲಿಟ್ಟು ಕೊಳ್ಳುವುದಾದರೆ ನಾನು ನಿಶ್ಚಿಂತನಾಗಿರುವೆ. ತೊಂದರೆ ಎಂದು ಕಂಡು ಬಂದಾಗ, ಗಾಜೀಪುರಕ್ಕೆ ನನ್ನ ಹತ್ತಿರ ಕಳುಹಿಸಿಕೊಡಿ. ಆದರೆ ಒಂದೆರಡು ದಿನ ಹತ್ತಿರ ಇಟ್ಟುಕೊಂಡರೆ ಹುಡುಗಿ ಎಂಥ ರತ್ನ ಎಂದು ತಿಳಿದುಕೊಳ್ಳುವಿರೆಂದು ನಾನು ಬಲ್ಲೆ —ಆಮೇಲೆ ಒಂದುಕ್ಷಣವೂ ಬಿಟ್ಟಿರಲಾರಿರಿ.

ಕ್ಷೇಮಂಕರಿ ಸಂತೋಷದಿಂದ ಹೇಳಿದಳು, “ಆಹಾ, ಇದೀಗ ಸರಿಯಾದ ಮಾತು. ಇಂಥ ಹುಡುಗಿಯನ್ನು ನೀವು ನನ್ನ ಹತ್ತಿರ ಬಿಟ್ಟುಹೋಗುವಿರಿ— ಇದು ನನ್ನ ಸೌಭಾಗ್ಯ. ನಾನು ಅದೆಷ್ಟುದಿನ ಬೀದಿಯಿಂದ ಕಂಡಕಂಡವರ ಹೆಣ್ಣುಮಕ್ಕಳನ್ನು ಮನೆಗೆ ಕರೆತಂದು ಊಣಿಸಿ-ಉಡಿಸಿ ಆನಂದಪಟ್ಟಿರುವೆ. ಆದರೆ ಅವರನ್ನು ಇಟ್ಟುಕೊಳ್ಳಲಾರದಿದ್ದೆ. ಆದರೆ ಹರಿದಾಸಿ ನನ್ನವಳೇ ಆದಳು—ನೀವು ಇವಳ ವಿಷಯದಲ್ಲಿ ಯಾವ ಯೋಚನೆಯನ್ನೂ ಇಟ್ಟು ಕೊಳ್ಳಬೇಡಿ. ನನ್ನ ಮಗನ ವಿಷಯವನ್ನು ಖಂಡಿತ ನೀವು ನಾಲ್ಕಾರುಜನರಲ್ಲಿ ಕೇಳಿತಿಳಿದಿರುವಿರಿ-ನಳಿನಾಕ್ಷ-ಅವನು ಬಹಳ ಒಳ್ಳೆಯ ಹುಡುಗ, ಅವನನ್ನು ಬಿಟ್ಟರೆ ಮನೆಯಲ್ಲಿ ಬೇರೆಯಾರೂ ಇಲ್ಲ.

“ನಳಿನಾಕ್ಷಬಾಬುವಿನ ಹೆಸರನ್ನು ಎಲ್ಲರೂ ಬಲ್ಲರು. ಅವರು ಇಲ್ಲಿ ನಿಮ್ಮ ಹತ್ತಿರ ಇರುವರೆಂದು ಕೇಳಿ ನನಗೆ ಮತ್ತಷ್ಟು ನಿಶ್ಚಿಂತೆ.

ಮದುವೆಯಾದ ಬಳಿಕ ದುರ್ಘಟನೆಯಿಂದ ಅವರ ಹೆಂಡತಿ ನೀರಿನಲ್ಲಿ ಮುಳುಗಿ ಸತ್ತುಹೋದಾರಭ್ಯ ಇವರು ಒಂದು ರೀತಿಯಲ್ಲಿ ಬ್ರಹ್ಮಚಾರಿಯಂತೆ ಇರುವರೆಂದು ನಾನು ಕೇಳಿರುವೆ" ಎಂದು ಚಿಕ್ಕಪ್ಪ ಹೇಳಿದರು.

ಕ್ಷೇಮಂಕರಿ ಹೇಳಿದಳು, "ಆಗಬೇಕಾದುದು ಆಗಿಹೋಯಿತು—ಇನ್ನು ಆ ಮಾತು ಎತ್ತಬೇಡಿ—ನೆನೆಸಿಕೊಂಡರೆ ನನ್ನ ಮೈಯಲ್ಲಿ ಮುಳ್ಳು ಚುಚ್ಚಿದಂತಾಗುವುದು".

ಚಿಕ್ಕಪ್ಪ, "ಅಪ್ಪಣೆಯಾದರೆ, ಹುಡುಗಿಯನ್ನು ನಿಮ್ಮ ಹತ್ತಿರ ಬಿಟ್ಟು ಇನ್ನು ನಾನು ಹೊರಡುವೆ. ಆಗಾಗ ಬಂದು ನೋಡಿಕೊಂಡುಹೋಗುವೆ. ಇವಳಿಗೊಬ್ಬಳು ಅಕ್ಕ ಇರುವಳು. ಅವಳೂ ನಿಮ್ಮ ಆಶೀರ್ವಾದಪಡೆಯಲು ಬರುವಳು" ಎಂದು ಹೇಳಿದರು.

ಚಿಕ್ಕಪ್ಪ ಹೊರಟುಹೋದರು. ಕ್ಷೇಮಂಕರಿ ಕಮಲೆಯನ್ನು ಹತ್ತಿರಕ್ಕೆ ಎಳೆದುಕೊಂಡು, "ಕುಳಿತುಕೊಳ್ಳಮ್ಮ, ನೋಡುವೆ. ನಿನಗೆ ಅಷ್ಟೇನೂ ವಯಸ್ಸಾಗಿಲ್ಲ. ಓಃ, ನಿನ್ನನ್ನು ಬಿಟ್ಟು ಹೋಗುವಂಥ ಕಲ್ಲೆದೆಯೂ ಜಗತ್ತಿನಲ್ಲಿರುವುದೆ? ಅವನು ಹಿಂದಿರುಗಿ ಬರಲಿ ಎಂದು ನಾನು ಆಶೀರ್ವಾದ ಮಾಡುವೆ. ವಿಧಾತ ಇಂಥ ಚೆಲುವನ್ನು ಹಾಳುಮಾಡುವುದಕ್ಕಾಗಿ ಸೃಷ್ಟಿಸಿರುವುದಿಲ್ಲ" ಎಂದು ಹೇಳಿ ಕಮಲೆಯ ಗಲ್ಲ ಮುಟ್ಟಿ ಬೆರಳಿಗೆ ಮುತ್ತಿಟ್ಟುಕೊಂಡಳು.

"ಇಲ್ಲಿ ನಿನ್ನ ಸರಿವಯಸಿನ ಗೆಳತಿಯರು ಯಾರೂ ಇಲ್ಲ—ಒಂಟಿಯಾಗಿ ನೀನು ನನ್ನಬಳಿ ಇರಬಲ್ಲೆಯೇನು?" ಎಂದು ಕ್ಷೇಮಂಕರಿ ಕೇಳಿದಳು.

ಕಮಲ—ತನ್ನೆರಡು ದೊಡ್ಡದೊಡ್ಡ ಸ್ನಿಗ್ಧನೋಟದಲ್ಲಿ ಸಂಪೂರ್ಣ ಆತ್ಮನಿವೇದನೆಮಾಡಿಕೊಂಡು, "ಇರಬಲ್ಲೆನಮ್ಮ" ಎಂದಳು.

"ನೀನು ಹೊತ್ತುಕಳೆಯುವುದು ಹೇಗೆಂದು ಯೋಚಿಸುತಿರುವೆ" ಎಂದಳು ಕ್ಷೇಮಂಕರಿ.

ಕಮಲ ಹೇಳಿದಳು, "ನಾನು ನಿಮ್ಮ ಕೆಲಸಮಾಡುವೆ"

ಕ್ಷೇಮಂಕರಿ—ಹಣೆಯಬರಹ. ಪುನಃ ನನ್ನ ಕೆಲಸ. ಜಗತ್ತಿನಲ್ಲಿನನಗೆ ಅವನೊಬ್ಬನೇ ಮಗ—ಅವನೂ ಸಂನ್ಯಾಸಿಯಂತಿರುವನು—ಎಂದಾದರೂ ಅವನು 'ಅಮ್ಮಾ, ನನಗೆ ಇದು ಬೇಕಾಗಿದೆ, ನಾನಿದನ್ನು ತಿನ್ನಬೇಕು, ನಾನಿದನ್ನು ಇಷ್ಟಪಡುವೆ' ಎಂದು ಹೇಳಿದರೆ ನನಗೆ ಅದೆಷ್ಟು ಆನಂದ

ವಾಗುವುದು—ಆದರೆ ಎಂದಿಗೂ ಹೇಳುವುದಿಲ್ಲ—ಬೇಕಾದಷ್ಟು ಸಂಪಾದನೆ ಯಿದೆ. ಕೈಯಲ್ಲಿ ಏನೂ ಉಳಿಸಿಕೊಳ್ಳುವುದಿಲ್ಲ—ಅದೆಷ್ಟು ಸತ್ಕಾರ್ಯಗಳಿಗಾಗಿ ಅದೆಷ್ಟುಬಗೆಯಲ್ಲಿ ವೆಚ್ಚಮಾಡುವನೆಂಬುದನ್ನು ಯಾರಿಗೂ ತಿಳಿಯಪಡಿ ಸುವುದಿಲ್ಲ. ನೋಡು ಮಗೂ, ನನ್ನಹತ್ತಿರ ನೀನು ಇಪ್ಪತ್ನಾಲ್ಕುಗಂಟೆಗಳ ಕಾಲ ಇರುವೆಯಾದರೆ, ಬಾರಿಬಾರಿಗೂ ನನ್ನ ಬಾಯಿಂದ ನನ್ನ ಮಗನ ಗುಣಗಾನ ಕೇಳಿ ನಿನಗೆ ಬೇಸರವಾದೀತು—ಆದರೆ ಅದನ್ನು ನೀನು ಸಹಿಸಿ ಕೊಳ್ಳಲೇಬೇಕು ಎಂದು ಮೊದಲೇ ಹೇಳಿಬಿಡುವೆ.

ಕಮಲ ಪುಳಕಿತಮನದಿಂದ ನೆಲನೋಡಿದಳು. ಕ್ಷೇಮಂಕರಿ, "ನಾನು ನಿನಗೆ ಯಾವ ಕೆಲಸಕೊಡುವುದೆಂದು ಯೋಚಿಸುತಿರುವೆ. ಕಸೂತಿ ಹಾಕ ಬಲ್ಲೆಯಾ ?" ಎಂದು ಕೇಳಿದಳು.

"ಚೆನ್ನಾಗಿ ತಿಳಿಯದಮ್ಮಾ" ಎಂದಳು ಕಮಲ.

ಕ್ಷೇಮಂಕರಿ ಹೇಳಿದಳು, "ಸರಿ, ನಾನು ಕಸೂತಿಕಲಿಸಿಕೊಡುವೆ".

"ಓದುಬರುವುದೇ" ಎಂದು ಕ್ಷೇಮಂಕರಿ ವಿಚಾರಿಸಿದಳು.

"ಹೂಂ-ಬರುವುದು." ಎಂದಳು ಕಮಲ

"ಹಾಗಾದರೆ ಸರಿ, ಕಣ್ಣಿಗೆ ಕನ್ನಡಕ ಇಲ್ಲದೆ ಕಾಣುವುದೇ ಇಲ್ಲ—ನೀನು ನನಗೆ ಓದಿ ಹೇಳಬಲ್ಲೆ" ಎಂದಳು ಕ್ಷೇಮಂಕರಿ.

ಕಮಲ, "ನನಗೆ ಅಡುಗೆಕೆಲಸ-ಮನೆಕೆಲಸ ಎಲ್ಲಾಗೊತ್ತು" ಎಂದಳು.

ಕ್ಷೇಮಂಕರಿ ಹೇಳಿದಳು, "ಅನ್ನಪೂರ್ಣೆಯಂಥ ಮುಖ, ನೀನು ಅಡಿಗೆ-ಊಟದ ಕೆಲಸ ತಿಳಿಯೆನೆಂದರೆ ಬೇರೆ ಯಾರು ಬಲ್ಲರು. ಇಂದಿನವರೆಗೆ ನಳಿನನಿಗೆ ನಾನು ಸ್ವತಃ ಅಡುಗೆಮಾಡಿ ಬಡಿಸಿರುವೆ—ನನ್ನ ಆರೋಗ್ಯ ಕೆಟ್ಟರೆ ತಾನೇ ಮಾಡಿಕೊಂಡು ಊಟ ಮಾಡುವ, ಯಾರ ಕೈಯಲ್ಲೂ ಊಟ ಮಾಡುವುದಿಲ್ಲ. ಇನ್ನುಮುಂದೆ ನಿನ್ನ ಪುಣ್ಯದಿಂದ ಅವನು ಸ್ವತಃ ಅಡುಗೆ ಮಾಡಿಕೊಳ್ಳುವುದನ್ನು ನಿಲ್ಲಿಸಿಬಿಡುವೆ. ಕೈಲಾಗದಿದ್ದಾಗ ನನಗೂ ನಾಲ್ಕಾರು ದಿನ ಹವಿಷ್ಯಾನ್ನ* ಅಟ್ಟು ಬಡಿಸಿದರೆ ನಾನು ಬೇಡ ಎನ್ನುವುದಿಲ್ಲ. ನಡೆ ತಾಯಿ, ನಿನಗೆ ನಮ್ಮ ಉಗ್ರಾಣ, ಅಡುಗೆಮನೆ ಮೊದಲಾದುವನ್ನು ತೋರಿಸುವೆ".

---

*ಹವಿಷ್ಯಾನ್ನ—ತುಪ್ಪ, ಸಕ್ಕರೆಹಾಕಿ ಇಂಗಿಸಿಮಾಡಿದ ಅನ್ನ.

ಹೀಗೆಹೇಳಿ ಕ್ಷೇಮಂಕರಿ ತನ್ನ ಪುಟ್ಟಮನೆಯ ಎಲ್ಲ ನೇಪಥ್ಯ ಗೃಹಗಳನ್ನೂ ಕಮಲೆಗೆ ತೋರಿಸಿದಳು. ಇಷ್ಟರಲ್ಲಿ ಕಮಲ ಸ್ವಲ್ಪ ಅವಕಾಶ ಪಡೆದು ಮೆಲ್ಲಮೆಲ್ಲನೆ ತನ್ನ ಕೋರಿಕೆ ಮುಂದಿಟ್ಟಳು, "ಅಮ್ಮಾ, ಇವತ್ತು ನಾನು ಅಡುಗೆಮಾಡುವೆ" ಎಂದಳು.

ಕ್ಷೇಮಂಕರಿ ತುಸು ನಕ್ಕಳು. "ಗೃಹಣಿಯ ಅಧಿಕಾರ ಉಗ್ರಾಣ ಹಾಗೂ ಅಡುಗೆ ಮನೆಯಲ್ಲಿ–ಜೀವನದಲ್ಲಿ ಎಷ್ಟೆಷ್ಟೋ ಸಾಮಗ್ರಿಗಳನ್ನು ಬಿಡಬೇಕಾಗಿಬಂದಿದೆ—ಆದರೂ ಅವು ಜೊತೆಯಲ್ಲೇ ಅಂಟಿಕೊಂಡಿರುವುವು. ಆಗಲಿ ತಾಯಿ, ಈವತ್ತಿನವುಟ್ಟಿಗೆ ಅಡುಗೆಮಾಡು—ನಾಲ್ಕಾರುದಿನ ಕಳೆಯಲಿ ಕ್ರಮೇಣ ಎಲ್ಲ ಹೊಣೆಯೂ ತಾನಾಗಿಯೇ ನಿನ್ನಕೈಸೇರುವುದು—ನನಗೂ ದೇವರ ಧ್ಯಾನಕ್ಕೆ ಅವಕಾಶದೊರೆಯುವುದು. ಬಂಧನ ಒಂದೇಸಾರಿಗೆ ಬಿಟ್ಟುಹೋಗದು—ನಾಲ್ಕಾರುದಿನ ಮನಸ್ಸು ಚಂಚಲವಾಗಿಯೇ ಇರುವುದು–ಉಗ್ರಾಣದ ಸಿಂಹಾಸನ ಕಡಿಮೆಯದೇನೂ ಅಲ್ಲ" ಎಂದು ಹೇಳಿದಳು

ಹೀಗೆ ಹೇಳಿ ಕ್ಷೇಮಂಕರಿ ಕಮಲೆಗೆ ಯಾವ ಅಡುಗೆ ಮಾಡಬೇಕು, ಹೇಗೆ ಮಾಡಬೇಕು ಎಂಬುದನ್ನೆಲ್ಲ ಉಪದೇಶಿಸಿ ದೇವರ ಕೋಣೆಗೆ ಹೋದಳು. ಕ್ಷೇಮಂಕರಿಯ ಬಳಿ ಇಂದು ಕಮಲೆಯ ಮನೆಗೆಲಸದ ಪರೀಕ್ಷೆ ಪ್ರಾರಂಭಿಸಿತು.

ಕಮಲ ತನ್ನ ಸ್ವಾಭಾವಿಕ ತತ್ಪರತೆಯಿಂದ ಅಡುಗೆ ಮಾಡುವುದರಲ್ಲಿ ನಿರತಳಾಗಿದ್ದಳು. ಸೊಂಟಕ್ಕೆ ಸೆರಗುಸಿಕ್ಕಿಸಿ, ತಲೆಯಲ್ಲಿ ಹೆರಳು ಎತ್ತಿ ಕಟ್ಟಿಕೊಂಡು ಅಡುಗೆಯಲ್ಲಿ ಮಗ್ನಳಾಗಿದ್ದಳು.

ನಳಿನಾಕ್ಷ ಹೊರಗಡೆಯಿಂದ ಮನೆಗೆ ಹಿಂದಿರುಗುತ್ತಲೇ ಮೊದಲು ತನ್ನ ತಾಯಿಯನ್ನು ನೋಡಲು ಹೋಗುವನು. ತನ್ನ ತಾಯಿಯ ಆರೋಗ್ಯದ ಚಿಂತೆ ಅವನನ್ನು ಯಾವಾಗಲೂ ಬಿಟ್ಟಿರುತ್ತಿರಲಿಲ್ಲ. ಇಂದು ಮನೆಯನ್ನು ಪ್ರವೇಶಿಸುತ್ತಲೇ ಅಡುಗೆ ಮನೆಯ ಶಬ್ದವೂ ಸುವಾಸನೆಯೂ ಆಕರ್ಷಿಸಿತು. ಅಮ್ಮ ಅಡುಗೆ ಮಾಡುತ್ತಿರುವಳೆಂದು ತಿಳಿದು ನಳಿನಾಕ್ಷ ಅಡುಗೆ ಮನೆಯ ಬಾಗಿಲಬಳಿ ಬಂದುನಿಂತನು. ಹೆಜ್ಜೆಯ ಸದ್ದಿನಿಂದ ಬೆದರಿದ ಕಮಲ ಹಿಂದಿರುಗಿ ನೋಡುತ್ತಲೇ ಒಮ್ಮೆಗೇ ನಳಿನಾಕ್ಷನ ನೋಟದೊಂದಿಗೆ ಅವಳ ನೋಟವೂ ಬೆರೆಯಿತು. ಕೂಡಲೆ, ಸೌಟು ಇಡುತ್ತ ಮುಸುಕು ಎಳೆದು ಕೊಳ್ಳಲು ಪ್ರಯತ್ನಿಸಿದಳು–ಸೊಂಟಕ್ಕೆ ಸೆರಗು ಸಿಕ್ಕಿಸಲಾಗಿತ್ತು–ಎಳೆದೆಳೆದು ಮುಸುಕನ್ನು ಹಣೆಯಹತ್ತಿರ ತರುವುದರಲ್ಲಿ, ವಿಸ್ಮಿತ ನಳಿನಾಕ್ಷ ಅಲ್ಲಿಂದ

ಹೊರಟುಹೋದ. ಆ ಬಳಿಕ ಕಮಲೆ ಕೈಗೆ ಸೌಟು ತೆಗೆದುಕೊಂಡಾಗ ಅವಳ ಕೈ ನಡುಗುತ್ತಿತ್ತು.

ಬೇಗಬೇಗ ಪೂಜೆ ಮುಗಿಸಿಕೊಂಡು ಕ್ಷೇಮಂಕರಿ ಅಡುಗೆ ಮನೆಗೆ ಹೋಗಿ ನೋಡಿದಾಗ ಅಡುಗೆ ಮುಗಿದಿತ್ತು. ಕಮಲ ಕೋಣೆಯನ್ನು ತೊಳೆದು ಚೊಕ್ಕಟವಾಗಿಟ್ಟಿರುವಳು —ಎಲ್ಲೂ ಕೊಳ್ಳಿಯಾಗಲಿ, ತರಕಾರಿ ಸಿಪ್ಪೆಯಾಗಲಿ ಅಥವಾ ಬೇರೆ ಯಾವ ಕಸವೂ ಇಲ್ಲ. ನೋಡಿ ಕ್ಷೇಮಂಕರಿ ಮನದಲ್ಲೇ ಸಂತೋಷಗೊಂಡಳು. "ಅಮ್ಮಾ ನೀನು ಬ್ರಾಹ್ಮಣರ ಹುಡುಗಿಯೇ ಸರಿ" ಎಂದಳು.

ನಳಿನಾಕ್ಷ ಊಟಕ್ಕೆ ಕುಳಿತಾಗ ಕ್ಷೇಮಂಕರಿ ಅವನೆದುರಿಗೆ ಕುಳಿತಳು— ಮತ್ತೊಂದು ಸಂಕುಚಿತಪ್ರಾಣಿ ಕಿವಿ ನೆಟ್ಟಗೆಮಾಡಿಕೊಂಡು ಬಾಗಿಲಮರೆಯಲ್ಲಿ ನಿಂತಿರುವುದು—ಇಣಿಕಿನೋಡುವ ಸಾಹಸ ಮಾಡುತ್ತಿರಲಿಲ್ಲ—ಭಯದಿಂದ ಜೀವ ಬಿಡುತ್ತಿತ್ತು.—ಪ್ರಾಯಃ ತನ್ನ ಅಡುಗೆ ಕೆಟ್ಟುಹೋಗಿರಬಹುದೆಂದು.

"ನಳಿನ, ಇಂದಿನ ಅಡುಗೆ ಹೇಗಿದೆ" ಎಂದು ಕ್ಷೇಮಂಕರಿ ವಿಚಾರಿಸಿದಳು.

ನಳಿನಾಕ್ಷನಿಗೆ ಊಟ ತಿಂಡಿಯ ವಿಷಯದಲ್ಲಿ ಅಷ್ಟಾಗಿ ಪರಿಚಯವಿಲ್ಲ. ಅದರಿಂದಲೇ ಕ್ಷೇಮಂಕರಿ ಇಂಥ ಅನಾವಶ್ಯಕ ಪ್ರಶ್ನೆಯನ್ನುಎಂದೂ ಅವನನ್ನು ಕೇಳುತಿರಲಿಲ್ಲ—ಈದಿನ ಅತಿ ಕುತೂಹಲವಶದಿಂದ ಕೇಳಿದಳು.

ಮೊದಲೇ ನಳಿನಾಕ್ಷನಿಗೆ ಅಡುಗೆಮನೆಯು ಹೊಸ ರಹಸ್ಯದ ಪರಿಚಯ ವಾಗಿರುವುದು ಅವನ ತಾಯಿಗೆ ತಿಳಿಯದು. ಇತ್ತೀಚೆಗೆ ತಾಯಿಯ ಆರೋಗ್ಯ ಕೆಡುತ್ತಿದ್ದುದರಿಂದ ನಳಿನಾಕ್ಷ ಅಡುಗೆಕೆಲಸಕ್ಕೆ ಯಾರನ್ನಾದರೂ ನೇಮಿಸಲು ತಾಯಿಯನ್ನು ಎಷ್ಟೋ ಬಲಾತ್ಕರಿಸುತ್ತಿದ್ದನು. ಆದರೆ ಯಾವ ಬಗೆಯಲ್ಲೂ ಆಕೆಯನ್ನು ಒಪ್ಪಿಸಲಾಗುತ್ತಿರಲಿಲ್ಲ. ಇಂದು ಹೊಸಬಳನ್ನು ಅಡುಗೆಗೆ ನೇಮಿಸಿರುವುದನ್ನುಕಂಡು ಅವನು ಒಳಗೊಳಗೆ ಸಂತೋಷಪಟ್ಟನು. ಅಡುಗೆ ಹೇಗಿರುವುದೆಂಬುದನ್ನು ಅವನು ಅಷ್ಟಾಗಿ ಗಮನಿಸಿರಲಿಲ್ಲ.—ಆದರೆ ಉತ್ಸಾಹ ವಶದಿಂದ, "ಅಡುಗೆ ಬಹಳ ರುಚಿಯಾಗಿರುವುದು" ಎಂದ.

ಮರೆಯಿಂದ ಈ ಉತ್ಸಾಹವಾಕ್ಯ ಕೇಳಿ ಕಮಲೆಗೆ ಧೈರ್ಯವಾಗಿ ನಿಲ್ಲಲಾಗಲಿಲ್ಲ. ಅವಳು ವೇಗವಾಗಿ ಪಕ್ಕದ ಕೊಠಡಿಯೊಂದರೊಳಕ್ಕೆ ಹೋಗಿ ತನ್ನ ಚಂಚಲ ವಕ್ಷವನ್ನು ಎರಡು ಕೈಗಳಿಂದಲೂ ಒತ್ತಿಹಿಡಿದುಕೊಂಡಳು.

ಊಟವಾದ ಬಳಿಕ ನಳಿನಾಕ್ಷ ತನ್ನ ಮನಸಿನಲ್ಲಿ ಯಾವುದೋ ಒಂದು ಅಸ್ಪಷ್ಟತೆಯನ್ನು ಸ್ಪಷ್ಟಪಡಿಸಿಕೊಳ್ಳಲು ಪ್ರಯತ್ನಿಸುತ್ತ ಪ್ರತಿನಿತ್ಯದ ಅಭ್ಯಾಸದಂತೆ ಏಕಾಂತ ಅಧ್ಯಯನಕ್ಕೆ ತೆರಳಿದ

ಸಂಜೆಯಲ್ಲಿ ಕ್ಷೇಮಂಕರಿ ಕಮಲೆಗೆ ತಾನೇ ಹೆರಳುಹಾಕಿ ಬೈತಲೆಯಲ್ಲಿ ಸಿಂಧೂರ ಇಟ್ಟಳು—ಅವಳ ಮುಖವನ್ನೊಮ್ಮೆ ಅತ್ತ-ಇತ್ತ ತಿರುಗಿಸಿ ಚೆನ್ನಾಗಿ ನೋಡಿದಳು—ಕಮಲ ನಾಚಿಕೆಯಿಂದ ನೆಲ ನೋಡುತ್ತ ಕುಳಿತಿದ್ದಳು. ಕ್ಷೇಮಂಕರಿ ಮನದಲ್ಲೇ "ಆಹಾ ! ನನಗೂ ಇಂಥ ಸೊಸೆ ಇದ್ದಿದ್ದರೆ" ಎಂದುಕೊಂಡಳು

ಆ ರಾತ್ರಿ ಕ್ಷೇಮಂಕರಿಗೆ ಪುನಃ ಜ್ವರ ಬಂತು. ನಳಿನಾಕ್ಷ ತಳಮಳಿಸ ಲಾರಂಭಿಸಿದ, "ಅಮ್ಮಾ, ನಿನ್ನನ್ನು ನಾನು ಕೆಲವುದಿನ ಕಾಶಿಯಿಂದ ಬೇರೆಲ್ಲಿಗಾದರೂ ಕರೆದುಕೊಂಡುಹೋಗುವೆ. ಇಲ್ಲಿ ನಿನ್ನ ಆರೋಗ್ಯ ನೆಟ್ಟ ಗಿರದು" ಎಂದು ಹೇಳಿದ.

ಕ್ಷೇಮಂಕರಿ ಹೇಳಿದಳು, "ಅದಾಗದು ಮಗು, ಒಂದೆರಡುದಿನ ಬದುಕಿರುವ ಆಸೆಯಿಂದ ನಾನು ಕಾಶೀ ಬಿಟ್ಟು ಎಲ್ಲಿಗೋಹೋಗಿ ಸಾಯಲೇ ? ಅದು ಸಾಧ್ಯವಿಲ್ಲ. ಓ ನೀನೇನಮ್ಮ, ನೀನೇಕೆ ಬಾಗಿಲಬಳಿ ನಿಂತಿರುವೆ ? ನಡೆನಡೆ ನಿದ್ದೆಮಾಡುಹೋಗು, ರಾತ್ರಿಯೆಲ್ಲ ಹೀಗೆ ಎಚ್ಚರವಾಗಿರಬಾರದು. ನನ್ನ ಕಾಯಿಲೆ ಎಷ್ಟುದಿನ ಇರುವುದೋ, ನೀನೇ ಎಲ್ಲವನ್ನೂ ನೋಡಿಕೊಳ್ಳ ಬೇಕಾಗುವುದು. ರಾತ್ರಿ ಎಚ್ಚರವಾಗಿದ್ದರೆ ಹೇಗೆ ? ಹೋಗು ನಳಿನ, ಒಮ್ಮೆ ಆ ಕೊಠಡಿಗೆ ಹೋಗು".

ನಳಿನಾಕ್ಷ ಪಕ್ಕದ ಕೊಠಡಿಗೆ ಹೋಗುತ್ತಲೇ ಕಮಲ ಕ್ಷೇಮಂಕರಿಯ ಕಾಲ ಬಳಿ ಕುಳಿತು ಆಕೆಯ ಕಾಲು ಹಿಸುಕತೊಡಗಿದಳು. ಹಿಂದಿನ ಜನ್ಮ ದಲ್ಲಿ ನೀನು ನನ್ನ ತಾಯಿಯಾಗಿದ್ದೆಯಮ್ಮಾ. ಇಲ್ಲವಾದರೆ ಎಲ್ಲೂ ನೆಂಟಿಲ್ಲದ ನಿನ್ನನ್ನು ಹೇಗೆ ಈ ರೀತಿ ಪಡೆಯುತ್ತಿದ್ದೆ ? ನೋಡು, ನನ್ನದೊಂದು ಅಭ್ಯಾಸ, ನಾನು ಯಾರ ಸೇವೆಯನ್ನೂ ಸಹಿಸಿಕೊಳ್ಳಲಾರೆ—ಆದರೆ ನೀನು ನನ್ನ ಮೈ ಮುಟ್ಟುತ್ತಲೇ ನನ್ನ ದೇಹ ತಣ್ಣಗಾಗುವುದು. ಆಶ್ಚರ್ಯದ ಸಂಗತಿಯೆಂದರೆ ನಿನ್ನನ್ನು ನಾನು ಎಷ್ಟೋದಿನಗಳಿಂದ ಬಲ್ಲವಳಂತೆ ಮನಸ್ಸಿಗೆ ಅನಿಸುವುದು. ನೀನು ಬೇರೆಯವಳೆಂದು ತೋರುವುದೇ ಇಲ್ಲ. ಇಲ್ಲಿ ಕೇಳು ತಾಯಿ, ನೀನು ನಿಶ್ಚಿಂತಳಾಗಿ ನಿದ್ದೆಮಾಡು ಪಕ್ಕದ ಕೊಠಡಿಯಲ್ಲೇ ನಳಿನನಿರುವನು—

ತಾಯಿಯ ಸೇವೆಯನ್ನು ಅವನು ಬೇರೆಯವರಿಗೆ ಎಂದೂ ಬಿಟ್ಟು ಕೊಡಲಾರ—ಎಷ್ಟೇ ಬೇಡವೆನ್ನು, ಬೇರೇನೇ ಮಾಡು, ಅವನನ್ನು ಗೆಲ್ಲಲು ಸಾಧ್ಯವೇ ಹೇಳು. ಆದರೆ ಅವನಲ್ಲಿ ಒಂದು ಗುಣ ಇದೆ, ರಾತ್ರಿ ಎಚ್ಚರವಾಗಿರಲಿ ಅಥವಾ ಬೇರೇನೇ ಮಾಡಿರಲಿ, ಅವನ ಮುಖ ನೋಡಿ ಕಂಡುಹಿಡಿಯಲು ಸಾಧ್ಯವಿಲ್ಲ—ಕಾರಣವೇನೆಂದರೆ ಅವನು ಎಂದೂ ಯಾವುದರಿಂದಲೂ ಚಂಚಲನಾಗುವುದಿಲ್ಲ. ನಾನೋ ಅದಕ್ಕೆ ತೀರಾವಿರುದ್ಧ. ಅಮ್ಮಾ, ನೀನು ಒಳಗೊಳಗೇ ನಗುತ್ತಿರುವೆಯೆಂದು ತೋರುವುದು. ನಳಿನನ ಮಾತು ಆರಂಭವಾಯಿತು, ಇನ್ನು ಮಾತು ಮುಗಿಯುವುದೇ ಇಲ್ಲ ಎಂದು ಭಾವಿಸುತಿರಬಹುದು. ಅದೇ ನೋಡು, ಒಬ್ಬನೇ ಮಗ ಇದ್ದರೇನೇ ಹೀಗೆ. ಅಲ್ಲದೆ ನಳಿನನಂಥ ಮಗನಾದರೂ ಅದೆಷ್ಟು ಮಂದಿ ತಾಯಂದಿರಿಗೆ ಇರುವರು. ಸತ್ಯವಾಗಿ ಹೇಳುವೆ, ನಳಿನ ನನ್ನನ್ನು ಹೆತ್ತವನು ಅವನು ನನಗಾಗಿ ಕಷ್ಟಪಟ್ಟಿರುವಂತೆ ನಾನು ಅವನಿಗೆ ಮಾಡಿರುವೆನೇನು—ಎಂದು ಒಮ್ಮೊಮ್ಮೆ ನಾನೇ ಯೋಚಿಸುವುದುಂಟು—ಇಷ್ಟೇ ನೋಡು, ನಮ್ಮ ನಳಿನನ ಸಂಗತಿ—ಇನ್ನೇನೂ ಇಲ್ಲ—ಹೋಗು ತಾಯಿ, ನೀನು ಮಲಗಲು ಹೋಗು. ಇಲ್ಲ ಇಲ್ಲ. ಅದೆಂದಿಗೂ ಸಾಧ್ಯವಿಲ್ಲ. ನೀನು ಹೋಗು--ನೀನಿದ್ದರೆ ನನಗೆ ನಿದ್ದೆ ಹತ್ತದು. ಮುದುಕಿ, ಜನ ಹತ್ತಿರ ಇದ್ದರೆ ಸುಮ್ಮನೆ ಹರಟುತ್ತಿರಬೇಕೆನ್ನಿಸುವುದು, ಎಂದಳು.

ಮರುದಿನ ಕಮಲೆಯೇ ಗೃಹಕೃತ್ಯದ ಎಲ್ಲ ಹೊಣೆಯನ್ನೂ ಹೊತ್ತುಕೊಂಡಳು. ನಳಿನಾಕ್ಷ ಪೂರ್ವ ದಿಕ್ಕಿನ ವರಾಂಡದಲ್ಲಿ ಒಂದು ಕಡೆ ಗೋಡೆ ಹಾಕಿ ಅಮೃತಶಿಲೆ ಹಾಸಿಸಿ ಒಂದು ಚಿಕ್ಕ ಕೊಠಡಿ ಕಟ್ಟಿಸಿಕೊಂಡಿದ್ದ—ಇದು ಅವನ ಉಪಾಸನಾಗೃಹವಾಗಿತ್ತು—ಮಧ್ಯಾಹ್ನದಲ್ಲಿ ಇಲ್ಲೇ ಅವನು ಆಸನದ ಮೇಲೆ ಕುಳಿತು ಓದುವನು. ಅಂದು ಬೆಳಗ್ಗೆ ನಳಿನಾಕ್ಷ ಆ ಕೊಠಡಿಯನ್ನು ಪ್ರವೇಶಿಸಿ ನೋಡಿದಾಗ, ಕೊಠಡಿ ಗುಡಿಸಿ, ಸಾರಿಸಿ, ಚೊಕ್ಕಟವಾಗಿತ್ತು—ಧೂಪ ಹಾಕುವುದಕ್ಕಾಗಿ ಒಂದು ಹಿತ್ತಾಳೆಯ ಧೂಪವಕುಡವಿತ್ತು, ಅದೂ ಇಂದು ಚಿನ್ನದಂತೆ ಥಳಥಳಿಸುತ್ತಿತ್ತು. ಅಲಮಾರಿಯಲ್ಲಿದ್ದ ಅವನ ಹಲವಾರು ಪುಸ್ತಕಗಳೆಲ್ಲ ಸುಸಜ್ಜಿತವಾಗಿ ಇಡಲಾಗಿತ್ತು. ಈ ಕೊಠಡಿಯ ಪ್ರಯತ್ನಪೂರ್ವಕವಾಗಿ ಸ್ವಚ್ಛಪಡಿಸಿದ್ದ ನಿರ್ಮಲತೆಯ ಮೇಲೆ ತೆರೆದ ಬಾಗಿಲಿಂದ ಬೆಳಗಿನ ಬಿಸಿಲ ಉಜ್ವಲತೆ ಹರಡಿಕೊಂಡಿತು. ಸ್ನಾನ ಮುಗಿಸಿಕೊಂಡು

ಅದೇತಾನೇ ಹಿಂದಿರುಗಿ ಬಂದಿದ್ದ ನಳಿನಾಕ್ಷನಿಗೆ ಇದನ್ನು ಕಂಡು ಮನದಲ್ಲೇ ಒಂದು ತೃಪ್ತಿಯ ಸಂಚಾರವುಂಟಾಯಿತು.

ಕಮಲ ಬೆಳಗ್ಗೆ ಗಂಗೆಯ ನೀರು ತುಂಬಿದ ಕೊಡದೊಡನೆ ಕ್ಷೇಮಂಕರಿಯ ಹಾಸಿಗೆಯ ಹತ್ತಿರ ಬಂದು ನಿಂತಳು. ಆಕೆ ಅವಳು ಸ್ನಾನಮಾಡಿ ಬಂದುದನ್ನು ನೋಡಿ, " ಇದೇನು ತಾಯಿ, ನೀನೊಬ್ಬಳೆ ಘಟ್ಟಕ್ಕೆ ಹೋಗಿದ್ದೆಯಾ ? ನನ್ನ ಮೈ ಚೆನ್ನಾಗಿಲ್ಲ. ನೀನು ಯಾರೊಡನೆ ಸ್ನಾನಕ್ಕೆ ಹೋಗುವೆಯೆಂದು ಮುಂಜಾನೆಯಿಂದಲೂ ನಾನು ಯೋಚಿಸುತ್ತಿದ್ದೆ. ನಿನಗಾದರೋ ಚಿಕ್ಕ ವಯಸ್ಸು, ಹೀಗೆ ಒಂಟಿಯಾಗಿ — " ಎಂದಳು.

" ಅಮ್ಮಾ, ನಮ್ಮಪ್ಪನ ಮನೆಯ ಸೇವಕನೊಬ್ಬನು ನನ್ನನ್ನು ನೋಡಲು ನಿನ್ನೆ ರಾತ್ರಿ ಇಲ್ಲಿಗೆ ಬಂದಿದ್ದನು. ಅವನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿದ್ದೆ " ಎಂದಳು ಕಮಲ.

ಕ್ಷೇಮಂಕರಿ ಹೇಳಿದಳು, " ಆಹಾ, ನಿನ್ನ ಚಿಕ್ಕಮ್ಮನಿಗೆ ಯೋಚನೆಯಾಗಿರಬಹುದು, ಆಳನ್ನು ಕಳುಹಿಸಿರುವಳು. ಅದೂ ಒಳ್ಳೆಯದೇ ಆಯಿತು–ಅವನು ನಿನ್ನ ಜೊತೆಯಲ್ಲೇ ಇರುವನೇನು ?—ನಿನ್ನ ಕೆಲಸಕಾರ್ಯದಲ್ಲಿ ಸಹಾಯಮಾಡಿ ಕೊಡುವನು. ಎಲ್ಲಿ ಅವನು. ಅವನನ್ನು ಬರಹೇಳು ".

ಕಮಲ ಉಮೇಶನನ್ನು ಕರೆದುಕೊಂಡು ಬಂದಳು. ಉಮೇಶ ಕ್ಷೇಮಂಕರಿಗೆ ಸಾಷ್ಟಾಂಗ ನಮಸ್ಕಾರ ಮಾಡಲು, ಆಕೆ " ನಿನ್ನ ಹೆಸರೇನೋ ? " ಎಂದು ಕೇಳಿದಳು. ಅವನು ನನ್ನ ಹೆಸರು, " ಉಮೇಶ " ಎಂದ. ಹೀಗೆ ಹೇಳಿ ಅಕಾರಣವಾಗಿ ಅರಳಿದ ನಗುವಿನಿಂದ ಅವನ ಮುಖ ಹಿಗ್ಗಿತು.

ಕ್ಷೇಮಂಕರಿ ನಗುತ್ತ " ಉಮೇಶ, ನಿನಗೆ ಈ ಅಂಚಿನ ಬಟ್ಟೆ ಯಾರೋ ಕೊಟ್ಟರು ? " ಎಂದು ಕೇಳಿದಳು.

ಉಮೇಶ ಕಮಲೆಯನ್ನು ತೋರಿಸಿ " ಅಮ್ಮಾ ಕೊಟ್ಟರು " ಎಂದು ಹೇಳಿದ.

ಕ್ಷೇಮಂಕರಿ ಕಮಲೆಯ ಕಡೆ ತಿರುಗಿ ನೋಡಿ ಪರಿಹಾಸ್ಯ ಮಾಡುತ್ತ ಮಾಡುತ್ತ ಹೇಳಿದಳು, " ಉಮೇಶ ತನ್ನ ಅತ್ತೆಯ ಬಳಿಯಿಂದ ಜಾಮಾಯಿ ಷಷ್ಠಿಯ* ಉಡುಗೊರೆ ಪಡೆದಿರುವನೆಂದು ನಾನು ತಿಳಿದಿದ್ದೆ ".

---

*ಜಾಮಾಯಿ ಷಷ್ಠಿ (ಅಳಿಯಷಷ್ಠಿ) ಬಂಗಾಳಿಗಳು ಜ್ಯೇಷ್ಠ ಬಹುಳ ಷಷ್ಠಿಯಂದು ಅಳಿಯನನ್ನು ಕರೆದು ಹೊಸ ಬಟ್ಟೆ, ಹಣಕಾಸು ಉಡುಗೊರೆ ಕೊಡುವರು.

ಕ್ಷೇಮಂಕರಿಯ ಸ್ನೇಹಲಾಭದಿಂದ ಉಮೇಶ ಅಲ್ಲೇ ಉಳಿದುಕೊಂಡ.

ಉಮೇಶನ ಸಹಾಯದಿಂದ ಕಮಲ ಹಗಲಿನ ಕೆಲಸವನ್ನೆಲ್ಲ ಮಾಡಿ ಮುಗಿಸಿದಳು, ತನ್ನ ಕೈಯ್ಯಾರ ನಳಿನಾಕ್ಷನ ಮಲಗುವ ಮನೆ ಗುಡಿಸಿ, ಅವನ ಹಾಸಿಗೆ ಬಿಸಿಲಿಗೆ ಹಾಕಿ ಎತ್ತಿಟ್ಟು ಎಲ್ಲವನ್ನೂ ಚೊಕ್ಕಟವಾಗಿಟ್ಟಳು. ನಳಿನಾಕ್ಷನ ಕೊಳೆ ಬಟ್ಟೆಗಳು ಕೊಠಡಿಯ ಒಂದು ಮೂಲೆಯಲ್ಲಿ ಬಿದ್ದಿತ್ತು. ಕಮಲ ಅವನ್ನೆಲ್ಲ ಒಗೆದು ಒಣಗಿಸಿ ಮಡಿಸಿ ಗೂಟಕ್ಕೆ ನೇತುಹಾಕಿದಳು. ಕೋಣೆಯಲ್ಲಿದ್ದ ಅಪರಿಷ್ಕಾರ ಸಾಮಗ್ರಿಗಳನ್ನೂ ಸರಿಪಡಿಸಲು ಅವನ್ನು ಬಾರಿ ಬಾರಿಗೂ ಅತ್ತಿಂದಿತ್ತ ಎತ್ತಿಡುತ್ತಿದ್ದಳು. ಹಾಸಿಗೆಯ ತಲೆಯ ಕಡೆಗಿದ್ದ ಗೋಡೆಯಲ್ಲಿ ಒಂದು ಗೋಡೆಯ ಅಲಮಾರಿ ಇತ್ತು. ಅದನ್ನು ತೆರೆದು ನೋಡಿದಳು, ಅದರಲ್ಲಿ ಬೇರೇನೂ ಇರಲಿಲ್ಲ. ಕೇವಲ ಕೆಳಗಿನ ಹಂತದಲ್ಲಿ ಒಂದು ಜೊತೆ ಪಾದುಕೆಯಿತ್ತು. ಕೂಡಲೇ ಆ ಪಾದುಕೆಯನ್ನು ಎತ್ತಿಕೊಂಡು ಕಮಲ ಹಣೆಗೆ ಒತ್ತಿಕೊಂಡಳು—ಮತ್ತು ಚಿಕ್ಕ ಮಗುವಿನಂತೆ ಎದೆಯ ಬಳಿ ಹಿಡಿದುಕೊಂಡು ಸೆರಗಿನಿಂದ ಒಂದೇ ಸಮನೆ ಅದರ ಧೂಳು ಒರೆಸ ತೊಡಗಿದಳು.

ಸಂಜೆ ಕಮಲ ಕ್ಷೇಮಂಕರಿಯ ಕಾಲಬಳಿ ಕುಳಿತು ಆಕೆಯ ಕಾಲು ಹಿಸುಕುತಿದ್ದಳು. ಆ ವೇಳೆಯಲ್ಲಿ ಹೇಮನಳಿನಿ ಒಂದು ಹೂವಿನಬುಟ್ಟಿ ಹಿಡಿದುಕೊಂಡು ಕೊಠಡಿಯೊಳಕ್ಕೆ ಬಂದಳು ಮತ್ತು ಕ್ಷೇಮಂಕರಿಗೆ ನಮಸ್ಕಾರ ಮಾಡಿದಳು.

ಕ್ಷೇಮಂಕರಿ ಎದ್ದುಕುಳಿತು "ಬಾಮ್ಮಾ, ಬಾ ಹೇಮ್ ಕುಳಿತುಕೊ· ಅನ್ನದಾಬಾಬು ಚೆನ್ನಾಗಿರುವರೆ ?" ಎಂದು ಕೇಳಿದರು.

ಹೇಮನಳಿನಿ, "ಅವರಿಗೆ ಮೈ ಚೆನ್ನಾಗಿರಲಿಲ್ಲ. ಅದರಿಂದಲೇ ನಿನ್ನೆ ಬರಲಾಗಲಿಲ್ಲ. ಈದಿನ ಅವರು ಆರೋಗ್ಯವಾಗಿರುವರು" ಎಂದಳು.

ಕಮಲೆಯನ್ನು ತೋರಿಸುತ್ತ ಕ್ಷೇಮಂಕರಿ ಹೇಳಿದಳು, "ಇಲ್ಲಿ ನೋಡು ಮಗು — ಚಿಕ್ಕಂದಿನಲ್ಲಿ ನನ್ನ ತಾಯಿ ಸತ್ತುಹೋದಳು; ಆಕೆ ಪುನರ್ಜನ್ಮವೆತ್ತಿ ಇಷ್ಟು ದಿನಗಳ ಬಳಿಕ ನಿನ್ನೆ ಹಠಾತ್ತನೆ ನನ್ನ ಕಣ್ಣಿಗೆ ಬಿದ್ದಳು. ನನ್ನ ತಾಯಿಯ ಹೆಸರು ಹರಿಭಾವಿನಿ ಎಂದಿತ್ತು—ಈಗ ಹರಿದಾಸಿ ಎಂದಾಗಿರುವುದು. ಆದರೆ ಹೇಮ್, ಇಂಥ ಲಕ್ಷ್ಮೀ ಮೂರ್ತಿಯನ್ನು ಇನ್ನೆಲ್ಲಾದರೂ ಕಂಡಿರುವೆಯಾ ಹೇಳು".

ಕಮಲ ನಾಚಿಕೆಯಿಂದ ತಲೆ ತಗ್ಗಿಸಿದಳು. ಮೆಲ್ಲಮೆಲ್ಲನೆ ಹೇಮ ನಳಿನಿಯೊಡನೆ ಅವಳ ಪರಿಚಯವಾಯಿತು.

"ಅಮ್ಮಾ, ನಿಮ್ಮ ದೇಹಸ್ಥಿತಿ ಹೇಗಿದೆ" ಎಂದು ಹೇಮನಳಿನಿ ಕ್ಷೇಮಂಕರಿಯನ್ನು ವಿಚಾರಿಸಿದಳು.

ಕ್ಷೇಮಂಕರಿ ಹೇಳಿದಳು, "ನೋಡು, ನನಗೆ ವಯಸ್ಸಾಯಿತು. ಈಗ ನನ್ನ ದೇಹಸ್ಥಿತಿ ವಿಚಾರಿಸುವಂತಿಲ್ಲ. ನಾನಿನ್ನೂ ಬದುಕಿರುವೆನಲ್ಲ, ಅದೇ ಹೆಚ್ಚಾಯಿತು. ಆದರೆ ಹೀಗೆಂದು ಎಂದೆಂದಿಗೂ ಯಮನನ್ನು ವಂಚಿಸಲಾಗುವುದಿಲ್ಲ. ನೀನು ಈ ವಿಷಯ ಎತ್ತಿದ್ದು ಒಳ್ಳೆಯದೇ ಆಯಿತು - ಕೆಲವು ದಿನಗಳಿಂದ ನಿನಗೆ ಹೇಳಬೇಕು ಎಂದಿದ್ದೆ, ಅವಕಾಶವೇ ದೊರೆಯಲಿಲ್ಲ. ನಿನ್ನೆ ರಾತ್ರಿ ಪುನಃ ನನಗೆ ಜ್ವರ ಬಂತು. ಇನ್ನು ವಿಳಂಬಮಾಡಿದರೆ ಚೆನ್ನಾಗಿರದು. ಎಂದು ಆಗ ತೀರ್ಮಾನಿಸಿದೆ. ನೋಡು ಮಗು, ಚಿಕ್ಕಂದಿನಲ್ಲಿ ನನ್ನನ್ನು ಯಾರಾದರೂ ಮದುವೆಯ ಮಾತು ಕೇಳಿದರೆ ನಾಚಿಕೆಯಿಂದ ಜೀವ ಬಿಡುತ್ತಿದ್ದೆ—ಆದರೆ ನಿನ್ನ ಶಿಕ್ಷಣ ಹಾಗಿಲ್ಲ – ನೀನು ಓದುಬರಹ ಕಲಿತಿರುವೆ—ವಯಸ್ಸೂ ಆಗಿದೆ—ನಿನ್ನೊಡನೆ ಎಲ್ಲ ಸಂಗತಿಯನ್ನೂ ಸ್ಪಷ್ಟವಾಗಿ ಹೇಳಬಹುದು. ಆದರಿಂದಲೇ ಸಂಗತಿಯನ್ನು ವಿವರಿಸಿ ಹೇಳುವೆ, ನೀನು ನನ್ನ ಬಳಿ ನಾಚಿಕೊಳ್ಳಬೇಡ. ಅದಿರಲಿ ಮಗೂ ಆ ದಿನ ನಿಮ್ಮ ತಂದೆಯ ಹತ್ತಿರ ಒಂದು ವಿಷಯ ಹೇಳಿದ್ದೆನಲ್ಲ, ಅವರು ನಿನಗೆ ಹೇಳಿದರೇನು ?".

ಹೇಮನಳಿನಿ ತಲೆ ತಗ್ಗಿಸಿಕೊಂಡು "ಹೂಂ, ಹೇಳಿದರು" ಎಂದಳು.

ಕ್ಷೇಮಂಕರಿ ಹೇಳಿದಳು, "ಆದರೆ ಖಂಡಿತ ನೀನು ಆ ಮಾತಿಗೆ ಒಪ್ಪಲಿಲ್ಲವೆಂದ. ತೋರುವುದು. ಒಪ್ಪಿದ್ದರೆ ಆ ಕ್ಷಣದಲ್ಲೇ ಅನ್ನದಾಬಾಬು ನನ್ನ ಹತ್ತಿರ ಓಡಿಬರುತ್ತಿದ್ದರು. ನಮ್ಮ ನಳಿನ ಸಂನ್ಯಾಸಿ–ಮನುಷ್ಯ. ಹಗಲೂ ರಾತ್ರಿ ಜಪತಪ ಎಂದಿರುವನು. ಅವನನ್ನು ಹೇಗೆ ಮದುವೆಯಾಗುವುದೆಂದು ನೀನು ಯೋಚಿಸಬಹುದು. ಅವನನ್ನು ಬಹಿರಂಗವಾಗಿ ನೋಡಿದರೆ, ಅವನಿಗೆ ಎಂದೂ ಯಾವ ವಿಷಯದಲ್ಲೂ ಆಸಕ್ತಿಹುಟ್ಟದೆಂದು ತೋರುವುದು. ಆದರೆ ಅದು ನಿಮ್ಮಗಳ ತಪ್ಪುಭಾವನೆ ; —ಅವನು ಅದೆಷ್ಟರ ಮಟ್ಟಿಗೆ ಪ್ರೀತಿಸಬಲ್ಲನೆಂದರೆ, ಆ ಹೆದರಿಕೆಯಿಂದಲೇ ತನ್ನನ್ನು ಹೀಗೆ ದಮನಮಾಡಿಟ್ಟುಕೊಂಡಿರುವನು. ಅವನ ಈ ಸಂನ್ಯಾಸದ ಚಿಪ್ಪು ಒಡೆದು ಯಾರು ಅವನ ಹೃದಯವನ್ನು ಪಡೆಯುವರೋ ಅವರು ಅತಿ ಮಧುರ ವಸ್ತುವನ್ನು ಹೊಂದು

ವರು ಎಂದು ನಾನು ಹೇಳಬಲ್ಲೆ. ಅಮ್ಮಾ, ಹೇಮ್ ನೀನು ಎಳೆಯ ಹುಡುಗಿಯಲ್ಲ. ನೀನು ಓದಿದವಳು, ನೀನು ನಮ್ಮ ನಳಿನನ ಬಳಿ ದೀಕ್ಷೆ ತೆಗೆದುಕೊಂಡಿರುವೆ, ನಿನ್ನನ್ನು ನಳಿನನ ಮನೆಯಲ್ಲಿ ಪ್ರತಿಷ್ಠಿಸಿ ನಾನು ಸಾಯ ಬಲ್ಲೆನಾದರೆ ಅತ್ಯಂತ ನಿಶ್ಚಿಂತೆಯಿಂದ ಸಾಯಬಹುದು. ಇಲ್ಲವಾದರೆ ನಾನು ಸತ್ತ ಬಳಿಕ ಖಂಡಿತ ಅವನು ಮದುವೆಯಾಗನೆಂದು ನಾನು ಬಲ್ಲೆ. ಆಗ ಅವನ ಸ್ಥಿತಿ ಹೇಗಾಗುವುದೆಂದು ಯೋಚಿಸಿ ನೋಡು. ಸಂಪೂರ್ಣವಾಗಿ ನೆಲೆಯಿಲ್ಲದೆ ತೇಲುತಿರುವ. ಏನೇ ಆಗಲಿ, ನಿನಗೆ ನಳಿನನಲ್ಲಿ ಶ್ರದ್ಧೆಯಿದೆ ಯೆಂದು ನಾನರಿತಿರುವೆ. ಆದರೂ ನಿನ್ನ ಮನಸ್ಸಿನಲ್ಲಿ ಈ ಅಡ್ಡಿಯುಂಟಾಗು ವುದೇಕೆ? ಹೇಳು ಮಗು".

ಹೇಮನಳಿನಿ ನತನೇತ್ರಳಾಗಿ, "ಅಮ್ಮಾ, ನೀವು ನನ್ನನ್ನು ಅರ್ಹ ಳೆಂದು ತಿಳಿಯುವುದಾದರೆ ನನ್ನ ಅಡ್ಡಿಯೇನೂ ಇಲ್ಲ" ಎಂದಳು.

ಕೇಳಿ ಕ್ಷೇಮಂಕರಿ ಹೇಮನಳಿನಿಯನ್ನು ಹತ್ತಿರ ಎಳೆದುಕೊಂಡು ಅವಳ ಹಣೆಗೆ ಮುತ್ತಿಟ್ಟಳು. ಈ ವಿಷಯವಾಗಿ ಬೇರಾವ ಮಾತೂ ನಡೆಯಲಿಲ್ಲ.

"ಹರಿದಾಸಿ, ಈ ಹೂವುಗಳನ್ನು . . ." ಹೇಳುತ್ತ ಹೇಳುತ್ತ ಪಕ್ಕಕ್ಕೆ ತಿರುಗಿ ನೋಡಿದಳು. ಹರಿದಾಸಿ ಇಲ್ಲ. ಅವಳು ಸದ್ದಿಲ್ಲದೆ ಯಾವಾಗಲೋ ಎದ್ದು ಹೋಗಿರುವಳು.

ಮೇಲೆ ಹೇಳಿದ ಸಂಭಾಷಣೆಯನಂತರ ಕ್ಷೇಮಂಕರಿಯ ಹತ್ತಿರ ಹೇಮ ನಳಿನಿಗೆ ಸಂಕೋಚವೆನಿಸಿತು. ಕ್ಷೇಮಂಕರಿಯೂ ಹಿಂದುಮುಂದು ನೋಡ ತೊಡಗಿದಳು. ಆಗ ಹೇಮ, "ಅಮ್ಮಾ, ಈ ದಿನ ಸ್ವಲ್ಪ ಹೊತ್ತಿಗೆ ಮುಂಚೆಯೇ ಹೋಗುವೆ, ತಂದೆಯ ಮೈ ಚೆನ್ನಾಗಿಲ್ಲ" ಎಂದಳು. ಹೀಗೆಂದು ಕ್ಷೇಮಂಕರಿಗೆ ನಮಸ್ಕಾರ ಮಾಡಿದಳು ಕ್ಷೇಮಂಕರಿ ಅವಳ ನೆತ್ತಿಯ ಮೇಲೆ ಕೈಯಿಟ್ಟು "ಹೋಗಿ ಬಾ ತಾಯಿ, ಹೋಗಿ ಬಾ" ಎಂದಳು.

ಹೇಮನಳಿನಿ ಹೊರಟು ಹೋದಳು. ಕ್ಷೇಮಂಕರಿ ನಳಿನಾಕ್ಷನನ್ನು ಬರ ಮಾಡಿಕೊಂಡು—"ನಳಿನ್, ಇನ್ನು ಸಾವಕಾಶ ನಡೆಯದು" ಎಂದಳು.

ನಳಿನಾಕ್ಷ "ಸಂಗತಿಯೇನು" ಎಂದು ಕೇಳಿದ.

ಕ್ಷೇಮಂಕರಿ "ನಾನೀಗ ಹೇಮಳಿಗೆ ಎಲ್ಲ ವಿಷಯವನ್ನೂ ವಿವರಿಸಿ ಹೇಳಿದೆ—ಅವಳು ಸಮ್ಮತಿಸಿರುವಳು. ಈಗ ನಿನ್ನ ಯಾವ ಕಾರಣವನ್ನೂ ನಾನು ಕೇಳುವುದಿಲ್ಲ. ನನ್ನ ದೇಹಸ್ಥಿತಿ ನೋಡುತ್ತಿರುವೆ. ನಿನಗೊಂದು

ದಾರಿ ಮಾಡದೆ ನನಗೆಂದಿಗೂ ನೆಮ್ಮದಿ ಇರದು. ಅರ್ಧ ರಾತ್ರಿಯಲ್ಲಿ ನಿದ್ದೆ ಕೆಟ್ಟು ಹೋಗಿ ನಾನು ಇದನ್ನೇ ಯೋಚನೆಮಾಡುವೆ" ಎಂದಳು.

ನಳಿನಾಕ್ಷ ಹೇಳಿದ, "ಒಳ್ಳೆಯದಮ್ಮಾ, ಯೋಚನೆ ಮಾಡಬೇಡ, ನೀನು ಚೆನ್ನಾಗಿ ನಿದ್ದೆಮಾಡು. ನಿನ್ನಿಷ್ಟದಂತೆ ನಡೆಯಲಿ".

ನಳಿನಾಕ್ಷ ಹೊರಟುಹೋದಬಳಿಕ ಕ್ಷೇಮಂಕರಿ "ಹರಿದಾಸಿ" ಎಂದು ಕರೆದಳು.

ಕಮಲ ಪಕ್ಕದಕೊಠಡಿಯಿಂದ ಹೊರಟುಬಂದಳು. ಆಗ ಸಂಜೆಯ ಬೆಳಕು ಮಸಕಾಗಿ ಕೋಣೆಯಲ್ಲಿ ಕತ್ತಲು ಕವಿಯುತ್ತಬಂದಿತ್ತು. ಹರಿದಾಸಿಯ ಮುಖ ಸರಿಯಾಗಿ ಕಾಣಿಸಲಿಲ್ಲ. ಕ್ಷೇಮಂಕರಿ "ಮಗೂ ಈ ಹೂವುಗಳಿಗೆ ನೀರು ಚಿಮುಕಿಸಿ ಕೊಠಡಿಯಲ್ಲಿ ಅಣಿಮಾಡಿಡು" ಎಂದಳು. ಹೀಗೆ ಹೇಳಿ ಬುಟ್ಟಿಯಿಂದ ಒಂದು ಗುಲಾಬಿ ಗೊಂಚಲು ಎತ್ತಿಕೊಂಡು ಹೂವಿನ ಬುಟ್ಟಿಯನ್ನು ಕಮಲೆಯಕಡೆಗೆ ನೂಕಿದಳು.

ಕಮಲ ಅದರಿಂದ ಕೆಲವು ಹೂವುಗಳನ್ನು ತೆಗೆದು ಒಂದು ತಟ್ಟೆಯಲ್ಲಿ ಅಣಿಮಾಡಿಟ್ಟು ನಳಿನಾಕ್ಷನ ಉಪಾಸನಾಗೃಹದಲ್ಲಿ ಆಸನದೆದುರಿಗಿಟ್ಟಳು. ಮತ್ತೆ ಕೆಲವನ್ನು ಒಂದು ಪಾತ್ರೆಯಲ್ಲಿಟ್ಟು ನಳಿನಾಕ್ಷನ ಮಲಗುವ ಕೋಣೆಯಲ್ಲಿ ಮುಕ್ಕಾಲುಮಣೆಯ ಮೇಲಿಟ್ಟಳು. ಉಳಿದಿದ್ದ ಕೆಲವು ಹೂವುಗಳನ್ನು ತೆಗೆದುಕೊಂಡು ಆ ಗೋಡೆಯಲ್ಲಿದ್ದ ಅಲಮಾರಿತೆರೆದು ಆ ಪಾದುಕೆಯ ಮೇಲೆ ಹಾಕಿ ಅದರಮೇಲೆ ಹಣೆಯಿಟ್ಟು ನಮಸ್ಕರಿಸುತ್ತಲೇ ಅವಳ ಕಣ್ಣಿಂದ ಜರಜರನೆ ನೀರು ಹರಿಯಲಾರಂಭಿಸಿತು. ಈ ಪಾದುಕೆಯನ್ನುಳಿದು ಜಗತ್ತಿನಲ್ಲಿ ಅವಳಿಗೆ ಬೇರೇನೂ ಇಲ್ಲ—ಪಾದಸೇವೆಯ ಅಧಿಕಾರವೂ ಕೈಮಿಂಚಿಹೋಗುವುದರಲ್ಲಿದೆ.

ಈವೇಳೆಯಲ್ಲಿ ಹಠಾತ್ತನೇ ಯಾರೋ ಕೊಠಡಿಯೊಳಕ್ಕೆ ಬರುತ್ತಿದ್ದುದರಿಂದ ಕಮಲ ಗಡಿಬಿಡಿಯಿಂದ ಎದ್ದಳು. ಕೂಡಲೇ ಅಲಮಾರಿಯ ಬಾಗಿಲು ಮುಚ್ಚಿನೋಡಿದಳು, ನಳಿನಾಕ್ಷ! ಕಮಲೆಗೆ ಓಡಿಹೋಗಲು ಎತ್ತಲೂ ದಾರಿ ಇರಲಿಲ್ಲ—ನಾಚಿಕೆಯಿಂದ ಕಮಲ ಆ ಮುಚ್ಚಂಜೆಯ ಕತ್ತಲಲ್ಲಿ ಕಲೆತು ಹೋಗಲಿಲ್ಲವೇಕೆ ? ಎಂದೆಣಿಸಿದಳು.

ನಳಿನಾಕ್ಷ ಕೊಠಡಿಯಲ್ಲಿ ಕಮಲೆಯನ್ನು ಕಂಡು ಹೊರಗೆ ಹೊರಟು ಹೋದ. ಕಮಲೆಯೂ ಸಾವಕಾಶಮಾಡದೆ ವೇಗವಾಗಿ ಬೇರೊಂದು ಕೊಠಡಿಗೆ

ಹೋದಳು. ನಳಿನಾಕ್ಷ ಪುನಃ ಕೊಠಡಿಯನ್ನು ಪ್ರವೇಶಿಸಿದ. ಹುಡುಗಿ ಅಲಮಾರಿ ತೆರೆದು ಏನುಮಾಡುತ್ತಿದ್ದಳು, ತನ್ನನ್ನು ನೋಡಿದೊಡನೆಯೇ ಮುಚ್ಚಿದಳೇಕೆ? ಕುತೂಹಲದಿಂದ ನಳಿನಾಕ್ಷ ಅಲಮಾರಿ ತೆರೆದುನೋಡಿದ, ತನ್ನ ಪಾದುಕೆಯಮೇಲೆ ಅದೇತಾನೆ ಅರಳಿದ ಕೆಲವು ಹೂವುಗಳನ್ನಿಟ್ಟಿದೆ. ಆಗ ಅವನು ಮತ್ತೆ ಆ ಅಲಮಾರಿಯ ಬಾಗಿಲುಮುಚ್ಚಿ ಮಲಗುವಮನೆಯ ಕಿಟಕಿಯ ಬಳಿ ಬಂದು ನಿಂತನು. ಚಳಿಗಾಲದ ಸೂರ್ಯಾಸ್ತದ ಕ್ಷಣಕಾಲದ ಪ್ರಕಾಶ ವಿಲೀನವಾಗುತ್ತ ಕತ್ತಲೆ ದಟ್ಟವಾಯಿತು.

೫೬

ಹೇಮನಳಿನಿ ನಳಿನಾಕ್ಷನನ್ನು ಮದುವೆಯಾಗಲು ಒಪ್ಪಿಕೊಂಡು, "ನನ್ನ ಅದೃಷ್ಟಕ್ಕೆ ಎಣೆಯೇ ಇಲ್ಲ" ಎಂದು ಮನಸ್ಸನ್ನು ಸಂತೈಸತೊಡಗಿದಳು. "ನನ್ನ ಪುರಾತನ ಬಂಧನ ಕತ್ತರಿಸಿಹೋಯಿತು—ನನ್ನ ಜೀವನಾಕಾಶವನ್ನು ಸುತ್ತಿಕೊಂಡಿದ್ದ ದಟ್ಟವಾದ ಮೋಡ ಸಂಪೂರ್ಣವಾಗಿ ಚದುರಿಹೋಯಿತು. ಈಗ ನಾನು ಸ್ವತಂತ್ರೆ. ನನ್ನ ಹಿಂದಿನ ಎಡೆಬಿಡದ ಆಕ್ರಮಣದಿಂದ ನಾನು ಮುಕ್ತಳು" ಎಂದು ತನಗೆತಾನೇ ಸಾವಿರಬಾರಿ ಹೇಳಿಕೊಂಡಳು. ಈ ಮಾತನ್ನು ಹೇಳಿಕೊಳ್ಳುತ್ತ ಅವಳು ಒಂದು ಅದ್ಭುತ ವೈರಾಗ್ಯದ ಆನಂದವನ್ನು ಅನುಭವಿಸಿದಳು. ಶ್ಮಶಾನದಲ್ಲಿ ದಹನಕ್ರಿಯೆ ನಡೆದ ಬಳಿಕ ಈ ಬೃಹತ್ ಸಂಸಾರ ತನ್ನ ವಿಪುಲ ಭಾರ ಪರಿಹರಿಸಿ ಆಡುತ್ತಿರುವಂತೆ ತೋರಿ ಬಂದು, ಕ್ಷಣಹೊತ್ತು ಮನಸ್ಸು ಹಗುರವಾಗುವುದು—ಹೇಮನಳಿನಿಗೂ ಇದೇಸ್ಥಿತಿಯೊದಗಿತು—ಅವಳು ತನ್ನ ಜೀವನದ ಒಂದಂಶದ ಸಂಪೂರ್ಣ ಅವಸಾನದಿಂದ ಹುಟ್ಟಿದ ಶಾಂತಿ ಅನುಭವಿಸಿದಳು.

ಮನೆಗೆ ಹಿಂದಿರುಗಿಬಂದು ಹೇಮನಳಿನಿ, "ಅಮ್ಮ ಇದ್ದಿದ್ದಿರೆ, ಆಕೆಗೆ ಇಂದು ನನ್ನ ಈ ಆನಂದದ ಸಂಗತಿ ಹೇಳಿಕೊಂಡು ಸಂತೋಷಪಡಿಸುತ್ತಿದ್ದೆ—ಅಪ್ಪನಿಗೆ ಎಲ್ಲ ಸಂಗತಿಯನ್ನೂ ಹೇಗೆ ತಿಳಿಸುವುದು" ಎಂದು ಭಾವಿಸ ತೊಡಗಿದಳು.

ಶರೀರ ನಿಶ್ಶಕ್ತಿಯಾಗಿದೆಯೆಂದು ಈದಿನ ಅನ್ನದಾಬಾಬುಗಳು ಹೊತ್ತಿಗೆ ಮುಂಚೆಯೇ ಮಲಗಲು ಹೋದರು, ಹೇಮನಳಿನಿ ಒಂಟಿಯಾಗಿ ನೋಟ್–

ಬುಕ್ ತೆಗೆದುಕೊಂಡು ರಾತ್ರಿ ತನ್ನ ನಿರ್ಜನ ಶಯನಗೃಹದ ಮೇಜೆಯಮೇಲೆ ಬರೆಯಲಾರಂಭಿಸಿದಳು. "ನಾನು ಮೃತ್ಯುಜಾಲದಲ್ಲಿ ಸಿಕ್ಕಿಕೊಂಡು ಪ್ರಪಂಚದಿಂದಲೇ ದೂರವಾಗಿದ್ದೆ, ಅದರಿಂದ ಉದ್ಧಾರಮಾಡಿ ದೇವರು ಮತ್ತೊಂದು ದಿದ ನನ್ನನ್ನು ಹೊಸಜೀವನದಲ್ಲಿ ಪ್ರತಿಷ್ಠೆಮಾಡುವನು, ಇದನ್ನು ನಾನು ಮನದಲ್ಲೂ ನೆನೆದಿರಲಿಲ್ಲ. ಇಂದು ಅವನಪಾದಕ್ಕೆ ಸಹಸ್ರಬಾರಿ ನಮಸ್ಕಾರಮಾಡಿ ಹೊಸ ಕರ್ತವ್ಯಕ್ಷೇತ್ರ ಪ್ರವೇಶಿಸಲು ಮುಂದುವರಿದಿರುವೆ, ಖಂಡಿತ ನಾನು ಅರ್ಹತೆ ಇಲ್ಲದೆ ಸೌಭಾಗ್ಯವನ್ನು ಪಡೆದಿರುವೆ. ದೇವರು ನನಗೆ ಎಂದೆಂದೂ ಅದನ್ನು ರಕ್ಷಿಸುವ ಬಲ ಕೊಡಲಿ. ಯಾರೊಡನೆ ನನ್ನ ಈ ಅಲ್ಪ ಜೀವನ ಮಿಳಿತವಾಗಲು ಹೊರಟಿದೆಯೋ, ಅವರು ನನ್ನನ್ನು ಎಲ್ಲ ಅಂಶಗಳಲ್ಲೂ ಪರಿಪೂರ್ಣಗೊಳಿಸುವರೆಂದು ನಾನು ಚೆನ್ನಾಗಿ ಬಲ್ಲೆ ; ಆ ಪರಿಪೂರ್ಣತೆಯ್ಸ ಎಲ್ಲ ಐಶ್ವರ್ಯವನ್ನೂ ನಾನು ಸಂಪೂರ್ಣಭಾವದಿಂದ ಅವರಿಗೇ ಹಿಂದಕ್ಕೆ ಅರ್ಪಿಸಬಲ್ಲೆ. ಇದೇ ನನ್ನ ಏಕಮಾತ್ರ ಭಾವನೆ".

ಅನಂತರ ನೋಟ್-ಬುಕ್ ಮುಚ್ಚಿಟ್ಟು ಹೇಮನಳಿನಿ ಆ ನಕ್ಷತ್ರ ಖಚಿತ ಅಂಧಕಾರದಲ್ಲಿ ಸದ್ದಿಲ್ಲದ ಚಳಿಗಾದ ಕತ್ತಲಲ್ಲಿ ಕಲ್ಲು-ಹಾಸಿದ್ದ ತೋಟದ ದಾರಿಯಲ್ಲಿ ಬಹಳಹೊತ್ತು ಅಡ್ಡಾಡುತ್ತಿದ್ದಳು. ಅನಂತ ಆಕಾಶ ಅವಳ ಕಣ್ಣೀರಿನಿಂದತೋಯ್ದ ಅಂತಃಕರಣದಲ್ಲಿ ನಿಶ್ಶಬ್ದ ಶಾಂತಿಮಂತ್ರ ಉಚ್ಚರಿಸಿತು.

ಮರುದಿನಮಧ್ಯಾಹ್ನ ಅನ್ನದಾಬಾಬು ಹೇಮನಳಿನಿಯೊಡನೆ ನಳಿನಾಕ್ಷನ ಮನೆಗೆ ಹೋಗಲು ಹೊರಟಿದ್ದರು. ಆ ಸಮಯದಲ್ಲಿ ಅವರ ಮನೆಯಮುಂದೆ ಗಾಡಿಯೊಂದು ಬಂದು ನಿಂತಿತು. ಗಾಡಿಯವನು ಕುಳಿತುಕೊಳ್ಳುವ ಸ್ಥಳದಿಂದ ನಳಿನಾಕ್ಷನ ಸೇವಕನೊಬ್ಬ ಇಳಿದುಬಂದು "ತಾಯಿಯವರು ಬಂದಿರುವರು" ಎಂದು ಹೇಳಿದ.

ಅನ್ನದಾಬಾಬು ಕೂಡಲೇ ಬಾಗಿಲ ಹತ್ತಿರಕ್ಕೆ ಬಂದು ನಿಲ್ಲುತ್ತಲೇ ಕ್ಷೇಮಂಕರಿ ಗಾಡಿ ಇಳಿದುಬಂದಳು. "ಇಂದು ನನ್ನ ಪರಮ ಸೌಭಾಗ್ಯ" ಎಂದರು ಅನ್ನದಾಬಾಬುಗಳು.

"ಈದಿನ ನಿಮ್ಮ ಮಗಳನ್ನು ನೋಡಿ ಆಶೀರ್ವಾದ ಮಾಡಿಹೋಗಲು ಬಂದಿರುವೆ" ಎಂದು ಕ್ಷೇಮಂಕರಿ ಹೇಳಿದಳು.

ಹೀಗೆಹೇಳಿ ಅವರು ಮನೆಯೊಳಕ್ಕೆ ಹೋದರು. ಅನ್ನದಾಬಾಬು ಅವರನ್ನು ಬೈಠಕ್ ಖಾನೆಯಲ್ಲಿ ಮರ್ಯಾದೆಯಿಂದ ಒಂದು ಸೋಫಾದ

ಮೇಲೆ ಕುಳ್ಳಿರಿಸುತ್ತ, “ ನೀವು ಕುಳಿತುಕೊಳ್ಳಿ, ನಾನು ಹೇಮಳನ್ನು ಕರೆದು ಕೊಂಡುಬರುವೆ ” ಎಂದರು.

ಹೇಮನಳಿನಿ ಹೊರಗಡೆಹೋಗುವುದಕ್ಕಾಗಿ ಸಿದ್ಧಳಾಗಿ ಹೊರಟಿದ್ದಳು–ಕ್ಷೇಮಂಕರಿ ಬಂದಿರುವಳೆಂದು ಕೇಳಿ ಕೂಡಲೇ ಹೊರಕ್ಕೆ ಬಂದು ಅವಳಿಗೆ ನಮಸ್ಕಾರಮಾಡಿದಳು—ಕ್ಷೇಮಂಕರಿ, “ ಸೌಭಾಗ್ಯವತಿಯಾಗಿ ಚಿರಕಾಲ ಬಾಳು. ಎಲ್ಲಿ ಮಗು, ನಿನ್ನ ಕೈನೋಡೋಣ ” ಎಂದಳು. ಹೀಗೆಂದು ಒಂದೊಂದಾಗಿ ಅವಳ ಕೈಗೆ ಮಕರ ಮುಖದ ದಪ್ಪ ಚಿನ್ನದ ಕಡಗಗಳು ಎರಡನ್ನು ತೊಡಿಸಿದಳು. ಹೇಮನಳಿನಿಯ ಬಡಕಲು ಕೈಗೆ ದಪ್ಪ ಕಡಗಗಳ ಜೊತೆ ಕಡಕಡ ಎನ್ನತೊಡಗಿತು. ಕಡಗ ತೊಡಿಸಿಯಾದಮೇಲೆ ಹೇಮನಳಿನಿ ಪುನಃ ನೆಲ ಮುಟ್ಟಿ ಕ್ಷೇಮಂಕರಿಗೆ ನಮಸ್ಕಾರಮಾಡಿದಳು—ಕ್ಷೇಮಂಕರಿ ಎರಡು ಕೈಗಳಿಂದಲೂ ಅವಳ ಮುಖ ಹಿಡಿದುಕೊಂಡು ಅವಳ ಹಣೆಗೆ ಮುತ್ತಿಟ್ಟಳು. ಈ ಆಶೀರ್ವಾದ ಮತ್ತು ಆದರದಿಂದ ಹೇಮನಳಿನಿಯ ಹೃದಯ ಒಂದು ಸುಗಭೀರ ಮಾಧುರ್ಯದಿಂದ ಪರಿಪೂರ್ಣವಾಯಿತು.

“ ಬೀಗಯ್ಯನವರೇ, ನಾಳೆಬೆಳಗ್ಗೆ ನೀವಿಬ್ಬರೂ ನಮ್ಮಮನೆಗೆ ಊಟಕ್ಕೆ ಬರಬೇಕು ” ಎಂದು ಕ್ಷೇಮಂಕರಿ ಹೇಳಿದಳು.

ಮರುದಿನ ಬೆಳಗ್ಗೆ ಹೇಮನಳಿನಿಯೊಡನೆ ಅನ್ನದಾಬಾಬು ಪದ್ಧತಿಯಂತೆ ಹೊರಗೆ ಚಹ ಕುಡಿಯಲು ಕುಳಿತಿದ್ದರು. ಅನ್ನದಾಬಾಬುಗಳ ಖಾಯಿಲೆಯಿಂದ ಕುಗ್ಗಿದ್ದ ಮುಖ ಒಂದು ರಾತ್ರಿಯಲ್ಲೇ ಸಂತೋಷದಿಂದ ಹೊಳಪುಕೂಡಿ ಹೊಸದಾಗಿ ಕಾಣತೊಡಗಿತು. ಕ್ಷಣಕ್ಷಣಕ್ಕೂ ಹೇಮನಳಿನಿಯ ಶಾಂತಿಯಿಂದ ಹೊಳೆಯುತಿದ್ದ ಮುಖದಕಡೆ ನೋಡುತ್ತಿದ್ದರು. ಇಂದು ಅವರ ಪರಲೋಕಗತ ಹೆಂಡತಿಯ ಮಂಗಳಮಧುರ ಆವಿರ್ಭಾವ ತಮ್ಮ ಮಗಳನ್ನು ಸುತ್ತುಗಟ್ಟಿ ಕೊಂಡಿರುವಂತೆಯೂ ಸುದೂರವ್ಯಾಪ್ತ ಕಣ್ಣೀರಿನ ಕಾಂತಿಯಲ್ಲಿ ಸುಖದ ಅತ್ಯುಜ್ವಲತೆಯನ್ನು ಸ್ನಿಗ್ಧಗಂಭೀರವನ್ನಾಗಿ ಮಾಡಿರುವಂತೆಯೂ ಅವರ ಮನಸ್ಸಿಗೆ ತೋರುತಿತ್ತು.

ಈದಿನ ಅನ್ನದಾಬಾಬುಗಳ ಮನಸಿನಲ್ಲಿ ಕೇವಲ ಕ್ಷೇಮಂಕರಿಯ ಆಹ್ವಾನದಂತೆ ಹೊರಡಲು ಸಮಯವಾಯಿತು—ಇನ್ನು ತಡಮಾಡಬಾರದು ಎಂದೆನಿಸುತಿತ್ತು. ಹೇಮನಳಿನಿ ಅವರಿಗೆ, ಇನ್ನೂ ಬೇಕಾದಷ್ಟು ಹೊತ್ತಿದೆ—ಈಗ ಎಂಟೂಕಾಲು ಎಂದು ಆಗಾಗ ಜ್ಞಾಪಿಸುತ್ತಿದ್ದಳು. “ ಸ್ನಾನಮಾಡಿ

ಹೊರಡಲು ಹೊತ್ತಾಗುವುದು. ಹೊತ್ತುಮಾಡಿಕೊಂಡು ಹೋಗುವುದಕ್ಕಿಂತ ಸ್ವಲ್ಪ ಮುಂಚೆಯೇ ಹೋಗುವುದು ಮೇಲು '' ಎಂದರು ಅನ್ನದಾಬಾಬುಗಳು.

ಇಷ್ಟರಲ್ಲಿ ಕೆಲವು ಪೆಟ್ಟಿಗೆ-ಹಾಸಿಗೆಗಳನ್ನು ಹೊತ್ತ ಒಂದು ಬಾಡಿಗೆ ಗಾಡಿ ಬಂದು ತೋಟದ ಹೆಬ್ಬಾಗಿಲೆದುರಿಗೆ ನಿಂತಿತು.

ಒಡನೆ ಹೇಮನಳಿನಿ "ಅಣ್ಣಬಂದ" ಎಂದು ಮುಂದೆ ಬಂದಳು. ಯೋಗೇಂದ್ರ ನಗುಮುಖದಿಂದ ಗಾಡಿ ಇಳಿದ—'' ಏನು ಹೇಮ್, ಚೆನ್ನಾಗಿ ರುವೆಯಾ ? '' ಎಂದು ಕೇಳಿದ.

'' ನಿನ್ನ ಗಾಡಿಯಲ್ಲಿ ಬೇರೆ ಯಾರೂ ಇಲ್ಲವೆ ? " ಎಂದು ಹೇಮನಳಿನಿ ವಿಚಾರಿಸಿದಳು.

ಯೋಗೇಂದ್ರ ನಗುತ್ತ ಹೇಳಿದ, '' ಇಲ್ಲದೆ ಮತ್ತೆ, ಅಪ್ಪನಿಗಾಗಿ ಒಂದು ಕ್ರಿಸ್‌ಮಸ್ ಕಾಣಿಕೆ ತಂದಿರುವೆ ''

ಇಷ್ಟರಲ್ಲಿ ರಮೇಶ ಗಾಡಿಯಿಂದ ಇಳಿದ. ಹೇಮನಳಿನಿ ಒಮ್ಮೆ ಕ್ಷಣಕಾಲ ನೋಡಿ ಕೂಡಲೇ ಹಿಂದಿರುಗಿ ಹೊರಟುಹೋದಳು.

ಯೋಗೇಂದ್ರ ''ಹೇಮ್, ಹೋಗಬೇಡ ಒಂದು ಮಾತು ಹೇಳಬೇಕು'' ಎಂದು ಕೂಗಿದ.

ಈ ಕರೆ ಹೇಮನಳಿನಿಯ ಕಿವಿಗೆ ಬೀಳಲಿಲ್ಲ—ಅವಳು ಯಾವುದೋ ಪ್ರೇತಮೂರ್ತಿಯ ಹಿಂಬಾಲಿಸುವಿಕೆಯಿಂದ ಆತ್ಮರಕ್ಷಣೆ ಮಾಡಿಕೊಳ್ಳಲು ವೇಗವಾಗಿ ಹೋಗುವಂತೆ ಹೋದಳು.

ರಮೇಶ ಕ್ಷಣಹೊತ್ತು ಹಿಂಜರಿದು ನಿಂತ—ಮುಂದೆ ಹೋಗುವುದೋ, ಹಿಂದಿರುಗುವುದೋ ಎಂದು ತೋಚಲಿಲ್ಲ. ಯೋಗೇಂದ್ರ, " ಬಾ ರಮೇಶ, ಅಪ್ಪಾ ಇಲ್ಲೇ ಹೊರಗಡೆಯಲ್ಲೇ ಕುಳಿತಿರುವರು" ಎಂದ. ಹೀಗೆಂದು ರಮೇಶನ ಕೈಹಿಡಿದುಕೊಂಡು ಅವನನ್ನು ಅನ್ನದಾಬಾಬುಗಳ ಸಮೀಪಕ್ಕೆ ಕರೆದುಕೊಂಡು ಹೋದನು.

ಅನ್ನದಾಬಾಬು ದೂರದಿಂದಲೇ ರಮೇಶನನ್ನುಕಂಡು ಅಚ್ಚರಿಗೊಂಡರು. ಅವರು ಕೈಯಿಂದ ಹಣೆ ಸವರಿಕೊಳ್ಳುತ್ತ-ಸವರಿಕೊಳ್ಳುತ್ತ " ಪುನಃ ಈಗೇನು ವಿಘ್ನ ಒದಗಿತು" ಎಂದು ಯೋಚಿಸಿದರು.

ರಮೇಶ ಅನ್ನದಾಬಾಬುಗಳಿಗೆ ಬಗ್ಗಿ ನಮಸ್ಕರಿಸಿದ. ಅನ್ನದಾಬಾಬು ಅವನಿಗೆ ಕುಳಿತುಕೊಳ್ಳಲು ಕುರ್ಚಿ ತೋರಿಸಿ, ಯೋಗೇಂದ್ರನನ್ನು ಕೇಳಿದರು,

" ಯೋಗೇನ್, ನೀನು ಸರಿಯಾದಸಮಯಕ್ಕೆ ಬಂದಿರುವೆ ನಾನು ನಿನಗೆ ತಂತಿ ಕೊಡಬೇಕು ಎಂದಿದ್ದೆ ".

ಯೋಗೇಂದ್ರ ಕೇಳಿದ " ಏಕೆ ? "

" ಹೇಮಳೊಡನೆ ನಳಿನಾಕ್ಷನ ಮದುವೆ ನಿಷ್ಕರ್ಷೆಯಾಗಿರುವುದು. ನಿನ್ನೆ ನಳಿನಾಕ್ಷನ ತಾಯಿ ಹೇಮಳಿಗೆ ಆಶೀರ್ವದಿಸಿ ನೋಡಿಕೊಂಡು ಹೋಗಿರುವರು " ಎಂದು ಅನ್ನದಾಬಾಬುಗಳು ಹೇಳಿದರು.

ಯೋಗೇಂದ್ರ—ಏನುಹೇಳಿದಿರಿ ಅಪ್ಪ, ಮದುವೆ ಸಂಪೂರ್ಣವಾಗಿ ನಿಷ್ಕರ್ಷೆಯಾಗಿರುವುದೆ ? ನನ್ನನ್ನು ಒಂದುಸಲವೂ ಕೇಳಲೇ ಇಲ್ಲವಲ್ಲ.

ಅನ್ನದಾಬಾಬು—ಯೋಗೇಂದ್ರ, ನೀನು ಎಂದೂ ಯಾವುದನ್ನೂ ನಿಷ್ಕರ್ಷೆಯಾಗಿ ಹೇಳುವುದಿಲ್ಲ. ನನಗೆ ನಳಿನಾಕ್ಷನ ಪರಿಚಯವೇ ಇಲ್ಲದಿದ್ದಾಗ ನೀನೇ ಈ ಮದುವೆಗೆ ಪ್ರಯತ್ನಿಸುತ್ತಿದ್ದೆ

ಯೋಗೇಂದ್ರ—ಆಗ ಪ್ರಯತ್ನಿಸುತ್ತಿದ್ದೆ. ಆದರೆ ಅದೇನೇ ಆಗಲಿ, ಇನ್ನೂ ಕಾಲ ಮೀರಿಲ್ಲ. ಮುಖ್ಯವಾದ ಸಂಗತಿ ತಿಳಿಸುವುದಿದೆ. ಮೊದಲು ಅದನ್ನು ಕೇಳಿ ಬಳಿಕ ಮಾಡಬೇಕಾದುದನ್ನು ಮಾಡಿ.

ಅನ್ನದಾಬಾಬುಗಳು, " ಸಮಯದೊರೆತಂದು ಕೇಳುವೆ—ಆದರೆ ಈದಿನ ನನಗೆ ಅವಕಾಶವಿಲ್ಲ. ಈಗ ನಾನು ಎಲ್ಲಿಗೋ ಹೋಗಬೇಕು " ಎಂದರು.

" ಎಲ್ಲಿಗೆ ಹೋಗುವಿರಿ " ಎಂದು ಯೋಗೇಂದ್ರ ವಿಚಾರಿಸಿದ.

ಅನ್ನದಾಬಾಬುಗಳು ಹೇಳಿದರು, " ನಳಿನಾಕ್ಷನ ತಾಯಿ ನನಗೂ ಹೇಮನಳಿನಿಗೂ ಆಹ್ವಾನವಿತ್ತಿರುವರು. ಯೋಗೇಂದ್ರ, ನೀವುಗಳು ಇಲ್ಲೇ ಊಟಕ್ಕೆ . . . "

ಯೋಗೇಂದ್ರ " ಇಲ್ಲ ಇಲ್ಲ. ನಮಗಾಗಿ ಯೋಚಿಸಬೇಡಿ. ನಾನು ರಮೇಶನೊಡನೆ ಇಲ್ಲಿಯ ಯಾವುದಾದರೊಂದು ಹೋಟೆಲಿನಲ್ಲಿ ಊಟ ಮಾಡಿಕೊಂಡುಬರುವೆ. ಸಂಜೆಯಹೊತ್ತಿಗೆ ನೀವು ಹಿಂದಿರುಗಿಬರುವುದಾದರೆ ನಾವೂ ಬರುವೆವು " ಎಂದನು.

ಅನ್ನದಾಬಾಬು ರಮೇಶನೊಡನೆ ಯಾವಬಗೆಯ ಗೌರವ ಸಂಭಾಷಣೆ ಯನ್ನೂ ನಡೆಸಲಿಲ್ಲ. ಅವನ ಮುಖ ನೋಡುವುದೂ ಅವರಿಗೆ ಕಷ್ಟಸಾಧ್ಯ ವಾಯಿತು. ರಮೇಶ ಇಷ್ಟು ಹೊತ್ತು ಮೌನವಾಗಿದ್ದು ಹೊರಡುವಾಗ ಅನ್ನದಾಬಾಬುಗಳಿಗೆ ನಮಸ್ಕರಿಸಿ ಹೊರಟ.

೫೭

ಕ್ಷೇಮಂಕರಿ ಕಮಲೆಯ ಬಳಿ ಹೋಗಿ, "ಅಮ್ಮಾ, ಹೇಮುಳನ್ನೂ ಅವರ ತಂದೆಯನ್ನೂ ನಾಳೆ ಮಧ್ಯಾಹ್ನ ಇಲ್ಲಿಗೇ ಊಟಕ್ಕೆ ಬರ ಹೇಳಿರುವೆ. ಅಡುಗೆ ಏನು ಮಾಡೋಣ ಹೇಳು? ಇಲ್ಲಿ ತಮ್ಮ ಮಗಳ ಊಟಕ್ಕೆ ತೊಂದರೆಯಾಗದು, ಎಂದು ನಿಶ್ಚಿಂತರಾಗುವಂತೆ ಬೀಗರಿಗೆ ಉಣಬಡಿಸಬೇಕು. ಏನು ಹೇಳುವೆ? ಆವರೂ ನಿನ್ನ ಅಡುಗೆ ತೆಗಳುವಂಥವಲ್ಲವೆಂದು ನಾನು ಬಲ್ಲೆ. ನನ್ನ ಮಗ ಇಂದಿನವರೆಗೆ ಊಟಮಾಡಿ ಎಂದೂ ಚೆನ್ನಾಗಿದೆ—ಚೆನ್ನಾಗಿಲ್ಲ ಎಂದು ಹೇಳಿರಲಿಲ್ಲ—ನಿನ್ನೆ ನಿನ್ನ ಅಡುಗೆಯನ್ನು ಅವನೂ ಹೊಗಳದಿರಲಿಲ್ಲ. ಆದರೆ ಇಂದು ನಿನ್ನ ಮುಖ ಬಾಡಿದಂತಿದೆಯಲ್ಲಾ! ಮೈ ಚೆನ್ನಾಗಿಲ್ಲವೆ? ಎಂದಳು.

ಕಳೆಗುಂದಿದ್ದ ಮುಖದಲ್ಲಿ ಒಣ ನಗು ಬರಮಾಡಿಕೊಂಡು ಕಮಲ, "ಚೆನ್ನಾಗಿರುವೆನಮ್ಮಾ" ಎಂದಳು.

ಕ್ಷೇಮಂಕರಿ ತಲೆಯಲ್ಲಾಡಿಸುತ್ತ ಹೇಳಿದಳು, "ಇಲ್ಲ ಇಲ್ಲ, ನಿನ್ನ ಮನಸ್ಸು ಹೇಗೋ ಇರುವಂತಿದೆ ಹಾಗಿದ್ದರೂ ಇರಬಹುದು. ಅದಕ್ಕಾಗಿ ನಾಚಿಕೆಯೇತಕ್ಕೆ? ನನ್ನನ್ನು ಬೇರೆಯವಳೆಂದು ತಿಳಿಯಬೇಡ ತಾಯಿ. ನಾನು ನಿನ್ನನ್ನು ನನ್ನ ಮಗಳಂತೆ ನೋಡಿಕೊಳ್ಳುವೆ—ಇಲ್ಲಿ ನಿನಗೆ ತೊಂದರೆಯೇನಾದರೂ ಇದ್ದರೆ ಅಥವಾ ನಿಮ್ಮ ಜನರನ್ನು ನೋಡಲು ಇಷ್ಟಪಟ್ಟರೆ ನನಗೆ ಹೇಳುವುದಿಲ್ಲವೇಕೆ?".

ಕಮಲ ದುಗುಡದಿಂದ, "ಇಲ್ಲಮ್ಮಾ, ನಿಮ್ಮ ಸೇವೆ ಹೊರತು ನನಗೆ ಬೇರೇನೂ ಬೇಕಿಲ್ಲ" ಎಂದಳು.

ಕ್ಷೇಮಂಕರಿ ಈ ಮಾತಿಗೆ ಕಿವಿಗೊಡದೆ ಹೇಳಿದಳು, "ಇಲ್ಲವಾದರೆ ಕೆಲವು ದಿನ ನಿಮ್ಮ ಚಿಕ್ಕಪ್ಪನ ಮನೆಯಲ್ಲಿ ಹೋಗಿರು, ಇಷ್ಟವಾದಾಗ ಹಿಂದಿರುಗಿ ಬಾ".

ಕಮಲ ಅಳುಕುತ್ತ, "ಅಮ್ಮಾ, ನಾನು ನಿಮ್ಮ ಬಳಿಯಿರುವಷ್ಟು ಕಾಲ ಜಗತ್ತಿನಲ್ಲಿ ಬೇರಾವುದಕ್ಕೂ ಯೋಚಿಸೆ. ನಾನು ನಿಮ್ಮಲ್ಲಿ ಎಂದಾದರೂ ತಪ್ಪಿ ನಡೆದರೆ ನಿಮ್ಮಿಷ್ಟದಂತೆ ನನ್ನನ್ನು ದಂಡಿಸಿ, ಆದರೆ ಒಂದು ದಿನದ ಮಟ್ಟಿಗೂ ನನ್ನನ್ನು ದೂರ ಮಾಡಬೇಡಿ" ಎಂದಳು.

ಕ್ಷೇಮಂಕರಿ ಕಮಲೆಯ ಬಲಗೆನ್ನೆಯನ್ನು ಬಲಗೈಯಿಂದ ಸವರುತ್ತ "ಹಾಗೆ ಹೇಳು ತಾಯಿ, ಹಿಂದಿನ ಜನ್ಮದಲ್ಲಿ ನೀನು ನನ್ನ ತಾಯಿಯಾಗಿದ್ದೆ. ಇಲ್ಲವಾದರೆ ನೋಡಿದೊಡನೆಯೇ ಇಂಥ ಬಂಧನವುಂಟಾಗುವುದೇ? ಹೋಗು ತಾಯಿ, ಹೊತ್ತಿಗೆ ಮುಂಚೆ ಮಲಗಲು ಹೋಗು. ದಿನವೆಲ್ಲಾ ಹೀಗೆ ಕುಳಿತಿರಬೇಡ. ತಿಳಿಯಿತೇ?" ಎಂದು ಹೇಳಿದಳು.

ಕಮಲ ತನ್ನ ಮಲಗುವ ಕೋಣೆಗೆ ಹೋಗಿ ಬಾಗಿಲು ಮುಚ್ಚಿ ದೀಪ ಆರಿಸಿ ಕತ್ತಲಲ್ಲಿ ನೆಲದ ಮೇಲೆ ಕುಳಿತಳು. ಬಹಳ ಹೊತ್ತು ಕುಳಿತಿದ್ದು, ಬಹಳ ಕಾಲ ಯೋಚಿಸಿ ಅವಳು "ಹಣೆಯ ಬರಹದ ದೋಷದಿಂದ ಯಾರ ಮೇಲಿನ ನನ್ನ ಅಧಿಕಾರ ಕೈ ತಪ್ಪಿಹೋಗಿರುವುದೋ, ಅವರನ್ನು ನಾನು ಅಗಲಿರಲು ಹೇಗೆ ಸಾಧ್ಯ! ಎಲ್ಲವನ್ನೂ ತ್ಯಾಗಮಾಡಲು ಮನಸ್ಸನ್ನು ಸಿದ್ಧಪಡಿಸಿಕೊಳ್ಳಬೇಕು—ಏನೇ ಆಗಲಿ ಬರಿಯ ಸೇವೆಮಾಡುವ ಸುಯೋಗವಾದರೂ ಸರ್ವಪ್ರಯತ್ನದಿಂದ ಉಳಿಸಿಕೊಂಡು ಹೋಗುವೆ ಅದನ್ನು ನಗುಮೊಗದಿಂದ ಮಾಡುವಂತೆ ಭಗವಂತ ಕರುಣಿಸಲಿ—ಅದನ್ನು ಬಿಟ್ಟು ಬೇರಾವುದೂ ಕಣ್ಣಿಗೆ ಬೀಳದಿರಲಿ, ಅನೇಕ ದುಃಖಗಳನ್ನು ಪಡೆದಿರುವೆ, ಅದನ್ನು ಪ್ರಸನ್ನತೆಯಿಂದ ಅಂಗೀಕರಿಸದಿದ್ದರೆ, ಮುಖ ದಪ್ಪಗೆ ಮಾಡಿಕೊಂಡರೆ, ಕಡೆಗೆ ಎಲ್ಲದರಿಂದಲೂ ವಂಚಿತಳಾಗಬೇಕಾಗುವುದು" ಎಂದು ಮನಸ್ಸನ್ನು ಸಂತೈಸಿಕೊಂಡಳು.

ಹೀಗೆ ಸಂತೈಸಿಕೊಂಡು ಏಕಾಗ್ರಮನದಿಂದ ತೀರ್ಮಾನಿಸಿ ಅವಳು, "ನಾನು ನಾಳೆಯಿಂದ ಯಾವಬಗೆಯ ದುಃಖಕ್ಕೂ ಮನದಲ್ಲಿ ಅವಕಾಶ ಕೊಡೆ. ಒಂದು ಗಳಿಗೆಯೂ ಮುಖ ಸೊಟ್ಟಗೆ ಮಾಡಿಕೊಳ್ಳುವುದಿಲ್ಲ. ಯಾವುದು ಆಸೆಗೆ ನಿಲುಕದೋ ಅದಕ್ಕಾಗಿ ಯಾವ ಹಿರಿಯಾಸೆಯೂ ಮನದಲ್ಲಿ ನಿಲ್ಲದಿರಲಿ, ಸುಮ್ಮನೆ ಸೇವೆ ಮಾಡುವೆ, ಬೇರಾವುದನ್ನೂ ಆಶಿಸೆ, ಆಶಿಸೆ, ಆಶಿಸೆ" ಎಂದು ಮನಸ್ಸಿನಲ್ಲಿ ಪ್ರತಿಜ್ಞೆ ಮಾಡಿಕೊಂಡಳು.

ಆ ಬಳಿಕ ಕಮಲ ಮಲಗಲು ಹೋದಳು. ಅತ್ತ-ಇತ್ತ ಹೊರಳಾಡಿ ನಿದ್ದೆಹೋದಳು. ರಾತ್ರಿ ಎರಡು ಮೂರುಬಾರಿ ನಿದ್ರಾಭಂಗವಾಯಿತು. ಎಚ್ಚರವಾದಾಗಲೆಲ್ಲಾ ಅವಳು ಮಂತ್ರದಂತೆ "ನಾನು ಬೇರಾವುದನ್ನೂ ಆಶಿಸೆ, ಆಶಿಸೆ, ಆಶಿಸೆ" ಎಂದು ಉಚ್ಚರಿಸತೊಡಗಿದಳು. ಮುಂಜಾನೆ ಅವಳು ಹಾಸಿಗೆ ಬಿಟ್ಟೇಳುತ್ತಲೇ ಕೈ ಮುಗಿದುಕೊಂಡು ಕುಳಿತು, ಹೃದಯವನ್ನೆಲ್ಲ

ಒಟ್ಟುಗೂಡಿಸಿ ಹೇಳಿದಳು, "ನಾನು ಸಾಯುವವರೆಗೆ ನಿನ್ನ ಸೇವೆ ಮಾಡುವೆ. ಬೇರೇನನ್ನೂ ಆಶಿಸೆ, ಆಶಿಸೆ, ಆಶಿಸೆ".

ಹೀಗೆ ಹೇಳಿ ಅವಸರ ಅವಸರವಾಗಿ ಮುಖ ತೊಳೆದುಕೊಂಡು, ಬಟ್ಟೆ ಬದಲಾಯಿಸಿಕೊಂಡು, ನಳಿನಾಕ್ಷನ ಆ ಕಿರಿಯ ಉಪಾಸನಾ ಗೃಹಕ್ಕೆ ಹೋದಳು; ತನ್ನ ಸೆರಗಿನಿಂದ ಕೋಣೆಯನ್ನೆಲ್ಲಾ ಗುಡಿಸಿ ಚೊಕ್ಕಟ ಮಾಡಿದಳು ಮತ್ತು ಯಥಾಸ್ಥಾನದಲ್ಲಿ ಆಸನ ಹಾಕಿ ವೇಗವಾಗಿ ಗಂಗಾಸ್ನಾನಕ್ಕೆಂದು ಹೊರಟಳು. ಇತ್ತೀಚೆಗೆ ನಳಿನಾಕ್ಷನ ವಿಶೇಷ ಕೋರಿಕೆಯಂತೆ ಕ್ಷೇಮಂಕರಿ ಸೂರ್ಯ ಹುಟ್ಟುವುದಕ್ಕೆ ಮೊದಲು ಸ್ನಾನಕ್ಕೆ ಹೋಗುವುದನ್ನು ನಿಲ್ಲಿಸಿರುವಳು. ಅದರಿಂದ ಉಮೇಶನೇ ಆ ತಡೆಯಲಾರದ ಚಳಿ ಹೊತ್ತಿನಲ್ಲಿ ಕಮಲೆಯೊಡನೆ ಸ್ನಾನಕ್ಕೆ ಹೋಗಬೇಕಾಯಿತು.

ಸ್ನಾನದಿಂದ ಹಿಂದಿರುಗಿ ಬಂದು ಕಮಲ ಕ್ಷೇಮಂಕರಿಗೆ ನಗುಮುಖದಿಂದ ನಮಸ್ಕಾರ ಮಾಡಿದಳು. ಆಕೆ ಆಗ ಸ್ನಾನಕ್ಕೆ ಹೊರಡುವ ಸಿದ್ಧತೆಯಲ್ಲಿದ್ದಳು. ಕಮಲೆಯನ್ನು ನೋಡಿ, "ಇಷ್ಟು ಮುಂಜಾನೆಯೇ ಸ್ನಾನಕ್ಕೆ ಹೋದುದೇಕೆ? ನನ್ನ ಜೊತೆಯಲ್ಲಿ ಬರಬಹುದಾಗಿತ್ತು" ಎಂದಳು.

"ಈ ದಿನ ಕೆಲಸವಿದೆಯಮ್ಮ, ನಿನ್ನೆ ಸಂಜೆಯಲ್ಲಿ ತಂದಿರುವ ತರಕಾರಿಗಳನ್ನು ಹೆಚ್ಚಿಡುವೆ—ಅಂಗಡಿಯಿಂದ ಇನ್ನೂ ತರುವುದಿದೆ. ಉಮೇಶ ಬೇಗ ಬೇಗ ಅನ್ನು ಮುಗಿಸಿಕೊಂಡು ಬರಲಿ" ಎಂದಳು ಕಮಲ.

ಕ್ಷೇಮಂಕರಿ "ಒಳ್ಳೆಯ ಮುಂದಾಲೋಚನೆ ತಾಯಿ, ಬೀಗರು ಬರುವುದರಲ್ಲಿ ಊಟದ ಸಿದ್ಧತೆ ನಡೆದಿರುವುದು ಒಳ್ಳೆಯದು" ಎಂದಳು.

ಆ ಸಮಯದಲ್ಲಿ ನಳಿನಾಕ್ಷ ಹೊರಗಡೆಯಿಂದ ಬರುತ್ತಿದ್ದಂತೆಯೇ ಕಮಲ ಒದ್ದೆಯ ಕೂದಲ ಮೇಲೆ ಕೂಡಲೇ ಮುಸುಕು ಎಳೆದುಕೊಂಡು ಒಳಕ್ಕೆ ನಡೆದಳು. ನಳಿನಾಕ್ಷ, ಅಮ್ಮಾ, ಇಂದೇ ನೀನು ಸ್ನಾನಕ್ಕೆ ಹೋಗುವೆಯಾ? ನಿನ್ನೆ ತಾನೆ ಸ್ವಲ್ಪ ಗುಣವಾಗಿದೆ" ಎಂದ.

"ನಳಿನ್, ನಿನ್ನ ಡಾಕ್ಟರ್‌ತನ ಇರಲಿ, ಬೆಳಗ್ಗೆ ಗಂಗಾಸ್ನಾನ ಮಾಡದಿದ್ದರೆ ಜನ ಅಮರರಾಗುವುದಿಲ್ಲ. ನೀನೀಗ ಹೊರಗಡೆ ಹೋಗುವಂತೆ ತೋರುವುದು? ಸ್ವಲ್ಪ ಹೊತ್ತಿಗೆ ಮುಂಚೆ ಹಿಂದಿರುಗಿ ಬಾ" ಎಂದಳು ಕ್ಷೇಮಂಕರಿ.

ನಳಿನಾಕ್ಷ "ಏಕಮ್ಮ" ಎಂದು ವಿಚಾರಿಸಿದ.

ಕ್ಷೇಮಂಕರಿ—ನಿನ್ನೆ ನಿನಗೆ ಹೇಳಲು ಮರೆತಿದ್ದೆ—ಈ ದಿನ ಅನ್ನದಾ ಬಾಬುಗಳು ನಿನಗೆ ಆಶೀರ್ವಾದ ಮಾಡಲು ಬರುವರು.

ನಳಿನಾಕ್ಷ—ಆಶೀರ್ವಾದ ಮಾಡಲು ಬರುವರೆ ? ಏಕೆ, ಇದ್ದಕ್ಕಿದ್ದಂತೆ ನನ್ನಮೇಲೆ ಇಷ್ಟೊಂದು ಪ್ರಸನ್ನತೆಗೆ ಕಾರಣ, ದಿನವೂ ಅವರನ್ನು ನೋಡುವೆ ನಲ್ಲಾ !

ಕ್ಷೇಮಂಕರಿ—ನಿನ್ನೆ ನಾನು ಹೇಮನಳಿನಿಗೆ ಒಂದು ಜೊತೆ ಕಡಗ ಕೊಟ್ಟು ಆಶೀರ್ವದಿಸಿ ಬಂದೆ—ಈಗ ಅನ್ನದಾಬಾಬುಗಳು ನಿನಗೆ ಮಾಡದಿದ್ದರೆ ಹೇಗೆ? ಏನೇ ಆಗಲಿ, ಹಿಂದಿರುಗಲು ತಡಮಾಡಬೇಡ—ಅವರುಗಳು ಇಲ್ಲಿಯೇ ಊಟ ಮಾಡುವರು.

ಹೀಗೆ ಹೇಳಿ ಕ್ಷೇಮಂಕರಿ ಸ್ನಾನಕ್ಕೆ ಹೊರಟಳು. ನಳಿನಾಕ್ಷ ತಲೆ ಬಗ್ಗಿಸಿಕೊಂಡು ಯೋಚಿಸುತ್ತ ಯೋಚಿಸುತ್ತ ಬೀದಿಯಲ್ಲಿ ನಡೆದು ಹೋದ.

## ೫೮

ಹೇಮನಳಿನಿ ರಮೇಶನ ಬಳಿಯಿಂದ ವೇಗವಾಗಿ ಓಡಿಹೋಗಿ ಕೊಠಡಿಯ ಬಾಗಿಲು ಮುಚ್ಚಿಕೊಂಡು ಹಾಸಿಗೆಯ ಮೇಲೆ ಕುಳಿತಳು. ಮೊದಲಿನ ಉದ್ರೇಕ ಕಡಿಮೆಯಾಗುತ್ತಲೇ ಒಂದು ನಾಚಿಕೆ ಅವಳನ್ನು ಕವಿದು ಕೊಂಡಿತು. " ಏಕೆ ನನಗೆ ರಮೇಶಬಾಬುಗಳನ್ನು ಸಹಜ ರೀತಿಯಲ್ಲಿ ನೋಡ ಲಾಗಲಿಲ್ಲ. ಯಾವುದನ್ನು ಆಶಿಸಲಿಲ್ಲವೋ ಅದೇ ಹಠಾತ್ತನೆ ನನ್ನ ಹೃದಯ ದೊಳಗಿಂದ ಹೀಗೆ ಅಗೌರವ ರೀತಿಯಲ್ಲಿ ಏಕೆ ತಲೆ ಹಾಕಿತು. ಸ್ಥಿರತೆಯಿಲ್ಲ, ಸ್ವಲ್ಪವೂ ಸ್ಥಿರತೆಯಿಲ್ಲ. ಹೀಗೆ ಕಳವಳಗೊಂಡರೆ ನಡೆಯದು ".

ಹೀಗೆಂದು ಅವಳು ಬಲಾತ್ಕಾರದಿಂದ ಎದ್ದು ಬಾಗಿಲು ತೆರೆದಳು. ಹೊರಗಡೆ ಬಂದಳು—ಮನಸ್ಸಿನಲ್ಲೇ ಹೇಳಿಕೊಂಡಳು. " ನಾನು ಓಡಿ ಹೋಗುವುದಿಲ್ಲ, ನಾನು ಗೆಲ್ಲುವೆ" ಪುನಃ ರಮೇಶಬಾಬುವನ್ನು ನೋಡಲು ಹೊರಟಳು. ಇದ್ದಕ್ಕಿದ್ದಂತೆ ಏನು ತೋರಿತೋ ! ಮತ್ತೆ ಅವಳು ಕೊಠಡಿ ಯೊಳಕ್ಕೆ ಹೋದಳು. ಪೆಟ್ಟಿಗೆ ತೆರೆದು ಅದರೊಳಗಿಂದ ಕ್ಷೇಮಂಕರಿ ಕೊಟ್ಟಿದ್ದ ಚಿನ್ನದ ಕಡಗ ಹೊರಕ್ಕೆ ತೆಗೆದು ಹಾಕಿಕೊಂಡಳು, ಮತ್ತು ಕತ್ತಿ ಹಿಡಿದು

ಯುದ್ಧಕ್ಕೆ ಹೊರಡುವಂತೆ ಅವಳು ತನ್ನನ್ನು ದೃಢಪಡಿಸಿಕೊಂಡು ತಲೆಯೆತ್ತಿ ತೋಟದ ಕಡೆಗೆ ನಡೆದಳು.

ಅನ್ನದಾಬಾಬುಗಳು, "ಹೇಮ್, ನೀನೆಲ್ಲಿಗೆ ಹೋಗುವೆ" ಎಂದು ಕೇಳಿದರು.

"ರಮೇಶಬಾಬು ಇಲ್ಲವೇ—ಅಣ್ಣ ಇಲ್ಲವೇ" ಎಂದು ಹೇಮನಳಿನಿ ಕೇಳಿದಳು.

ಅನ್ನದಾ—ಇಲ್ಲ, ಅವರುಗಳು ಹೊರಟುಹೋದರು.

ಕೂಡಲೇ ಒದಗಿದ್ದ ಆತ್ಮಪರೀಕ್ಷೆಯಿಂದ ಬಿಡುಗಡೆ ಹೊಂದಿ ಹೇಮನಳಿನಿ ನೆಮ್ಮದಿಯನ್ನನುಭವಿಸಿದಳು.

ಅನ್ನದಾಬಾಬುಗಳು ಕೇಳಿದರು, "ಈಗ ನೀನು . . ."

ಹೇಮನಳಿನಿ, "ಹೌದಪ್ಪಾ, ನಾನು ಹೊರಟೆ—ನಾನು ಸ್ನಾನಮಾಡಿ ಬರಲು ಹೊತ್ತಾಗದು. ನೀವು ಗಾಡಿ ತರಲು ಹೇಳಿ" ಎಂದಳು.

ಈ ರೀತಿ ಹೇಮನಳಿನಿ ಆಹ್ವಾನದಂತೆ ಹೋಗಲು, ಇದ್ದಕ್ಕಿದ್ದಂತೆ ತನ್ನ ಸ್ವಭಾವಕ್ಕೆ ವಿರುದ್ಧವಾಗಿ ಅತಿ ಉತ್ಸಾಹ ತೋರ್ಪಡಿಸಿದಳು. ಈ ಉತ್ಸಾಹದ ಉಬ್ಬರವನ್ನು ಅನ್ನದಾಬಾಬುಗಳು ಅರಿಯಲಿಲ್ಲ, ಅವರ ಮನ ಮತ್ತಷ್ಟು ಉದ್ರೇಕಗೊಂಡಿತು.

ಹೇಮನಳಿನಿ ಅವಸರ ಅವಸರವಾಗಿ ಸ್ನಾನ ಮುಗಿಸಿ ಅಲಂಕಾರಮಾಡಿಕೊಂಡು ಬಂದು, "ಅಪ್ಪಾ, ಗಾಡಿ ಬಂದಿದೆಯೇ" ಎಂದು ಕೇಳಿದಳು.

"ಇಲ್ಲ, ಇನ್ನೂ ಬಂದಿಲ್ಲ" ಎಂದರು ಅನ್ನದಾಬಾಬುಗಳು. ಅಷ್ಟು ಹೊತ್ತೂ ಹೇಮನಳಿನಿ ತೋಟದ ದಾರಿಯಲ್ಲಿ ಅತ್ತಿಂದಿತ್ತ ನಡೆದಾಡತೊಡಗಿದಳು. ಅನ್ನದಾಬಾಬುಗಳು ವರಾಂಡದಲ್ಲಿ ಕುಳಿತು ಕೈಯಿಂದ ತಲೆ ಸವರಿಕೊಳ್ಳುತ್ತಿದ್ದರು.

ಅನ್ನದಾಬಾಬು ನಳಿನಾಕ್ಷನ ಮನೆಗೆ ಬಂದಾಗ ಗಂಟೆ ಹತ್ತೂವರೆಗೆ ಮೀರಿರಲಿಲ್ಲ. ಇನ್ನೂ ನಳಿನಾಕ್ಷ ಕೆಲಸ ಮುಗಿಸಿಕೊಂಡು ಬಂದಿರಲಿಲ್ಲ. ಕಾರಣ ಕ್ಷೇಮಂಕರಿಯೇ ಅನ್ನದಾಬಾಬುಗಳನ್ನು ಸ್ವಾಗತಿಸಬೇಕಾಯಿತು.

ಕ್ಷೇಮಂಕರಿ ಅನ್ನದಾಬಾಬುಗಳ ದೇಹಸ್ಥಿತಿ ಹಾಗೂ ಕುಟುಂಬದ ನಾನಾ ಮಾತುಕತೆಗಳ ವಿಷಯವಾಗಿ ಪ್ರಶ್ನೋತ್ತರಕ್ಕೆ ಪ್ರಾರಂಭಿಸಿದಳು—ನಡುನಡುವೆ ಹೇಮನಳಿನಿಯ ಮುಖದ ಕಡೆ ಆಕೆಯ ನೋಟ ಹರಿಯುತ್ತಿತ್ತು.

ಆ ಮುಖದಲ್ಲಿ ಯಾವ ಉತ್ಸಾಹದ ಲಕ್ಷಣವೂ ಇಲ್ಲವೇಕೆ? ಮುಂಬರುವ ಶುಭ ಘಟನೆಯ ಸೂಚನೆ ಸೂರ್ಯೋದಯಕ್ಕೆ ಹಿಂದಿನ ಅರುಣಕಿರಣಕಾಂತಿ ಯಂತೆ ಅವಳ ಮುಖದಲ್ಲಿ ಪ್ರತಿಬಿಂಬಿಸಲಿಲ್ಲವೇಕೆ? ಅಷ್ಟೇ ಅಲ್ಲದೆ ಹೇಮ ನಳಿನಿಯ ಅನ್ಯಮನಸ್ಕ ನೋಟದಿಂದ ಒಂದು ಅಂಧಕಾರ ಭಾವನೆಯೂ ಕಂಡುಬರುತ್ತಿತ್ತು.

ಅಲ್ಪಕಾರಣವೂ ಕ್ಷೇಮಂಕರಿಯನ್ನು ಅಧೀರಳನ್ನಾಗಿ ಮಾಡುವುದು. ಹೇಮನಳಿನಿಯ ಈ ಬಗೆಯ ಮ್ಲಾನಭಾವ ಗಮನಿಸಿ ಅವಳ ಮನಸ್ಸು ಕುಗ್ಗಿತು. " ನಳಿನನನ್ನು ಮದುವೆಯಾಗುವುದು ಯಾವ ಹುಡುಗಿಗಾದರೂ ಸೌಭಾಗ್ಯದ ವಿಷಯ. ಆದರೆ ಈ ವಿದ್ಯೆಯಿಂದ ಗರ್ವಿತಳಾದ ಹುಡುಗಿ ನಮ್ಮ ನಳಿನನನ್ನು ತನಗೆ ಯೋಗ್ಯನೆಂದು ಗಣಿಸುತ್ತಿಲ್ಲವೇನು? ಇಷ್ಟು ಚಿಂತೆ, ಇಷ್ಟು ಅನ್ಯ ಮನಸ್ಕತೆಗೆ ಕಾರಣ? ನನ್ನದೇ ತಪ್ಪು. ಮುದುಕಿಯಾದೆ. ಆದರೂ ನೆಮ್ಮದಿ ಯಿಂದಿರಲು ಸಾಧ್ಯವಾಗಲಿಲ್ಲ. ಮನಸಿಗೆ ಬೇಕಾದುದರಿಂದ ಯಾವ ಕಾರಣ ವನ್ನೂ ಕೇಳಲಿಲ್ಲ, ವಯಸ್ಸಾದ ಹುಡುಗಿಯೊಡನೆ ನಳಿನನ ಮದುವೆ ಗೊತ್ತು ಮಾಡಿದೆ. ಹಾಗೂ ಅವಳ ಅಭಿಪ್ರಾಯವನ್ನು ಸರಿಯಾಗಿ ತಿಳಿಯಲು ಪ್ರಯತ್ನಿ ಸಲೂ ಇಲ್ಲ. ಉಫ್ ಉಫ್ ! ಯೋಚಿಸಿ ನೋಡ:ವಂಥ ಸಾವಕಾಶವಿಲ್ಲ— ಜಗತ್ತಿನಲ್ಲಿ ಎಲ್ಲ ಕೆಲಸವನ್ನೂ ಅವಸರ ಅವಸರವಾಗಿ ಮುಗಿಸಿಕೊಂಡು ಹೊರಡಲು ಅಪ್ಪಣೆ ಬಂದಿದೆ".

ಅನ್ನದಾಬಾಬುಗಳೊಡನೆ ಮಾತಾಡುತ್ತ ಆಡುತ್ತ ಕ್ಷೇಮಂಕರಿಯ ಮನಸಿನಲ್ಲೇ ಈ ಎಲ್ಲ ಚಿಂತೆಗಳೂ ಸುತ್ತಿ ಸುತ್ತಿ ಬರಲಾರಂಭಿಸಿತು. ಸಂಭಾಷಣೆ ನಡೆಯುವುದು ಅವಳಿಗೆ ಕಷ್ಟವಾಯಿತು. ಆಕೆ ಅನ್ನದಾಬಾಬು ಗಳಿಗೆ, "ನೋಡಿ, ಮದುವೆಯವಿಷಯದಲ್ಲಿ ಆತುರಪಡಬೇಕಾಗಿಲ್ಲ. ಇಬ್ಬರಿಗೂ ವಯಸ್ಸಾಗಿರುವುದು, ಈಗ ಇಬ್ಬರೂ ಆಲೋಚನೆ ಮಾಡಿ ಕೆಲಸ ನೆರವೇರಿಸಲಿ, ನಾವು ಒತ್ತಾಯ ಪಡಿಸುವುದು ಒಳ್ಳೆಯದಲ್ಲ–ಹೇಮಳ ಮನಸಿನ ವಿಷಯ ಖಂಡಿತ ನನಗೆ ತಿಳಿಯದು–ಆದರೆ ನಾನು ನಳಿನನ ಮಾತು ಹೇಳಬಲ್ಲೆ, ಅವನಿನ್ನೂ ಮನಸು ಸ್ಥಿರಮಾಡಿಕೊಂಡಿಲ್ಲ" ಎಂದಳು.

ಈ ಮಾತನ್ನು ಕ್ಷೇಮಂಕರಿ ಮುಖ್ಯವಾಗಿ ಹೇಮನಳಿನಿಗೆ ಕೇಳುವಂತೆ ಹೇಳಿದಳು. ಹೇಮನಳಿನಿ ಅಸಂತೋಷ ಮನದಿಂದ ಚಿಂತಿಸುತಿರಲು ತನ್ನ ಮಗನೇ ವಿವಾಹದ ವಿಷಯಕ್ಕೆ ಸಂಪೂರ್ಣವಾಗಿ ಒಪ್ಪಿರುವನು ಎಂಬ

ಭಾವನೆಯನ್ನು ಆಕೆ ಬೇರೊಬ್ಬರ ಮನಸಿನಲ್ಲಿ ಹುಟ್ಟಲು ಅವಕಾಶ ಕೊಡಲಾರ ದಾದಳು.

ಈದಿನ ಹೇಮನಳಿನಿ ಇಲ್ಲಿಗೆ ಬರುವಾಗ ಅತಿಯಾದ ಪ್ರಯತ್ನದಿಂದ ಉತ್ಸಾಹ ತುಂಬಿಕೊಂಡು ಬಂದಿದ್ದಳು-ಅದರಿಂದಲೇ ಅದಕ್ಕೆ ವಿರುದ್ಧಫಲ ದೊರೆಯಿತು. ಕ್ಷಣಿಕ ಉತ್ತೇಜನೆ ಬಂದು ಆಳವಾದ ಉತ್ಸಾಹ ಹೀನತೆಯಲ್ಲಿ ಕೊನೆಗಾಣುವುದು. ಕ್ಷೇಮಂಕರಿಯ ಮನೆಯೊಳಕ್ಕೆ ಬಂದಾಗ ಹಠಾತ್ತನೆ ಅವಳ ಮನವನ್ನು ಯಾವುದೋ ಸಂದೇಹ ಆಕ್ರಮಿಸಿಕೊಂಡಿತು-ಯಾವ ನೂತನ ಜೀವನಯಾತ್ರೆಯ ದಾರಿಯಲ್ಲಿ ಅವಳು ಕಾಲಿಡಲು ಸಿದ್ಧಳಾಗಿದ್ದಳೋ, ಅದು ಅವಳೆದುರಿಗೆ ಅತಿ ದೂರದವರೆಗೂ ಹರಡಿಕೊಂಡಿರುವ ದುರ್ಗಮ ಕಲ್ಲು ದಾರಿಯಂತೆ ಕಂಡುಬಂದಿತು.

ಸಮಸ್ತ ಶಿಷ್ಟಾಲಾಪದ ನಡುವೆ ತನ್ನಮೇಲಿನ ಅಪನಂಬಿಕೆ ಹೇಮ ನಳಿನಿಯ ಮನವನ್ನು ಇಂದು ಒಳಗೊಳಗೇ ಇರಿಯಲಾರಂಭಿಸಿತು.

ಈ ಸ್ಥಿತಿಯಲ್ಲಿ ಕ್ಷೇಮಂಕರಿ ಮದುವೆಯ ಮಾತನ್ನು ಸ್ವಲ್ಪ ಮುಂದು ವರಿಸಿದಾಗ ಹೇಮನಳಿನಿಯ ಮನಸಿನಲ್ಲಿ ಎರಡು ವಿರುದ್ಧಭಾವಗಳು ತಲೆ ಯೆತ್ತಿದುವು. ವಿವಾಹ ಬಂಧನದಲ್ಲಿ ಆದಷ್ಟು ಬೇಗ ಸಿಕ್ಕಿಕೊಂಡು ತನ್ನ ಸಂಶಯಡೋಲಾಯಿತ ದುರ್ಬಲ ಸ್ಥಿತಿಯಿಂದ ಬೇಗ ಬಿಡುಗಡೆ ಪಡೆಯಲು ಅವಳು ಆಶಿಸುತಿದ್ದಾಗ ಸೂಚನೆಯನ್ನು ಅವಳು ಸ್ವಲ್ಪವೂ ವಿಳಂಬವಿಲ್ಲದೆ ತೀರ್ಮಾನಿಸಿ ಬಿಡಲು ಇಷ್ಟಪಟ್ಟಳು-ಹಾಗೂ ಸೂಚನೆ ಮುಂದವರೆಯುವ ಉದ್ಯಮವನ್ನು ಕಂಡು ಇದ್ದಕ್ಕಿದಂತೆ ಅವಳು ಒಂದು ನೆಮ್ಮದಿಯನ್ನು ಹೊಂದಿದಳು.

ಕ್ಷೇಮಂಕರಿ ವಿಷಯವನ್ನು ಹೇಳಿ ಹೇಮನಳಿನಿಯ ಮುಖಭಾವವನ್ನು ಒಮ್ಮೆ ಕಣ್ಣುಹೊರಳಿಸಿ ತಿಳಿದುಕೊಂಡಳು. ಇಷ್ಟು ಹೊತ್ತಿನಬಳಿಕ ಹೇಮ ನಳಿನಿಯ ಮುಖದಮೇಲೆ ಒಂದು ಶಾಂತಿಯ ಸ್ನಿಗ್ಧತೆ ಮೂಡಿರುವುದು ಆಕೆಗೆ ಸ್ಪಷ್ಟವಾಯಿತು. ಆಕೆ ಮನಸಿನಲ್ಲೇ ಅಂದು ಕೊಂಡಳು, "ನಮ್ಮ ನಳಿನ ನನ್ನು ನಾನು ಇಷ್ಟು ಸುಲಭವಾಗಿ ಹಾಳುಮಾಡುವುದರಲ್ಲಿದ್ದೆ" ಈದಿನ ನಳಿನಾಕ್ಷ ಬರಲು ತಡವಾದುದರಿಂದ ಆಕೆಗೆ ಸಂತೋಷವಾಯಿತು. ಹೇಮ ನಳಿನಿಯಕಡೆ ನೋಡುತ್ತ, "ನಳಿನಾಕ್ಷನ ಬುದ್ಧಿ ನೋಡಿದೆಯಾ! ನೀವುಗಳು ಇಲ್ಲಿಗೆ ಬರುವುದು ಅವನಿಗೆ ತಿಳಿದಿತ್ತು, ಆದರೂ ಅವನ ಸುಳಿವೇ ಇಲ್ಲ.

ಇಂದು ಕೆಲಸಮಾಡದೆ ಮನೆಯಲ್ಲಿದ್ದಿದ್ದರೆ ಆಗಿತ್ತು. ಅದೇ ನನ್ನ ಕಾಯಿಲೆಯ ದೆಸೆಯಿಂದ ಅವನು ಕೆಲಸಕಾರ್ಯ ಬಿಟ್ಟು ಮನೆಯಲ್ಲೇ ಇರುತ್ತಿರಲಿಲ್ಲವೆ. ಅದರಿಂದ ಮಹಾನಷ್ಟವಾಗುತಿತ್ತೇನು" ಎಂದಳು.

ಹೀಗೆಂದು, ಊಟದ ಸಿದ್ಧತೆ ಎಷ್ಟುದೂರ ಮುಂದುವರಿದಿದೆ ಎಂಬುದನ್ನು ನೋಡಲು ಕ್ಷಣಹೊತ್ತು ಬಿಡುವುಪಡೆದು ಕ್ಷೇಮಂಕರಿ ಎದ್ದು ಬಂದಳು. ಹೇಮನಳಿನಿಯನ್ನು ಕಮಲೆಯ ಜೊತೆಯಲ್ಲಿ ಕಳುಹಿಸಿ ತಾನು ಮುದುಕರೊಡನೆ ಮಾತನಾಡಬೇಕೆಂದು ಆಕೆಯ ಇಷ್ಟ.

ತಯಾರಾದ ಅಡಿಗೆಯನ್ನು ಸಣ್ಣ ಕೆಂಡದ ಕಾವಿನಲ್ಲಿಟ್ಟು ಕಮಲ ಅಡುಗೆಮನೆಯ ಒಂದು ಮೂಲೆಯಲ್ಲಿ ತೆಪ್ಪನೆ ಕುಳಿತು ಏನನ್ನೋ ಯೋಚಿಸುತಿರುವುದನ್ನು ಆಕೆ ಕಂಡಳು, ಇದ್ದಕ್ಕಿದಂತೆ ಕ್ಷೇಮಂಕರಿ ಬಂದುದರಿಂದ ಅವಳು ಒಮ್ಮೆಗೇ ಬೆಚ್ಚಿಬಿದ್ದಳು. ಮರುಕ್ಷಣದಲ್ಲೇ ನಾಚಿಕೆಗೊಂಡು ನಗುಮುಖದಿಂದ ಎದ್ದುನಿಂತಳು. ಕ್ಷೇಮಂಕರಿ ಹೇಳಿದಳು, "ಅಮ್ಮಮ್ಮಾ, ನೀನು ಅಡುಗೆ ಕೆಲಸದಲ್ಲಿ ಅತಿ ನಿರತಳಾಗಿರುವೆಯೆಂದು ತಿಳಿದಿದ್ದೆ".

"ಅಡುಗೆ ಪೂರ್ತಿಯಾಗಿದೆಯಮ್ಮ" ಎಂದಳು ಕಮಲ. ಕ್ಷೇಮಂಕರಿ ಹೇಳಿದಳು, "ಆದರೆ ಇಲ್ಲಿ ಸುಮ್ಮನೆ ಕುಳಿತಿರುವುದೇಕೆ ತಾಯಿ, ಅನ್ನದಾ ಬಾಬುಗಳು ಮುದುಕರು. ಅವರೆದುರಿಗೆ ಬರಲು ನಾಚಿಕೆಯೇ? ಹೇಮ ಬಂದಿರುವಳು. ಅವಳನ್ನು ನಿನ್ನ ಕೊಠಡಿಗೆ ಕರೆದು ಅದೂ ಇದೂ ಮಾತನಾಡು ನಾನು ಮುದುಕಿ, ನನ್ನಬಳಿ ಕೂಡಿಸಿಕೊಂಡು ಅವಳಿಗೇಕೆ ತೊಂದರೆಕೊಡಲಿ"

ಹೇಮನಳಿನಿಯ ಹತ್ತಿರ ನಿರಾಸೆ ಹೊಂದಿದುದರಿಂದ ಕಮಲೆಯ ಮೇಲೆ ಕ್ಷೇಮಂಕರಿಯ ಸ್ನೇಹ ಎರಡರಷ್ಟಾಯಿತು.

ಕಮಲ ಸಂಕೋಚದಿಂದ, "ಅಮ್ಮ, ನಾನು ಅವಳೊಡನೆ ಏನು ಮಾತಾಡಲಿ. ಅವಳು ಅದೆಷ್ಟು ಓದುಬರಹ ಬಲ್ಲವಳು. ನನಗೆ ಏನೂ ತಿಳಿಯದು" ಎಂದಳು.

ಕ್ಷೇಮಂಕರಿ, "ಅದೇನು ಮಾತು, ನೀನು ಯಾರಿಗೂ ಕಡಿಮೆಯಾಗಿಲ್ಲ. ಓದುಬರಹ ಕಲಿತವರು ತಮ್ಮನ್ನು ಎಷ್ಟೇ ದೊಡ್ಡವರೆಂದು ತಿಳಿದಿರಲಿ, ನಿನಗಿಂತ ಹೆಚ್ಚು ಆದರ ಪಡೆಯುವ ಯೋಗ್ಯತೆ ಅದೆಷ್ಟು ಜನಕ್ಕಿರುವುದು? ಪುಸ್ತಕ ಓದಿ ಎಲ್ಲರೂ ವಿದ್ಯಾವಂತರಾಗಬಹುದು, ಆದರೆ ನಿನ್ನಂತೆ ಲಕ್ಷ್ಮಿಯಾಗಲು ಎಲ್ಲರಿಗೂ ಸಾಧ್ಯವೇನು? ಬಾ ತಾಯಿ, ಬಾ, ಆದರೆ ಈ ವೇಷದಲ್ಲಿ

ನೀನು ಹೋಗಕೂಡದು. ನಿನಗೆ ತಕ್ಕಂತೆ ಇಂದು ನಿನ್ನನ್ನು ಸಿಂಗರಿಸುವೆ" ಎಂದು ಹೇಳಿದಳು.

ಎಲ್ಲ ಕಡೆಯಿಂದಲೂ ಕ್ಷೇಮುಂಕರಿ ಇಂದು ಹೇಮನಳಿನಿಯ ಗರ್ವ ಇಳಿಸಲು ಪ್ರಯತ್ನಿಸುತಿದ್ದಳು. ರೂಪದಲ್ಲೂ ಈಕೆ ಅವಳನ್ನು ಈ ಅಲ್ಪ ಶಿಕ್ಷಿತ ಹುಡ ಗಿಯ ಎದುರಿಗೆ ಕಳೆಗುಂದುವಂತೆ ಮಾಡಲಾಶಿಸಿದಳು ಕಮಲೆಗೆ ಬೇಡ ಎನ್ನಲು ಅವಕಾಶವೇ ದೊರೆಯಲಿಲ್ಲ. ಅವಳಿಗೆ ಕ್ಷೇಮುಂಕರಿ ನಿಪುಣ ಹಸ್ತದಿಂದ ಇಷ್ಟಬಂದತೆ ಅಲಂಕಾರ ಮಾಡಿದಳು. ಮೇಘವರ್ಣದ ರೇಷ್ಮೆಸೀರೆ ಉಡಿಸಿದಳು, ಹೊಸಫ್ಯಾಷನ್ನಿನ ಹೆರಳುಹಾಕಿದಳು—ಬಾರಿ ಬಾರಿಗೂ ಮುಖವನ್ನು ಇತ್ತ-ಅತ್ತ ತಿರುಗಿಸಿ ತಿರುಗಿಸಿ ನೋಡಿದಳು ಮತ್ತು ಮುಗ್ಧ ಚಿತ್ತದಿಂದ ಅವಳ ಕೆನ್ನೆಗೆ ಮುತ್ತಿಟ್ಟು, "ಆಹಾ ಇಂಥ ರೂಪ ರಾಜನ ಮನೆಗೆ ಶೋಭಿಸುವುದು" ಎಂದಳು.

ಕಮಲ ನಡುನಡವೆ, "ಅಮ್ಮಾ, ಅವರುಗಳನ್ನು ಒಂಟಿಯಾಗಿ ಕೂರಿಸಿರುವಿರಿ—ಹೊತ್ತಾಗುತ್ತಿರುವುದು" ಎನ್ನುತಿದ್ದಳು.

ಕ್ಷೇಮುಂಕರಿ, "ಹೊತ್ತಾದರೆ ಆಗಲಿ—ಇಂದು ನಾನು ನಿನಗೆ ಅಲಂಕಾರಮಾಡದೆ ಹೋಗುವುದಿಲ್ಲ" ಎಂದಳು.

ಅಲಂಕಾರ ಮುಗಿಯಲು ಆಕೆ ಕಮಲೆಯನ್ನು ಜೊತೆಯಲ್ಲಿ ಕರೆದು ಕೊಂಡು ಹೊರಟಳು, "ಬಾ ತಾಯಿ, ಬಾ—ನಾಚಿಕೊಳ್ಳಬೇಡ. ನಿನ್ನನ್ನು ನೋಡಿ ಕಾಲೇಜಿನಲ್ಲಿ ಓದಿದ--ವಿದ್ಯಾವತಿಯರಾದ ಚೆಲುವೆಯರು ನಾಚಿ ಕೊಳ್ಳುವರು, ನೀನು ಎಲ್ಲರೆದುರಿಗೂ ತಲೆಯೆತ್ತಿ ನಿಲ್ಲಬಲ್ಲೆ".

ಹೀಗೆ ಹೇಳಿ ಅನ್ನದಾಬಾಬುಗಳು ಕುಳಿತಿದ್ದ ಕೊಠಡಿಯೊಳಕ್ಕೆ ಕ್ಷೇಮುಂಕರಿ ಬಲವಂತದಿಂದ ಕಮಲೆಯನ್ನು ಎಳೆದುಕೊಂಡುಹೋದಳು. ಹೋಗಿ ನೋಡಿದಾಗ, ನಳಿನಾಕ್ಷ ಅವರೊಡನೆ ಮಾತನಾಡುತಿದ್ದನು, ಕಮಲ ಕೂಡಲೇ ಹಿಂದಿರುಗಿ ಹೋಗಲು ಯತ್ನಿಸಿದಳು ಕ್ಷೇಮುಂಕರಿಯಾದರೋ ಅವಳನ್ನು ಹಿಡಿದು ನಿಲ್ಲಿಸಿದಳು —"ನಾಚಿಕೆಯೇಕೆ ತಾಯಿ, ನಾಚಿಕೆ ಏತಕ್ಕೆ. ಎಲ್ಲರೂ ನಮ್ಮವರೇ" ಎಂದಳು.

ಕಮಲೆಯ ರೂಪದಿಂದಲೂ ಅಲಂಕಾರದಿಂದಲೂ ಕ್ಷೇಮುಂಕರಿ ತನ್ನ ಮನದಲ್ಲೇ ಒಂದು ಹೆಮ್ಮೆ ಅನುಭವಿಸುತಿದ್ದಳು—ಅವಳನ್ನು ನೋಡಿ ಎಲ್ಲರೂ ಆಶ್ಚರ್ಯಪಡಬೇಕೆಂದು ಆಕೆಯ ಇಷ್ಟ. ಪುತ್ರಾಭಿಮಾನಿಯಾದ ತಾಯಿ

ತನ್ನ ನಳಿನಾಕ್ಷನ ವಿಷಯದಲ್ಲಿ ಹೇಮನಳಿನಿಯು ತಿರಸ್ಕಾರವನ್ನು ಕಲ್ಪಿಸಿ ಕೊಂಡು ಉದ್ರೇಕಗೊಂಡಿರುವಳು, ಇಂದು ನಳಿನಾಕ್ಷನೆಮರಿಗೆ ಹೇಮನಳಿನಿಯ ಅಹಂಕಾರ ಇಳಿಸಲು ಸಾಧ್ಯವಾದರೆ ಆಕೆಗೆ ಸಂತೋಷವಾಗುವುದು.

ಕಮಲೆಯನ್ನು ನೋಡಿ ಎಲ್ಲರೂ ಅಚ್ಚರಿಗೊಂಡರು. ಹೇಮನಳಿನಿ ಮೊದಲನೆಯ ದಿನ ಅವಳ ಪರಿಚಯ ಮಾಡಿಕೊಂಡಾಗ, ಕಮಲೆಗೆ ವೇಷ ಭೂಷಣ ಯಾವುದೂ ಇರಲಿಲ್ಲ-ಅವಳು ಮಲಿನಭಾವದಿಂದ ಒಂದು ಪಕ್ಕದಲ್ಲಿ ಕುಳಿತಿದ್ದಳಾಗಿ ಅಂದು ಅವಳನ್ನು ಸರಿಯಾಗಿ ನೋಡಲಾಗಲಿಲ್ಲ. ಇಂದು ಕ್ಷಣಕಾಳ ಅವಳು ವಿಸ್ಮಯದಿಂದಿದ್ದಳು. ಬಳಿಕ ಎದ್ದು ನಿಂತು ನಾಚಿಕೆ ಯಿಂದಿದ್ದ ಕಮಲೆಯ ಕೈ ಹಿಡಿದುಕೊಂಡು ಅವಳನ್ನು ತನ್ನ ಪಕ್ಕದಲ್ಲಿ ಕೂರಿಸಿಕೊಂಡಳು.

ತನಗೆ ಜಯದೊರೆಯಿತು, ಅಲ್ಲಿದ್ದ ಸಭಾಜನರೆಲ್ಲರೂ ಇಂಥ ರೂಪ ವನ್ನು ದೇವರ ದಯೆಯಿಂದ ಕಂಡೆವು ಎಂದು ಒಳಗೊಳಗೇ ಒಪ್ಪಿಕೊಂಡಿರುವ ರೆಂದು ಕ್ಷೇಮಂಕರಿ ಭಾವಿಸಿದಳು. ಆಗ ಆಕೆ ಕಮಲೆಯನ್ನು ಕುರಿತು "ಹೋಗು ತಾಯಿ, ನೀನು ಹೇಮಳನ್ನು ನಿನ್ನ ಕೊಠಡಿಗೆ ಕರೆದುಕೊಂಡು ಹೋಗಿ ಮಾತ-ಕತೆ ನಡೆಸು ಹೋಗು. ಅಷ್ಟರಲ್ಲಿ ನಾನು ಊಟಕ್ಕೆ ಸ್ಥಳ ಸರಿಪಡಿಸುವೆ" ಎಂದಳು.

ಕಮಲೆಯ ಮನಸಿನಲ್ಲಿ ಒಂದು ಹೋರಾಟ ಎದ್ದಿತು. "ಹೇಮನಳಿನಿ ನನ್ನನ್ನು ಹೇಗೆಕಾಣುವಳೋ ತಿಳಿಯದು" ಎಂದು ಅವಳು ಭಾವಿಸಲಾರಂಭಿ ಸಿದಳು.

ಈ ಹೇಮನಳಿನಿ ಒಂದು ದಿನ ಈ ಮನೆಯ ಸೊಸೆಯಾಗಿ ಬರುವಳು, ಒಡತಿಯಾಗುವಳು—ಇವಳ ಸುದೃಷ್ಟಿಯನ್ನು ಕಮಲ ತಿರಸ್ಕರಿಸುವಂತಿಲ್ಲ. ಈ ಮನೆಯ ಯಜಮಾನಿಕೆ ಅವಳದೇ ಆಗಿತ್ತು, ಆದರೆ ಆ ಮಾತನ್ನು ಅವಳು ನೆನೆಸಿಕೊಳ್ಳಲೂ ಇಷ್ಟಪಡಲಿಲ್ಲ—ದ್ವೇಷಕ್ಕೆ ಅವಳೆಂದಿಗೂ ಮನದಲ್ಲಿ ಎಡೆ ಗೊಡಳು—ಅವಳಿಗೆ ಯಾವ ಹಕ್ಕೂ ಇಲ್ಲ. ಅದರಿಂದಲೇ ಹೇಮನಳಿನಿ ಯೊಡನೆ ಹೋಗುವಾಗ ಅವಳ ಕಾಲುಗಳು ಕಂಪಿಸುತಿದ್ದವು.

ಹೇಮನಳಿನಿ ಮೆಲ್ಲಮೆಲ್ಲನೆ ಕಮಲೆಗೆ ಹೇಳಿದಳು "ನಿನ್ನ ಸಂಗತಿಯ ನ್ನೆಲ್ಲ ನಾನು ಅಮ್ಮನ ಹತ್ತಿರ ಕೇಳಿತಿಳಿದೆ, ಬಹಳ ದುಃಖವಾಯಿತು. ನೀನು

ನನ್ನನ್ನು ನಿನ್ನ ಒಡಹುಟ್ಟಿದವಳಂತೆ ಕಾಣು ತಂಗಿ, ನಿನಗೆ ಅಕ್ಕತಂಗಿಯ ರಿರುವರೇ ? ".

ಕಮಲ ಹೇಮನಳಿನಿಯ ಸ್ನೇಹಪೂರಿತ ಕರುಣ ಕಂಠಧ್ವನಿಯಿಂದ ಸಮಾಧಾನ ಹೊಂದಿ, " ನನಗೆ ಕೂಡ ಹುಟ್ಟಿದ ಅಕ್ಕತಂಗಿಯರಾರೂ ಇಲ್ಲ. ನನ್ನ ಚಿಕ್ಕಪ್ಪನ ಮಗಳೊಬ್ಬಳಿರುವಳು " ಎಂದಳು.

ಹೇಮನಳಿನಿ ಹೇಳಿದಳು, " ತಂಗಿ, ನನಗೂ ಅಕ್ಕತಂಗಿಯರಿಲ್ಲ. ನನ್ನ ಚಿಕ್ಕಂದಿನಲ್ಲಿಯೇ ನನ್ನ ತಾಯಿ ಸತ್ತುಹೊದಳು. ಅದೆಷ್ಟೋ ಸಲ ಅದೆಷ್ಟೋ ಸುಖದುಃಖದ ಸಮಯದಲ್ಲಿ " ತಾಯಿಯಂತೂ ಇಲ್ಲ, ನನಗೊಬ್ಬಳ್ಳ ಸೋದರಿ ಇದ್ದಿದ್ದರೆ " ಎಂದು ಯೋಚಿಸುತ್ತಿರುವೆ. ಚಿಕ್ಕಂದಿನಿಂದಲೂ ಎಲ್ಲ ಮಾತನ್ನೂ ಮನದಲ್ಲೇ ಅಡಗಿಸಿಟ್ಟುಕೊಳ್ಳಬೇಕಾಗಿರುವುದು, ಕಡೆಗೆ ಅದೇ ಅಭ್ಯಾಸವಾಗಿ ಈಗ ಮನಬಿಚ್ಚಿ ಯಾವುದನ್ನೂ ಹೇಳಲಾರೆ. ನನಗೆ ಬಹಳ ಜಂಬವೆಂದು ಜನ ತಿಳಿಯಬಹುದು—ಆದರೆ ತಂಗಿ, ನೀನು ಮಾತ್ರ ಎಂದಿಗೂ ಹಾಗೆ ತಿಳಿಯಕೂಡದು. ನನ್ನ ಮನಸ್ಸು ಮರಗಟ್ಟಿ ಹೋಗಿರುವುದು ".

ಕಮಲೆಯ ಮನಸಿನ ಎಲ್ಲ ಸಂಶಯವೂ ದೂರವಾಯಿತು—ಅವಳು, " ಅಕ್ಕ, ನಾನು ನಿನಗೆ ಸರಿಬೀಳುವೆನೇ. ನೀನು ನನ್ನನ್ನು ಅರಿಯೆ ನಾನು ಅತಿ ದಡ್ಡಳು " ಎಂದು ಹೇಳಿದಳು.

ಹೇಮನಳಿನಿ ನಕ್ಕು ಹೇಳಿದಳು, " ನನ್ನನ್ನು ನೀನು ಸರಿಯಾಗಿ ತಿಳಿದು ಕೊಂಡಾಗ, ನನ್ನನ್ನೂ ಅತಿ ಮೂರ್ಖಳೆಂದು ಗುರುತಿಸುವೆ ನಾನು ಕೇವಲ ಹಲ ಕೆಲವು ಪುಸ್ತಕಗಳನ್ನೋದಿ ಗಟ್ಟಿಮಾಡಿರುವೆ, ಬೇರೇನನ್ನೂ ಅರಿಯೆ. ನಾನು ನಿನಗೆ ಹೇಳುವುದಿಷ್ಟೇ, ನಾನು ಈ ಮನೆಗೆ ಬಂದರೆ ನೀನೆಂದಿಗೂ ನನ್ನನ್ನು ಬಿಟ್ಟುಹೋಗಬಾರದು ತಂಗಿ. ಎಂದಾದರೂ ಕುಟುಂಬದ ಭಾರ ನನ್ನೊಬ್ಬಳ ಮೇಲೆಯೇ ಬಿದ್ದಿರುವುದೆಂದು ನೆನೆದರೂ ನನಗೆ ಹೆದರಿಕೆಯಾಗು ವುದು ".

ಕಮಲ ಮಗುವಿನಂಥ ಸರಳ ಮನದಿಂದ ಹೇಳಿದಳು, " ಎಲ್ಲ ಭಾರ ವನ್ನೂ ನೀನು ನನಗೆ ಹೊರಿಸು. ನಾನು ಚಿಕ್ಕಂದಿನಿಂದಲೂ ಕೆಲಸಮಾಡುತ್ತ ಬಂದಿರುವೆ. ಹೊಣೆ ಹೊರಲು ನಾನು ಹೆದರುವುದಿಲ್ಲ. ನಾವಿಬ್ಬರು

ಸೋದರಿಯರೂ ಸೇರಿ ಸಂಸಾರ ನಡೆಸೋಣ—ನೀನು ಅವರನ್ನು ಸುಖವಾಗಿ ಡುವೆ. ನಾನು ನಿಮ್ಮಗಳ ಸೇವೆ ಮಾಡುವೆ".

"ಸರಿತಂಗಿ, ನಿನ್ನ ಗಂಡನನ್ನು ನೀನು ಚೆನ್ನಾಗಿ ನೋಡಿಲ್ಲ ಅಲ್ಲವೆ. ಆತನ ಸ್ವರೂಪ ನಿನಗೆ ನೆನಪಿದೆಯೆ ?" ಎಂದು ಹೇಮನಳಿನಿ ಕೇಳಿದಳು.

ಕಮಲೆ ಮಾತಿಗೆ ತಕ್ಕ ಉತ್ತರ ಹೇಳದೆ, "ಅಕ್ಕಾ, ಗಂಡನ ಮೂರ್ತಿಯನ್ನು ಮನಸ್ಸಿನಲ್ಲಿ ನೆಲೆಗೊಳಿಸಿಕೊಳ್ಳಬೇಕೆಂಬುದನ್ನು ನಾನು ಅರಿಯೆ. ಚಿಕ್ಕಪ್ಪನ ಮನೆಗೆ ಬಂದಾಗ ನಮ್ಮ ಚಿಕ್ಕಪ್ಪನ ಮಗಳು ಶೈಲಕ್ಕನೊಡನೆ ನನ್ನ ನಿಕಟ ಪರಿಚಯವಾಯಿತು. ಅವಳು ತನ್ನ ಗಂಡನಿಗೆ ಸೇವೆ ಮಾಡುತಿದ್ದುದನ್ನು ಕಣ್ಣಾರೆ ಕಂಡು ನನಗೆ ಮೊದ ಮೊದಲು ಚೇತನ ಮೂಡಿತು. ನಾನು ಗಂಡನನ್ನು ಎಂದೂ ನೋಡಿಲ್ಲ ವೆಂದೇ ಹೇಳಬೇಕು. ನನ್ನ ಹೃದಯದ ಸಮಸ್ತ ಭಕ್ತಿಯೂ ಅವನ ಉದ್ದೇಶಕ್ಕಾಗಿ ಹೇಗೆ ಅರ್ಪಿತವಾಯಿತೋ ಅದನ್ನು ನಾನು ಹೇಳಲಾರೆ. ಭಗವಂತ ನನಗೆ ಆ ಪೂಜೆಯ ಹೂವನ್ನು ಕೊಟ್ಟಿರುವನು—ಈಗ ನನ್ನಗಂಡ ನನ್ನ ಮನಸ್ಸಿನೆದುರಿಗೆ ಸ್ಪಷ್ಟವಾಗಿ ಕಾಣುತಿರುವನು. ಆತ ನನ್ನನ್ನು ಪರಿಗ್ರಹಿಸದಿದ್ದರೂ ನಾನವನನ್ನು ಪಡೆದಿರುವೆ" ಎಂದಳು.

ಕಮಲೆಯ ಈ ಭಕ್ತಿಯಿಂದ ತೋಯ್ದ ಕೆಲವು ಮಾತುಗಳನ್ನು ಕೇಳಿ ಹೇಮನಳಿನಿಯ ಅಂತಃಕರಣ ಕರಗಿ ನೀರಾಯಿತ . ಅವಳು ಒಂದೆರಡು ಕ್ಷಣ ತೆಪ್ಪನಿದ್ದು, "ನಿನ್ನ ಸಂಗತಿಯನ್ನು ಸ್ಪಷ್ಟವಾಗಿ ಅರಿತುಕೊಂಡೆ. ಪಡೆದರೆ ಈರೀತಿ ಪಡೆಯಬೇಕು. ಬೇರೆಲ್ಲ ಪಡೆಯುವಿಕೆಯೂ ಆಸೆಯಿಂದ ಕೂಡಿದ್ದು– ಅದು ನಷ್ಟವಾಗಿ ಹೋಗುವುದು" ಎಂದಳು.

ಕಮಲೆಗೆ ಈ ಮಾತು ಸರಿಯಾಗಿ ಅರ್ಥವಾಯಿತೋ ಇಲ್ಲವೋ ಹೇಳುವಂತಿಲ್ಲ. ಅವಳು ಹೇಮನಳಿನಿಯ ಕಡೆ ನೋಡುತಿದ್ದಳು—ಕ್ಷಣಕಾಲದ ಬಳಿಕ, "ಅಕ್ಕ ನೀನು ಹೇಳುವುದೆಲ್ಲ ಸತ್ಯವಾದೀತು. ನಾನು ಮನಸಿನಲ್ಲಿ ಸ್ವಲ್ಪವೂ ದುಃಖಗೊಂಡಿರಲಿಲ್ಲ—ನಾನು ಚೆನ್ನಾಗಿಯೇ ಇರುವೆನಕ್ಕ. ನಾನು ಪಡೆದಿರುವಷ್ಟೇ ನನ್ನಲಾಭ" ಎಂದು ಹೇಳಿದಳು.

ಹೇಮನಳಿನಿ ಕಮಲೆಯ ಕೈಯನ್ನು ತನ್ನ ಕೈಗೆ ಎತ್ತಿಕೊಂಡು ಹೇಳಿ ದಳು, "ತ್ಯಾಗವೂ ಲಾಭವೂ ಸಂಪೂರ್ಣ ಸಮಾನವಾದಾಗಲೇ ಅದರ ಯತಾರ್ಥಲಾಭ, ಎಂಬ ಮಾತನ್ನು ನನ್ನ ಗುರು ಹೇಳಿರುವರು. ಸತ್ಯವಾಗಿ

ಹೇಳುವೆ ತಂಗಿ, ನಿನ್ನಂತೆ ಹೀಗೆ ಎಲ್ಲವನ್ನೂ ಅರ್ಪಣೆಮಾಡಿ ಸಾರ್ಥಕಳಾಗುವ ಸಂಭವ ನನಗೆ ಒದಗಿದರೆ ನಾನು ಧನ್ಯಳಾಗುವೆ".

ಕಮಲ ಸ್ವಲ್ಪ ಅಚ್ಚರಿಯಿಂದ, "ಏನಕ್ಕ, ನಿನಗೆ ಎಲ್ಲವೂ ದೊರೆಯುವುದು, ನಿನಗೆ ಯಾವ ಅಭಾವವೂ ಇರದು" ಎಂದಳು.

ಹೇಮನಳಿನಿಯೆಂದಳು "ಪಡೆಯುವಷ್ಟನ್ನು ಪಡೆದರೇನೇ ಸುಖವಾದೀತು—ಅದಕ್ಕಿಂತ ಹೆಚ್ಚಾಗಿ ಪಡೆದರೂ, ಅದರಿಂದ ಬಹಳ ಹೊರೆ, ಬಹಳ ದುಃಖ. ನನ್ನ ಮಾತೆಲ್ಲ ನಿನಗೆ ಆಶ್ಚರ್ಯವಾಗಿ ತೋರೀತು—ನನಗೂ ಆಶ್ಚರ್ಯವೆ?—ಆದರೆ ಈ ಎಲ್ಲ ಸಂಗತಿಯನ್ನೂ ದೇವರು ನನಗೆ ಯೋಚಿಸುವಂತೆ ಮಾಡಿರುವನು. ಇಂದು ನನ್ನ ಮನದಲ್ಲಿ ಯಾವ ಭಾರ ಹುದುಗಿರುವುದೋ ನಾನರಿಯೆ ತಂಗಿ—ನಿನ್ನ ಪರಿಚಯದಿಂದ ನನ್ನ ಮನಸು ಹಗುರವಾಯಿತು—ನನಗೆ ಬೆಂಬಲ ದೊರೆಯಿತು—ಅದರಿಂದಲೇ ನಾನು ಇಷ್ಟೊಂದು ಹರಟುತ್ತಿರವೆ. ನಾನೆಂದೂ ಮಾತನಾಡಿರಲಿಲ್ಲ—ನೀನು ನನ್ನ ಸಂಗತಿಯನ್ನೆಲ್ಲ ಹೇಗೆ ತಿಳಿಯುವೆ ತಂಗಿ?"

## ೫೯

ಕ್ಷೇಮಂಕರಿಯ ಬಳಿಯಿಂದ ಹಿಂದಿರುಗಿ ಬಂದು ಹೇಮನಳಿನಿ ತನ್ನ ಕುಳಿತುಕೊಳ್ಳುವ ಕೋಣೆಯ ಮೇಜೆಯ ಮೇಲೆ ಒಂದು ತೂಕವಾದ ಪತ್ರ ಬಿದ್ದುದನ್ನು ನೋಡಿದಳು. ಲಕೋಟೆಯ ಮೇಲಿದ್ದ ಕೈಬರಹ ನೋಡುತ್ತಲೇ ಅದು ರಮೇಶನ ಪತ್ರವೆಂದು ತಿಳಿದಳು. ಕಂಪಿತ ಹೃದಯದಿಂದ ಕಾಗದ ಕೈಗೆ ತೆಗೆದುಕೊಂಡು ಮಲಗುವ ಮನೆಯ ಬಾಗಿಲು ಮುಚ್ಚಿ ಓದಲಾರಂಭಿಸಿದಳು.

ಪತ್ರದಲ್ಲಿ ರಮೇಶ ಕಮಲೆಗೆ ಸಂಬಂಧಿಸಿದ್ದ ಎಲ್ಲ ವ್ಯವಹಾರಗಳನ್ನೂ ವಿಸ್ತಾರವಾಗಿ ವಿವರಿಸಿ ಬರೆದಿರುವನು. ಉಪಸಂಹಾರ ಹೀಗಿತ್ತು—

"ನಿನ್ನೊಡನೆ ದೇವರು ದೃಢಪಡಿಸಿದ್ದ ಬಂಧನವನ್ನು ಪ್ರಪಂಚ ಕತ್ತರಿಸಿ ಹಾಕಿರುವುದು. ಈಗ ನೀನು ಬೇರೆಯವರಿಗೆ ಹೃದಯ ಅರ್ಪಿಸಿರುವೆ—ಇದಕ್ಕಾಗಿ ನಾನು ನಿನ್ನಮೇಲೆ ತಪ್ಪು ಹೊರಿಸಲಾರೆ—ಆದರೆ ನೀನೂ ನನ್ನನ್ನು ತಪ್ಪಿತಸ್ಥನನ್ನಾಗಿ ಮಾಡಬೇಡ. ಒಂದು

ದಿನದ ವ:ಟ್ಟಿಗಾದರೂ ನಾನು ಕಮಲೆಯ ಹತ್ತಿರ ಹೆಂಡತಿಯ ಸಂಗಡ ವರ್ತಿಸುವಂತೆ ನಡೆದುಕೊಳ್ಳಲಿಲ್ಲ. ಆದರೂ ಕ್ರಮೇಣ ಅವಳು ನನ್ನ ಹೃದಯವನ್ನು ಆಕರ್ಷಿಸಿಕೊಂಡಳು. ಈ ಸಂಗತಿ ಯನ್ನು ನಿನ್ನ ಬಳಿ ಒಪ್ಪಿಕೊಳ್ಳುವುದು ನನ್ನ ಕರ್ತವ್ಯ. ಇಂದು ನನ್ನ ಹೃದಯ ಯಾವ ಸ್ಥಿತಿಯಲ್ಲಿದೆಯೆಂಬುದನ್ನು ಖಂಡಿತ ನಾನರಿಯೆ. ನೀನು ನನ್ನನ್ನು ತ್ಯಾಗಮಾಡದಿದ್ದರೆ ನಿನ್ನ ಬಳಿ ನಾನು ಆಶ್ರಯ ಪಡೆಯಲು ಸಾಧ್ಯ. ಈ ನಂಬಿಕೆಯಿಂದಲೇ ನಾನು ನನ್ನ ನೊಂದ ಹೃದಯವನ್ನು ಹೊತ್ತು ನಿನ್ನ ಬಳಿಗೆ ಬಂದಿರುವೆ. ಆದರೆ ಇಂದು ಸ್ಪಷ್ಟವಾಗಿ ಕಂಡೆ—ನೀನು ನನ್ನನ್ನು ತಿರಸ್ಕರಿಸಿ ನನ್ನ ಸಾಮೀಪ್ಯದಿಂದ ವಿಮುಖಳಾಗಿರುವೆ—ನೀನು ಬೇರೆಯವರನ್ನು ಮದುವೆ ಯಾಗಲು ಒಪ್ಪಿರುವೆ ಎಂದು ಕೇಳಿದಾಗ, ನನ್ನ ಮನಸ್ಸು ಪುನಃ ಅಲ್ಲೋಲ ಕಲ್ಲೋಲವಾಯಿತು, ಇಂದಿಗೂ ಕಮಲೆಯನ್ನು ಸಂಪೂರ್ಣ ವಾಗಿ ಮರೆಯಲಾರೆ, ಎಂದರಿಕೆ. ಮರೆತರೂ ಮರೆಯದಿದ್ದರೂ, ಅದರಿಂದ ಜಗತ್ತಿನಲ್ಲಿ ನನ್ನ ಹೊರತು ಬೇರೆ ಯಾರಿಗೂ ದಃಖವಿಲ್ಲ. ನನಗಾದರೂ ದುಃಖವೇತಕ್ಕೆ ! ಜಗತ್ತಿನಲ್ಲಿ ಯಾವ ಈರ್ವರು ರಮಣಿ ಯರಿಗೆ ನನ್ನ ಹೃದಯದಲ್ಲಿ ಎಡೆ ಕೊಟ್ಟಿದ್ದೆನೋ, ಅವರನ್ನು ಮರೆ ಯಲು ನನ್ನಿಂದ ಸಾಧ್ಯವಿಲ್ಲ, ಹಾಗೂ ಅವರನ್ನು ಎಂದೆಂದೂ ನೆನಪಿನ ಲ್ಲಿಟ್ಟಿರುವುದೇ ನನಗೆ ಅತಿ ಲಾಭಕರ. ಈ ದಿನ ಬೆಳಗ್ಗೆ ನಿನ್ನೊಡನೆ ಕ್ಷಣಿಕ ಸಂದರ್ಶನದ ಸಿಡಿಲಿನ ಹೊಡೆತದಿಂದ ಹಿಂದಿರುಗಿ ಮನೆಗೆ ಬಂದಾಗ "ನಾನು ಹತಭಾಗ್ಯ" ಎಂದು ಮನಸ್ಸಿನಲ್ಲೇ ತೀರ್ಮಾನಿ ಸಿದೆ. ಆದರೆ ಆ ಮಾತನ್ನು ನಾನು ಒಪ್ಪಿಕೊಳ್ಳಲಾರೆ. ನಾನು ದೃಢ ಮನಸ್ಸಿನಿಂದ ಆನಂದದಿಂದ ನಿನ್ನ ಹತ್ತಿರ ಅಪ್ಪಣೆ ಪಡೆದು ಹೋಗು ತ್ತಿರುವೆ—ನಾನು ತುಂಬು ಹೃದಯದಿಂದ ನಿನ್ನ ಬಳಿಯಿಂದ ಹೊರಟು ಹೋಗುವೆ—ನಿನ್ನ ಮಂಗಳಕ್ಕಾಗಿ, ವಿಧಾತನ ಮಂಗಳಕ್ಕಾಗಿ ನಾನು ಹೃದಯದಲ್ಲಿ ಈ ಬೀಳ್ಕೊಡುವ ಕಾಲದಲ್ಲಿ ಸ್ವಲ್ಪವೂ ದೈನ್ಯ ವನ್ನನುಭವಿಸುವುದಿಲ್ಲ. ನೀನು ಸುಖಿಯಾಗು, ನಿನಗೆ ಮಂಗಳವಾ ಗಲಿ, ನನ್ನನ್ನು ನೀನು ಕಡೆಗಣಿಸಬೇಡ—ನನ್ನನ್ನು ಕಡೆಗಣಿಸುವಂಥ ಕಾರಣ ನಿನಗಿರುವುದಿಲ್ಲ".

ಅನ್ನದಾಬಾಬು ಕುರ್ಚಿಯಲ್ಲಿ ಕುಳಿತು ಪುಸ್ತಕ ಓದುತ್ತಿದ್ದರು. ಹಠಾತ್ತನೆ ಹೇಮನಳಿನಿಯನ್ನು ನೋಡಿ ಅವರು ಬೆಚ್ಚಿಬಿದ್ದರು— "ಹೇಮ್, ನಿನಗೇನಾದರೂ ದೇಹಾಲಸ್ಯವಾಗಿದೆಯೆ ?" ಎಂದು ಕೇಳಿದರು.

ಹೇಮನಳಿನಿ "ಏನೂ ಇಲ್ಲವಪ್ಪಾ, ರಮೇಶಬಾಬುವಿನ ಒಂದು ಪತ್ರ ದೊರೆತಿದೆ. ಇದೋ ತೆಗೆದುಕೊಳ್ಳಿ. ಓದಿದಮೇಲೆ ಪುನಃ ನನಗೆ ಹಿಂದಕ್ಕೆ ಕೊಡಿ" ಎಂದಳು.

ಹೀಗೆ ಹೇಳಿ ಪತ್ರಕೊಟ್ಟು ಹೇಮನಳಿನಿ ಹೊರಟುಹೋದಳು. ಅನ್ನದಾಬಾಬು ಕನ್ನಡಕ ಏರಿಸಿ ಒಂದೆರಡು ಬಾರಿ ಪತ್ರ ಓದಿದರು—ಆ ಬಳಿಕ ಹೇಮನಳಿನಿಗೆ ಕಳುಹಿಸಿಕೊಟ್ಟು ಕುಳಿತು ಯೋಚಿಸತೊಡಗಿದರು. ಯೋಚಿಸಿ ಕಡೆಗೆ ತೀರ್ಮಾನಿಸಿದರು, "ಒಂದು ರೀತಿಯಲ್ಲಿ ಇದು ಒಳ್ಳೆಯದೇ ಆಯಿತು, ವರನ ಯೋಗ್ಯತೆಯಲ್ಲಿ ನಳಿನಾಕ್ಷನೇ ವಿಶೇಷ ಗಣನೀಯ. ರಮೇಶ ತಾನಾಗಿಯೇ ಸನ್ನಿವೇಶದಿಂದ ದೂರ ಸರಿದು ಹೋಗಿರುವನು. ಇದು ಒಳ್ಳೆಯದೇ ಆಯಿತು".

ಹೀಗೆ ಯೋಚಿಸುತಿರುವಾಗ ನಳಿನಾಕ್ಷ ಬಂದು ಸೇರಿದ. ಅವನನ್ನು ನೋಡಿ ಅನ್ನದಾಬಾಬುಗಳಿಗೆ ಸ್ವಲ್ಪ ಆಚ್ಚರಿಯಾಯಿತು. ಇಂದು ಮಧ್ಯಾಹ್ನಕ್ಕೆ ಮೊದಲು ನಳಿನಾಕ್ಷನೊಡನೆ ಬೇಕಾದಷ್ಟು ಹೊತ್ತು ಕಳೆಯಲಾಗಿತ್ತು, ಇನ್ನೂ ಒಂದೆರಡು ಗಂಟೆಗಳು ಕಳೆಯುವ ಮೊದಲೇ ಅವನು ಏತಕ್ಕಾಗಿ ಬಂದಿರುವ ! ಮುದುಕರು ಒಳಗೊಳಗೇ ಒಮ್ಮೆ ನಕ್ಕು "ಹೇಮನಳಿನಿಯ ಮೇಲೆ ನಳಿನಾಕ್ಷನಿಗೆ ಪ್ರೀತಿಯುಂಟಾಗಿರುವುದು" ಎಂದು ತೀರ್ಮಾನಿಸಿದರು.

ಯಾವುದಾದರೊಂದು ನೆಪ ಹೂಡಿ ಹೇಮನಳಿನಿಯೊಡನೆ ನಳಿನಾಕ್ಷನ ಭೇಟಿ ನಡೆಸಿ ತಾವು ತಪ್ಪಿಸಿಕೊಂಡು ಹೋಗಲು ಯೋಚಿಸುತ್ತಿದ್ದರು. ಆ ವೇಳೆಯಲ್ಲಿ ನಳಿನಾಕ್ಷ ಹೇಳಿದ, "ಅನ್ನದಾಬಾಬು, ನನ್ನೊಡನೆ ನಿಮ್ಮ ಮಗಳ ಮದುವೆಯ ಮಾತೆದ್ದಿದೆ, ಮಾತುಕತೆ ಹೆಚ್ಚು ಮುಂದುವರಿಯುವ ಮೊದಲೇ ನಾನು ಹೇಳಬೇಕಾದುದನ್ನು ಹೇಳಬೇಕೆಂದಿರುವೆ".

"ಸರಿಯಾದ ಮಾತು, ಅದನ್ನು ಹೇಳಲೇ ಬೇಕು" ಎಂದರು ಅನ್ನದಾಬಾಬುಗಳು.

ನಳಿನಾಕ್ಷ ಹೇಳಿದ, "ನನಗೆ ಮೊದಲೇ ಮದುವೆಯಾಗಿರುವುದು ನಿಮಗೆ ತಿಳಿದಿರಲಾರದು".

ಅನ್ನದಾಬಾಬು "ಬಲ್ಲೆ, ಆದರೆ . . ." ಎಂದರು.

ನಳಿನಾಕ್ಷ –ನಿಮಗೆ ತಿಳಿದಿರುವುದನ್ನು ಕೇಳಿ ನನಗೆ ಆಶ್ಚರ್ಯವಾಗುವುದು. ಆದರೆ ಅವಳು ಸತ್ತಿರುವಳೆಂದು ನೀವುಗಳು ಊಹಿಸಿಕೊಂಡಿರುವಿರಿ. ನಿಶ್ಚಯವಾಗಿ ಹೇಳುವಂತಿಲ್ಲ. ಇಷ್ಟೇಕೆ, ಅವಳು ಬದುಕಿರುವಳೆಂದೇ ನಾನು ನಂಬಿರುವೆ.

"ದೇವರ ದಯೆ, ಅದು ಸತ್ಯವಾಗಲಿ. ಹೇಮ್ ! ಹೇಮ್" ಎಂದರು ಅನ್ನದಾಬಾಬುಗಳು.

ಹೇಮನಳಿನಿ ಬಂದು "ಏನಪ್ಪಾ" ಎಂದಳು.

ಅನ್ನದಾಬಾಬು—ರಮೇಶ ನಿನಗೆ ಬರೆದಿರುವ ಪತ್ರದಲ್ಲಿರುವ ಕೆಲವಂಶ-

ಹೇಮನಳಿನಿ ಆ ಪತ್ರವನ್ನು ನಳಿನಾಕ್ಷನ ಕೈಗೆ ಕೊಟ್ಟು ಹೇಳಿದಳು, "ಈ ಪತ್ರದ ಸಂಗತಿಯನ್ನೆಲ್ಲಾ ಅವರು ಓದಿ ನೋಡಬೇಕು" ಹೀಗೆಂದು ಹೇಮನಳಿನಿ ಹೊರಟುಹೋದಳು.

ಪತ್ರ ಓದಿ ಮುಗಿಸಿ ನಳಿನಾಕ್ಷ ಸ್ತಬ್ಧನಾಗಿ ಕುಳಿತುಕೊಂಡ. ಅನ್ನದ ಬಾಬು, "ಇಂಥ ಶೋಚನೀಯ ಘಟನೆ ಜಗತ್ತಿನಲ್ಲಿ ಎಂದೂ ನಡೆದಿಲ್ಲ. ಪತ್ರ ಓದಿಸುವುದರ ಮೂಲಕ ನಿಮ್ಮ ಮನಸ್ಸಿಗೆ ತೊಂದರೆ ಕೊಡಬೇಕಾಯಿತು—ಆದರೆ ಇದನ್ನು ನಿಮ್ಮ ಹತ್ತಿರ ರಹಸ್ಯವಾಗಿಡುವುದು ನಮಗೆ ಅನ್ಯಾಯವೆನಿಸುವುದು" ಎಂದರು.

ನಳಿನಾಕ್ಷ ಕ್ಷಣಕಾಲ ತೆಪ್ಪನಿದ್ದು ಅನ್ನದಾಬಾಬುಗಳ ಅಪ್ಪಣೆ ಪಡೆದು ಹೊರಟ. ಹೋಗುವಾಗ ಉತ್ತರದ ವರಾಂಡದಲ್ಲಿ ಸ್ವಲ್ಪದೂರದಲ್ಲಿ ಹೇಮನಳಿನಿಯನ್ನು ನೋಡಿದ.

ಹೇಮನಳಿನಿಯನ್ನು ನೋಡಿ ನಳಿನಾಕ್ಷನ ಮನಸ್ಸಿಗೆ ನೋವುಂಟಾಯಿತು. ಈ ಸಾರಿ ಇಲ್ಲಿ ಸ್ತಬ್ಧಳಾಗಿ ನಿಂತಿರುವಳಲ್ಲ, ಅವಳ ಸ್ಥಿರ–ಶಾಂತ ಮೂರ್ತಿ ಅವಳ ಅಂತಃಕರಣವನ್ನು ಹೇಗೆ ಹೊತ್ತುಕೊಂಡಿರುವುದೋ ? ಈಗ ಅವಳ ಮನಸ್ಸು ಹೇಗಿರಬಹುದು ? ಅದನ್ನು ಸರಿಯಾಗಿ ತಿಳಿದುಕೊಳ್ಳಲು ಮಾರ್ಗವಿಲ್ಲ—ಅವಳಿಗೆ ನಳಿನಾಕ್ಷನ ಆವಶ್ಯಕತೆ ಇದೆಯೇ ಇಲ್ಲವೇ ಎಂಬ ಪ್ರಶ್ನೆಯನ್ನೂ ಎತ್ತುವಂತಿಲ್ಲ, ಅದಕ್ಕೆ ಉತ್ತರ ಪಡೆಯುವುದು ಕಷ್ಟ.

ನಳಿನಾಕ್ಷನ ನೊಂದ ಹೃದಯ ಯೋಚಿಸಲಾರಂಭಿಸಿತು, "ಇವಳನ್ನು ಯಾವ ವಿಧವಲ್ಲಾದರೂ ಸಂತೈಸಲು ಸಾಧ್ಯವಿದೆಯೇ? ಆದರೆ ಮನುಷ್ಯ ಮನುಷ್ಯರಲ್ಲಿ ಅದೆಂಥ ಭೇದಿಸಲಾರದ ಅಡ್ಡಗೋಡೆ. ಮನಸ್ಸೊಂದೇ ಅದೆಷ್ಟು ಭಯಂಕರ!"

ನಳಿನಾಕ್ಷ ಸ್ವಲ್ಪ ಹಿಂದುಮುಂದು ನೋಡಿ ಆ ವರಾಂಡದ ಮುಂದಿನಿಂದ ಹೋಗಿ ಗಾಡಿ ಹತ್ತುವುದೆಂದು ನಿಶ್ಚಯಿಸಿದ—ವರಾಂಡದ ಎದುರಿಗೆ ಬಂದಾಗ ಹೇಮನಳಿನಿ ವರಾಂಡ ಬಿಟ್ಟು ಕೊಠಡಿಯೊಳಕ್ಕೆ ಹೋಗುತಿರುವುದನ್ನು ನೋಡಿದ. ಹೃದಯದೊಡನೆ ಹೃದಯದ ಸಂದರ್ಶನ ಸುಲಭವಲ್ಲ. ಮನುಷ್ಯ ನೊಡನೆ ಮನುಷ್ಯನ ಸಂಬಂಧ ಸುಲಭವಲ್ಲ ಎಂದು ಯೋಚಿಸುತ್ತ ಹೃದಯ ಭಾರದಿಂದ ನಳಿನಾಕ್ಷ ಗಾಡಿ ಏರಿದ.

ನಳಿನಾಕ್ಷ ಹೊರಟುಹೋಗುತ್ತಲೇ ಯೋಗೇಂದ್ರ ಬಂದುಸೇರಿದ. "ಏನು ಯೋಗೇನ್, ಒಂಟಿಯಾಗಿ" ಎಂದು ಅನ್ನದಾಬಾಬುಗಳು ವಿಚಾರಿಸಿದರು.

ಯೋಗೇಂದ್ರ ಕೇಳಿದ, "ಯಾವ ಎರಡನೇ ವ್ಯಕ್ತಿಯನ್ನು ಎದುರು ನೋಡುತ್ತಿದ್ದಿರಿ?".

ಅನ್ನದಾಬಾಬು, "ಯಾಕೆ, ರಮೇಶ?" ಎಂದರು.

ಯೋಗೇಂದ್ರ—ಮೊದಲನೆಯದಿನ ಅವನ ಸ್ವಾಗತ ಗೌರವ ರೀತಿಯಲ್ಲಿ ನಡೆಯಲಿಲ್ಲ. ಕಾಶಿಯ ಗಂಗೆಯಲ್ಲಿ ಮುಳುಗಿ ಶಿವನಪಾದ ಸೇರಿದನೋ ಅಥವಾ ಬೇರೇನಾದನೋ ನನಗೆ ತಿಳಿಯದು. ನಿನ್ನೆಯಿಂದ ಇಷ್ಟುಹೊತ್ತಿನವರೆಗೆ ಅವನು ಕಣ್ಣಿಗೇ ಬಿದ್ದಿಲ್ಲ, ಮೇಜೆಯಮೇಲೆ ಒಂದು ಕಾಗದ ಬರೆದಿಟ್ಟಿತ್ತು— "ಓಡಿಹೋದ, ನಿನ್ನ ರಮೇಶ". ಈ ಎಲ್ಲ ಕವಿತ್ವ ನನಗೆ ಯಾವಕಾಲದಲ್ಲೂ ಪರಿಚಯವಿಲ್ಲ. ಖಂಡಿತ ನಾನೂ ಇಲ್ಲಿಂದ ಹೋಗಲೇಬೇಕು—ನನ್ನ ಹೆಡ್‌ಮಾಸ್ಟರ್‌ಗಿರಿಯೇ ಮೇಲು—ಅದರಲ್ಲಿ ಎಲ್ಲವೂ ಸ್ಪಷ್ಟವಾಗಿರುವುದು— ಮುಚ್ಚುಮರೆ ಏನೂ ಇಲ್ಲ.

ಅನ್ನದಾಬಾಬು ಹೇಳಿದರು, "ಹೇಮಳಿಗಾಗಿ ಏನಾದರೊಂದು ನಿಶ್ಚಯ . . .".

ಯೋಗೇಂದ್ರ—ಇನ್ನೇನು, ನಾನು ನಿಶ್ಚಯಮಾಡುವೆ, ನೀವು ಕೆಡಿಸುತ್ತ ಬನ್ನಿ. ಈ ಆಟ ಎಂದೆಂದಿಗೂ ಚೆನ್ನಾಗಿರದು. ನನ್ನನ್ನು ಇನ್ಯಾವುದರಲ್ಲೂ ಸಿಕ್ಕಿಸಬೇಡಿ. ಯಾವುದು ನನಗೆ ಸರಿಯಾಗಿ ಅರ್ಥವಾಗದೋ ಅದು ನನ್ನಿಂದ ಸಾಧ್ಯವಿಲ್ಲ. ಹಠಾತ್ತನೆ ಹೇಮಳ ಈ ಅರ್ಥಮಾಡಿಕೊಳ್ಳಲಾಗದ ಆಶ್ಚರ್ಯಕರ

ಸಾಮರ್ಥ್ಯ ನೋಡಿ ನಾನು ವಿವಶನಾಗಿರುವೆ. ನಾಳೆ ಬೆಳಗಿನ ಗಾಡಿಯಲ್ಲಿ ನಾನು ಹೋಗುವೆ—ದಾರಿಯಲ್ಲಿ ಬಾಂಕಿಪುರದಲ್ಲಿ ನನಗೆ ಕೆಲಸವಿದೆ.

ಅನ್ನದಾಬಾಬು ತೆಪ್ಪನೆಕುಳಿತು ಹಣೆಯನ್ನು ಕೈಯಿಂದ ಸವರಿಕೊಳ್ಳ ತೊಡಗಿದರು. ಜಗತ್ತಿನ ಸಮಸ್ಯೆ ಪುನಃ ಕಠಿಣವಾಗುತ್ತಾಬಂದಿರುವುದು.

## ೬೦

ಶೈಲಜೆಯೂ ಅವಳ ತಂದೆಯೂ ನಳಿನಾಕ್ಷನಮನೆಗೆ ಬಂದರು. ಶೈಲಜೆ ಕಮಲೆಯೊಡನೆ ಬಂದು ಕೊಠಡಿಯಲ್ಲಿ ಕುಳಿತು ಪಿಸಪಿಸನೆ ಮಾತನಾಡು ತ್ತಿದ್ದಳು. ಚಕ್ರವರ್ತಿ ಕ್ಷೇಮಂಕರಿಯೊಡನೆ ಸಂಭಾಷಿಸುತ್ತಿದ್ದರು.

ಚಕ್ರವರ್ತಿ—ನನ್ನರಜ ಮುಗಿಯುತ್ತಬಂತು—ನಾಳೆಯೇ ಗಾಜೀಪುರಕ್ಕೆ ಹೊರಡಬೇಕಾದೀತು—ಹರಿದಾಸಿ ನಿಮಗೇನಾದರೂ ಬೇಸರವುಂಟುಮಾಡಿದ್ದರೆ ಅಥವಾ ನಿಮಗೆ . . .

ಕ್ಷೇಮಂಕರಿ—ಇದೆಂಥ ಮಾತು ಚಕ್ರವರ್ತಿಗಳೇ. ನಿಮ್ಮ ಮನಸ್ಸಿನ ಭಾವನೆ ತಿಳಿದುಕೊಳ್ಳಬಹುದೆ! ನೀವು ಯಾವುದೋ ನೆಪಹೂಡಿ ನಿಮ ಮಗಳನ್ನು ಕರೆದುಕೊಂಡು ಹೋಗಬೇಕೆಂದಿರುವಿರೇನು ?

ಚಕ್ರವರ್ತಿ—ನಾನು ಆ ರೀತಿಯ ಮನುಷ್ಯನಲ್ಲ—ನಿಮಗೇನಾದರೂ ತೊಂದರೆಯಾಗಿದ್ದರೆ . . .

ಕ್ಷೇಮಂಕರಿ—ಚಕ್ರವರ್ತಿ ಮಹಾಶಯ–ಇದು ನಿಮ್ಮ ಸ್ವಾಭಾವಿಕವಾದ ಮಾತಲ್ಲ—ಹರಿದಾಸಿಯಂಥ ಮಗಳನ್ನು ಬಳಿಯಲ್ಲಿಟ್ಟುಕೊಂಡರೆ ಅನುಕೂಲಕ್ಕೆ ಎಲ್ಲಿಯೇ ಇಲ್ಲವೆಂದು ಒಳಗೊಳಗೆ ಚೆನ್ನಾಗಿ ತಿಳಿದಿರುವಿರಿ, ಆದರೂ . . .

ಚಕ್ರವರ್ತಿ—ಇಲ್ಲಇಲ್ಲ, ಇನ್ನೇನೂ ಹೇಳುವುದಿಲ್ಲ–ನಾನು ತಪ್ಪುಮಾಡಿದೆ ಅದೊಂದು ನೆಪಮಾತ್ರ—ನಿಮ್ಮಬಾಯಿಂದ ಹರಿದಾಸಿಯ ಗುಣಗಾನಕೇಳಲು ನಾನು ಹೀಗೆ ಮಾಡಿದ್ದು. ಆದರೆ ಒಂದೇ ಒಂದು ಯೋಚನೆ—ಎಲ್ಲಿಂದಲೋ ಇದೊಂದುಹೊರೆ ತಲೆಯಮೇಲೆ ಬಿದ್ದಿತೆಂದು ನಳಿನಾಕ್ಷಬಾಬು ತಿಳಿಯುವರೋ ಏನೋ ! ನಮ್ಮ ಹುಡುಗಿ ಆತ್ಮಗೌರವವುಳ್ಳವಳು—ನಳಿನಾಕ್ಷಬಾಬುವಿನಲ್ಲಿ ಅಲ್ಪ ಬೇಸರದ ಭಾವ ಕಂಡರೂ ಅವಳದನ್ನು ಸಹಿಸಲಾರಳು.

ಕ್ಷೇಮಂಕರಿ—ರಾಮರಾಮ. ನಳಿನನಿಗೆ ಬೇಸರವೆ? ಅವನಿಗೆ ಅಂಥ ಶಕ್ತಿಯೇ ಇಲ್ಲ.

ಚಕ್ರವರ್ತಿ—ಅದು ಸರಿಯಾದ ಮಾತು. ಆದರೆ ನೋಡಿ, ಹರಿದಾಸಿ ನನಗೆ ಪ್ರಾಣಕ್ಕಿಂತ ಹೆಚ್ಚು. ಅದರಿಂದ ಅವಳ ವಿಷಯದಲ್ಲಿ ಅಷ್ಟಿಷ್ಟಕ್ಕೆ ನಾನು ಸಂತೋಷಪಡಲಾರೆ. ನಳಿನಾಕ್ಷ ಅವಳ ಮೇಲೆ ಬೇಸರಪಡದೆ ಉದಾಸೀನನಂತಿದ್ದರೂ, ನನ್ನ ಮನಸಿಗೆ ಸರಿಬೀಳದು. ಹರಿದಾಸಿ ಅವರ ಮನೆಯಲ್ಲಿರುವಾಗ, ಅವಳನ್ನು ಅವರು ಮನೆಯ ಜನರಂತೆಯೇ ನೋಡಿಕೊಳ್ಳಬೇಕು. ಇಲ್ಲವಾದರೆ ಮನಸ್ಸಿಗೆ ಬಹಳ ಸಂಕೋಚವಾಗುವುದು. ಅವಳೇನು ಮನೆಯ ಗೋಡೆಯಲ್ಲ. ಅವಳೂ ಒಬ್ಬಳು ಮನುಷ್ಯಳೇ—ಅವಳಲ್ಲಿ ಬೇಸರವೂ ಬೇಡ, ಸ್ನೇಹಮಾಡುವುದೂ ಬೇಡ—ಅವಳು ಇದ್ದರೆ ಇರಲಿ, ಇಷ್ಟು ಸಂಬಂಧವಾದರೆ ಆಯಿತು ಅದನ್ನು ಹೇಗೆ . . .

ಕ್ಷೇಮಂಕರಿ – ಚಕ್ರವರ್ತಿಗಳೇ, ನೀವು ಹೆಚ್ಚು ಯೋಚಿಸಬೇಡಿ—ಯಾರನ್ನೂ ನಮ್ಮವರೆಂದು ಪ್ರೀತಿಸುವ ಶಕ್ತಿ ನಳಿನಾಕ್ಷನ ಪಾಲಿಗೆ ಕಷ್ಟವಾದುದಲ್ಲ. ಬಹಿರಂಗವಾಗಿ ಏನನ್ನೂ ಹೇಳುವಂತಿಲ್ಲ. ಆದರೆ ನಮ್ಮ ಮನೆಯಲ್ಲಿ ಹರಿದಾಸಿ ಇರುವಳಲ್ಲ, ಅವಳು ಹೇಗೆ ನೆಮ್ಮದಿಯಾಗಿದ್ದಾಳು? ಅವಳಿಗೆ ಯಾವುದರಿಂದ ಒಳ್ಳೆಯದಾದೀತು ಎಂಬ ಚಿಂತೆ ಖಂಡಿತ ನಳಿನನ ಮನಸ್ಸಿನಲ್ಲಿದೆ. ಅದಕ್ಕಾಗಿ ಒಂದಲ್ಲ ಒಂದು ಏರ್ಪಾಡು ಮಾಡಿದರೂ ಮಾಡುವನೇ. ಅದನ್ನು ನಾವುಗಳು ಅರಿಯಲು ಸಾಧ್ಯವಿಲ್ಲ.

ಚಕ್ರವರ್ತಿ—ಇದನ್ನು ಕೇಳಿ ನಾನು ನಿಶ್ಚಿಂತನಾದೆ. ಆದರೂ ನಾನು ಹೋಗುವ ಮೊದಲು ಒಮ್ಮೆ ಮುಖ್ಯವಾಗಿ ನಳಿನಾಕ್ಷಬಾಬುಗಳಿಗೆ ಹೇಳಿ ಹೋಗಬೇಕೆಂದಿರುವೆ. ಓರ್ವ ಸ್ತ್ರೀಯ ಸಂಪೂರ್ಣ ಭಾರವನ್ನು ವಹಿಸುವಂಥ ಪುರುಷರು ಜಗತ್ತಿನಲ್ಲಿ ಅತಿ ವಿರಳ—ಭಗವಂತ ನಳಿನಾಕ್ಷಬಾಬುವಿಗೆ ಆ ಸಾಮರ್ಥ್ಯ ಕೊಟ್ಟಿರುವಾಗ ಅವರು ವ್ಯರ್ಥವಾದ ಸಂಕೋಚದಿಂದ ಹರಿದಾಸಿಯನ್ನು ದೂರವಿಡದಿರಲಿ. ಅವರು ತಮ್ಮ ನೆಂಟಳಂತೆಯೇ ಅವಳನ್ನು ಸಂಪೂರ್ಣ ಸಹಜ ರೀತಿಯಲ್ಲಿ ಸ್ವೀಕರಿಸಲಿ ಮತ್ತು ಕಾಪಾಡಲಿ. ಇಷ್ಟನ್ನು ಅವರ ಬಳಿ ಹೇಳಲಾಶಿಸುವೆ.

ನಳಿನಾಕ್ಷನ ವಿಷಯದಲ್ಲಿ ಚಕ್ರವರ್ತಿಗಳಿಗಿದ್ದ ಇಂಥ ನಂಬಿಕೆಯನ್ನು ಕಂಡು ಕ್ಷೇಮಂಕರಿಯ ಹೃದಯ ಕರಗಿತು. ಆಕೆ ಹೇಳಿದಳು, "ನೀವೇ

ನಾವರೂ ತಿಳಿದುಕೊಳ್ಳಬಹುದೆಂಬ ಹೆದರಿಕೆಯಿಂದ ನಾನು ಹರಿದಾಸಿಯನ್ನು ನಳಿನಾಕ್ಷನ ಎದುರಿಗೆ ಅಷ್ಟಾಗಿ ಬರಗೊಡುವುದಿಲ್ಲ—ನನ್ನ ಮಗನನ್ನು ನಾನು ಬಲ್ಲೆನಾದರೂ, ಅವನಲ್ಲಿ ನಂಬಿಕೆಯಿಟ್ಟು ನೀವು ನಿಶ್ಚಿಂತರಾಗಿರಬೇಕು".

ಚಕ್ರವರ್ತಿ—ನಿಮ್ಮ ಬಳಿ ಎಲ್ಲ ಮಾತನ್ನೂ ಬಿಚ್ಚಿ ಹೇಳಿರುವೆ. ನಳಿನಾಕ್ಷಬಾಬುವಿನ ಮದುವೆಯ ಮಾತು ನಡೆಯುತಿರುವುದೆಂದು ಕೇಳಿದೆ—ಹುಡುಗಿಯೇನೂ ಅಷ್ಟು ಚಿಕ್ಕವಳಲ್ಲ ಹಾಗೂ ಅವಳ ಓದುಬರಹ ನಮ್ಮ ಸಮಾಜದೊಡನೆ ಅಷ್ಟಾಗಿ ಹೊಂದಲಾರದು. ಅದರಿಂದಲೇ ಯೋಚಿಸುವೆ. ಒಂದುವೇಳೆ ಹರಿದಾಸಿಯ. . . .

ಕ್ಷೇಮಂಕರಿ—ಅದು ನನಗೆ ತಿಳಿಯದುದೇನು? ಅದಕ್ಕಾಗಿ ಯೋಚಿಸಬೇಕೆ? ಆದರೆ ಆ ಮದುವೆ ನಡೆಯದು.

ಚಕ್ರವರ್ತಿ—ಸಂಬಂಧ ನಿಂತುಹೋಯಿತೇ?

ಕ್ಷೇಮಂಕರಿ—ಸಂಬಂಧವೇ ಆಗಿರಲಿಲ್ಲ. ನಿಂತು ಹೋಗುವುದೆಲ್ಲಿ? ನಳಿನನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ, ನಾನೇ ಬಲವಂತಪಡಿಸಿದ್ದೆ. ಆದರೆ ಆ ಬಲಾತ್ಕಾರ ಬಿಟ್ಟಿರುವೆ. ಯಾವುದು ನಡೆಯದೋ ಅದು ಬಲವಂತದಿಂದ ನಡೆದರೆ ಒಳ್ಳೆಯದಾಗದು. ಭಗವಂತನ ಇಷ್ಟವೇನೋ ತಿಳಿಯದು—ಸಾಯುವ ಮೊದಲು ಸೊಸೆಯನ್ನು ಕಾಣಲಾರೆನೆಂದು ತೋರುವುದು.

ಚಕ್ರವರ್ತಿ—ಆ ಮಾತು ಹೇಳಬೇಡಿ. ನಾವಿರುವುದಾದರೂ ಏತಕ್ಕೆ? ಮದುವೆಯ ಮಧ್ಯಸ್ಥಿಕೆ ಮಾಡಿ ಹಾಗೂ ಮೃಷ್ಟಾನ್ನ ಭೋಜನ ಗಳಿಸದೆ ಸುಮ್ಮನೆ ಬಿಡುವೆವೆ?

ಕ್ಷೇಮಂಕರಿ—ನಿಮ್ಮ ಬಾಯಿಗೆ ಸಕ್ಕರೆ ಹಾಕಬೇಕು ಚಕ್ರವರ್ತಿ ಮಹಾಶಯ—ನಳಿನ ಈ ವಯಸ್ಸಿನಲ್ಲಿ ನನಗಾಗಿ ಸಂನ್ಯಾಸಧರ್ಮ ಅಂಗೀಕರಿಸುತ್ತಿರುವನಲ್ಲ ಎಂದು ನನಗೆ ಬಹಳ ದುಃಖವಾಗಿರುವುದು. ಅದರಿಂದಲೇ ನಾನು ಸ್ವಲ್ಪವೂ ಹಿಂದುಮುಂದು ನೋಡದೆ ಒಂದು ಸಂಬಂಧ ಗೊತ್ತು ಮಾಡಿದ್ದೆ—ಆ ಆಸೆ ಬಿಟ್ಟುಬಿಟ್ಟೆ, ನೀವಾದರೂ ಒಂದು ನೋಡಿಕೊಡಿ. ತಡ ಮಾಡಬೇಡಿ. ನಾನು ಹೆಚ್ಚು ದಿನ ಬದುಕಿರಲಾರೆ.

ಚಕ್ರವರ್ತಿ—ಆ ಮಾತು ಹೇಳಿದರೆ ನಡೆಯದು. ನೀವು ಬದುಕಿಯೇ ಇರುವಿರಿ. ಸೊಸೆಯ ಮುಖ ನೋಡಿಯೇ ನೋಡುವಿರಿ, ನಿಮಗೆ ಎಂಥ ಸೊಸೆ ಬೇಕೆಂದು ನಾನು ಬಲ್ಲೆ. ಏನೇನೂ ಅರಿಯದ ಹೆಣ್ಣಾದರೂ ನಡೆಯದು.

ನಿಮ್ಮಲ್ಲಿ ಭಕ್ತಿ ತೋರಿಸಬೇಕು, ವಿಧೇಯಳಾಗಿ ನಡೆಯಬೇಕು—ಇಲ್ಲವಾದರೆ ನಿಮಗೆ ಒಪ್ಪಿಗೆಯಾಗದು. ಅದಕ್ಕಾಗಿ ನೀವು ಸ್ವಲ್ಪವೂ ಯೋಚಿಸಬೇಡಿ. ದೇವರ ದಯೆಯಿಂದ ಎಲ್ಲವೂ ಸರಿಯಾಗಿಯೇ ಆಗುವುದು. ಇನ್ನು ಅಪ್ಪಣೆ ಯಾದರೆ, ಒಮ್ಮೆ ಹರಿದಾಸಿಗೆ ಅವಳ ಕರ್ತವ್ಯದ ವಿಷಯವಾಗಿ ಒಂದೆರಡು ಮಾತು ಹೇಳಿ ಬರುವೆ—ಹಾಗೇ ಶೈಲಳನ್ನೂ ಒಮ್ಮೆ ಇಲ್ಲಿಗೆ ಕಳುಹಿಸಿ ಕೊಡುವೆ—ನಿಮ್ಮನ್ನು ನೋಡಿದಾರಭ್ಯ ಅವಳ ಬಾಯಲ್ಲಿ ನಿಮ್ಮ ಮಾತೇ ಮಾತಾಗಿರುವುದು.

"ಇಲ್ಲ, ನೀವು ಮೂವರೂ ಒಂದು ಕೊಠಡಿಯಲ್ಲಿ ಕುಳಿತಿರಿ, ನನಗೆ ಸ್ವಲ್ಪ ಕೆಲಸವಿದೆ" ಎಂದಳು ಕ್ಷೇಮಂಕರಿ.

ಚಕ್ರವರ್ತಿ ನಕ್ಕು, "ಜಗತ್ತಿನಲ್ಲಿ ನಿಮ್ಮಂಥವರಿಗೆ ಕೆಲಸ ಇರುವುದ ರಿಂದಲೇ ನಮಗೆ ಸೌಭಾಗ್ಯ. ಕೆಲಸದ ಪರಿಚಯ ಸಮಯಕ್ಕೆ ತಕ್ಕಂತೆ ದೊರೆಯುವುದು ನಳಿನಾಕ್ಷಬಾಬುವಿನ ಹೆಂಡತಿಯ ಕಲ್ಯಾಣಾರ್ಥವಾಗಿ ಬ್ರಾಹ್ಮಣರಿಗೆ ಮೃಷ್ಟಾನ್ನ ಭೋಜನದ ಸರದಿ ಆರಂಭಿಸಲಿ" ಎಂದು ಹೇಳಿದರು.

ಚಕ್ರವರ್ತಿ ಶೈಲ ಹಾಗೂ ಕಮಲೆಯ ಬಳಿ ಬಂದು ನೋಡಿದಾಗ ಕಮಲೆಯ ಎರಡು ಕಣ್ಣುಗಳೂ ಕಣ್ಣೀರಿನಿಂದ ಕೂಡಿತ್ತು. ಶೈಲೆಯ ಪಕ್ಕದಲ್ಲಿ ಕುಳಿತು ಒಮ್ಮೆ ನೀರವವಾಗಿ ಅವಳ ಮುಖ ನಿಟ್ಟಿಸಿದರು. ಶೈಲ, "ಅಪ್ಪಾ, ನಳಿನಾಕ್ಷಬಾಬುವಿಗೆ ಈಗ ಎಲ್ಲ ಸಂಗತಿಯನ್ನೂ ವಿವರವಾಗಿ ಹೇಳಬೇಕೆಂದು ನಾನು ಕಮಲೆಗೆ ತಿಳಿಸುತ್ತಿದ್ದೆ, ಅದಕ್ಕಾಗಿ ನಿಮ್ಮ ಈ ಏನೂ ಅರಿಯದಹರಿದಾಸಿ ನನ್ನೊಡನೆ ಜಗಳವಾಡುತ್ತಿದ್ದಳು" ಎಂದು ಹೇಳಿದಳು.

ಕಮಲ, "ಬೇಡ ಅಕ್ಕ, ಬೇಡ—ನಿನ್ನ ಕಾಲಿಗೆ ಬೀಳುವೆ—ನೀನು ಅಂಥ ಮಾತನ್ನು ಹೇಳಬೇಡ, ಅದೆಂದಿಗೂ ಸಾಧ್ಯವಿಲ್ಲ" ಎಂದಳು.

"ಇದೇ ನಿನ್ನ ಬುದ್ಧಿ! ನೀನು ಸುಮ್ಮನೆ ಕುಳಿತಿರು. ನಳಿನಾಕ್ಷ ಹೇಮಳನ್ನು ಮದುವೆ ಮಾಡಿಕೊಳ್ಳಲಿ. ಮದುವೆಯಾದ ಮರುದಿನದಿಂದ ಇಂದಿನವರೆಗೆ ಎಷ್ಟೆಷ್ಟೋ ಕಷ್ಟನಷ್ಟ ಅನುಭವಿಸುತ್ತ ಬಂದಿರುವೆ ಈಗ ಇನ್ನೊಂದು ಗಂಡಾಂತರ ಸೃಷ್ಟಿಸಿಕೊಳ್ಳುವೆಯಾ"? ಎಂದು ಶೈಲ ಕೇಳಿದಳು.

ಕಮಲ ಹೇಳಿದಳು, "ಅಕ್ಕ, ನನ್ನ ಮಾತನ್ನು ಯಾರಿಗೂ ಹೇಳ ಬಾರದು. ನಾನೆಲ್ಲವನ್ನೂ ಸಹಿಸಿಕೊಳ್ಳುವೆ. ನಾಚಿಕೆಯನ್ನು ಮಾತ್ರ ಸಹಿಸ ಲಾರೆ. ನಾನು ಈಗಿರುವುದೇ ಚೆನ್ನಾಗಿದೆ. ನನಗೆ ಯಾವ ದುಃಖವೂ ಇಲ್ಲ. ನೀನು ಎಲ್ಲ ಮಾತನ್ನೂ ಬಹಿರಂಗಪಡಿಸಿದ್ದೇ ಆದರೆ ನಾನು ಯಾವ ಮುಖ ಹೊತ್ತು ಈ ಮನೆಯಲ್ಲಿರಲಿ. ಆಗ ನಾನು ಪ್ರಾಣದಿಂದಿರುವುದಾದರೂ ಹೇಗೆ?

ಶೈಲ ಈ ಮಾತಿಗೆ ಯಾವ ಉತ್ತರವನ್ನೂ ಹೇಳಲಿಲ್ಲ. ಆದರೆ ಹೀಗೆಂದು ಹೇಮನಳಿನಿಯೊಡನೆ ನಳಿನಾಕ್ಷನ ಮದುವೆಯಾಗುವುದನ್ನು ತಪ್ಪಿಸದಿದ್ದು ಸಹಿಸುವುದು ಅವಳ ಪಾಲಿಗೆ ಅತಿ ಕಠಿಣ.

ಚಕ್ರವರ್ತಿ ಕೇಳಿದರು, "ಯಾವ ಮದುವೆಯ ಮಾತು ಹೇಳುತ್ತಿರು ವಿರೋ ಅದು ನಡೆದೇ ನಡೆಯುವುದೇನು?".

ಶೈಲ—ಏನು ಹೇಳುವಿರಪ್ಪಾ, ನಳಿನಾಕ್ಷನ ತಾಯಿ ಆಶೀರ್ವಾದಮಾಡಿ ಬಂದಿರುವರು.

ಚಕ್ರವರ್ತಿ—ವಿಶ್ವೇಶ್ವರನ ಆಶೀರ್ವಾದದಿಂದ ಈ ಆಶೀರ್ವಾದ ನಿಂತು ಹೋಯಿತು ಅಮ್ಮಾ ಕಮಲ, ನಿನಗೆ ಯಾವ ಭಯವೂ ಬೇಡ, ಧರ್ಮ ನಿನಗೆ ಸಹಾಯವಾಗಿರುವುದು.

ಕಮಲ ಎಲ್ಲ ಮಾತನ್ನೂ ಅರ್ಥಮಾಡಿಕೊಳ್ಳಲಾರದೆ ಕಣ್ಣರಳಿಸಿ ಕೊಂಡು ಚಿಕ್ಕಪ್ಪನ ಮುಖ ನೋಡುತ್ತಿದ್ದಳು.

ಅವರು, "ಆ ಮದುವೆಯ ಸಂಬಂಧ ನಿಂತುಹೋಯಿತು. ಈ ಮದುವೆಗೆ ನಳಿನಬಾಬು ಸಮ್ಮತಿಸಲಿಲ್ಲ ಹಾಗೂ ಅವರ ತಾಯಿಗೂ ಒಳ್ಳೆಯ ಬುದ್ಧಿ ಬಂದಿರುವುದು" ಎಂದರು.

ಶೈಲ ಅತಿ ಸಂತೋಷದಿಂದ, "ಬದುಕಿದೆವಪ್ಪಾ! ನಿನ್ನೆ ಈ ಮಾತು ಕೇಳಿ ರಾತ್ರಿ ನನಗೆ ನಿದ್ರೆಯೇ ಬರಲಿಲ್ಲ. ಆದರೆ ಅದೇನೇ ಆಗಲಿ, ಕಮಲ ಸ್ವಂತ ಮನೆಯಲ್ಲಿ ಎಂದೆಂದಿಗೂ ಹೀಗೆ ಹೊರಗಿನವಳಂತೆ ಇರಲು ಹೇಗೆ ಸಾಧ್ಯ! ಎಂದಿಗೆ ಎಲ್ಲವೂ ನೆಟ್ಟಗಾಗುವುದು? ಎಂದಳು.

ಚಕ್ರವರ್ತಿ—ಕಳವಳವೇಕೆ ಶೈಲ. ಸಮಯ ಬಂದಾಗ ಎಲ್ಲವೂ ನೆಟ್ಟಗಾದೀತು.

ಕಮಲ, " ಈಗೇನಾಗಿದೆಯೋ ಅದೇ ಸರಿ—ಅದಕ್ಕಿಂತ ಸರಿಯಾದುದು ಬೇರೊಂದಿಲ್ಲ. ನಾನು ಸುಖವಾಗಿರುವೆ. ನನಗೆ ಇದಕ್ಕಿಂತಲೂ ಸುಖ ದೊರಕಿಸಲು ಹೋಗಿ ನನ್ನ ಭಾಗ್ಯವನ್ನು ಬದಲಾಯಿಸಬೇಡಿ ಚಿಕ್ಕಪ್ಪ, ನಾನು ನಿಮ್ಮ ಕಾಲಿಗೆ ಬೀಳುವೆ, ನೀವು ಯಾರಿಗೂ ಏನನ್ನೂ ಹೇಳಬೇಡಿ, ನನ್ನನ್ನು ಈ ಮನೆಯ ಮೂಲೆಯೊಂದರಲ್ಲಿ ಬಿಟ್ಟು ನನ್ನನ್ನು ಮರೆತುಬಿಡಿ. ನಾನು ಅತಿ ಸುಖದಿಂದಿರುವೆ " ಎಂದು ಹೇಳಿದಳು. ಹೇಳುತ್ತ ಹೇಳುತ್ತ ಕಮಲೆಯ ಎರಡು ಕಣ್ಣುಗಳಿಂದಲೂ ಗಳಗಳನೆ ನೀರು ಸುರಿಯತೊಡಗಿತು.

ಚಕ್ರವರ್ತಿ ದುಗುಡದಿಂದ ಹೇಳಿದರು, " ಇದೇನು ತಾಯಿ, ಏಕೆ ಅಳು ! ನೀನು ಹೇಳುವುದನ್ನು ನಾನು ಚೆನ್ನಾಗಿ ಬಲ್ಲೆ. ನಿನ್ನ ಈ ಶಾಂತಿಯನ್ನು ನಾನು ಹಾಳುಮಾಡುವೆನೆ ? ವಿಧಾತ ತಾನಾಗಿಯೇ ಮೆಲ್ಲಮೆಲ್ಲನೆ ನನ್ನಂಥ ತಿಳುವಳಿಕೆಯಿಲ್ಲದವನ ಮೂಲಕ ಎಲ್ಲವನ್ನೂ ಬಹಿರಂಗಪಡಿಸ್ತಿರುವನು. ಯಾವ ಹೆದರಿಕೆಯೂ ಬೇಡ. ನನಗೆ ಇಷ್ಟು ವಯಸ್ಸಾಗಿದೆ, ನನಗೆ ಸುಮ್ಮನಿರಲು ತಿಳಿಯದೆ ? ".

ಆ ವೇಳೆಗೆ ಉಮೇಶ ಕೊಠಡಿಯೊಳಕ್ಕೆ ಬಂದು ಕಿವಿಯವರೆಗೂ ಬಾಯಿ ತೆರೆದು ನಗಲಾರಂಭಿಸಿದ.

" ಏನೋ ಉಮೇಶ್, ಸಂಗತಿಯೇನು ? " ಎಂದು ಚಿಕ್ಕಪ್ಪ ಕೇಳಿದರು.

ಉಮೇಶ ಹೇಳಿದ, " ರಮೇಶಬಾಬು ಕೆಳಗೆ ನಿಂತಿರುವರು. ಡಾಕ್ಟರ್ ಬಾಬುಗಳ ಸಮಾಚಾರ ವಿಚಾರಿಸುತ್ತಿರುವರು ".

ಕಮಲೆಯ ಮುಖ ಬಿಳಿಚಿಕೊಂಡಿತು. ಚಿಕ್ಕಪ್ಪ ಗಡಿಬಿಡಿಯಿಂದ ಎದ್ದರು—" ಹೆದರಬೇಡ ತಾಯಿ, ನಾನೆಲ್ಲವನ್ನೂ ಸರಿಮಾಡುವೆ" ಎಂದರು.

ಚಿಕ್ಕಪ್ಪ ಕೆಳಕ್ಕೆ ಬಂದು ಕೂಡಲೇ ರಮೇಶನ ಕೈ ಹಿಡಿದುಕೊಂಡು ಹೇಳಿದರು, " ಬನ್ನಿ ರಮೇಶ್‌ಬಾಬು, ಬೀದಿಯಲ್ಲಿ ಹೋಗಹೋಗುತ್ತ ನಿಮ್ಮೊಡನೆ ಹಲವಾರು ಮಾತು ಹೇಳುವೆ ".

ರಮೇಶ ಆಶ್ಚರ್ಯದಿಂದ, " ಚಿಕ್ಕಪ್ಪ, ನೀವು ಇಲ್ಲಿಗೆ ಎಲ್ಲಿಂದ " ? ಎಂದು ಕೇಳಿದ.

ಚಿಕ್ಕಪ್ಪ ಹೇಳಿದರು, " ನಿಮಗಾಗಿಯೇ – ಸಂಧಿಸಿದ್ದು ಒಳ್ಳೆಯದೇ ಆಯಿತು. ಬನ್ನಿ, ಇನ್ನು ಸಾವಕಾಶ ಬೇಡ. ಪ್ರಯೋಜನವಾಗುವ ಸುದ್ದಿ

ಹೇಳಿ ಮುಗಿಸ ಬೇಕು, " ಹೀಗೆಂದು ರಮೇಶನನ್ನು ಬೀದಿಗೆ ಎಳೆದುಕೊಂಡು ಸ್ವಲ್ಪದೂರ ಮುಂದುವರಿದು, " ರಮೇಶಬಾಬು, ಈ ಮನೆಗೆ ನೀವೇತಕ್ಕೆ ಬಂದಿರಿ ? " ಎಂದು ಕೇಳಿದರು.

" ನಳಿನಾಕ್ಷ ಡಾಕ್ಟರನ್ನು ಹುಡುಕಿಕೊಂಡು ಬಂದೆ. ಅವರಿಗೆ ಮೊದಲಿನಿಂದ ಕಡೆಯವರೆಗೆ ಕಮಲೆಯ ವಿಷಯ ತಿಳಿಸುವುದು ಉಚಿತವೆಂದು ತಿಳಿದಿರುವೆ. ನನಗೆ ಒಮ್ಮೊಮ್ಮೆ ಕಮಲೆ ಬದುಕಿರುವಳೆಂದು ತೋರುವುದು " ಎಂದ ರಮೇಶ.

ಚಿಕ್ಕಪ್ಪ, " ಕಮಲ ಒಂದುವೇಳೆ ಬದುಕಿದ್ದರೆ, ನೀವು ನಳಿನಾಕ್ಷನನ್ನು ನೋಡಿದರೆ, ನಳಿನಾಕ್ಷ ನಿಮ್ಮಿಂದ ಎಲ್ಲ ಸಂಗತಿಯನ್ನೂ ಕೇಳಿದ್ದೇ ಆದರೆ ಅನುಕೂಲವಾದೀತೇನು ? ಅವರ ಮುದಿ ತಾಯಿ ಇರುವಳು. ಆಕೆ ಈ ಸಂಗತಿಯನ್ನೆಲ್ಲಾ ಅರಿತಳಾದರೆ ಕಮಲೆಗೆ ಒಳ್ಳೆಯದಾಗುವುದೇನು ? " ಎಂದು ಕೇಳಿದರು.

ರಮೇಶ ಹೇಳಿದ, " ಸಾಮಾಜಿಕ ರೀತಿಯಲ್ಲಿ ಏನಾಗುವುದೋ ಹೇಳಲಾರೆ. ಆದರೆ ಕಮಲ ಯಾವ ಅಪರಾಧವನ್ನೂ ಮಾಡಿಲ್ಲವೆಂಬುದನ್ನು ನಳಿನಾಕ್ಷ ತಿಳಿದುಕೊಳ್ಳಬೇಕು. ಕಮಲ ಸತ್ತಿದ್ದರೂ ನಳಿನಾಕ್ಷಬಾಬು ಅವಳ ಜ್ಞಾಪಕವನ್ನು ಗೌರವಿಸಬಲ್ಲರು ".

" ನಿಮ್ಮ ಈ ಎಲ್ಲ ಏಕಪಕ್ಷ ವಾದ ನನಗೆ ಸ್ವಲ್ಪವೂ ಅರ್ಥವಾಗದು— ಒಂದುವೇಳೆ ಕಮಲ ಸತ್ತುಹೋಗಿದ್ದರೆ, ಅವಳ ಒಂದು ರಾತ್ರಿಯ ಗಂಡನ ಬಳಿ ಅವಳ ಜ್ಞಾಪಕಾರ್ಥವಾಗಿ ವಾದವಿವಾದ ನಡೆಸುವುದರಿಂದ ಯಾವ ಪ್ರಯೋಜನವೂ ಕಂಡುಬರದು. ಅದೋ ಅಲ್ಲಿ ಕಾಣುವುದಲ್ಲ ಮನೆ, ಆ ಮನೆಯಲ್ಲೇ ನಮ್ಮ ವಾಸ. ನಾಳೆ ಬೆಳಗ್ಗೆ ಒಮ್ಮೆ ಬರಲು ಸಾಧ್ಯವಾದರೆ ಆಗ ನಿಮಗೆ ವಿಷಯವನ್ನೆಲ್ಲ ಸ್ಪಷ್ಟವಾಗಿ ಹೇಳುವೆ. ಆದರೆ ಅದಕ್ಕೆ ಮೊದಲು ನಳಿನಾಕ್ಷಬಾಬುಗಳನ್ನು ಸಂಧಿಸಬೇಡಿ, ಇದೇ ನನ್ನ ಕೋರಿಕೆ " ಎಂದು ಚಿಕ್ಕಪ್ಪ ಹೇಳಿದರು.

" ಹಾಗಾದರೆ ಸರಿ " ಎಂದ ರಮೇಶ.

ಚಿಕ್ಕಪ್ಪ ಹಿಂದಿರುಗಿ ಬಂದು ಕಮಲೆಗೆ, " ಅಮ್ಮಾ, ನಾಳೆ ಬೆಳಗ್ಗೆ ನೀನು ನಮ್ಮ ಮನೆಗೆ ಬರಬೇಕಾಗುವುದು. ಅಲ್ಲಿ ನೀನು ಸ್ವತಃ ರಮೇಶಬಾಬುವಿಗೆಲ್ಲವನ್ನೂ ವಿವರಿಸಬೇಕೆಂದು ನಾನು ತೀರ್ಮಾನಿಸಿರುವೆ " ಎಂದರು.

ಕಮಲ ತಲೆ ತಗ್ಗಿಸಿಕೊಂಡು ಕುಳಿತಿದ್ದಳು. "ಹಾಗಾಗದೆ ಎಲ್ಲ ಸರಿ ಹೋಗದೆಂದು ನಾನು ಚೆನ್ನಾಗಿ ಬಲ್ಲೆ—ಈ ಕಾಲದ ಹುಡುಗರ ಕರ್ತವ್ಯ ಬುದ್ಧಿಗೆ ಹಿಂದಿನ ಕಾಲದವರ ಮಾತು ಸರಿಬೀಳದು. ಅಮ್ಮಾ, ಮನಸ್ಸಿನಿಂದ ಸಂಕೋಚವನ್ನು ದೂರ ತಳ್ಳು—ಈಗ ಎಲ್ಲಿ ನಿನ್ನ ಅಧಿಕಾರವಿರುವುದೋ ಅಲ್ಲಿ ಬೇರೆಯವರು ಕಾಲಿಡುವಂತೆ ಮಾಡಬೇಡ, ಇದು ನಿನ್ನ ಕೆಲಸ. ಈ ವಿಷಯ ದಲ್ಲಿ ನನ್ನ ಬಲಾತ್ಕಾರ ಅಷ್ಟಾಗಿ ನಡೆಯದು" ಎಂದರು ಚಿಕ್ಕಪ್ಪ.

ಕಮಲ ಆಗಲೂ ಮುಖ ತಗ್ಗಿಸಿಕೊಂಡು ಕುಳಿತಿದ್ದಳು. ಚಿಕ್ಕಪ್ಪ, "ಅಮ್ಮಾ, ಬದಳ ವ ಟ್ಟಿಗೆ ಬಗೆಹರಿಯುತ್ತ ಬಂದಿರುವುದು. ಈಗ ಈ ಸಣ್ಣ ಪುಟ್ಟ ತೊಡಕುಗಳನ್ನು ಕಡೆಯದಾಗಿ ಕತ್ತರಿಸಿಹಾಕಲು ಸಂಕೋಚಗೊಳ್ಳ ಬೇಡ" ಎಂದರು.

ಆ ವೇಳೆಯಲ್ಲಿ ಹೆಜ್ಜೆಯ ಸದ್ದು ಕೇಳಿ ಕಮಲ ಮುಖವೆತ್ತಿ ನೋಡಿದಳು, ಬಾಗಿಲ ಬಳಿ ನಳಿನಾಕ್ಷ. ಒಮ್ಮೆಗೇ ಅವಳ ದೃಷ್ಟಿಯಕಡೆ ನಳಿನಾಕ್ಷನ ದೃಷ್ಟಿಯೂ ನಾಟಿಕೊಂಡಿತು—ಇತರ ದಿನಗಳಲ್ಲಾಗಿದ್ದರೆ ನಳಿನಾಕ್ಷ ಕೂಡಲೇ ಕಣ್ಣು ತಿರುಗಿಸಿಕೊಂಡು ಹೋಗುವನು. ಆದರೆ ಇಂದು ಹಾಗೆ ಅವಸರ ಪಡಲಿಲ್ಲ. ಕ್ಷಣಕಾಲ ಕಮಲೆಯಕಡೆ ಅವನು ನೋಡುತ್ತಿದ್ದ. ಆದರೆ ಅವನ ಆ ಕ್ಷಣಕಾಲದ ದೃಷ್ಟಿ ಕಮಲೆಯ ಮುಖದಿಂದ ಆವುದನ್ನೋ ಸ್ವೀಕರಿಸಿ ಕೊಂಡಿತು, ಇತರ ದಿನಗಳಂತೆ ಅನಧಿಕಾರದ ಸಂಕೋಚದಿಂದ ನೋಟಕ್ಕೆ ತಡೆಯುಂಟುಮಾಡಲಿಲ್ಲ. ಮರುಕ್ಷಣದಲ್ಲೇ ಶೈಲಜೆಯನ್ನು ನೋಡಿ ಹೊರಟು ಹೋಗಲು ಪ್ರಯತ್ನಿಸುತ್ತಿದ್ದ. ಚಿಕ್ಕಪ್ಪ, ನಳಿನಾಕ್ಷಬಾಬೂ, ಹೋಗ ಬೇಡಿರಿ—ನಿಮ್ಮನ್ನು ನಮ್ಮ ಆಪ್ತರಂತೆ ಭಾವಿಸಿಕೊಂಡಿರುವೆವು. ಇವಳೇ ನನ್ನ ಮಗಳು ಶೈಲೆ. ಇವಳ ಮಗಳಿಗೇ ನೀವು ಚಿಕಿತ್ಸೆ ಮಾಡಿದ್ದು" ಎಂದರು. ಶೈಲ ನಳಿನಾಕ್ಷನಿಗೆ ನಮಸ್ಕಾರ ಮಾಡಿದಳು. ನಳಿನಾಕ್ಷನೂ ಪ್ರತಿನಮಸ್ಕಾರ ಮಾಡುತ್ತ, "ನಿಮ್ಮ ಮಗಳು ಚೆನ್ನಾಗಿರುವಳೆ?" ಎಂದು ವಿಚಾರಿಸಿದ.

"ಚೆನ್ನಾಗಿರುವಳು" ಎಂದಳು ಶೈಲ.

"ನಿಮ್ಮನ್ನು ಕಣ್ತುಂಬ ನೋಡುವ ಅವಕಾಶವನ್ನೇ ಒದಗಿಸಿಕೊಟ್ಟಿರ ಲಿಲ್ಲ—ಈಗ ಬಂದಿರುವುದರಿಂದ ಸ್ವಲ್ಪ ಕುಳಿತುಕೊಳ್ಳಿ" ಎಂದು ಚಿಕ್ಕಪ್ಪ ಹೇಳಿದರು.

ನಳಿನಾಕ್ಷ ಕುಳಿತುಕೊಳ್ಳುತ್ತಲೇ ಚಿಕ್ಕಪ್ಪ, ಹಿಂದುಗಡೆಯಿಂದ ಕಮಲ ಹೊರಟು ಹೋಗಿರುವುದನ್ನು ನೋಡಿದರು. ನಳಿನಾಕ್ಷನ ಆ ಒಂದು ಮುಹೂರ್ತದ ನೋಟದಿಂದ ಅವಳು ಪುಳಕಿತ ವಿಸ್ಮಯದಿಂದ ತನ್ನ ಕೊಠಡಿಯಲ್ಲಿ ಮನಸ್ಸನ್ನು ಸಮಾಧಾನ ಪಡಿಸಿಕೊಳ್ಳಲು ಹೋದಳು.

ಇಷ್ಟರಲ್ಲಿ ಕ್ಷೇಮಂಕರಿ ಬಂದು, " ಚಕ್ರವರ್ತಿ ಮಹಾಶಯ, ತೊಂದರೆ ತೆಗೆದುಕೊಂಡು ಒಮ್ಮೆ ಏಳಬೇಕು " ಎಂದಳು

ಚಕ್ರವರ್ತಿ ಹೇಳಿದರು, " ನೀವು ಕೆಲಸಕ್ಕೆಂದು ಹೊರಟಾಗಲೇ ಇಂಥ ಕಷ್ಟಕ್ಕಾಗಿ ನಾನು ದಾರಿಕಾಯುತ್ತ ಕುಳಿತಿದ್ದೆ ".

ಊಟ ಮುಗಿದ ಬಳಿಕ ಕುಳಿತುಕೊಳ್ಳುವ ಕೊಠಡಿಗೆ ಬಂದು, " ಸ್ವಲ್ಪ ಕುಳಿತುಕೊಳ್ಳಿ, ನಾನು ಬರುತ್ತೇನೆ " ಎಂದು ಚಕ್ರವರ್ತಿಗಳು ಹೇಳಿದರು. ಹೀಗೆಂದು ಮರುಕ್ಷಣದಲ್ಲೇ ಬೇರೆ ಕೊಠಡಿಯಿಂದ ಕಮಲೆಯ ಕೈ ಹಿಡಿದುಕೊಂಡು ಅವಳನ್ನು ನಳಿನಾಕ್ಷ ಹಾಗೂ ಕ್ಷೇಮಂಕರಿಯ ಎದುರಿಗೆ ಕರೆತಂದರು, ಅವಳ ಹಿಂದುಗಡೆ ಶೈಲಜೆಯೂ ಬಂದಳು.

ಚಕ್ರವರ್ತಿ ಹೇಳಿದರು, " ನಳಿನಾಕ್ಷಬಾಬು, ನೀವು ನಮ್ಮ ಹರಿದಾಸಿಯನ್ನು ಬೇರೆಯವಳೆಂದು ಭಾವಿಸಿ ಸಂಕೋಚಗೊಳ್ಳಬೇಡಿ—ಈ ದುಃಖಿನಿಯನ್ನು ನಾನು ನಿಮ್ಮ ಮನೆಯಲ್ಲೇ ಬಿಟ್ಟು ಹೋಗುವೆ-ಇವಳನ್ನು ಸಂಪೂರ್ಣವಾಗಿ ನಿಮ್ಮವಳನ್ನಾಗಿ ಮಾಡಿಕೊಳ್ಳಿ. ಇವಳಿಗೆ ಬೇರೇನೂ ಬೇಕಾಗಿಲ್ಲ, ನಿಮ್ಮೆಲ್ಲರ ಸೇವೆ ಮಾಡುವ ಸಂಪೂರ್ಣ ಅಧಿಕಾರ ಕೊಡಬೇಕು—ನಿಮ್ಮ ಬಳಿ ಇವಳು ಬುದ್ಧಿಪೂರ್ವಕವಾಗಿ ಒಂದು ದಿನವಾದರೂ ತಪ್ಪುಮಾಡಳೆಂಬುದನ್ನು ನೀವು ಖಂಡಿತವಾಗಿ ತಿಳಿದುಕೊಳ್ಳುವಿರಿ ".

ಕಮಲ ನಾಚಿಕೆಯಿಂದ ಮುಖ ಕೆಂಪಗೆ ಮಾಡಿಕೊಂಡು ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ಕ್ಷೇಮಂಕರಿ, " ಚಕ್ರವರ್ತಿ ಮಹಾಶಯ, ನೀವು ಸ್ವಲ್ಪವೂ ಯೋಚಿಸಬೇಡಿ, ಹರಿದಾಸಿ ನಮ್ಮ ಮನೆಯ ಮಗಳೇ ಆದಳು. ಅವಳಿಗೆ ನಮಗಾಗಿ ಯಾವುದಾದರೊಂದು ಕೆಲಸ ಕೊಟ್ಟು ಪ್ರಯತ್ನಪೂರ್ವಕವಾಗಿ ಮಾಡಿಸಬೇಕೆಂಬ ಆವಶ್ಯಕತೆಯೇ ಒದಗದು. ಈ ಮನೆಯ ಅಡುಗೆ ಕೋಣೆ, ಹಾಗೂ ಉಗ್ರಾಣದಲ್ಲಿ ಇಷ್ಟುದಿನ ನನ್ನೊಬ್ಬಳದೇ ಅಧಿಕಾರವಿತ್ತು. ಈಗ ಅದಕ್ಕೆ ನನ್ನ ಸಂಬಂಧವೇ ಇಲ್ಲ. ಈ ರೀತಿ ಮೆಲ್ಲಮೆಲ್ಲನೆ ನಮ್ಮ ಸ್ಥಿತಿ ಹೇಗೆ ಬದಲಾಯಿಸಿತೆಂದು ನನಗೇ ಸರಿಯಾಗಿ ತಿಳಿಯದು. ನಮ್ಮ ಕೆಲವಾರು

ಬೀಗದಕ್ಕೈಗಳನ್ನೂ ಕೌಶಲದಿಂದ ಹರಿದಾಸಿ ತನ್ನದನ್ನಾಗಿ ಮಾಡಿಕೊಂಡಿರುವಳು . . . ಚಕ್ರವರ್ತಿ ಮಹಾಶಯ, ನಿಮ್ಮ ಈ ದರೋಡೆಗಾರ್ತಿ ಮಗಳಿಗಾಗಿ ನೀವು ಇನ್ನೇನನ್ನು ಕೇಳುವಿರಿ ಹೇಳಿ. ಈ ಹುಡುಗಿಯನ್ನು ನಮ್ಮವಳನ್ನಾಗಿ ಹೇಗೆ ಮಾಡಿಕೊಳ್ಳುವುದೆಂದು ನೀವೇ ಹೇಳಿ" ಎಂದು ಕೇಳಿದಳು.

"ನಾನೇನು ಹೇಳಲಿ, ಹುಡುಗಿ ಇಲ್ಲಿಂದ ಕದಲುವಳೆಂದು ಮನದಲ್ಲೂ ಎಣಿಸಬೇಡಿ. ಈಗ ನಿಮ್ಮನ್ನು ಬಿಟ್ಟು ಬೇರೆಯವರ ಪರಿಚಯವೇ ಅವಳಿಗಿಲ್ಲ ಎನ್ನುವಂತೆ ಅವಳಿಗೆ ಮರವೆಯನ್ನುಂಟುಮಾಡಿರುವಿರಿ. ದುಃಖದ ಬಾಳುವೆಯಲ್ಲಿ ಇಷ್ಟುದಿನದ ಬಳಿಕ ಅವಳು ನಿಮ್ಮ ಹತ್ತಿರದಲ್ಲೇ ಶಾಂತಿಯನ್ನು ಪಡೆದಿರುವಳು. ದೇವರು ಆ ಶಾಂತಿಗೆ ವಿಘ್ನಬರದಂತೆ ಮಾಡಲಿ, ನೀವು ಎಂದೆಂದೂ ಅವಳ ಮೇಲೆ ಪ್ರಸನ್ನರಾಗಿರಿ, ಅವಳಿಗೆ ನಾನು ಮಾಡುವ ಆಶೀರ್ವಾದವಿಷ್ಟೆ!" ಎಂದು ಚಿಕ್ಕಪ್ಪ ಹೇಳಿದರು.

ಹೇಳುತ್ತ ಹೇಳುತ್ತ ಚಕ್ರವರ್ತಿಗಳ ಕಣ್ಣಿನಲ್ಲಿ ನೀರೂರಿತು. ನಳಿನಾಕ್ಷ ಯಾವ ಮಾತೂ ಆಡದೆ ನೀರವವಾಗಿ ಚಕ್ರವರ್ತಿಗಳ ಮಾತು ಕೇಳುತ್ತಿದ್ದ. ಎಲ್ಲರೂ ಅಪ್ಪಣೆ ತೆಗೆದುಕೊಂಡು ಹೋದ ಬಳಿಕ ಮೆಲ್ಲಮೆಲ್ಲನೆ ಅವನು ತನ್ನ ಕೊಠಡಿಗೆ ಹೋದ. ಆಗ ತಣ್ಣನೆಯ ಸೂರ್ಯಾಸ್ತದ ಬೆಳಕು ಅವನ ಮಲಗುವ ಮನೆಯನ್ನೆಲ್ಲ ನವವಿವಾಹದ ರಕ್ತಪ್ರಕಾಶದಿಂದ ಬೆಳಗುತ್ತಿತ್ತು. ಆ ರಕ್ತವರ್ಣದ ಕಾಂತಿ ನಳಿನಾಕ್ಷನ ರೋಮಕೂಪವನ್ನೆಲ್ಲ ಭೇದಿಸಿಕೊಂಡು ಅವನ ಅಂತಃಕರಣವನ್ನು ಕೆಂಪಾಗಿ ಮಾಡಿತು.

ಈ ದಿನ ಬೆಳಗ್ಗೆ ನಳಿನಾಕ್ಷನ ಹಿಂದೂಸ್ಥಾನಿ ಗೆಳೆಯನೊಬ್ಬನಿಂದ ಒಂದು ಕುಕ್ಕೆ ಗುಲಾಬಿಹೂವು ಬಂದಿತ್ತು. ಮನೆ ಅಲಂಕರಿಸಲು ಆ ಗುಲಾಬಿ ಬುಟ್ಟಿಯನ್ನು ಕ್ಷೇಮಂಕರಿ ಕಮಲೆಯ ಕೈಗೆ ಕೊಟ್ಟಿದ್ದಳು. ನಳಿನಾಕ್ಷನ ಮಲಗುವ ಮನೆಯ ಆರುಗಿನಲ್ಲಿ ಒಂದು ಫೂಲ್‌ದಾನಿ (ಹೂವಿನ ಪಾತ್ರೆ) ಯಿಂದ ಆ ಗುಲಾಬಿಯ ಸುವಾಸನೆ ಅವನ ಮೆದುಳಿನೊಳಕ್ಕೆ ಹೋಗಲಾರಂಭಿಸಿತು. ಆ ನಿಸ್ತಬ್ಧ ಕೊಠಡಿಯ ಕಿಟಕಿಯಲ್ಲಿ ರಕ್ತವರ್ಣದ ಸಂಜೆಯೊಡನೆ ಗುಲಾಬಿಯ ಪರಿಮಳ ಸೇರಿ ನಳಿನಾಕ್ಷನ ಮನಸ್ಸನ್ನು ಹೇಗೆಹೇಗೋ ಮಾಡಿತು. ಇಷ್ಟುದಿನ ಅವನ ಜಗತ್ತಿನ ನಾಲ್ಕೂಕಡೆ ಸಂಯಮದ ಶಾಂತಿಜ್ಞಾನದ ಗಾಂಭೀರ್ಯವಿದ್ದಿತು, ಇಂದು ಅಲ್ಲಿ ಇದ್ದಕ್ಕಿದ್ದಂತೆ ನಾನಾ ರಾಗದ ನವಬತ್ ಎಲ್ಲಿಂದಲೋ ಧ್ವನಿ

ಮಾಡತೊಡಗಿತು—ಯಾವುದೋ ನೇಪಥ್ಯದಲ್ಲಿ ನೃತ್ಯದ ಹೆಜ್ಜೆಹಾಕುವಿಕೆ ಹಾಗೂ ಕಾಲ್ಕಡಗದ ಝಂಕಾರ ಇಂದು ಆಕಾಶದಡಿಯಲ್ಲಿ ಅತಿ ಚಂಚಲತೆ ಯನ್ನುಂಟುಮಾಡತೊಡಗಿತು.

ನಳಿನಾಕ್ಷ ಕಿಟಕಿಯಿಂದ ಹಿಂದಿರುಗಿ ಕೊಠಡಿಯಕಡೆ ತಿರುಗಿ ನೋಡಿದಾಗ, ಅವನ ಹಾಸಿಗೆಯ ತಲೆದೆಸೆಯಲ್ಲಿ ಗೂಟದ ಮೇಲೆ ಗುಲಾಬಿಯ ಗೊಂಚಲು ಅಣಿಮಾಡಿಟ್ಟಿತ್ತು. ಈ ಹೂಗೊಂಚಲು ಅದಾರದೋ ನೋಟದಂತೆ ಅವನ ಮುಖದಕಡೆ ನೋಡುತ್ತಿತ್ತು, ನಿಃಶಬ್ದ ಆತ್ಮನಿವೇದನದಂತೆ ಅವನ ಹೃದಯದ ಬಾಗಿಲ ಬಳಿ ನಮಸ್ಕರಿಸಿ ಬಿದ್ದಿತ್ತು.

ನಳಿನಾಕ್ಷ ಇದರಿಂದ ಒಂದು ಹೂ ಕಿತ್ತುಕೊಂಡ—ಅದೂ ಅಪ್ಪಟ ಚಿನ್ನದ ಬಣ್ಣದ ಹಳದಿ ಗುಲಾಬಿ, ದಳಗಳು ಅರಳಿರಲಿಲ್ಲ, ಆದರೂ ಸುವಾಸನೆ ಬರಲು ತಡೆಯಿರಲಿಲ್ಲ. ಆ ಗುಲಾಬಿಯನ್ನು ಕೈಗೆ ತೆಗೆದು ಕೊಳ್ಳುತ್ತಲೇ ಅದು ಯಾರದೋ ಕೈಬೆರಳಿನಂತೆ ಅವನ ಬೆರಳುಗಳನ್ನು ಸ್ಪರ್ಶಿಸಿತು, ಅವನ ಶರೀರದ ಎಲ್ಲ ನರಗಳನ್ನೂ ಜುಮ್ಮೆನಿಸಿತು. ನಳಿನಾಕ್ಷ ಆ ಸ್ನಿಗ್ಧ ಕೋಮಲ ಹೂವನ್ನು ತನ್ನ ಮುಖದಮೇಲೆ, ಕಣ್ಣೆವೆಯಮೇಲೆ ಒತ್ತಿಕೊಳ್ಳತೊಡಗಿದ.

ನೋಡನೋಡುತ್ತ ಸಂಧ್ಯಾಕಾಶದಿಂದ ಮುಳುಗುವ ಸೂರ್ಯನ ಬೆಳಕು ಸೇರಿಬಂದಿತು. ನಳಿನಾಕ್ಷ ಕೊಠಡಿಯಿಂದ ಹೊರಗೆಹೋಗುವ ಮೊದಲು ಒಮ್ಮೆ ತನ್ನ ಹಾಸಿಗೆಯ ಹತ್ತಿರ ಹೋಗಿ, ಹಾಸಿಗೆಯ ಹೊದಿಕೆಯನ್ನು ತೆಗೆದು ಹಾಕಿದ ಮತ್ತು ತಲೆದಿಂಬಿನಮೇಲೆ ಆ ಹೂಗೊಂಚಲನ್ನಿಟ್ಟ. ಇಟ್ಟು ಎದ್ದು ಬರುವಾಗ, ಮಂಚದ ಆಕಡೆ ಯಾವಳೋ ಬೊಗಸೆಯಿಂದ ಮುಖ ಮುಚ್ಚಿಕೊಂಡು ನಾಚಿಕೆಯಿಂದ ಸಂಪೂರ್ಣವಾಗಿ ನೆಲದೊಡನೆ ಐಕ್ಯವಾಗುತಿರುವುದನ್ನು ನೋಡಿದ. ಅಯ್ಯೋ ಕಮಲ, ಇನ್ನು ನಾಚಿಕೆಗೆ ಅವಕಾಶವಿಲ್ಲ ಅವಳು ಇಂದು ಗೂಟದಲ್ಲಿ ಗುಲಾಬಿ ಅಲಂಕರಿಸಿ, ಸ್ವತಃ ನಳಿನಾಕ್ಷನ ಹಾಸಿಗೆ ಹಾಸಿ ಹೊರಕ್ಕೆ ಬರುತಿದ್ದಳು. ಆವೇಳೆಯಲ್ಲಿ ಹಠಾತ್ತನೆ ನಳಿನಾಕ್ಷನ ಕಾಲ ಸದ್ದುಕೇಳಿ ಕೂಡಲೇ ಹಾಸಿಗೆಯ ಆಕಡೆಹೋಗಿ ಅವಿತುಕೊಂಡಿದ್ದಳು—ಈಗ ಓಡಿಹೋಗುವಂತೆಯೂ ಇಲ್ಲ. ಅವಿತುಕೊಳ್ಳುವುದೂ ಕಷ್ಟ. ಅವಳ ಒಟ್ಟುಗೂಡಿದ ನಾಚಿಕೆಯೊಡನೆ ಈ ಧೂಳಿನಮೇಲೆ ಅವಳು ಇಂಥ ಏಕಾಂತಭಾವದಲ್ಲಿ ಸಿಕ್ಕಿಬಿದ್ದಳು.

ನಳಿನಾಕ್ಷ ಈ ನಾಚಿಕೆಗೊಂಡವಳಿಗೆ ಬಿಡುಗಡೆ ಕೊಡಲು ಕೂಡಲೇ ಕೊಠಡಿಯಿಂದ ಹೊರಹೊರಡಲು ಯತ್ನಿಸಿದ. ಬಾಗಿಲವರೆಗೂ ಹೋಗಿ ಒಮ್ಮೆ ನಿಂತುಕೊಂಡ. ಕ್ಷಣಕಾಲ ಏನನ್ನೋ ಯೋಚಿಸಿ ಅವನು ಮೆಲ್ಲಮೆಲ್ಲನೆ ಹಿಂದಿರುಗಿಬಂದ—ಕಮಲೆಯ ಎಮರಿಗೆ ನಿಂತು, " ನೀನು ಎದ್ದೇಳು, ನನ್ನಬಳಿ ನೀನು ಸ್ವಲ್ಪವೂ ನಾಚಿಕೊಳ್ಳಬೇಕಾಗಿಲ್ಲ " ಎಂದು ಹೇಳಿದ.

೬೧

ಮರುದಿನ ಬೆಳಗ್ಗೆ ಕಮಲ ಚಿಕ್ಕಪ್ಪನ ಮನೆಗೆ ಬಂದು ಸೇರಿದಳು. ಸ್ವಲ್ಪ ನಿರ್ಜನ ಅವಕಾಶ ದೊರೆತಕೂಡಲೇ ಅವಳು ಶೈಲಜೆಯನ್ನು ಬಿಗಿಯಾಗಿ ಅಪ್ಪಿಕೊಂಡಳು—ಶೈಲ ಕಮಲೆಯ ಗಲ್ಲ ಹಿಡಿದುಕೊಂಡು, " ಏನು ತಂಗಿ, ಇಷ್ಟೊಂದು ಸಂತೋಷಕ್ಕೆ ಕಾರಣವೇನು ? " ಎಂದು ಕೇಳಿದಳು.

ಕಮಲ, " ನನಗೆ ತಿಳಿಯದಕ್ಕ. ಆದರೆ ನನ್ನ ಜೀವನದ ಸಮಸ್ತ ಭಾರವೂ ಕಳೆದುಹೋದಂತೆ ನನ್ನ ಮನಸ್ಸಿಗೆ ತೋರುತ್ತಿರುವುದು " ಎಂದಳು.

ಶೈಲ—ಹೇಳು, ಎಲ್ಲ ಸಂಗತಿಯನ್ನೂ ನನಗೆ ಹೇಳುವುದಿಲ್ಲವೆ ? ನಿನ್ನೆ ಸಂಜೆಯವರೆಗೆ ನಾನೂ ಇದ್ದೆನಲ್ಲ. ಆ ಬಳಿಕ ಏನಾಯಿತು ?

ಕಮಲ—ಅಂಥಾದ್ದೇನೂ ನಡೆದಿರುವುದಿಲ್ಲ. ಆದರೂ ನಾನು ಅವ ರನ್ನು ಪಡೆದಿರುವಂತೆ ಮನಸ್ಸಿಗೆ ಭಾಸವಾಗುವುದು—ದೇವರು ನನ್ನಮೇಲೆ ದಯೆ ತೋರಿಸುತ್ತಿರುವನು.

ಶೈಲ—ಹಾಗೆಯೇ ಆಗಲಿ ತಂಗಿ, ಆದರೆ ನನ್ನ ಬಳಿ ಯಾವುದನ್ನೂ ಮುಚ್ಚುಮರೆ ಮಾಡಬೇಡ.

ಕಮಲ—ನಾನು ಮುಚ್ಚುಮರೆ ಮಾಡುವುದೇನೂ ಇಲ್ಲ. ಅಕ್ಕಾ, ಏನು ಹೇಳಬೇಕೆಂದು ತಿಳಿಯದು. ರಾತ್ರಿ ಕಳೆದು ಬೆಳಗ್ಗೆ ಏಳುತ್ತಲೇ ನನ್ನ ಜೀವನ ಸಾರ್ಥಕವಾದಂತೆ ಮನಸ್ಸಿಗೆ ತೋರಿತು—ನನ್ನ ದಿನಗಳೆಲ್ಲ ಎಷ್ಟು ಆನಂದಮಯ, ನನ್ನ ಕೆಲಸವೆಲ್ಲ ಹಗುರವಾಗಿರುವುದೆಂದು ನಾನು ಹೇಳಲರಿಯೆ. ನಾನು ಇದಕ್ಕಿಂತ ಹೆಚ್ಚಾಗಿ ಏನನ್ನೂ ಆಶಿಸುವುದಿಲ್ಲ—ಆದರೆ ಇದೇನಾದರೂ ನಷ್ಟವಾಗಿ ಹೋಗುವುದೇನೋ ಎಂದು ಹೆದರಿಕೆಯಾಗುವುದು – ಪ್ರತಿದಿನವೂ

ನನಗೆ ಈ ರೀತಿ ಇರಲು ಸಾಧ್ಯವೆ ? ನನ್ನ ಹಣೆಯಲ್ಲಿ ಇಷ್ಟು ಸಂತೋಷ ಬರೆದಿದೆಯೆ ? ಎಂದು ನಾನು ಯೋಚಿಸಿಯೇ ಇರಲಿಲ್ಲ.

ಶೈಲ—ನಾನು ನಿನಗೆ ಹೇಳುವುದಿಷ್ಟು ತಂಗಿ, ನಿನ್ನ ಭಾಗ್ಯ ನಿನ್ನನ್ನು ಇಷ್ಟಕ್ಕೇ ವಂಚಿಸುವುದಿಲ್ಲ—ನೀನು ಏನನ್ನು ಹೊಂದಬೇಕಾಗಿದೆಯೋ ಅದು ಪೂರ್ತಿಯಾಗಿ ಸಂದಾಯವಾಗುವುದು.

ಕಮಲ—ಇಲ್ಲ ಅಕ್ಕ, ಆ ಮಾತು ಹೇಳಬೇಡ—ನನಗೆ ಎಲ್ಲವೂ ಸಂದಾಯವಾಗಿರುವುದು—ನಾನು ವಿಧಾತನನ್ನು ತಪ್ಪಿತಸ್ಥನೆನ್ನುವುದಿಲ್ಲ—ನನಗೆ ಯಾವ ಕೊರತೆಯೂ ಇಲ್ಲ.

ಆ ವೇಳೆಗೆ ಚಿಕ್ಕಪ್ಪ ಬಂದು, " ಅಮ್ಮಾ ನೀನೊಂದುಬಾರಿ ಹೊರಗಡೆ ಬರಬೇಕು—ರಮೇಶಬಾಬು ಬಂದಿರುವರು " ಎಂದು ಹೇಳಿದರು.

ಚಿಕ್ಕಪ್ಪ ಇಷ್ಟುಹೊತ್ತೂ ರಮೇಶನೊಡನೆ ಮಾತಾಡುತಿದ್ದರು. ರಮೇಶನಿಗೆ ಹೇಳುತ್ತಿದ್ದರು, " ನಿಮ್ಮೊಡನೆ ಕಮಲೆಯ ಸಂಬಂಧ ಹೇಗೆಂದು ನಾನೆಲ್ಲವನ್ನೂ ತಿಳಿದಿರುವೆ. ಈಗ ನಿಮ್ಮಲ್ಲಿ ನನ್ನ ಕೋರಿಕೆಯೇನೆಂದರೆ ನಿಮ್ಮ ಜೀವನ ಈಗ ಪರಿಷ್ಕಾರವಾಗಿರುವುದು. ಈಗ ನೀವು ಕಮಲೆಯ ಮಾತುಕತೆಯನ್ನೆಲ್ಲ ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಕಮಲೆಯ ಸಂಬಂಧವಾಗಿ ಯಾವುದಾದರೂ ಗಂಟನ್ನು ಎಲ್ಲಾದರೂ ಬಿಡಿಸಬೇಕಾದ ಆವಶ್ಯಕತೆ ಇದ್ದರೆ, ಅದನ್ನು ವಿಧಾತನಮೇಲೆ ಭಾರಹಾಕಿರಿ, ನೀವು ಇನ್ನು ಕೈಹಾಕಬೇಡಿ ".

ರಮೇಶ ಇದಕ್ಕೆ ಉತ್ತರವಾಗಿ, " ಕಮಲೆಯ ವಿಷಯವಾಗಿ ಎಲ್ಲ ಸಂಗತಿಯನ್ನೂ ನಿಃಶೇಷವಾಗಿ ಬಿಡುವ ಮೊದಲು ನಳಿನಾಕ್ಷನಿಗೆ ಎಲ್ಲ ಘಟನೆಯನ್ನೂ ತಿಳಿಸದೆ ನನಗೆ ಬಿಡುಗಡೆಯಿರದು. ಈ ಜಗತ್ತಿನಲ್ಲಿ ಕಮಲೆಯ ಮಾತನ್ನೆತ್ತಬೇಕಾದ ಎಲ್ಲ ಪ್ರಯೋಜನವೂ ಕಳೆದುಹೋಗಿರಬಹುದು, ಹೋಗದೆಯೂ ಇರಬಹುದು—ಹಾಗೆ ಕಳೆದುಹೋಗದಿದ್ದರೆ ನಾನು ಹೇಳಬೇಕಾದುದನ್ನುಹೇಳಿ ಬಿಡ.ಗಡೆ ಪಡೆಯಲಾಸಿಸುವೆ" ಎಂದು ಹೇಳುತಿದ್ದ.

ಚಿಕ್ಕಪ್ಪ " ಒಳ್ಳೆಯದು, ನೀವು ಸ್ವಲ್ಪ ಕುಳಿತಿರಿ. ನಾನು ಬರುತ್ತೇನೆ" ಎಂದರು.

ರಮೇಶ ತಿರುಗಿ ಕುಳಿತು ಕಿಟಕಿಯಹೊರಗೆ ಶೂನ್ಯನೋಟದಿಂದ ಜನಪ್ರವಾಹದ ಕಡೆನೋಡುತ್ತ ಕುಳಿತಿದ್ದ. ಸ್ವಲ್ಪಹೊತ್ತಿನ ಬಳಿಕ ಹೆಜ್ಜೆಯ

ಸದ್ದಿನಿಂದ ಎಚ್ಚರಗೊಂಡು ನೋಡಿದಾಗ, ರಮಣಿಯೊಬ್ಬಳು ನೆಲಕ್ಕೆ ಹಣೆ ಮುಟ್ಟಿಸಿ ಅವನಿಗೆ ನಮಸ್ಕಾರಮಾಡುತಿದ್ದಳು. ಅವಳು ನಮಸ್ಕಾರಮಾಡಿ ಎದ್ದಾಗ ರಮೇಶನಿಂದ ಸುಮ್ಮನಿರಲಾಗಲಿಲ್ಲ—ಕೂಡಲೇ ಎದ್ದುನಿಂತು "ಕಮಲಾ" ಎಂದ. ಕಮಲೆ ಸಬ್ಧಳಾಗಿ ನಿಂತಿದ್ದಳು.

ಚಿಕ್ಕಪ್ಪ ಹೇಳಿದರು, "ರಮೇಶಬಾಬು, ಕಮಲೆಯ ಎಲ್ಲ ದುಃಖವನ್ನೂ ಸುಖವನ್ನಾಗಿಮಾಡಿ ದೇವರು ಅವಳ ಸುತ್ತಲೂ ಕವಿದಿದ್ದ ಸಮಸ್ತ ಅಮಂಗಳ ವನ್ನೂ ದೂರಮಾಡಿರುವನು. ನೀವು ಅವಳನ್ನು ಕಡುಕಷ್ಟಕಾಲದಲ್ಲಿ ಕಾಪಾಡಿರುವಿರಿ. ಅವಳಿಂದ ನೀವು ಎಣೆಯಿಲ್ಲದ ತೊಂದರೆಗೆ ಒಳಗಾಗಿರುವಿರಿ ಅದರಿಂದ ನಿಮ್ಮ ಸಂಬಂಧಬಿಟ್ಟು ದೂರಹೋಗುವಕಾಲದಲ್ಲಿ ಯಾವಮಾತನ್ನು ಆಡದೆ ಬೀಳ್ಕೊಡಲಾರಳು. ನಿಮ್ಮಹತ್ತಿರ ಇಂದು ಅವಳು ಆಶೀರ್ವಾದ ಪಡೆಯಲು ಬಂದಿರುವಳು.

ರಮೇಶ ಕ್ಷಣಕಾಲ ತೆಪ್ಪನಿದ್ದು ಗಟ್ಟಿಯಾಗಿ ಬಿಗಿದಕಂಠದಿಂದ "ನೀನು ಸುಖಿಯಾಗು ಕಮಲ—ನಾನು ತಿಳಿದೋ ತಿಳಿಯದೆಯೋ ನಿನ್ನ ಬಳಿ ತಪ್ಪುಮಾಡಿರುವೆ. ಎಲ್ಲವನ್ನೂ ಕ್ಷಮಿಸು" ಎಂದು ಹೇಳಿದ.

ಕಮಲ ಇದಕ್ಕೆ ಯಾವ ಉತ್ತರವನ್ನೂ ಹೇಳಲಾರದಾದಳು—ಗೋಡೆ ಒರಗಿಕೊಂಡು ನಿಂತಿದ್ದಳು.

ಸ್ವಲ್ಪ ಹೊತ್ತಿನ ಬಳಿಕ ರಮೇಶ ಹೇಳಿದ, "ಯಾರಿಗಾದರೂ ಏನಾ ದರೂ ಹೇಳಬೇಕಾಗಿದ್ದರೆ, ನಿನ್ನ ತೊಂದರೆ ದೂರಮಾಡುವುದರಲ್ಲಿ ನನ್ನ ಆವಶ್ಯಕತೆ ಏನಾದರೂ ಇದ್ದರೆ ಹೇಳು".

ಕಮಲ ಕೈ ಮುಗಿದುಕೊಂಡು, "ನನ್ನ ವಿಷಯವನ್ನು ಯಾರ ಬಳಿ ಯಲ್ಲೂ ಹೇಳಬಾರದು. ಇದೇ ನನ್ನ ಕೋರಿಕೆ" ಎಂದಳು.

ರಮೇಶ ಹೇಳಿದ, "ಬಹಳ ದಿನಗಳವರೆಗೆ ನಿನ್ನ ವಿಷಯವನ್ನು ಯಾರಿಗೂ ಹೇಳಿರಲಿಲ್ಲ—ಅತಿಗೊಂದಲಕ್ಕೆ ಸಿಕ್ಕಿ ಬಿದ್ದಾಗಲೂ ಸುಮ್ಮನಿದ್ದೆ. ಕೆಲವು ದಿನಗಳಾಯಿತು, ನಿನ್ನ ವಿಷಯ ಹೇಳಿದರೆ ನಿನಗೆ ಯಾವ ತೊಂದರೆಯೂ ಆಗದೆಂದು ಮನದಲ್ಲೇ ತೀರ್ಮಾನಿಸಿದೆ. ಅದರಿಂದ ಒಂದೇ ಒಂದು ಕುಟುಂಬದವರೊಡನೆ ನಿನ್ನ ವಿಷಯ ಬಹಿರಂಗಪಡಿಸಿದೆ. ಪ್ರಾಯಃ ಅದರಿಂದ ನಿನಗೆ ತೊಂದರೆಯಾಗದೆ ಒಳ್ಳೆಯದೇ ಆಗುವುದೆಂದು ಕಾಣುವುದು.

ಚಿಕ್ಕಪ್ಪನವರಿಗೆ ಸುದ್ದಿ ತಿಳಿದಿದ್ದರೂ ತಿಳಿದಿರಬಹುದು—ಅನ್ನದಾಬಾಬು, ಯಾರ ಮಗಳೊಡನೆ ? "

" ಹೇಮನಳಿನಿ ! ತಿಳಿಯದೇನು, ಅವರು ಎಲ್ಲವನ್ನೂ ಕೇಳಿರುವರೆ ? " ಎಂದು ಚಿಕ್ಕಪ್ಪ ಕೇಳಿದರು.

ರಮೇಶ, " ಹೌದು, ಅವರಿಗೆ ಇನ್ನೂ ಏನಾದರೂ ಹೇಳುವ ಆವಶ್ಯಕತೆ ಇರುವುದಾದರೆ ನಾನು ಹೋಗಿ ಹೇಳಬಲ್ಲೆ—ಆದರೆ ನನಗೆ ಇನ್ನೇನೂ ಬೇಕಾಗಿಲ್ಲ—ನನ್ನ ಕಾಲ ಬಹಳವಾಗಿ ಕಳೆದಿರುವುದು ಮತ್ತೂ ಹಲವು ಕಳೆದಿದೆ. ಈಗ ನನಗೆ ಬಿಡುಗಡೆ ಬೇಕು—ಬಡ್ಡಿ ಚಕ್ರಬಡ್ಡಿ ಎಲ್ಲವನ್ನೂ ತೀರಿಸಿ ಹೊರಗೆ ಹೋಗಬಲ್ಲೆನಾದರೆ ಬದುಕಿಕೊಳ್ಳುವೆ" ಎಂದ.

ಚಿಕ್ಕಪ್ಪ ರಮೇಶನ ಕೈಹಿಡಿದುಕೊಂಡು ಸ್ನೇಹಮಿಶ್ರಿತ ಧ್ವನಿಯಲ್ಲಿ " ಬೇಡ ರಮೇಶಬಾಬು, ನೀವಿನ್ನೇನೂ ಮಾಡಬೇಕಾಗಿಲ್ಲ. ನೀವು ಬಹಳವಾಗಿ ಅನುಭವಿಸಿರುವಿರಿ, ಈಗ ಭಾರಮುಕ್ತರಾಗಿ. ನೀವು ಸ್ವತಂತ್ರರಾಗಿ ನಡೆದುಕೊಳ್ಳಿ, ಸುಖಿಯಾಗಿರಿ, ಕೃತಾರ್ಥರಾಗಿ. ಇಷ್ಟೇ ನನ್ನ ಆಶೀರ್ವಾದ" ಎಂದು ಹೇಳಿದರು.

ಹೋಗುವಾಗ ರಮೇಶ ಕಮಲೆಯಕಡೆ ನೋಡುತ್ತ ಹೇಳಿದ, " ಹಾಗಾದರೆ ಇನ್ನು ಹೊರಡಲೇ "

ಕಮಲ ಯಾವಮಾತೂ ಆಡದೆ ಮತ್ತೊಮ್ಮೆ ನೆಲಕ್ಕೆ ಹಣೆಮುಟ್ಟಿಸಿ ರಮೇಶನಿಗೆ ನಮಸ್ಕಾರಮಾಡಿದಳು.

ರಮೇಶ ಬೀದಿಯಲ್ಲಿ ಹೋಗುತ್ತ ಸ್ವಪ್ನ ಕವಿದವನಂತೆ ನಡೆಯುತ್ತ-ನಡೆಯುತ್ತ ಯೋಚಿಸಲಾರಂಭಿಸಿದ, "ಕಮಲೆಯನ್ನು ನೋಡಿದ್ದು ಒಳ್ಳೆಯದೇ ಆಯಿತು. ನೋಡದಿದ್ದರೆ ಎಲ್ಲ ಎಡರು-ತೊಡರೂ ನಿವಾರಣೆಯಾಗುತ್ತಿರಲಿಲ್ಲ. ಆದರೂ ಕಮಲ ಏನು ತಿಳಿದುಕೊಂಡು, ಏತಕ್ಕಾಗಿ ಆ ರಾತ್ರಿ ಹಠಾತ್ತನೆ ಗಾಜೀಪುರದ ಬಂಗಲೆ ಬಿಟ್ಟುಹೋದಳು, ಎಂಬುದು ಸರಿಯಾಗಿ ತಿಳಿಯಲಿಲ್ಲ. ಆದರೆ ಈಗ ನಾನು ಸಂಪೂರ್ಣವಾಗಿ ಅನಾವಶ್ಯಕನೆಂದು ಸ್ಪಷ್ಟವಾಯಿತು. ಈಗ ಕೇವಲ ಆವಶ್ಯಕತೆ ನನ್ನ ಬಾಳಿಗೆಮಾತ್ರ ಸಂಬಂಧಿಸಿದ್ದು. ಈಗ ಅದನ್ನೇ ಸಂಪೂರ್ಣ ರೀತಿಯಲ್ಲಿ ಸ್ವೀಕರಿಸಿ ಜನರೆದುರಿಗೆ ಕಾಣಿಸಿರುವೆ—

ಈಗ ನಾನು ಇನ್ನು ಹಿಂದಿರುಗಿ ನೋಡುವುದರಿಂದ ಯಾವ ಉಪಯೋಗವೂ ಇರುವುದಿಲ್ಲ.

೬೨

ಕಮಲ ಮನೆಗೆ ಹಿಂದಿರುಗಿ ಬಂದು ನೋಡಿದಾಗ—ಅನ್ನದಾಬಾಬು ಮತ್ತು ಹೇಮನಳಿನಿ ಕ್ಷೇಮಂಕರಿಯ ಬಳಿ ಕುಳಿತಿದ್ದರು. ಕಮಲೆಯನ್ನು ನೋಡಿ ಕ್ಷೇಮಂಕರಿ, "ಓ ಹರಿದಾಸಿ, ನಿನ್ನ ಗೆಳತಿಯನ್ನು ನಿನ್ನ ಕೊಠಡಿಗೆ ಕರೆದುಕೊಂಡುಹೋಗು ಮಗು, ನಾನು ಅನ್ನದಾಬಾಬುಗಳಿಗೆ ಕುಡಿಯಲು ಚಹ ಕೊಡುವೆ" ಎಂದಳು.

ಕಮಲೆಯು ಕೊಠಡಿಗೆ ಬರುತ್ತಲೇ ಹೇಮನಳಿನಿ ಕಮಲೆಯ ಗಲ್ಲ ಹಿಡಿದುಕೊಂಡು "ಕಮಲಾ" ಎಂದಳು.

ಕಮಲ ಅತಿ ಆಶ್ಚರ್ಯ ತೋರ್ಪಡಿಸದೆ ಕೇಳಿದಳು, "ನನ್ನ ಹೆಸರು ಕಮಲೆಯೆಂದು ನಿನಗೆ ಹೇಗೆ ತಿಳಿಯಿತು ?"

ಹೇಮನಳಿನಿ ಹೇಳಿದಳು, "ಯಾರೋ ಒಬ್ಬರಬಳಿ ನಾನು ನಿನ್ನಜೀವನ ವೃತ್ತಾಂತವನ್ನೆಲ್ಲಾ ಕೇಳಿರುವೆ. ಕೇಳಿದ ಕೂಡಲೇ ನೀನೇ ಕಮಲೆಯೆಂದು ನನ್ನ ಮನಸ್ಸಿನಲ್ಲಿ ಸಂದೇಹವುಂಟಾಯಿತು. ಅದು ಹೇಗೆ ಸಾಧ್ಯವಾಯಿತೋ ಹೇಳಲು ಸಾಧ್ಯವಿಲ್ಲ.

"ಅಕ್ಕ, ನನ್ನ ಹೆಸರನ್ನು ಯಾರೆಂದರವರು ತಿಳಿಯುವುದೆನ್ನುವುದು ನನಗೆ ಇಷ್ಟವಿಲ್ಲ. ನನ್ನ ನಿಜವಾದ ಹೆಸರಿನಲ್ಲಿ ಸಂಪೂರ್ಣ ತಿರಸ್ಕಾರ ಉಂಟಾಗಿರುವುದು" ಎಂದು ಕಮಲ ಹೇಳಿದಳು.

ಹೇಮನಳಿನಿ, "ಆದರೆ ಈ ಹೆಸರಿನ ಬಲದಿಂದಲೇ ನೀನು ನಿನ್ನ ಅಧಿಕಾರವನ್ನು ಪಡೆಯುವೆ" ಎಂದಳು.

ಕಮಲ ತಲೆಯಲ್ಲಾಡಿಸುತ್ತಾ, "ಅದೆಲ್ಲಾ ನನಗೆ ತಿಳಿಯದು, ನನಗೆ ಸ್ವಲ್ಪವೂ ಬಲವಿಲ್ಲ. ನನಗೆ ಯಾವ ಅಧಿಕಾರವೂ ಇಲ್ಲ. ನಾನು ಶಕ್ತಿಯನ್ನು ಉಪಯೋಗಿಸಿಕೊಳ್ಳಲು ಆಸೆಪಡೆನು" ಎಂದು ಹೇಳಿದಳು.

ಹೇಮನಳಿನಿ, ಆದರೆ ನಿನ್ನ ಗಂಡನಿಗೆ ನಿನ್ನ ಪರಿಚಯ ಹೇಳದೆ

ಮೋಸಮಾಡುವೆಯೇಕೆ ? ನಿನ್ನ ಸುಖದುಃಖವನ್ನೆಲ್ಲ ಆತನಿಗೆ ನಿವೇದಿಸಿ ಕೊಳ್ಳಬೇಕಲ್ಲವೆ ? ಆತನಬಳಿ ಮರೆಮಾಚಿದರೆ ನಡೆಯುವುದೇನು " ಎಂದಳು.

ಹಠಾತ್ತನೆ ಕಮಲೆಯ ಮುಖ ಬಣ್ಣಗೆಟ್ಟಿತು—ಯೋಚಿಸಿಯೂ ಅವಳು ಉತ್ತರಕಾಣದೆ ನಿರುಪಾಯ ಭಾವದಿಂದ ಹೇಮನಳಿನಿಯ ಮುಖದ ಕಡೆ ನೋಡುತಿದ್ದಳು. ಮೆಲ್ಲಮೆಲ್ಲನೆ ಕಮಲ ನೆಲದಮೇಲಿದ್ದ ಚಾಪೆಯಮೇಲೆ ಕುಳಿತುಕೊಂಡಳು—" ದೇವರೇ ಬಲ್ಲ. ನಾನು ಯಾವ ಅಪರಾಧವನ್ನೂ ಮಾಡಿಲ್ಲ, ಆದರೂ ಅವನು ಅದೇತಕ್ಕಾಗಿಯೋ ನನ್ನನ್ನು ಈರೀತಿ ನಾಚಿಕೆಗೆ ಈಡುಮಾಡಿರುವ, ಯಾವ ಪಾಪ ನನ್ನದಲ್ಲವೋ ಅದಕ್ಕೆ ಶಾಸ್ತಿಯನ್ನು ನನಗೇಕೆ ಕೊಡಬಲ್ಲ. ನಾನು ಯಾವಬಗೆಯಲ್ಲಿ ಆತನ ಬಳಿ ನನ್ನ ವೃತ್ತಾಂತ ವನ್ನೆಲ್ಲಾ ತೋಡಿಕೊಳ್ಳಲಿ " ಎಂದಳು.

ಹೇಮನಳಿನಿ ಕಮಲೆಯ ಕೈಹಿಡಿದುಕೊಂಡು ಹೇಳಿದಳು. " ಶಾಸ್ತಿಯಲ್ಲ ತಂಗಿ, ನಿನಗೆ ಬಿಡುಗಡೆಯಾಗುವುದು. ನೀನು ನಿನ್ನ ಗಂಡನಬಳಿ ನಿನ್ನನ್ನು ಮರೆಮಾಡಿಟ್ಟುಕೊಂಡಿರುವಷ್ಟುದಿನವೂ ನಿನ್ನನ್ನು ಒಂದು ಮಿಥ್ಯಾಬಂಧನದಲ್ಲಿ ಸಿಕ್ಕಿಬೀಳುವಂತೆ ಮಾಡುವೆ—ಅದನ್ನು ಬಲಪೂರ್ವಕವಾಗಿ ಕತ್ತರಿಸಿಹಾಕು, ದೇವರು ನಿನಗೆ ಕಲ್ಯಾಣವನ್ನುಂಟುಮಾಡುವನು ".

" ಒಂದು ವೇಳೆ ನಾನು ಪಡೆದುದೆಲ್ಲ ಕಳೆದುಹೋದೀತೋ ಎಂಬ ಭಯ ಮನಸ್ಸಿಗೆ ಬರುತ್ತಲೇ ನನ್ನ ಎಲ್ಲ ಶಕ್ತಿಯೂ ಓಡಿಹೋಗುವುದು. ಆದರೆ ನೀನು ಹೇಳುವುದನ್ನು ನಾನು ಅರ್ಥಮಾಡಿಕೊಂಡಿರುವೆ—ಹಣೆಯಲ್ಲಿ ಬರೆ ದಿರುವಂತೆ ನಡೆಯಲಿ ; ಆದರೆ ಆತನ ಬಳಿ ಇನ್ನು ನನ್ನನ್ನು ಮರೆಮಾಡಿಟ್ಟು ಕೊಳ್ಳಲಾರೆ—ಆತ ನನ್ನ ಸಂಗತಿಯನ್ನೆಲ್ಲ ಬಲ್ಲ " ಎಂದಳು. ಹೀಗೆ ಹೇಳುತ್ತ ಹೇಳುತ್ತ ಅವಳು ತನ್ನ ಎರಡು ಮುಷ್ಟಿಗಳನ್ನೂ ಬಿಗಿಯಾಗಿ ಮುಚ್ಚಿಕೊಂಡಳು.

ಹೇಮನಳಿನಿ ಕರುಣ ಹೃದಯದಿಂದ, " ನೀನು ಬಯಸುವುದೇನು ? ನಿನ್ನ ವಿಷಯವನ್ನು ಬೇರೆ ಯಾರಾದರೂ ಆತನಿಗೆ ವಿವರಿಸಬೇಕು ಎನ್ನುವುದೆ " ಎಂದಳು.

ಕಮಲ ವೇಗವಾಗಿ ತಲೆಯಲ್ಲಾಡಿಸುತ್ತ ಹೇಳಿದಳು, " ಬೇಡ ಬೇಡ, ಬೇರಾರ ಬಾಯಿಂದಲೂ ಆತ ಕೇಳುವುದಿಲ್ಲ—ನನ್ನ ಸಂಗತಿಯನ್ನು ನಾನೇ ಅವರಿಗೆ ಹೇಳುವೆ—ನಾನೇ ಹೇಳಬಲ್ಲೆ ".

" ಅದೇ ಒಳ್ಳೆಯದು. ಇನ್ನು ನಾನು ನಿನ್ನನ್ನು ನೋಡುವೆನೋ ಇಲ್ಲವೋ ತಿಳಿಯದು. ನಾವುಗಳು ಇಲ್ಲಿಂದ ಹೊರಟು ಹೋಗುತ್ತಿರುವೆವು, ಅದರಿಂದಲೇ ನಿಮಗೆ ಹೇಳಿ ಹೋಗಲು ಬಂದಿರುವೆವು" ಎಂದು ಹೇಮನಳಿನಿ ಹೇಳಿದಳು.

ಕಮಲ, " ಎಲ್ಲಿಗೆ ಹೋಗುವಿರಿ ? " ಎಂದು ವಿಚಾರಿಸಿದಳು.

ಹೇಮನಳಿನಿ, " ಕಲ್ಕತ್ತೆಗೆ ಹೋಗುವೆವು, ನಿನಗೆ ಬೆಳಗಿನ ಹೊತ್ತು ಕೆಲಸಕಾರ್ಯವಿದ್ದೀತು—ನಾನಿನ್ನು ತಡೆಮಾಡೆನು. ನಾನಿನ್ನು ಹೊರಡುವೆ ತಂಗಿ, ಅಕ್ಕನನ್ನು ನೆನಪಿಟ್ಟಿರು " ಎಂದು ಹೇಳಿದಳು.

ಕಮಲ ಅವಳ ಕೈಹಿಡಿದುಕೊಂಡು ಹೇಳಿದಳು, " ನನಗೆ ಕಾಗದ ಬರೆಯುವುದಿಲ್ಲವೆ ? ".

" ಒಳ್ಳೆಯದು, ಬರೆಯುವೆ " ಎಂದಳು ಹೇಮನಳಿನಿ.

ಕಮಲ, " ಯಾವಾಗ ಏನು ಮಾಡಬೇಕು, ಎಂದು ನೀನು ನನಗೆ ತಿಳುವಳಿಕೆ ಕೊಟ್ಟು ಬರೆಯಬೇಕು. ನಿನ್ನ ಕಾಗದದಿಂದ ನನಗೆ ಉತ್ಸಾಹ ಮೂಡುವುದೆಂದು ನಾ ಬಲ್ಲೆ " ಎಂದಳು.

ಹೇಮನಳಿನಿ ತುಸು ನಕ್ಕು, " ನನಗಿಂತ ಹೆಚ್ಚಾಗಿ ಉಪದೇಶ ಕೊಡುವ ಮನುಷ್ಯನನ್ನು ನೀನು ಪಡೆಯುವೆ ಅದಕ್ಕಾಗಿ ಸ್ವಲ್ಪವೂ ಯೋಚಿಸಬೇಡ, " ಎಂದು ತಿಳಿಸಿದಳು.

ಇಂದು ಹೇಮನಳಿನಿಗಾಗಿ ಕಮಲ ಮನದಲ್ಲೇ ಅತಿಯಾದ ವ್ಯಥೆಯನ್ನು ಅನುಭವಿಸಲಾರಂಭಿಸಿದಳು. ಹೇಮನಳಿನಿಯ ಪ್ರಶಾಂತ ಮುಖದಲ್ಲಿದ್ದ ಯಾವುದೋ ಭಾವನೆಯನ್ನು ಕಂಡು ಕಮಲೆಯ ಕಣ್ಣಿನಲ್ಲಿ ನೀರೂರತೊಡಗಿತು. ಆದರೆ ಹೇಮನಳಿನಿಯಲ್ಲಿ ಹೇಗೋ ಒಂದು ಅಸಾಮಾಪ್ಯತೆ ಇರುವುದು– ಅವಳಿಗೆ ಯಾವ ಮಾತನ್ನೂ ಹೇಳಿದರೂ ನಡೆಯದು. ಅವಳನ್ನು ಪ್ರಶ್ನೆ ಮಾಡುವುದಕ್ಕೇ ಮನಸ್ಸು ಬಾರದು. ಇಂದು ಕಮಲೆಯ ಎಲ್ಲ ಸುದ್ದಿಯೂ ಹೇಮನಳಿನಿಯ ಬಳಿ ಬಹಿರಂಗವಾಗಿರುವುದು ; ಆದರೆ ಅವಳು ತನ್ನ ಅತಿ ಆಳವಾದ ನಿಸ್ತಬ್ಧತೆಯಲ್ಲಿ ಮರೆಯಾಗಿ ಹೋಗುತಿರುವಳು. ಕೇವಲ ಏನನ್ನೋ ಬಿಟ್ಟು ಹೋಗುತ್ತಿರುವಳಲ್ಲ, ಅದು ವಿಲೀಯಮಾನ ಗೋಧೂಳಿಯಂತೆ ಅಳತೆ ಮೀರಿದ ವಿಷಾದದ ವೈರಾಗ್ಯದಲ್ಲಿ ಪರಿಪೂರ್ಣವಾಗಿರುವುದು.

ಮನೆಗೆಲಸವಲ್ಲಿ ಬಿಡುವಾದಾಗಲೆಲ್ಲಾ ಇಂದು ಕೇವಲ ಹೇಮನಳಿನಿಯ ಮಾತುಕತೆ ಹಾಗೂ ಅವಳ ಶಾಂತ-ಸಕರುಣ ಕಣ್ಣಿನ ನೋಟ ಕಮಲೆಯ ಮನವನ್ನು ಇರಿಯಲಾರಂಭಿಸಿತು. ಕಮಲ ಹೇಮನಳಿನಿಯ ಜೀವನದ ಬೇರಾವ ಘಟನೆಯನ್ನೂ ಅರಿಯಳು—ನಳಿನಾಕ್ಷನೊಡನೆ ಅವಳ ಮದುವೆ ನಿಂತು ಹೋದುದನ್ನು ಮಾತ್ರ ಬಲ್ಲಳು, ಹೇಮನಳಿನಿ ತಮ್ಮ ತೋಟದಿಂದ ಇಂದು ಒಂದು ಬುಟ್ಟಿ ಹೂ ತಂದುಕೊಟ್ಟಿದ್ದಳು. ಕಮಲ ಸಂಜೆಯಲ್ಲಿ ಸ್ನಾನ ಮಾಡಿ ಬಂದು ಹೂಗಳನ್ನು ಹಾರವಾಗಿ ಕಟ್ಟಿವಳು. ನಡುವೆ ಒಮ್ಮೆ ಕ್ಷೇಮಂಕರಿ ಬಂದು ಅವಳ ಪಕ್ಕದಲ್ಲಿ ಕುಳಿತು ನಿಟ್ಟುಸಿರುಬಿಟ್ಟು, "ಆಹಾ ಮಗೂ, ಈ ದಿನ ಹೇಮ ನನಗೆ ನಮಸ್ಕಾರ ಮಾಡಿ ಹೊರಟುಹೋದಾಗ ನನ್ನ ಮನಸ್ಸಿಗೆ ಹೇಗಾಯಿತೆಂಬುದನ್ನು ಮಾತಿನ ಮೂಲಕ ತಿಳಿಸಲಾರೆ. ಯಾರು ಏನೇ ಹೇಳಲಿ, ಹೇಮ ಬಹಳ ಒಳ್ಳೆಯವಳು. ಈಗ ನನ್ನ ಮನಸ್ಸಿಗೆ, ಅವಳನ್ನು ನನ್ನ ಸೊಸೆಯನ್ನಾಗಿ ಮಾಡಿಕೊಂಡಿದ್ದರೆ ಬಹಳ ಒಳ್ಳೆಯದಾಗು ತಿತ್ತೆಂದು ಅನಿಸುತ್ತಿದೆ. ಇನ್ನು ಸ್ವಲ್ಪದರಲ್ಲಿ ನಡೆದುಹೋಗುತ್ತಿತ್ತು—ಆದರೆ ನನ್ನ ಮಗನನ್ನು ಒಪ್ಪಿಸಲು ಎಡೆಯೇ ಇರುವುದಿಲ್ಲ—ಅವನು ಏತಕ್ಕಾಗಿ ಹಿಂಜರಿದನೋ ಅದನ್ನು ಅವನೇ ಬಲ್ಲ.

ಕೊನೆಗಾಲದಲ್ಲಿ ತಾನೂ ಆ ಮದುವೆಯ ಮಾತಿಗೆ ಸಮ್ಮತಿಸಲಿಲ್ಲವೆಂಬ ಸಂಗತಿಯನ್ನು ಕ್ಷೇಮಂಕರಿ ಪುನಃ ಆಲೋಚಿಸಲು ಇಷ್ಟಪಡಲಿಲ್ಲ.

ಹೊರಗಡೆ ಹೆಜ್ಜೆಯ ಸಪ್ಪಳ ಕೇಳಿ ಕ್ಷೇಮಂಕರಿ, "ಓ ನಳಿನ್, ಒಂದು ಮಾತು" ಎಂದಳು.

ಕಮಲ ಅವಸರ ಅವಸರವಾಗಿ ಸೆರಗಿನೊಳಗೆ ಹೂಮಾಲೆಯನ್ನು ಮುಚ್ಚಿಟ್ಟುಕೊಂಡು ತಲೆಯ ಮುಸುಕನ್ನು ಎಳೆದುಕೊಂಡಳು. ನಳಿನಾಕ್ಷ ಕೊಠಡಿಯೊಳಕ್ಕೆ ಬರುತ್ತಲೇ ಕ್ಷೇಮಂಕರಿ ಹೇಳಿದಳು, "ಹೇಮ್, ಅವರೆಲ್ಲರೂ ಈ ದಿನ ಹೊರಟುಹೋದರು—ನಿನ್ನನ್ನು ನೋಡಲಿಲ್ಲವೆ ?"

ನಳಿನಾಕ್ಷ, "ಹೌದು, ನಾನೂ ಅವರುಗಳನ್ನು ಗಾಡಿಯಲ್ಲಿ ಹತ್ತಿಸಿಬಿಟ್ಟು ಬಂದೆ" ಎಂದ.

"ಏನೇ ಹೇಳು ಮಗು, ಹೇಮಳಂಥ ಹುಡುಗಿ ಜಗತ್ತಿನಲ್ಲೇ ಅಪೂರ್ವ" ಎಂದಳು ಕ್ಷೇಮಂಕರಿ. ಆಕೆಯ ಮಾತಿನ ಭಂಗಿ ಈ ವಿಷಯ

ದಲ್ಲಿ ನಳಿನಾಕ್ಷ ಒಂದೇಸಮನಾಗಿ ಪ್ರತಿ ಹೇಳುತ್ತಿರುವ ಎನ್ನುವಂತಿತ್ತು. ನಳಿನಾಕ್ಷ ತೆಪ್ಪನಿದ್ದು ಒಮ್ಮೆ ನಕ್ಕ.

ಕ್ಷೇಮಂಕರಿ ಹೇಳಿದಳು, "ದೊಡ್ಡದಾಗಿ ನಗುವೆಯಲ್ಲ! ನಾನು ನಿನ್ನೊಡನೆ ಹೇಮಳ ಸಂಬಂಧ ನಿಶ್ಚಯಿಸಿದ್ದೆ. ಆಶೀರ್ವಾದವನ್ನೂ ಮಾಡಿ ಬಂದಿದ್ದೆ. ಆದರೆ ನೀನು ಹಟ ಹಿಡಿದು ಎಲ್ಲವನ್ನೂ ಮಣ್ಣುಪಾಲು ಮಾಡಿದೆ. ಈಗ ನಿನ್ನ ಮನಸ್ಸಿಗೆ ಸ್ವಲ್ಪ ಪಶ್ಚಾತ್ತಾಪವಾಗುತಿದೆಯಲ್ಲವೆ?

ನಳಿನಾಕ್ಷ ಒಮ್ಮೆ ಬೆಚ್ಚಿಬಿದ್ದವನಂತೆ ಕಮಲೆಯ ಮುಖದ ಕಡೆ ದೃಷ್ಟಿ ಬೀರಿದ. ನೋಡಿದರೆ ಕಮಲ ಕುತೂಹಲನೋಟದಿಂದ ಅವನಕಡೆ ನೋಡು ತಿರುವಳು. ನಾಲ್ಕು ಕಣ್ಣುಗಳೂ ಒಂದಾದ ಕೂಡಲೇ ಕಮಲ ನಾಚಿಕೆಯಿಂದ ತಲೆ ಬಗ್ಗಿಸಿ ನೆಲ ನೋಡತೊಡಗಿದಳು.

ನಳಿನಾಕ್ಷ, "ಅಮ್ಮಾ, ನೀನು ಮದುವೆ ಗೊತ್ತುಮಾಡಿದಷ್ಟಕ್ಕೇ ನಿನ್ನ ಮಗ ಲಗ್ನವಾಗುವಂಥ ಸತ್ಪಾತ್ರನೇನು! ನನ್ನಂಥ ನೀರಸ ಗಂಭೀರ ವ್ಯಕ್ತಿಗೆ ಸಹಜವಾಗಿ ಏನುಮಾಡಲು ಒಪ್ಪಿಗೆಯಾದೀತು" ಎಂದು ನುಡಿದ.

ಈ ಮಾತಿನಿಂದ ಕಮಲೆಯ ಕಣ್ಣು ತಾನಾಗಿಯೇ ಮತ್ತೊಮ್ಮೆ ಮೇಲ ಕ್ಕೆದ್ದಿತು— ಏಳುತ್ತಲೇ, ನಳಿನಾಕ್ಷನ ಹಾಸ್ಯೋಜ್ವಲ ದೃಷ್ಟಿ ಅವಳ ಮೇಲೆಯೇ ನಾಟಿದ್ದುದನ್ನು ನೋಡಿದಳು. ಈಗ ಕಮಲೆಯ ಮನಸ್ಸಿಗೆ, ಕೋಣೆಯಿಂದ ಓಡಿಹೋದರೆ ಬದುಕಿಕೊಳ್ಳುವೆ ಎಂದು ತೋರಲಾರಂಭಿಸಿತು.

ಕ್ಷೇಮಂಕರಿ, "ನಡೆನಡೆ, ಇನ್ನು ಹರಟಬೇಡ, ನಿನ್ನ ಮಾತು ಕೇಳಿದರೆ ನನಗೆ ಕೋಪಬರುವುದು" ಎಂದಳು.

ಈ ಸಭೆ ಮುಗಿದ ಬಳಿಕ ಕಮಲ ಹೇಮನಳಿನಿ ತಂದಿದ್ದ ಅಷ್ಟು ಹೂವು ಗಳನ್ನೂ ತೆಗೆದುಕೊಂಡು ಒಂದು ದೊಡ್ಡ ಮಾಲೆ ಪೋಣಿಸಿದಳು, ಹೂವಿನ ಬುಟ್ಟಿಯ ಮೇಲೆ ಆ ಹೂಮಾಲೆಯಿಟ್ಟು ನೀರು ಸಿಂಪಡಿಸಿ ಅದನ್ನು ನಳಿನಾಕ್ಷನ ಉಪಾಸನಾಗೃಹದೊಳಗೆ ಒಂದು ಪಕ್ಕದಲ್ಲಿಟ್ಟಳು. ಅವಳ ಮನಸ್ಸಿನಲ್ಲಿ, ಇಂದು ಬೀಳ್ಕೊಡುವ ದಿನವಾದುದರಿಂದಲೇ ಹೇಮನಳಿನಿ ಬುಟ್ಟಿಯ ತುಂಬ ಹೂ ತಂದಿರುವಳು ಎಂದು ತೋರಲಾರಂಭಿಸಿತು—ಇದನ್ನು ನೆನೆಯುತ್ತಲೇ ಅವಳ ಕಣ್ಣಿನಲ್ಲಿ ಗಳಗಳನೆ ನೀರೂರಿತು.

ಆ ಬಳಿಕ ತನ್ನ ಕೋಣೆಗೆ ಹಿಂದಿರುಗಿ ಬಂದು ತನ್ನ ಕಡೆ ನಳಿನಾಕ್ಷ ನೋಡಿದ ನೋಟವನ್ನೇ ಬಹಳ ಹೊತ್ತು ಧ್ಯಾನಿಸಿಕೊಳ್ಳತೊಡಗಿದಳು.

ನಳಿನಾಕ್ಷ ಕಮಲೆಯನ್ನು ಹೇಗೆ ಭಾವಿಸಿರಬಹುದು, ಕಮಲೆಯ ಮನಸ್ಸಿನ ಭಾವ ಹೇಗೋ ನಳಿನಾಕ್ಷನ ಬಳಿ ವಿವರವಾಗಿ ಪ್ರಕಟಗೊಂಡಿರುವುದು. ಕಮಲ ಮೊದಲೆಲ್ಲಾ ನಳಿನಾಕ್ಷನ ಎದುರಿಗೆ ಹೊರಬರುತಿರಲಿಲ್ಲವಲ್ಲ. ಈಗ ಆ ರೀತಿಯಲ್ಲಿಲ್ಲ. ಈಗ ಪ್ರತಿದಿನವೂ ಕಮಲ ಅವನ ಕಣ್ಣಿಗೆ ಕಾಣಿಸಿಕೊಳ್ಳು ವಳು ತನ್ನನ್ನು ಮರೆಮಾಡಿಟ್ಟುಕೊಳ್ಳಲು ಇದೇ ಶಾಸ್ತಿ. “ಖಂಡಿತ ನಳಿನಾಕ್ಷ ಮನಸ್ಸಿನಲ್ಲೇ ಈ ಹರಿದಾಸಿಯೆಂಬ ಹುಡುಗಿಯನ್ನು ಅಮ್ಮ ಎಲ್ಲಿಂದ ಕರೆತಂದಳು, ಇಂಥ ನಾಚಿಕೆಯಿಲ್ಲದವಳನ್ನು ಕಂಡೇ ಇರಲಿಲ್ಲವೆಂದು ಅಂದುಕೊಳ್ಳಬಹುದು” ಎಂದು ಒಳಗೊಳಗೇ ಆಲೋಚಿಸಲಾರಂಭಿಸಿದಳು. ನಳಿನಾಕ್ಷ ಒಂದು ಕ್ಷಣ ಈ ರೀತಿ ಭಾವಿಸುವುದಾದರೂ ಅದು ತನಗೆ ಅಸಹನೀಯ—ಎಂದು ಕಮಲ ಯೋಚಿಸಲಾರಂಭಿಸಿದಳು.

ಕಮಲ ರಾತ್ರಿ ಹಾಸಿಗೆಯಲ್ಲಿ ಮಲಗಿ ತನಗೆ ತಾನೇ ದೃಢಪ್ರತಿಜ್ಞೆ ಮಾಡಿಕೊಂಡಳು. “ಹೇಗಾದರೂ ಆಗಲಿ, ನಾಳೆಯೇ ನನ್ನ ಪರಿಚಯ ತಿಳಿಸಿಬಿಡಬೇಕು, ಆಮೇಲೆ ಏನುಬೇಕಾದರೂ ಆಗಲಿ”.

ಕಮಲ ಮರುದಿನ ಮುಂಜಾನೆಯಲ್ಲಿ ಎದ್ದು ಸ್ನಾನಮಾಡಲು ಹೋದಳು. ಸ್ನಾನವಾದ ಬಳಿಕ ಪ್ರತಿದಿನವೂ ಒಂದು ಸಣ್ಣ ತಂಬಿಗೆಯಲ್ಲಿ ಗಂಗೆಯ ನೀರು ತಂದು ನಳಿನಾಕ್ಷನ ಉಪಾಸನಾಗೃಹವನ್ನು ಸಾರಿಸಿದನಂತರ ಬೇರೆ ಕೆಲಸಕ್ಕೆ ಗಮನ ಕೊಡುವಳು. ಇಂದೂ ಅವಳು ತನ್ನ ದಿನದ ಮೊದಲನೆಯ ಕೆಲಸ ಮಾಡಲು ಹೋಗಿ ನೋಡಿದಾಗ, ನಳಿನಾಕ್ಷ ಈ ದಿನ ಹೊತ್ತಿಗೆ ಮುಂಚೆಯೇ ತನ್ನ ಉಪಾಸನಾಗೃಹಕ್ಕೆ ಬಂದಿರುವನು – ಹೀಗೆ ಎಂದೂ ನಡೆದಿರಲಿಲ್ಲ. ಕಮಲ ತನ್ನ ಹೃದಯದಲ್ಲಿ ಅಸಮಾಪ್ತ ಕೆಲಸದ ಒಂದು ಭಾರ ಹೊತ್ತು ಕೊಂಡು ಮೆಲ್ಲಮೆಲ್ಲನೆ ತಿರುಗಿ ಬಂದು ಉಪಾಸನಾಗೃಹದ ಬಾಗಿಲ ಬಳಿ ತೆಪ್ಪನೆ ಕುಳಿತಿದ್ದಳು. ಅವಳನ್ನು ಯಾವುದು ಹಿಡಿದಿಟ್ಟಿತೆಂಬುದನ್ನು ಅವಳು ಅರಿಯಳು ಜಗತ್ತೆಲ್ಲ ಅವಳೆದುರಿಗೆ ನೆರಳಿನಂತಾಗುತ್ತ ಬಂದಿತು. ಅದೆಷ್ಟು ಹೊತ್ತು ಕಳೆಯಿತೋ ಅದರ ಅರಿವೇ ಇಲ್ಲ ಅವಳಿಗೆ. ಇದ್ದಕ್ಕಿದ್ದಂತೆ ಒಮ್ಮೆ ನೋಡಿದಳು. ನಳಿನಾಕ್ಷ ಕೊಠಡಿಯಿಂದ ಹೊರಕ್ಕೆ ಬಂದು ಅವಳೆದುರಿಗೆ ನಿಂತಿರುವನು. ಕಮಲ ಮುಹೂರ್ತಮಾತ್ರದಲ್ಲಿ ಎದ್ದು ನಿಂತು ಮೊಣಕಾಲು ನೆಲಕ್ಕೆ ಮುಟ್ಟಿಸಿ ಒಮ್ಮೆಗೇ ನಳಿನಾಕ್ಷನ ಕಾಲಮೇಲೆ ಹಣೆಯಿಟ್ಟು ನಮಸ್ಕರಿ ಸಿದಳು—ಅವಳ ಅದೇ ತಾನೇ ಸ್ನಾನಮಾಡಿ ನೆನೆದಿದ್ದ ಕೇಶರಾಶಿ ನಳಿನಾಕ್ಷನ

ಕಾಲನ್ನು ಮುಚ್ಚಿ ನೆಲದ ಮೇಲೆ ಹರಡಿ ಬಿದ್ದಿತು. ಕಮಲ ನಮಸ್ಕಾರ ಮಾಡಿ ಎದ್ದು ಕಲ್ಲಿನ ಮೂರ್ತಿಯಂತೆ ಅಲುಗಾಡದೆ ನಿಂತಿದ್ದಳು—ಅವಳ ತಲೆಯ ಮೇಲಿನ ಬಟ್ಟೆ ಬಿದ್ದುಹೋಗಿರುವುದು ಅವಳಿಗೆ ಅರಿವಾಗಲೇ ಇಲ್ಲ. ನಳಿನಾಕ್ಷ ಎವೆಯಿಕ್ಕದ ನೋಟದಿಂದ ಅವಳ ಮುಖವನ್ನೇ ನಿರೀಕ್ಷಿಸುತಿರುವು ದನ್ನು ಅವಳು ನೋಡಲೇ ಇಲ್ಲ—ಅವಳಿಗೆ ಹೊರಗಿನ ಅರಿವಿಲ್ಲ, ಅವಳು ಒಂದು ಆಂತರಿಕ ಚೈತನ್ಯಪ್ರಕಾಶದಿಂದ ಅಪೂರ್ವರೂಪದಿಂದ ಬೆಳಗುತ್ತ ಅವಿಚಲಿತ ಕಂಠದಿಂದ ಹೇಳಿದಳು. "ನಾನು ಕಮಲ".

ಈ ಮಾತನ್ನು ಹೇಳಿದ ಮರುಕ್ಷಣದಲ್ಲೇ ಅವಳಿಗೆ ತನ್ನ ಕಂಠಸ್ವರ ದಿಂದ ಹೇಗೋ ಧ್ಯಾನ ಭಂಗವಾಯಿತು—ಅವಳ ಏಕಾಗ್ರಚೇತನ ಬಾಹ್ಯದಲ್ಲಿ ವ್ಯಾಪಿಸಿಕೊಂಡಿತು. ಆಗ ಅವಳ ಸರ್ವಾಂಗವೂ ಕಂಪಿಸಲಾರಂಭಿಸಿತು—ತಲೆ ಬಗ್ಗಿತು—ಅಲ್ಲಿಂದ ಅಲುಗಾಡುವ ಬಲ ಉಳಿಯಲಿಲ್ಲ, ನಿಂತಿರಲೂ ಸಾಧ್ಯವಾಗಲಿಲ್ಲ—ಅವಳು ತನ್ನ ಸಮಸ್ತಬಲ, ಸಮಸ್ತ ಸಂಕಲ್ಪ, ಎಲ್ಲವನ್ನೂ "ನಾನು ಕಮಲ" ಎಂಬ ಈ ಒಂದು ಮಾತಿನಲ್ಲಿ ನಳಿನಾಕ್ಷನ ಪಾದದ ಬಳಿ ಸಮರ್ಪಿಸಿಬಿಟ್ಟಿದ್ದಳು. ತನ್ನ ಬಳಿ ತನ್ನ ಲಜ್ಜೆಯನ್ನುಳಿಸಿಕೊಳ್ಳುವ ಯಾವ ಉಪಾಯವೂ ಅವಳ ಹಿಡಿತದಲ್ಲಿರಲಿಲ್ಲ. ಈಗ ಎಲ್ಲವೂ ನಳಿನಾಕ್ಷನ ದಯೆಯನ್ನು ಅವಲಂಬಿಸಿರುವುದು. ನಳಿನಾಕ್ಷ ಮೆಲ್ಲ ಮೆಲ್ಲನೆ ಅವಳ ಕೈಯನ್ನು ತನ್ನ ಕೈಮೇಲೆ ತೆಗೆದುಕೊಳ್ಳುತ್ತ ಹೇಳಿದ "ನಾ ಬಲ್ಲೆ, ನೀನು ನನ್ನ ಕಮಲೆ. ಬಾ, ನನ್ನಕೊಠಡಿಗೆ ಬಾ".

ಉಪಾಸನಾಗೃಹಕ್ಕೆ ಕರೆದುಕೊಂಡುಹೋಗಿ ಅವಳಕತ್ತಿಗೆ ಅವಳೇ ಕಟ್ಟಿದ್ದ ಆ ಮಾಲೆ ಹಾಕಿ "ಬಾ, ನಾವವನಿಗೆ ನಮಸ್ಕಾರಮಾಡೋಣ" ಎಂದು ಹೇಳಿದ. ಇಬ್ಬರೂ ಪಕ್ಕಪಕ್ಕದಲ್ಲಿ ಆ ಅಮೃತಶಿಲೆಯ ನೆಲದಮೇಲೆ ಬಗ್ಗಿದಾಗ, ಕಿಟಕಿಯಿಂದ ಬೆಳಗಿನ ಬಿಸಿಲುಬಂದು ಇಬ್ಬರ ತಲೆಯಮೇಲೂ ಬಿದ್ದಿತು.

ನಮಸ್ಕಾರಮಾಡಿ ಎದ್ದು ಮತ್ತೊಮ್ಮೆ ನಳಿನಾಕ್ಷನ ಪಾದಧೂಳಿ ತೆಗೆದ ಕೊಂಡು ಕಮಲೆ ಎದ್ದುನಿಂತಳು. ಅವಳ ಅಡಗಿಸಲಾರದ ನಾಚಿಕೆ ಅವಳನ್ನು ಪೀಡಿಸಲಿಲ್ಲ. ಆನಂದದ ಉಲ್ಲಾಸವಿಲ್ಲ, ಆದರೆ ಒಂದು ಹಿರಿಯ ವ್ಯಕ್ತಿಯ ನಿಶ್ಚಲ ಶಾಂತಿ ಅವಳ ಅಸ್ತಿತ್ವವನ್ನು ಬೆಳಗಿನ ತಡೆಯಿಲ್ಲದ ಉದಾರ-ನಿರ್ಮಲ ಪ್ರಕಾಶದೊಡನೆ ವ್ಯಾಪಿಸಿಕೊಂಡಿತು. ಒಂದು ಗಭೀರ

ಭಕ್ತಿ ಅವಳ ಹೃದಯದ ಮೂಲೆಮೂಲೆಯಲ್ಲೂ ತುಂಬಿಕೊಂಡಿತು. ಅವಳ ಅಂತರ್ಯದ ಪೂಜೆ ವಿಶ್ವವನ್ನೆಲ್ಲ ಧೂಪದ ಸುಗಂಧದಿಂದ ತುಂಬಿತು. ನೋಡುತ್ತನೋಡುತ್ತ ಅವಳಿಗರಿವಿಲ್ಲದಂತೆಯೇ ದೊಡ್ಡದೊಡ್ಡ ನೀರಹನಿಗಳು ಅವಳ ಎರಡು ಕೆನ್ನೆಗಳಿಂದಲೂ ಜಾರಿಬೀಳಲಾರಂಭಿಸಿದುವು. ಅಡಗಿಸಿಡ ಲಾಗಲಿಲ್ಲ. ಅವಳ ಅನಾಥ ಜೀವನದ ಎಲ್ಲ ದುಃಖದ ಮೋಡವೂ ಇಂದು ಆನಂದದ ನೀರಾಗಿ ಜಾರಿಬೀಳತೊಡಗಿತು. ನಳಿನಾಕ್ಷ ಅವಳಿಗೆ ಯಾವ ಮಾತನ್ನೂ ಹೇಳದೆ ಒಮ್ಮೆ ಬಲಗೈಯಿಂದ ಅವಳ ತೋಯ್ದ ಕೂದಲನ್ನು ಹಣೆಯ ಮೇಲಿಂದ ಒತ್ತರಿಸಿ ಕೊಠಡಿಯಿಂದ ಹೊರಟುಹೋದ.

ಕಮಲ ತನ್ನ ಪೂಜೆಯನ್ನು ಮುಗಿಸಿಕೊಳ್ಳಲಾರದಾದಳು. ಅವಳಿಗೆ ತನ್ನ ಪರಿಪೂರ್ಣ ಹೃದಯದ ಅರ್ಘ್ಯವನ್ನು ಅರ್ಪಿಸಬೇಕೆಂಬ ಬಯಕೆ—ಅದರಿಂದಲೇ ಅವಳು ನಳಿನಾಕ್ಷ ಮಲಗುವ ಕೊಠಡಿಗೆ ಹೋಗಿ ತನ್ನ ಕೊರಳ ಮಾಲೆಯನ್ನು ಆ ಪಾದರಕ್ಷೆಗೆ ಹಾಕಿದಳು ಮತ್ತು ಅದನ್ನು ತನ್ನ ಹಣೆಗೆ ಒತ್ತಿ ಕೊಳ್ಳುತ್ತ ಯತ್ನಪೂರ್ವಕವಾಗಿ ಯಥಾಸ್ಥಾನದಲ್ಲಿಟ್ಟಳು.

ಆ ಬಳಿಕ ದಿನವೆಲ್ಲ ಅವಳ ಮನೆಗೆಲಸ ದೇವರ ಸೇವೆಯಂತೆ ಭಾಸವಾಗ ಲಾರಂಭಿಸಿತು. ಪ್ರತಿಯೊಂದು ಕೆಲಸವೂ ಆಕಾಶದಲ್ಲಿ ಒಂದೊಂದು ಆನಂದದ ಅಲೆಯಂತೆ ಉಕ್ಕಿಹರಿಯಿತು. ಕ್ಷೇಮಂಕರಿ ಅವಳಿಗೆ "ಮಗೂ, ನೀನೇನು ಮಾಡುತ್ತಿರುವೆ. ಒಂದೇ ದಿನದಲ್ಲಿ ಮನೆಯನ್ನೆಲ್ಲ ಗುಡಿಸಿ ಸಾರಿಸಿ ಸಂಪೂರ್ಣ ವಾಗಿ ಹೊಸದನ್ನಾಗಿ ಮಾಡುತ್ತಿರುವೆಯಲ್ಲ" ಎಂದಳು.

ಸಂಜೆಯ ಬಿಡುವಿನಲ್ಲಿ ಇಂದು ಕಸೂತಿ ಹಾಕದೆ ಕಮಲ ತನ್ನ ಕೊಠಡಿಯ ನೆಲದಮೇಲೆ ತೆಪ್ಪನೆ ಕುಳಿತಿದ್ದಳು. ಆ ವೇಳೆಯಲ್ಲಿ ನಳಿನಾಕ್ಷ ಒಂದು ಬುಟ್ಟಿಯಲ್ಲಿ ಹಲವಾರು ನೆಲದಾವರೆ ಹೂವುಗಳೊಡನೆ ಕೋಣೆ ಯೊಳಕ್ಕೆ ಬಂದ—"ಕಮಲಾ, ಈ ಹೂವುಗಳಿಗೆ ನೀರು ಚಿಮುಕಿಸಿ ಬಾಡದಂತೆ ಇರಿಸು. ಇಂದು ಸಂಜೆಯ ಬಳಿಕ ನಾವಿಬ್ಬರೂ ಅಮ್ಮನಿಗೆ ನಮಸ್ಕಾರ ಮಾಡೋಣ" ಎಂದು ಹೇಳಿದ.

ಕಮಲ ಮುಖ ಬಗ್ಗಿಸಿಕೊಂಡು, "ಆವರೆ ನನ್ನ ಸಮಾಚಾರವನ್ನೆಲ್ಲ ಕೇಳಲಿಲ್ಲವಲ್ಲ" ಎಂದಳು.

ನಳಿನಾಕ್ಷ, "ನೀನೇನೂ ಹೇಳಬೇಕಾಗಿಲ್ಲ, ನಾನೆಲ್ಲಾ ಬಲ್ಲೆ" ಎಂದ.

ಕಮಲ ಬಲಗೈಯಿಂದ ಮುಖ ಮುಚ್ಚಿಕೊಂಡು ಹೇಳಿದಳು. "ಆದರೆ ಅಮ್ಮ—ಎಂದು ಮಾತು ಮುಗಿಸಲಾರದಾದಳು.

ನಳಿನಾಕ್ಷ ಅವಳ ಮುಖದಿಂದ ಕೈ ತೆಗೆಯುತ್ತ "ಅಮ್ಮ ತನ್ನ ಜೀವನದಲ್ಲಿ ಅನೇಕ ಅಪರಾಧಗಳನ್ನು ಕ್ಷಮಿಸಿರುವಳು, ಯಾವುದು ಅಪರಾಧವಲ್ಲವೋ ಅದನ್ನು ಆಕೆ ಕ್ಷಮಿಸಬಲ್ಲಳು" ಎಂದ.

---

